ಭಾಗ–10

ತತ್ವಪ್ರಕಾಶಿಕಾ

ಸತ್ತರ್ಕದೀಪಾವಳಿ

ತತ್ವಪ್ರದೀಪ

# ಭಾವದೀಪ



ಅಧ್ಯಕ್ಷರು :

ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :
ವಿ॥ ರಾಜಾ ಎಸ್. ಗಿರಿ ಆಚಾರ್ಯ
ಮಂತ್ರಾಲಯ.

ಸಂಪಾದನೆ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು.

॥ ಶ್ರೀಮನ್ ಮೂಲರಾಮೋ ವಿಜಯತೇ ॥ ॥ ಶ್ರೀ ಗುರುರಾಜೋ ವಿಜಯತೇ ॥

## ಭಾಗ -10

ಶ್ರೀಪದ್ಮನಾಭತೀರ್ಥಮುನಿ ವಿರಚಿತ
## ಸತ್ತರ್ಕದೀಪಾವಳಿ

ಶ್ರೀತ್ರಿವಿಕ್ರಮಪಂಡಿತಾಚಾರ್ಯ ವಿರಚಿತ
## ತತ್ವಪ್ರದೀಪ

ಶ್ರೀಜಯತೀರ್ಥಮುನಿ ವಿರಚಿತ
## ತತ್ವಪ್ರಕಾಶಿಕಾ

# ಭಾವದೀಪ

ಶ್ರೀವೇದವ್ಯಾಸರ ಬ್ರಹ್ಮಸೂತ್ರ, ಶ್ರೀಮಧ್ವಾಚಾರ್ಯರ ಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ ಟೀಕೆಗಳೊಂದಿಗೆ
ಶ್ರೀಮಂತ್ರಾಲಯಪ್ರಭುಗಳ ಭಾವದೀಪ
ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

ವಿಶೇಷ ವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ
* * * * * *

ಪ್ರಕಾಶನ :
ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

॥

'ಭಾವದೀಪ-ಸಂಪುಟ-10' : ಮಂತ್ರಾಲಯಕ್ಷೇತ್ರದಲ್ಲಿ ದುರ್ಮುಖ ॥ ಫಾಲ್ಗುಣಮಾಸ ॥ ಶುಕ್ಲಪಕ್ಷ ಷಷ್ಠೀ (ದಿನಾಂಕ: 04-03-2017) ಶ್ರೀರಾಘವೇಂದ್ರಸ್ವಾಮಿಗಳ ಪವಿತ್ರಕ್ಷೇತ್ರವಾದ ಮಂತ್ರಾಲಯದಲ್ಲಿ ಶ್ರೀರಾಘವೇಂದ್ರಸ್ವಾಮಿಗಳವರ ವರ್ಧಂತಿಯ ಶುಭಸಂದರ್ಭದಲ್ಲಿ ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಈ ಕೃತಿಯನ್ನು ಲೋಕೇಶಾರ್ಪಣೆ ಹಾಗೂ ಲೋಕಾರ್ಪಣೆ ಮಾಡಿದರು.


| | |
|---|---|
| ಪ್ರಕಾಶನ | : ಶ್ರೀಗುರುಸಾರ್ವಭೌಮಸಂಶೋಧನಮಂದಿರ, ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ. |
| ಸಂಪಾದನೆ ಮತ್ತು ಅನುವಾದ | : ವಿ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು. ದೂರವಾಣಿ : 914149120 |
| ಪ್ರಥಮಮುದ್ರಣ | : 2017 |
| ಬೆಲೆ | : 600 ರೂ |
| ಪ್ರತಿಗಳು | : 1000 |





ಅಕ್ಷರಜೋಡಣೆ :

ಶ್ರೀ ಬೆಮ್ಮತ್ತಿ ಶ್ರೀನಿವಾಸ
ಶ್ರೀಮತಿ ಎಸ್. ನಾಗಲತಾ
ದೂರವಾಣಿ : 9141197485

ಮುದ್ರಣ :
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

## Vol. - 10

SRI PADMANABHATIRTHAMUNI'S
**SATTARKADIPAVALI**

SRIJAYATIRTHAMUNI'S
**TATVAPRAKAASHIKAA**

SRI TRIVIKRMAPANDITAACHARYA'S
**TATVAPRADIPA**

# BHAVADIPA

**Sri Vedavyasa's Brahmasutra,
Sri Madhvacharya's Bhashya,
Teekas - Sattarkadipawali, Tatvapradipa,
Tatvaprakaashikaa**

**Bhavadipa by Sri Mantrayala Prabhu**

**Sanskrit Original Text with Kannada Translation**

**with special debate from many commentaries
& overall critisism**

**Published by :**

**Sri Gurusarvabhouma Samshodhana Mandira,**
Jagadguru Srimanmadhvacharya Mula Mahasamsthana,
Sri Raghavendraswamy Mutt, Mantralayam - 518 345 A.P.

'BHAVADIPA' : HH Sri Sri Subhudendra Thirta sripada has submitted this 10th volume to Sri Raghavendraswamiji at Mantralaya.

Publication : Sri Gurusarvabhouma Sanshodhana Mandira, Jagadguru Srimanmadhvacharya Mula Mahasamsthana, Sri Raghavendraswamy mutt, Mantralayam. A.P.

Edited & Translated by : Vidwan Bemmatti Venkateshacharya,
Bangalore. Ph : 9141495120

First Edition : 2016

Price : Rs. 600

Copies : 1000



Type set :

Smt. S. Nagalatha, Bangalore.
Sri Sri Bemmatti Srinivasa

Printed at :

Muktipatha Mudranalaya, Bangalore.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಬ್ರಹ್ಮಸೂತ್ರ ಭಾಷ್ಯ

ಸತ್ತರ್ಕದೀಪಾವಳಿ ತತ್ವಪ್ರಕಾಶಿಕಾ ತತ್ವಪ್ರದೀಪ

# ಭಾವದೀಪ

* * * *

ಅಧ್ಯಕ್ಷರು :
ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು
ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :
ವಿ|| ರಾಜಾ ಎಸ್. ಗಿರಿಆಚಾರ್ಯ
ಮಂತ್ರಾಲಯ

ಸಂಪಾದನೆ ಮತ್ತು ಅನುವಾದ :
ವಿ|| ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

**Brahmasutra Bhashya**

**Sattrakadipavali Tatvaprakaashikaa**

**Tatvapradipa**

# BHAVADIPA

******

**President:**

**HH Sri Subhudhendratirtha Sripadaru**

**PeeTadhipati of Sri Raghavendraswamy Mutt, Mantralayam.**

**Honorary Editor:**

**Sri Vidwan Raja S. Giri Acharya**

**Mantralayam.**

**Edited & Translated by :**

**Vidwan Bemmatti Venkateshacharya,**

**Bangalore.**

# ಹತ್ತನೆಯ
# ವಾಙ್ಮಯ-ಕುಸುಮಹಾರ
## ಸಮರ್ಪಣೆ



ಶ್ರೀರಾಘವೇಂದ್ರಸ್ವಾಮಿಗಳ ಮಠಾಧೀಶರಾದ

ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು

ಶ್ರೀರಾಘವೇಂದ್ರತೀರ್ಥಶ್ರೀಪಾದರ ಅಂತರ್ಯಾಮಿಗಳಾದ ಶ್ರೀಮನ್ಮಧ್ವಾಚಾರ್ಯರ

ಅಂತರ್ಯಾಮಿಗಳಾದ ಶ್ರೀಮನ್ ಮೂಲರಾಮಚಂದ್ರದೇವರಿಗೆ ಈ ಕೃತಿಯನ್ನು

ಹತ್ತನೆಯ ವಾಙ್ಮಯ ಕುಸುಮಹಾರವನ್ನಾಗಿ ಸಮರ್ಪಣೆ ಮಾಡಿರುವರು.

|| ಶ್ರೀಮನ್ಮೂಲರಾಮೋ ವಿಜಯತೇ ||          || ಶ್ರೀಗುರುರಾಜೋ ವಿಜಯತೇ ||

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಇಂದಿಗೆ ರಾಯರು ಅವತರಿಸಿ 422 ವರ್ಷಗಳು ಆದವು. ರಾಯರು ರಚಿಸಿದ ಎಲ್ಲಾ ಗ್ರಂಥಗಳಿಗೂ 400 ವರ್ಷಗಳೇ ಕಳೆದವು. ಆದರೆ ಇಂದು ಯಾರಿಗೂ ರಾಯರು 400 ವರ್ಷಗಳ ಹಿಂದೆ ಇದ್ದರು. ಅಥವಾ ಅವರ ಗ್ರಂಥಗಳು 400 ವರ್ಷಗಳ ಹಿಂದೆ ಇದ್ದವು ಎಂಬ ಭಾವನೆ ಮೂಡುತ್ತಿಲ್ಲ. ರಾಯರ ಚರಿತ್ರೆ ಇತಿಹಾಸಪುಟಗಳಲ್ಲಿ ಕಳೆದುಹೋದದ್ದಲ್ಲ. ಇಂದೂ ಕೂಡ ನಡೆಯುತ್ತಿರುವ ಇತಿಹಾಸವಾಗಿದೆ. 'ರಾಯರು ಇಂದಿಲ್ಲ' ಎಂಬ ಭಾವನೆ ಯಾರಲ್ಲೂ ಇಲ್ಲ. ಮತ್ತು ರಾಯರ ಗ್ರಂಥಗಳು ಪ್ರಪ್ರಥಮಬಾರಿಗೆ ಲಿಖಿತವಾಗಿ ಪ್ರಕಾಶನಗೊಂಡಾಗ ಆಗಿನ ಜಿಜ್ಞಾಸುಪ್ರಪಂಚ ಎಷ್ಟು ಸಂತೋಷ ಪಟ್ಟಿತ್ತೋ, ಅಷ್ಟೇ ಸಂತೋಷವನ್ನು ಇಂದೂ ಕೂಡ ಜಗತ್ತು ಅನುಭವಿಸುತ್ತಿದೆ. 400 ವರ್ಷಗಳಿಂದ ಇಲ್ಲಿಯ ತನಕ ಪ್ರತಿನಿತ್ಯವೂ ರಾಯರ ಗ್ರಂಥಗಳಿಂದ ತತ್ವಜ್ಞಾನವನ್ನು ಪಡೆದುಕೊಳ್ಳುತ್ತಲೇ ಇದ್ದಾರೆ. ಅದೆಷ್ಟೋ ಮಹಾಮಹಿಮವಂತರು ರಾಯರ ಗ್ರಂಥಗಳಿಂದ ಮೋಕ್ಷೋಪಯೋಗಿಯಾದ

ತತ್ವಜ್ಞಾನವನ್ನು ಪಡೆದುಕೊಂಡು ಮೋಕ್ಷಮಾರ್ಗದಲ್ಲಿ ಧಾವಿಸಿ ಜೀವನ ಸಾರ್ಥಕ ಪಡಿಸಿಕೊಂಡಿದ್ದಾರೆ. ಇಂದೂ ಕೂಡ ಸಾವಿರಾರು ಮಂದಿ ತತ್ವಜ್ಞಾನಿಗಳು ರಾಯರ ಗ್ರಂಥಗಳಿಂದ ತತ್ವಜ್ಞಾನವನ್ನು ಪಡೆದುಕೊಳ್ಳುತ್ತಲೇ ಇದ್ದಾರೆ. ಇಷ್ಟೇ ಅಲ್ಲ. ಇನ್ನೂ 400 ವರ್ಷಗಳು ಕಳೆದರೂ ಕೂಡ ರಾಯರ ಗ್ರಂಥಗಳ ಅಥವಾ ಚರಿತ್ರೆಯ ವಿಷಯದಲ್ಲಿ ಇದೇ ಭಾವನೆ ಎಲ್ಲಾ ಜಿಜ್ಞಾಸುಗಳಲ್ಲಿ ಹಾಗೂ ಭಕ್ತರಲ್ಲಿ ಇರುತ್ತದೆಂಬುದರಲ್ಲಿ ಸಂದೇಹವಿಲ್ಲ.

ರಾಯರ ಮಹಿಮೆಯನ್ನು ಅವರು ಮಾಡುತ್ತಿರುವ ಪವಾಡಗಳಿಂದ ತಿಳಿಯುವುದು ಕೇವಲ ಒಂದು ಹಂತದ ಸಾಧನೆ. ಆದರೆ ಅವರ ಗ್ರಂಥಗಳಿಂದ ತತ್ವಜ್ಞಾನವನ್ನು ಪಡೆದುಕೊಳ್ಳುವುದೇ ಅವರ ಮಹಿಮೆಯ ನಿಜವಾದ ಅರಿವು. ಈ ದೃಷ್ಟಿಯಲ್ಲಿ ನಮ್ಮ ಜ್ಞಾನಪ್ರಪಂಚ ಮುಂದೆ ಸಾಗಬೇಕೆಂಬುದೇ ನಮ್ಮ ಹೆಬ್ಬಯಕೆ. ಅದಕ್ಕಾಗಿ ರಾಯರ ಎಲ್ಲಾ ಗ್ರಂಥಗಳನ್ನು ಅನೇಕ ರೀತಿಯಲ್ಲಿ ಪ್ರಸಾರ ಮಾಡುವುದೇ ನಮ್ಮ ಹಿರಿದಾದ ಉದ್ದೇಶವಾಗಿದೆ. ಈ 422ನೇ ವರ್ಷದ ಅವರ ವರ್ಧಂತಿಯ ಶುಭಮಹೋತ್ಸವದಲ್ಲಿ ಹಾಗೂ 396ನೆಯ ಪಟ್ಟಾಭಿಷೇಕದ ಶುಭಸಂದರ್ಭದಲ್ಲಿ ಭಾವದೀಪ ಕೃತಿಯ 10ನೆಯ ಸಂಪುಟವನ್ನು ಲೋಕಾರ್ಪಣೆ ಮಾಡುತ್ತಿದ್ದೇವೆ.

ಜೀವನದಲ್ಲಿ ತತ್ವಜ್ಞಾನವನ್ನು ಪಡೆದುಕೊಳ್ಳುವುದು ಎಷ್ಟು ಮುಖ್ಯವೋ, ಅಜ್ಞಾನ ಹಾಗೂ ವಿಪರೀತಜ್ಞಾನಗಳನ್ನು ನಿರಾಕರಿಸುವುದೂ ಕೂಡ ಅಷ್ಟೇ ಮುಖ್ಯ. ಭಾವದೀಪಗ್ರಂಥದ 10ನೆಯ ಈ ಸಂಪುಟದಲ್ಲಿ ಅಜ್ಞಾನ ಹಾಗೂ ವಿಪರೀತಜ್ಞಾನಗಳ ನಿರಾಕರಣೆಯೇ ಮುಖ್ಯವಿಷಯವಾಗಿದೆ. ಪ್ರಪಂಚದಲ್ಲಿ ಅನಾದಿಕಾಲದಿಂದ ತತ್ವಜ್ಞಾನದ ಗಂಗಾಪ್ರವಾಹ ಹರಿಯುತ್ತಲೇ ಬಂದಿದೆ. ಇದರ ಜೊತೆಯಲ್ಲೇ ಅಜ್ಞಾನ ಹಾಗೂ ವಿಪರೀತಜ್ಞಾನಗಳೆಂಬ ಕೊಳಚೆನೀರೂ ಕೂಡ ಅನಾದಿಕಾಲದಿಂದಲೇ ಪ್ರವಾಹತಃ ಹರಿಯುತ್ತಲೇ ಬಂದಿದೆ. ಆದರೆ ನಾವು ಶುದ್ಧರಾಗಬೇಕೆಂದರೆ ಪವಿತ್ರವಾದ ಗಂಗೆಯಲ್ಲಿಯೇ ಮೀಯಬೇಕು ಹೊರತು, ಕೊಳಚೆ ನೀರಿನಲ್ಲಿ ಸ್ನಾನ ಮಾಡಿದರೆ ನಾವು ಅಂತರಂಗದಲ್ಲಿ

ಹಾಗೂ ಬಾಹ್ಯದಲ್ಲಿ ಶುದ್ಧರಾಗಲು ಸಾಧ್ಯವಿಲ್ಲ. ಅನೇಕ ಪಂಥದವರು ತತ್ವಜ್ಞಾನವನ್ನು ವಿರೋಧಿಸುತ್ತಲೇ ಬಂದಿದ್ದಾರೆ. ಅವರ ಮತವನ್ನು ಕೂಲಂಕಷವಾಗಿ ಶ್ರೀರಾಘವೇಂದ್ರ-ಗುರುಸಾರ್ವಭೌಮರು ಭಾವದೀಪಗ್ರಂಥದಲ್ಲಿ ನಿರಾಕರಣೆ ಮಾಡಿದ್ದಾರೆ. ಬ್ರಹ್ಮಸೂತ್ರದ ಎರಡನೆಯ ಅಧ್ಯಾಯದ ಎರಡನೆಯ ಪಾದಕ್ಕೆ ಸಮಯಪಾದ ಎಂದು ಹೆಸರು. ಬೇರೆ ಬೇರೆ ಮತಗಳ ವಿಚಾರವನ್ನು ಉಲ್ಲೇಖಮಾಡಿ, ಅದರ ವಿಮರ್ಶೆ ಮಾಡುವುದೇ ಈ ಪಾದದ ಉದ್ದೇಶವಾಗಿದೆ. ಯಾವ ಪರಮಾತ್ಮನು ಈ ಜಗತ್ತನ್ನು ಸೃಷ್ಟಿ ಮಾಡಿ, ಪ್ರತಿನಿತ್ಯ, ಪ್ರತಿಕ್ಷಣವೂ ನಮ್ಮನ್ನು ರಕ್ಷಣೆ ಮಾಡುತ್ತಾ, ಎಲ್ಲೆಡೆಯು ನೆಲೆಸಿದ್ದಾನೋ, ಅಂಥ ಪರಮಾತ್ಮನನ್ನೇ ಬೇರೆಲ್ಲಾ ಮತದವರು ಅಲ್ಲಗಳೆಯುತ್ತಾರೆ. ಕೆಲವರು ಈ ಜಗತ್ತಿಗೆ ಪರಮಾತ್ಮನ ಅವಶ್ಯಕತೆಯಿಲ್ಲ. ಎಲ್ಲವೂ ಕೂಡ ಪ್ರಕೃತಿಯಿಂದಲೇ ನಡೆಯುತ್ತದೆ ಎನ್ನುತ್ತಾರೆ. ಕೆಲವರು ಆ ಪರಮಾತ್ಮನಿದ್ದರೂ ಅವನು ಪ್ರಕೃತಿಯ ಅಧೀನನಾಗಿದ್ದಾನೆ. ಅವನಿಂದ ಆಗಬೇಕಾದ್ದೇನೂ ಇಲ್ಲವೆನ್ನುತ್ತಾರೆ. ಇನ್ನೂ ಕೆಲವರು ಕಣ್ಣಿಗೆ ಕಾಣದ್ದು ಯಾವುದೂ ಇಲ್ಲ. ಕಣ್ಣಿಗೆ ಕಾಣಿಸುವುದಷ್ಟೇ ಸತ್ಯ. ಪುಣ್ಯ-ಪಾಪ, ಸ್ವರ್ಗ-ನರಕಗಳೆಲ್ಲವೂ ಮೂಢನಂಬಿಕೆ. ದೇವರಂತೂ ದೂರತೋಪಾಸ್ತ. 'ಇದ್ದಷ್ಟು ದಿನ ಸುಖವಾಗಿ ಬದುಕಬೇಕು'. 'ಸಾಲ ಮಾಡಿಯಾದರೂ ತುಪ್ಪ ಕುಡಿಯಬೇಕು' ಎನ್ನುತ್ತಾರೆ. ಕೆಲವರು ಪ್ರಕೃತಿಯಿಂದ ಪ್ರೇರಿತನಾದ ಈ ಜೀವನೇ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಈ ಎಲ್ಲ ಜೀವರುಗಳು ಒಟ್ಟು ಸೇರಿಯೇ ಜಗತ್ತನ್ನು ನಡೆಸುತ್ತಿದ್ದಾರೆನ್ನುತ್ತಾರೆ. ಕೆಲವರು ಪರಮಾಣುಗಳಿಂದಲೇ ಜಗತ್ತಿನ ಸೃಷ್ಟಿಯಾಗುತ್ತದೆ. ಪುನಃ ಪರಮಾಣುಗಳಲ್ಲೇ ಜಗತ್ತು ಲಯಹೊಂದುತ್ತದೆ. ಈಶ್ವರನು ಗುಣಪೂರ್ಣನಲ್ಲ. ವೇದಗಳೆಲ್ಲವನ್ನೂ ಆ ಈಶ್ವರನೇ ರಚನೆ ಮಾಡಿದ್ದಾನೆನ್ನುತ್ತಾರೆ. ಕೆಲವರು ಪರಮಾಣುಗಳ ಸಮೂಹವೇ ಜಗತ್ತು. ಇದೆಲ್ಲವೂ ಕೂಡ ಕ್ಷಣಿಕ ಎನ್ನುತ್ತಾರೆ. ಇನ್ನೂ ಕೆಲವರು ಶೂನ್ಯವೇ ಜಗತ್ತಿಗೆ ಕಾರಣವಾಗಿದೆ ಎಂದು ಹೇಳಿದರೆ, ಅವರಲ್ಲೇ ಕೆಲವರು ಸಮಸ್ತ ಜಗತ್ತು ಜ್ಞಾನರೂಪವಾಗಿದೆ ಎನ್ನುತ್ತಾರೆ. ಕೆಲವರು ಜಗತ್ತನ್ನು ಸತ್ಯಾಸತ್ಯ, ಸದಸದ್ವಿಲಕ್ಷಣ ಇತ್ಯಾದಿಯಾಗಿ ಏನೂ ಹೇಳಲು ಸಾಧ್ಯವಾಗದೇ ಎಲ್ಲವನ್ನು 'ಸ್ಯಾತ್' ಎಂದೇ ಕರೆಯುತ್ತಾರೆ. ಕೆಲವರು ಜಗತ್ತಿಗೆ ವಿಷ್ಣುವನ್ನು

ಒಪ್ಪುವು ಅವಶ್ಯಕತೆಯಿಲ್ಲ. ಶಿವನನ್ನು ಒಪ್ಪಿದರೆ ಸಾಕೆಂದು ಹೇಳಿದರೆ, ಕೆಲವರು ಶಿವನೂ ಕೂಡ ಬೇಡ. ಅವನ ಹೆಂಡತಿಯಾದ ಶಕ್ತಿಯೇ ಸಾಕು. ಅವಳಿಂದಲೇ ಈ ಜಗತ್ತಿನ ವ್ಯಾಪಾರ ನಡೆಯುತ್ತದೆ ಎನ್ನುತ್ತಾರೆ. ಹೀಗೆ ಪ್ರತಿಯೊಬ್ಬರೂ ಕೂಡ ತಮ್ಮ ಕಲ್ಪನೆಗಳನ್ನೇ ಜಗತ್ತಿನಲ್ಲಿ ತತ್ವಜ್ಞಾನವನ್ನಾಗಿ ಮಾರ್ಪಾಡು ಮಾಡಲು ಪ್ರಯತ್ನಿಸಿದ್ದಾರೆ. ಸತ್ಯವಾದದ್ದನ್ನು ಹೇಳಲು ಯಾರೂ ಪ್ರಯತ್ನ ಪಡಲಿಲ್ಲ.

ಜಗದ್ಗುರು ಶ್ರೀ ಮಧ್ವಾಚಾರ್ಯರು ಭೂಮಿಯಲ್ಲಿ ಅವತರಿಸಿ ವಿಷ್ಣುವೇ ಸರ್ವೋತ್ತಮ ಅವನಿಂದಲೇ ಈ ಜಗತ್ತು ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಹೊಂದಿದೆ. ಇಂಥ ಜಗತ್ತು ಸತ್ಯಭೂತವಾಗಿದೆ. ಐದುರೀತಿಗಳಲ್ಲಿ ಭೇದಗಳನ್ನು ತಿಳಿಯಬೇಕು. ಪ್ರತಿಯೊಂದರಲ್ಲೂ ತಾರತಮ್ಯವಿದೆ. ಪರಮಾತ್ಮನೊಬ್ಬನೇ ಈಶ. ಉಳಿದವರೆಲ್ಲರೂ ಅವನ ದಾಸರು ಇತ್ಯಾದಿ ತತ್ವಗಳನ್ನು ಉಪದೇಶ ಮಾಡಿರುವರು. ಅದನ್ನು ಶ್ರೀಪದ್ಮನಾಭತೀರ್ಥರು, ಶ್ರೀಮಟ್ಟೀಕಾಕೃತ್ಪಾದರು ಹಾಗೂ ಶ್ರೀತ್ರಿವಿಕ್ರಮಪಂಡಿತರೇ ಮೊದಲಾದ ಜ್ಞಾನಿವರೇಣ್ಯರು ಇನ್ನೂ ಹೆಚ್ಚು ವಿವರಿಸಿದರು. ಅವೆಲ್ಲದರ ಸಾರಸಂಗ್ರಹವನ್ನು ಶ್ರೀರಾಘವೇಂದ್ರಗುರುಸಾರ್ವಭೌಮರು ನಮಗೆ ತಿಳಿಸಿ ಅನುಗ್ರಹಿಸಿದರು. ಆದ್ದರಿಂದ ಶ್ರೀರಾಘವೇಂದ್ರಗುರುಸಾರ್ವಭೌಮರ ಪಟ್ಟಾಭಿಷೇಕ ಅಥವಾ ವರ್ಧಂತಿಯ ಮಹೋತ್ಸವವೆಂದರೆ 'ಪ್ರಪಂಚದಲ್ಲಿ ತತ್ವಜ್ಞಾನಕ್ಕೆ ಪಟ್ಟಾಭಿಷೇಕ' ಎಂದರ್ಥ. ಅಥವಾ 'ತತ್ವಜ್ಞಾನದ ಅಭಿವರ್ಧಂತಿ' ಎಂದರ್ಥ.

ಈ ರಾಯರ ವರ್ಧಂತಿಯಂದು ಭಾವದೀಪದ ಹತ್ತನೆಯ ಈ ಸಂಪುಟವನ್ನು ರಾಯರ ಸೇವಾರೂಪದಲ್ಲಿ ಇದನ್ನು ಬಿಡುಗಡೆ ಮಾಡುತ್ತಿದ್ದೇವೆ. ಇದರಿಂದ ಜಗತ್ತಿನಲ್ಲಿ ತತ್ವಜ್ಞಾನವು ಹೆಚ್ಚು ಪ್ರಸಾರವಾಗಲಿ. ಇದರಿಂದ ದೊರೆಯುವ ಮಹಾಫಲವೆಲ್ಲವೂ ಈ ಶ್ರೀರಾಘವೇಂದ್ರ-ಗುರುಸಾರ್ವಭೌಮರ ಅಂತರ್ಯಾಮಿಗಳಿಗೆ ಸಮರ್ಪಿತವಾಗಲಿ ಎಂದಷ್ಟೇ ಭಕ್ತಿಪೂರ್ವಕವಾಗಿ ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮೂಲರಾಮದೇವರಲ್ಲಿ ಪ್ರಾರ್ಥಿಸುತ್ತೇವೆ.

ಈ ಸಂಪುಟದ ಸಂಪಾದಕರೂ ಅನುವಾದಕರೂ ಆದ ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯರು ಬಹಳಷ್ಟು ಶ್ರಮವಹಿಸಿ ಈ ಪುಸ್ತಕವನ್ನು ಬರೆದು ನೀಡಿದ್ದಾರೆ.

ಇವರಿಗೆ ಶ್ರೀಮನ್ ಮೂಲರಘುಪತಿ ರಾಮಚಂದ್ರದೇವರು ಹಾಗೂ ಹರಿವಾಯುಗುರುಗಳು ವಿಶೇಷ ಅನುಗ್ರಹವನ್ನು ಮಾಡಿ ಇನ್ನು ಹೆಚ್ಚಿನ ಅನುವಾದ ಕಾರ್ಯದ ಸಾಮರ್ಥ್ಯವನ್ನು ನೀಡಲಿ ಎಂದು ಪ್ರಾರ್ಥಿಸುತ್ತೇವೆ.

ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ -
ಭಾರತೀರಮಣ - ಮುಖ್ಯಪ್ರಾಣಾಂತರ್ಗತ - ಶ್ರೀಮನ್ಮೂಲರಘುಪತಿ -
ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

# Brahmasutra Bhashya With Select Commentaries including Bhavadipa of Sri Raghavendra Tirtha

*By*

**Vachaspati Dr. V. R. Panchamukhi**

At the outset, I would like to express our sincere respectful danda pranams, to His Holiness Sri Subudhendra Tirtha for his encouragement to publish this Series of Volumes on Sutra Bjhashya, Tatvaprakasika, and other commentaries with Focus on Bhavadipa, with Kannada Translations.

We would also express our gratitude to Mahamahopadhyaya, Pandita Kesari, Vidwan Sri Raja .S. Giri Acharya, for his guidance, support and encouragement in the finalisation of the different Volumes.

The present Volume is concerned with the Adhikaranas of the Second Pada of the Second Adhyaya.

As done in the other Volumes, Vidwan Venkateshacharya has provided translations, with critical notes and discussions, of other commentaries on Sutra Bhashya, such as Sattarkadipavali, Tatva prakasika, Tatvapradipa, along with the Translation of Bhavadipa of Sri Raghavendra Swamigalu. He has also given the account of Tantradipika of Sri Raghavendra Tirtha, whenever necessary.

The present Volume - Volume No. 10 in the series of Volumes on Sri Madhva Bhashya and the Commentaries/Tippanis, thereupon, consists of the Kannada Translation and Notes, pertaining to the following Nine Adhikaranas:

1. *Rachananupapatydhikarna (the First Adhikarana of the Second Pada of the Second Adhyaya);*
2. *Anytrabhavadhikarna, (the Second Adhikarana of the Second Pada of the Second Adhyaya);*
3. *Abhyupagamaadhikarana, (the Third Adhikarana of the Second Pada of the Second Adhyaya);*
4. *Purushashmadhikarna (the Fourth Adhikarana of the Second Pada of the Second Adhyaya);*
5. *Anyatamityadhikarana (the Fifth Adhikarana of the Second Pada of the Second Adhyaya);*
6. *Vysheshikadhikarana (the Sixth Adhikarana of the Second Pada of the Second Adhyaya);*
7. *Samudayadhikarana (the Seventh Adhikarana of the Second Pada of the Second Adhyaya);*
8. *Asadadhikarna (the Eighth Adhikarana of the Second Pada of the Second Adhyaya);*
9. *Anupalabdhydhikarna (the Nineth Adhikarana of the Second Pada of the Second Adhyaya);*
10. *Naikasminnadhikarna (the Tenth Adhikarana of the Second Pada of the Second Adhyaya);*
11. *Patyuradhikarna (the Eleventh Adhikarana of the Second Pada of the Second Adhyaya);*
12. *Utpatydhikarna (the Twelveth Adhikarana of the Second Pada of the Second Adhyaya);*

Thus, this Tenth Volume deals with, Tweleve Adhikaranas, belonging to the Second Pada of the Second Adhyaya.

Vidwan Sri Bemmatti Venkateshacharya, has covered the detailed explanations given in all the commentaries stated above, in the sequential manner. He has very competently presented the main arguments of Purvapaksha and Siddhanta, and has upheld the superiority of Siddhanta of Madhvacharya, as the final interpretation.

Sri Venkateshacharya, presents, in a succinct manner, the summaries of arguments, developed in the different Adhikaranas listed above.

In order to facilitate the understanding of the main themes dealt with in the different Brahmasutras, covered in this Volume, I have ventured to present brief English Translations of the Brahmasutras. These translations are based upon one of my earlier Books, published by Rashtriya Sanskrita Vidyapeetha, (deemed University) Tirupati.

**Rachananupapatyadhikarna**

**।। रचनानुपपत्तेश्च नानुमानम् ।।**

The entity called Pradhana cannot be the creator of the Universe because, it being inanimate, cannot have the capability of independent action. Action Pradhana is called Anumana because it is inferred from the deductive logic that all effects have some cause because they are effects.

**।। प्रवृत्तेश्च ।।**

It is seen in the practical world that a living entity - Chetana is engaged in the tasks of creation as in the case of producing cloth. In the same way, creation of the world has to be managed by living entity.

**।। पयोऽम्बुवच्चेत्तत्रापि ।।**

We cannot argue that just as the milk transforms into curds on its own and water in the rivers flows on its own, the Pradhana, though being

inanimate, coud act on its own. We shoud recognise that even the in the case of milk or water, a Chetana in the form of Brahma is responsible for effection, transformation or the flow. This is clearly stated in the Srutis.

॥ व्यतिरेकानवस्थितेश्चानपेक्षत्वात् ॥

Sruti clearly states that no action exists without Brahma. Hence the thesis that the inanimate entity-Pradhana can move on its own is not respected by the good people.

**Anyatrabhavadhikarna**

॥ अन्यत्राभावाच्च न तृणादिवत् ॥

Since the Universe does not exist without the command of Brahma and since it does not have any body other than Lord Brahma as its Resort, the relation between Brahma and the Universe is not like that between grass and rains. In the case of the latter, the rains function only as a supporting cause and not as the prime cause for the existence of grass while Vishnu functions as an independent prime cause and not just as an accompanying cause for the Universe.

**Abhyupagamadhikarna**

॥ अभ्युपगमेऽप्यर्थाभावात् ॥

Charvaka cannot contest the above thesis of Lord Vishnu being the prime creator, on the ground that he does not accept the Srutis as authentic. Charvaka school of thought itself is not authoritative, and even if we accept its authenticity it is contradicted by the non-existence of subject-matter (Vishaya) and purpose (Prayojana) for this school.

**Purushashmadhikarna**

॥ पुरुषाश्मवदिति चेत्तत्रापि ॥

We cannot aruge that just as the body-hands legs etc. though inanimate on its own is able to function with the support of the living entity

(Chetana), in bringing a stone or other actions, in the same way Pradhana would be able to function with the support of Jiva, and hence let Pradhana be the cause of creation, even then, the objections stated earlier hold good since even the body's movements are controlled by Lord Vishnu.

।। अङ्गित्वानुपपत्तेश्च ।।

The example of the stone being carried by the body prompted by Chetana is not valid, because it is not appropriate to consider the body as the component and Jiva as the whole. If we regard Jiva as the component then we cannot describe hims as the whole.

**Anytamityadhikarna**

।। अन्यथानुमित्तौ च ज्ञशक्तिवियोगात् ।।

If we argue that the Chetana is the doer with the help of the body then also the status of Jiva becoming the whole does not become appropriate because Jiva does not have independent capability to link himslef with the body.

।। विप्रतिषेधाच्चासमञ्जसम् ।।

The thesis that there is no Supreme Lord Brahma, put forth by Charvakas and others, does not hold good. Becasue it is contradicted by all the Srutis Smrtits and Yuktis.

**Vysheshikadhikarna**

।। महद्दीर्घवद्वा ह्रस्वपरिमण्डलाभ्याम् ।।

Vaiseshika School of thought is refuted there. If we aruge that the largeness and lengthiness in the four-atomed entities are derived from the similar characteristics of the three-atomed entities, then extending the same logic, one may have to accept that the shortness and the circular shape of the three-atomed or two-atomed entities are the effects of the

similar characteristics of two-atomed or one-atomed entities. Such a thesis being unprincipled cannot be regarded as authentic and respectable.

।। उभयथापि न कर्मातस्तदभावः ।।

Intentions of Brahma could be either eternal (Nitya) or persihable (Anitya). In both the alternatives, we cannot attribute the causation of action to the atoms and hence there cannot be the volume and size effects of the different atomed entities.

।। समवायाभ्युपगमाच्च साम्यादनवस्थितेः ।।

Vaiseshikas assume Samavaya relation between the part and the whole (Avayava and Avayavi), which are distinct from one another. Mud and pot are related by Samavaya relation. Since Samavaya is distinct from the two entities being linked viz. mud and pot, on the basis of the feature of distinctiveness, one has to envisage another Samavaya to propose the relation between the first Samavaya on the one hand and mud/pot on the other. Thus there could be an unending sequence of the Samavayas which leads to chaos and indefiniteness. Hence the thesis that Samavaya as the cause of creation stands refuted.

।। नित्यमेव च भावात् ।।

In the Vaiseshika school of thought, the intentions of Paramatma, Paramanu etc. are eternal (Nitya) and as such one will have to expect continuous creation at all times and not occasionally. Thus, the concepts of creation and destructions cannot be reconciled with this thesis of constant creation.

।। रूपादिमत्त्वाच्च विपर्ययो दर्शनात् ।।

In the Vaiseshika school of thought, the Paramanus (atoms) of earth, water and fire will have to be regarded as perishable (opposite of being eternal) since they are known to have figure, shape and taste. It is ob-

served in the objects like pots etc. that everything that has figure, shape etc. is not eternal.

॥ उभयथा च दोषात् ॥

In both the alternatives, Atoms being of eternal nature or being perishable, there are flaws in the Vaiseshika school of thought. It Paramanu is regarded as eternal then their effects such as pot etc. will have to remain ternal. In the latter case, there may not be scope for many actions and effects.

॥ अपरिग्रहाच्चात्यन्तमनपेक्षा ॥

Since the Vaiseshika school of thought is not consistent with the Srutis, it should be dishonoured and discarded.

**Samudayadhikarna**

॥ समुदाय उभयहेतुकेऽपि तदप्राप्तिः ॥

According to the school of thought of the Paramanu Punja Vadis, Samudaya-collection of atoms is the cause of creation. Samudaya cannot be made from only one atom. It should be defined as collection of several atoms. Them there is an indeterminate interdependence. Samudaya emerges when more atoms are combined but such combination is possible when Samudaya-a pool of atoms exists. Thus Samudaya and combination become interdependent in vicious circle. Hence this school of thought is not consistent.

॥ इतरेतरप्रत्ययत्वादिति चेन्नोत्पत्तिमात्रनिमित्तत्वात् ॥

In Purvapaksha, it is argued that there is no indeterminate interdependence because even though Samudaya always exists, it is only the perception of togetherness that pools the atoms together and when such perception is not present, there is scope for destruction. However, in Siddhanta, it is stated that scarce atoms can cause only their togetherness

(Samudaya) and not the perception or desire to be together. Thus, Samudaya being eternal becomes contradictory to the possibility of Pralaya.

।। उत्तरोत्पादे च पूर्वनिरोधात् ।।

In Kshanika Vada, the cause would produce the effect similar to it and would immediately there after get destroyed. Hence the possibility of the effect being a dissimilar entity from the cause, is ruled out as such and this thesis is not tenable.

।। असति प्रतिज्ञोपरोधो यौगपद्यमन्यथा ।।

In the Kshanika Vada, the thesis of creation of the effects every moment is not appropriate. There are is general two possibilities. Firstly, effect is generated when the cause is non-existent. Secondly, effect is generated when the cause is existing. In the former case, our assertion that this effect is due to this cause is destroyed since the relevant cause is non-existent and it is difficult to identify as to which cause generated which effect. In the latter case, the cause and the effect will have to coexist and hence there has to be an unlimited series of effects which also is an unacceptable situation.

।। प्रतिसङ्ख्याऽप्रतिसङ्ख्यानिरोधाप्राप्तिरविच्छेदात् ।।

Destruction promted by conscious reasoning (Buddhipurva Vinasha is Pratisankhya) and that not promted by it, (Apratisankhya)-both do not become feasible because there will have to be an unbroken sequence of effects.

।। उभयथा च दोषात् ।।

We could postulate a rule that when there is a cause there is always an effect. We could of course consider either that this rule is invaribly valid or that this is not regular. Both these situations are subject to flaws. Hence Kshanika school of thought is not valid.

।। आकाशे चाविशेषात् ।।

Since Akasha does not have any special quantity dimension like lamp, it is not Kshanika. By using the Akasha as the example, we can argue that many other objects in this world are also not Kshanika. Thus the Kshanika Vada does not hold good.

।। अनुस्मृतेश्च ।।

Since we have many times the perception on the basis of memory that is the same object as before, we cannot derive Kshanikatwa on the basis of deductive logic.

**Asadadhikarna**

।। नासतोऽदृष्टत्वात् ।।

In this, Sunya school of thought would be discarded. Sunya (Void) cannot be the cause for the creation of the world because there is no evidence in this regard either in Pratyaksha or Agama or Anumana.

।। उदासीनानामपि चैवं सिद्धिः ।।

If we accept the thesis that Sunya could be the cause of creation then one may have to expect the effects such as fragrance form imaginary items like sky-flower (Akasha-Pushpa).

।। नाभाव उपलब्धेः ।।

The world is not Sunya because its existence is really visible.

।। वैधर्म्याच्च न स्वप्नादिवत् ।।

This world is not Sunya like the items seen in the dream because perception about the world is not negated by an opposite perception whereas in the case of the entities in the dream such contrary perception emerges.

**Anupalabdhyadhikarna**

।। न भावोऽनुपलब्धेः ।।

In this, the Vijnana School of thought is refuted. The world is not originating from Vijanana because there is not experience or evidence to that effect.

।। क्षणिकत्वाच्च ।।

This world is not originating from Vijnana also because Vijnana is known to be temporary while the world is observed to be eternal.

।। सर्वथानुपपत्तेश्च ।।

The Bouddha school of thought, which is totally inconsistent with the Srutis, Smrtis and Yuktis, is not compatible and hence not acceptable.

**Naiksminnadhikarna**

।। नैकस्मिन्नसम्भवात् ।।

Kshapanaka school of thought is refuted here. There are seven different forms of attributes: Exsistence (Sat) Non-existence (Asat), Existence-cum-non-existence (Sadasat): Sadasat, being distinct from Existence though existing being distinct from non-existence thought being Sadasat, and distinction from Sadasat. The thesis that all these divergent attributes exist in a single entity, is just implausible.

।। एवं चात्माकात्स्न्र्यम् ।।

Jainas believe that Jiva has the same dimensions as the body of the being. This thesis is refuted here. If Jiva is of the same dimension as the body, then the Jiva now existing in the body of a fly would not be sufficient to occupy the body of an elephant when in some next birth it moves from the state of fly to that of an elepehant. Conversely, the soul occupying the body of an elephant will become excessive when it shifts to the

body of a fly in some next birth. Hence the thesis that Jiva is confined to the dimension of the body stands rejected.

॥ न च पर्यायादप्यविरोधो विकारादिभ्यः ॥

We cannot aruge that Jiva would have the flexibility of changing his dimensions according to the size of the body he occupies. If we accept this thesis, then it means that Jiva will have to be regarded as an entity with the attribute of transformability. If that is the true original nautre of Jiva, then the Moksha also defined as a status without any transformations (Vikaras) cannot be, prescribed to him. Thus Moksha itself will not exist and so all the Shastras become futile.

॥ अन्यावस्थितेश्चोभयनित्यत्वादविशेषात् ॥

If we accept that Jiva has the same dimensions as the body, then one has to accept inferentially that even in the Moksha, Jiva has a body which determines his dimension. We have also to accpet that both the Jiva and his body will have to be regarded as eternal without any destruction. If it is so then the body which Jiva occupies in this world will also have to be regarded as eternal, because the body in the Moksha and that in this worldly status have after all the same indistinguishable feature of being a body. This is ridiculous proposition and hence this thesis should be discarded.

**Patyuradhikarna**

॥ पत्युरसामञ्जस्यात् ॥

The Saiva school of thought is refuted here. Pasupati cannot be regarded as the cause of this Universe, because he is known to be subservient (Paratantra) and afflicted by the flaws like birth and death cycle.

॥ सम्बन्धानुपपत्तेश्च ॥

Since Pasupati is known to have no body, he cannot have association with the Universe as its creator.

।। अधिष्ठानानुपपत्तेश्च ।।

Since after deluge, all things are destroyed, Pasupati cannot resort to earth or any other object for facilitating his creation.

।। करणवच्चेन्न भोगादिभ्यः ।।

We cannot argue that Pasupati would have at his disposal many means of creation just as Jiva has the body as his means for activities. Pasupati would also be afflicted by the blemishes caused by the factors like happiness, misery, birth and death etc. because all means would have the transformations (Vikara) like the body.

।। अन्ववत्त्वमसर्वज्ञता वा ।।

There are two possibilities. Firstly, Shiva has a body or Shiva does not have a body. In the former case, Shiva would be subjected to destruction, limitation and other maladies, in the later, he will have to be considered as devoid of knowledge. Thus he cannot be regarded as the cause of creation.

**Utpattyadhikarna**

।। उत्पत्त्यसम्भवात् ।।

Shakti cannot be regarded as the cause of creation because she alone without the support of a male partner, cannot progenerate.

।। न च कर्तुः करणम् ।।

We cannot argue that Shiva provides this support to Shakti because Shiva is not endowed with the means such as perfect knowledge and body.

।। विज्ञानादिभावे वा तदप्रतिषेधः ।।

If we accept the Shiva does have the supporting means such as perfect knowledge, then we could as well concede that Shiva alone is the

cause of creation and why bring in Shakti to associate with him. However, the thesis that Shiva is the cause of creation has already been refuted.

।। विप्रतिषेधाच्च ।।

Finally since the thesis that Shakti is the cause of creation is contrary to the message of all the Srutis, it is to be discarded.

The Jijnasus are indeed grateful to Vidwan Sri Bemmatti Venkateshacharya, for preparing such an extremely useful Volume on Brahmasutra Bhashya, covering several Commentaries and providing good critical comparative discussions.

We pray the the scholar author continues his pains-taking exercise to complete all the Four Adhyayas of Brahmasutras, in a similar manner with useful details.

**Vachaspati Dr. V. R. Panchamukhi**
Chancellor, Sri Gurusarvabhouma Sanskrit Vidyapeeth and
Executive Director,
Sri Gurusarvabhouma Samsodhan Mandir
Mantralayam

# ಆಯಿತು ಹತ್ತು

ಶ್ರೀಪಾದಂಗಳವರನ್ನು ಕಂಡು ಅದೆಷ್ಟೋ ಮಂದಿ ಹೀಗಂದರು - ''ದುಃಖಿತರ ಪಾಲಿಗಿರುವರು ಬಾಗಿದ ಕಲ್ಪವೃಕ್ಷ'' ಎಂದು. ಆದರೆ ನನ್ನ ಈ ಎರಡು ವರ್ಷದ ಅನುಭವದ ನೋಟದಲ್ಲಿ ನನಗಿಸಿದ್ದು ''ತಿಳಿದವರ ಬಾಳಿನ ದಾರಿದೀಪರಿವರು'' ಎಂದು ಆನೆ ಕಟ್ಟಲು ದಿಮ್ಮಿಯೇ ಬೇಕು. ಕುದುರೆ ಹಿಡಿಯಲು ಕಡಿವಾಣವೇ ಬೇಕು. ಈ ಗುರುಗಳ ಮನಗೆಲ್ಲಲು ಪ್ರಾಮಾಣಿಕತನ ಹಾಗೂ ವಿನಯಗಳೇ ಬೇಕು ಎಂಬುದು ನನ್ನ ಅನುಭವ. ಎರಡು ವರುಷಗಳಲ್ಲಿ ಒಂದೇ ಉಸುರಿನ ಜ್ಞಾನಪ್ರಸಾರದ ಹುಮ್ಮಸ್ಸು. ಅಂದಿನಿಂದ ಇಂದಿನ ತನಕ ಎಂದೂ ಜ್ಞಾನಪ್ರಸಾರದಲ್ಲಿ ಉದಾಸೀನ ತೋರಿಲ್ಲ. ತೋರಲು ಸಾಧ್ಯವೂ ಇಲ್ಲ. ಇಂಥ ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥಶ್ರೀಪಾದಂಗಳವರ ಅನುಗ್ರಹದಿಂದ ಇಂದು ಭಾವದೀಪದ 10ನೆಯ ಸಂಪುಟ ಅನಾವರಣ ಗೊಂಡಿದೆ.

ಎಲ್ಲರನ್ನು ಉಪಚರಿಸಿ, ಯಾರನ್ನೂ ನೋಯಿಸದೇ ಮಾನವೀಯತೆಯ ಹಿರಿಮೆ ಮೆರೆದ ಮೇರುರಿವರು. ಕಪಟವರಿಯದ ಈ ಸಜ್ಜೀವ ಕೊಡುಗೈ ಸ್ವಭಾವದವರೆಂದು ಸಾಬೀತಾಯಿತಂದು

ವೈಭವದ ಸುಧಾಮಂಗಳದಿ. ಸಕಲ ಸಜ್ಜನರ ಮೆಚ್ಚುಗೆಯ ನಿಜಪಾಲು ಇವರದ್ದೆಂಬುದೇ ವರ್ತಮಾನ ಕಾಲದ ವಾರ್ತೆ.

ಶ್ರೀಪಾದಂಗಳವರ ಧೀರತನದ ಸಾರಥ್ಯದಲ್ಲಿ ಭಾವದೀಪದ ಯೋಜನೆಯೆಂಬ ರಥ ಅತೀಶೀಘ್ರದಲ್ಲಿ ಗುರಿಮುಟ್ಟುವುದರಲ್ಲಿ ಸಂದೇಹವಿಲ್ಲ.

''ಭಾವದೀಪದ ಅದೆಷ್ಟೋ ಸಂಪುಟಗಳು ಮುದ್ರಣವಾಗಿ ಬಿಡುಗಡೆಗೊಂಡಿವೆ. ಇದೂ ಕೂಡ ಮುದ್ರಣವಾಗಿ ಬಿಡುಗಡೆಗೊಳ್ಳುತ್ತಿದೆ'' ಎಂದಷ್ಟೇ ಕಂಡವರಿಗೆ ಅನಿಸಬಹುದು. ಆದರೆ ಇದರಲ್ಲಿ ಒಂದು ವೈಶಿಷ್ಟ್ಯವಿದೆ. 'ರಾಯರ ವರ್ಧಂತಿಯಂದು ಭಾವದೀಪದ 10ನೆಯ ಸಂಪುಟ ಬಿಡುಗಡೆ ಆಗಲೇ ಬೇಕು' ಎಂಬುದು ಶ್ರೀಪಾದಂಗಳವರ ಒತ್ತಾಯವಿತ್ತು. ''ಕೈಸಾಗುವಷ್ಟೇ ಹೊರೆ ಹೊತ್ತರೆ ಮಾತ್ರ ಜಾರಿ ಬೀಳುವುದಿಲ್ಲ. ಬಿಕ್ಕಟ್ಟಿನಲ್ಲೂ ಎದೆಗುಂದುವುದಿಲ್ಲ'' ಎಂಬ ಭಾವನೆಯಿಂದ 'ನನಗಾಗದು' ಎಂದಷ್ಟೇ ಶ್ರೀಪಾದಂಗಳವರಲ್ಲಿ ಬಿನ್ನವಿಸಿದೆ. ಅನೇಕ ಕಾರ್ಯಗಳ ಒತ್ತಡದಲ್ಲಿದ್ದ ಶ್ರೀಪಾದಂಗಳವರ ಉತ್ತರ ಎರಡೇ ಮಾತು - ''ಬಿಡುಗಡೆಯಾಗುತ್ತದೆ ಹೋಗಿ ಬನ್ನಿ''. ಶ್ರೀಪಾದಂಗಳವರ ಕೇವಲ ಸಂಕಲ್ಪಶಕ್ತಿಯಿಂದ ಈ ಸಂಪುಟವು ಇಂದು ಬಿಡುಗಡೆಗೊಂಡಿದೆ. ಹೀಗೆ ಎಲ್ಲಾ ಸಂಪುಟಗಳಲ್ಲೂ ಶ್ರೀಪಾದಂಗಳವರ ಅನುಗ್ರಹ ಅವರ ನಿಷ್ಠೆಗಳೇ ಕೆಲಸ ಸಾಗಿಸುತ್ತಿವೆ.

ಹತ್ತನೆಯ ಸಂಪುಟದಲ್ಲಿ ಎರಡನೆಯ ಅಧ್ಯಾಯದ ಎರಡನೆಯ ಪಾದದಲ್ಲಿ ಬರುವ ಹನ್ನೆರಡು ಅಧಿಕರಣಗಳ ಅನುವಾದವಿದೆ. ಅದಕ್ಕೆ 'ಸಮಯಪಾದ' ಎನ್ನುವರು. ಕುಮತಗಳ ನಿರಾಕರಣೆ, ಸ್ವಮತದ ಸ್ಥಾಪನೆಯೇ ಈ ಪಾದದ ಮುಖ್ಯ ಗುರಿ. ಒಟ್ಟು ನಲವತ್ತೈದು ಸೂತ್ರಗಳಿಂದ ಹನ್ನೆರಡು ಅಧಿಕರಣಗಳಲ್ಲಿ ಹನ್ನೆರಡು ಮತಗಳ ವಿಮರ್ಶೆಯನ್ನು ಮಾಡಿರುತ್ತಾರೆ. ತನ್ಮೂಲಕ ಉಳಿದೆಲ್ಲಾ ಮತಗಳ ನಿರಾಕರಣೆಯು ಇದರಲ್ಲೇ ಅಡಗಿದೆ. ರಾಮಾನುಜಮತದ ಪ್ರಕಾರ ಈ ಪಾದದಲ್ಲಿ 42 ಸೂತ್ರಗಳಿದೆ. 8 ಅಧಿಕರಣಗಳಿವೆ. ಅದ್ವೈತಮತದಲ್ಲಿ 45 ಸೂತ್ರಗಳಿವೆ. ಎಂಟು ಅಧಿಕರಣಗಳಿವೆ. ಆದರೆ ಅಧಿಕರಣಗಳ ಹೆಸರಿನಲ್ಲೂ ಬಹಳಷ್ಟು ವ್ಯತ್ಯಾಸವಿದೆ. ಹಾಗೂ ಎಲ್ಲಾ ಕುಮತಗಳ ನಿರಾಕರಣೆಗಾಗಿ ಈ ಪಾದ ಹೊರಟಿದೆ ಎಂಬ ಧೋರಣೆ ಇಬ್ಬರಲ್ಲೂ ಇಲ್ಲ. ಅದ್ವೈತಿಗಳು ಇತರ ಮತದಲ್ಲಿರುವ ದೋಷಗಳನ್ನು ಎತ್ತಿ

ತೋರಿಸಲು ಈ ಪಾದ ಹೊರಟಿದೆ ಎಂದರೂ ಕೂಡ ಎಲ್ಲಾ ಮತಗಳ ಉಲ್ಲೇಖವನ್ನೇ ಮಾಡುವುದಿಲ್ಲ. ರಾಮಾನುಜರೂ ಕೂಡ ಕಾರಣವಿಷಯದಲ್ಲಿರುವ ದೋಷೋದ್ಧಾರಕ್ಕಾಗಿ ಈ ಪಾದ ಹೊರಟಿದೆ ಎನ್ನುವರು. ಆದರೆ ಎಲ್ಲಾ ಸಮಯಗಳ ವಿರೋಧ ನಿರಾಕರಣೆ ಇದರಲ್ಲಿದೆ ಎಂದು ಒಪ್ಪುವುದಿಲ್ಲ. ಅದ್ವೈತಮತದ ಪ್ರಕಾರ - 1. ರಚಾನನುಪಪತ್ತ್ಯಧಿಕರಣ, 2. ಮಹದ್ದೀರ್ಘಾಧಿಕರಣ, 3. ಪರಮಾಣು ಜಗತ್ಕಾರಣತ್ವಾಧಿಕರಣ, 4. ಸಮುದಾಯಾಧಿಕರಣ, 5. ಅಭಾವಾಧಿಕರಣ, 6. ಏಕಸ್ಮಿನ್ನಸಂಭವಾಧಿಕರಣ, 7. ಪತ್ಯಧಿಕರಣ, 8. ಉತ್ಪತ್ತ್ಯಸಂಭವಾಧಿಕರಣ ಎಂದು ವಿಂಗಡಣೆ ಮಾಡಿದ್ದಾರೆ.

' ರಾಮಾನುಜಮತದಲ್ಲಿ - 1. ರಚನಾನುಪಪತ್ತ್ಯಧಿಕರಣ, 2. ಮಹದ್ದೀರ್ಘಾಧಿಕರಣ, 3. ಸಮುದಾಯಾಧಿಕರಣ, 4. ಉಪಲಬ್ಧ್ಯಧಿಕರಣ, 5. ಸರ್ವಥಾऽನುಪಪತ್ತ್ಯಧಿಕರಣ, 6. ಏಕಸ್ಮಿನ್ನಸಂಭವಾಧಿಕರಣ, 7. ಪಶುಪತ್ಯಧಿಕರಣ, 8. ಉತ್ಪತ್ತ್ಯಸಂಭವಾಧಿಕರಣ ಎಂಬುದಾಗಿ 42 ಸೂತ್ರಗಳನ್ನು ವಿಂಗಡಣೆ ಮಾಡಿದ್ದಾರೆ. ನಾವು ಹೇಳುವಂತೆ ಕ್ರಮವಾಗಿ ಹನ್ನೆರಡು ಅಧಿಕರಣಗಳು ಇಬ್ಬರೂ ಒಪ್ಪಿಲ್ಲ.

ರಚನಾನುಪಪತ್ತ್ಯಧಿಕರಣ - ವಿಷ್ಣುವೊಬ್ಬನೇ ಜಗಜ್ಜನ್ಮಾದಿಕಾರಣನಾಗಿದ್ದಾನೆ. ಬೇರೆ ಯಾರೂ ಕೂಡ ಜಗಜ್ಜನ್ಮಾದಿ- ಕಾರಣರಾಗಲು ಸಾಧ್ಯವಿಲ್ಲ ಎಂಬುದಾಗಿ ಪ್ರಥಮಾಧ್ಯಾಯದಲ್ಲಿ ಸಮರ್ಥಿಸಲಾಯಿತು. ಈ ವಿಷಯದಲ್ಲಿ ಸಾಂಖ್ಯರು ಆಕ್ಷೇಪವನ್ನು ಮಾಡುತ್ತಾರೆ. ಪ್ರಕೃತಿಯೇ ಜಗತ್ತಿಗೆ ಕಾರಣವಾಗಿದೆ. ಅನುಮಾನವು ಇದನ್ನು ಸಮರ್ಥನೆ ಮಾಡುತ್ತಿದೆ. ಮತ್ತು ಸಾಂಖ್ಯಸ್ಮೃತಿಯೂ ಕೂಡ ಇದಕ್ಕೆ ಆಧಾರವಾಗಿದೆ. ಆದ್ದರಿಂದ ಈಶ್ವರನಿಗೆ ಜಗತ್‌ಕರ್ತೃತ್ವವನ್ನು ಏಕೆ ಒಪ್ಪಬೇಕು ? ಎಂದು. ಸಾಂಖ್ಯಮತದ ನಿರಾಕರಣೆಗಾಗಿ ಈ ರಚನಾನುಪಪತ್ತ್ಯಧಿಕರಣವು ಹೊರಟಿದೆ. ''ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ'' ಇತ್ಯಾದಿ ಶ್ರುತಿಗಳು ಈಶ್ವರನೇ ಜಗತ್ತಿಗೆ ನಿಮಿತ್ತಕಾರಣ- ನಾಗಿದ್ದಾನೆಂದು ಹೇಳುತ್ತಿವೆ. ''ನ ಋತೇ ತ್ವತ್ಕ್ರಿಯತೇ'' ಇತ್ಯಾದಿ ಶ್ರುತಿಗಳು ಈಶ್ವರನನ್ನು ಬಿಟ್ಟು, ಪ್ರಕೃತ್ಯಾದಿಗಳಿಗೆ ಜಗತ್ಕಾರಣತ್ವಾದಿಗಳು ಬರಲು ಸಾಧ್ಯವಿಲ್ಲ ಎಂದು ಹೇಳುತ್ತಿದೆ. ಅಚೇತನವಾದ ಪ್ರಕೃತಿಗೆ ಕಾರ್ಯಕರ್ತೃತ್ವ ಕೂಡಲು ಸಾಧ್ಯವೇ ಇಲ್ಲ. ಹಾಗೆಲ್ಲೂ ಜಗತ್ತಿನಲ್ಲಿ ಕಂಡಿಲ್ಲ. ಆದ್ದರಿಂದ ನಿರೀಶ್ವರಸಾಂಖ್ಯಮತವು ಅಪ್ರಾಮಾಣಿಕವಾಗಿದೆ ಎಂಬುದು ಈ ಅಧಿಕರಣದ ಪ್ರಮೇಯ.

ಅನ್ಯತ್ರಭಾವಾಧಿಕರಣ - ಪ್ರಕೃತಿಯೇ ಜಗತ್ತಿಗೆ ಕರ್ತೃವಾಗಿದೆ. ಅದಕ್ಕೆ ಗುಣಭೂತನಾಗಿ ಈಶ್ವರನು ಕಾರಣನಾಗಿದ್ದಾನೆ ಎಂಬುದಾಗಿ ಸೇಶ್ವರಸಾಂಖ್ಯರು ಅಧಿಕಾಕ್ಷೇಪವನ್ನು ಮಾಡಿದ್ದಾರೆ. ಪರ್ಜನ್ಯನಿಂದ ಅನುಗೃಹೀತವಾದ ಪೃಥಿವೀಯಿಂದ ಅಂಕುರಾದಿಗಳು ಹುಟ್ಟುವಂತೆ ಈಶ್ವರನಿಂದ ಅನುಗೃಹೀತವಾಗಿ ಪ್ರಧಾನದಿಂದ ಈ ಜಗತ್ತು ಹುಟ್ಟಿದೆ ಎಂಬುದು ಇವರ ಅಭಿಪ್ರಾಯ. ಆದರೆ ಇದೂ ಕೂಡ ತಪ್ಪು. 'ಯಚ್ಚ ಕಿಂಚಿತ್ ಜಗತ್ಸರ್ವಂ' ಇತ್ಯಾದಿ ಶ್ರುತಿಗಳು ಈಶ್ವರ ಪ್ರೇರಣೆಯಿಲ್ಲದೇ ಯಾವುದೇ ವಸ್ತುಗಳ ಇರುವಿಕೆಯೇ ಸಾಧ್ಯವಿಲ್ಲ. ಈಶ್ವರಪ್ರೇರಣೆಯಿಲ್ಲದೇ ಯಾವುದೇ ವಸ್ತುಗಳು ಪ್ರವೃತ್ತಿ ಮಾಡಲು ಸಾಧ್ಯವೇ ಇಲ್ಲ. ಮತ್ತು 'ಸ ಏವ ಭೂಯೋ ನಿಜವೀರ್ಯಚೋದಿತಾಂ' ಇತ್ಯಾದಿ ಸ್ಮೃತಿಗಳಲ್ಲಿ ಪ್ರಕೃತ್ಯಾದಿಗಳಲ್ಲಿರುವ ಜಗತ್ಕಾರಣತ್ವವೂ ಕೂಡ ಈಶ್ವರಾಧೀನವೆಂದು ಹೇಳಲಾಗಿದೆ. ಆದ್ದರಿಂದ ಈಶ್ವರನು ಪರ್ಜನ್ಯನಂತೆ ಕೇವಲ ಅನುಗ್ರಾಹಕನಾಗಲು ಸಾಧ್ಯವಿಲ್ಲ ಎಂಬುದಾಗಿ ನಿರೀಶ್ವರಸಾಂಖ್ಯಮತವನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡಲಾಗಿದೆ.

ಅಭ್ಯುಪಗಮಾಧಿಕರಣ - ಪ್ರತ್ಯಕ್ಷಕ್ಕಿಂತ ಅತಿರಿಕ್ತವಾದ ಪ್ರಮಾಣವೇ ಇರುವುದಿಲ್ಲ. ಪುಣ್ಯ, ಪಾಪ, ನರಕ ಮೊದಲಾದ ಯಾವುದೇ ಅದೃಶ್ಯವಸ್ತುಗಳನ್ನು ಅಂಗೀಕರಿಸುವುದರಲ್ಲಿ ಅರ್ಥವೇ ಇಲ್ಲ. ಈಶ್ವರನೇ ಇಲ್ಲದಿರುವಾಗ ಈಶ್ವರನಿಗೆ ಜಗತ್ಕರ್ತೃತ್ವ ಹಾಗೂ ಈಶ್ವರಸ್ವಾತಂತ್ರ್ಯ ಮೊದಲಾದವುಗಳು ಸುತರಾಂ ಸಿದ್ಧವಾಗುವುದಿಲ್ಲ ಎಂಬುದಾಗಿ ಚಾರ್ವಾಕರು ಆಕ್ಷೇಪ ಮಾಡುತ್ತಾರೆ. ಆದರೆ ಯಾರ ಮತದಲ್ಲಿ ಧರ್ಮ, ಅಧರ್ಮ ಮೊದಲಾದವುಗಳನ್ನೇ ಅಂಗೀಕಾರ ಮಾಡಿರುವುದಿಲ್ಲವೋ, ಅವನ ಸಿದ್ಧಾಂತದಿಂದ ಏನು ತಾನೇ ಪ್ರಯೋಜನವಿದೆ ? ಕೇವಲ ಸ್ವವ್ಯಾಹತಿಯ ಕಂತೆಯಂತಿರುವ ಚಾರ್ವಾಕಮತವನ್ನು ಉಪೇಕ್ಷೆ ಮಾಡಬೇಕೇ ಹೊರತು, ಅನುಸರಿಸುವುದರಿಂದ ಏನೂ ಪ್ರಯೋಜನವಿಲ್ಲ. ಅಂಥ ಮತಗಳಿಂದ ಜಗತ್ತಿನಲ್ಲಿ ಹಿಂಸಾದಿಪ್ರವೃತ್ತಿಗಳೇ ಹೆಚ್ಚಾಗಿ ಅಪಕಾರವೇ ಆಗುತ್ತದೆ ಎಂಬುದಾಗಿ ಚಾರ್ವಾಕಮತವನ್ನು ಈ ಅಧಿಕರಣವು ನಿರಾಕರಣೆ ಮಾಡಿದೆ.

ಪುರುಷಾಶ್ಮಾಧಿಕರಣ - ಕೇವಲ ಜಡವು ಜಗತ್ಕರ್ತೃ ಆಗದಿರಬಹುದು. ಜೀವರ ಜೊತೆ ಸೇರಿದ ಜಡವು ಜಗತ್ತಿಗೆ ಕರ್ತೃವಾಗುತ್ತದೆ. ಕೇವಲ ದೇಹಕ್ಕೆ ಕಲ್ಲನ್ನು ಎತ್ತಲಾಗುವುದಿಲ್ಲ.

ಜೀವಸಂಬಂಧವಿರುವ ದೇಹವು ಕಲ್ಲನ್ನು ಎತ್ತಲು ಸಮರ್ಥವಾಗುವುದು ಕಂಡಿದೆ. ಆದ್ದರಿಂದ ವಿಷ್ಣುವಿಗೆ ಕರ್ತೃತ್ವವನ್ನು ಒಪ್ಪಬೇಕಾಗಿಲ್ಲ ಎಂಬುದಾಗಿ ಹೈತುಕರು ಆಕ್ಷೇಪ ಮಾಡುತ್ತಾರೆ. ಇವರ ಮತವೂ ಕೂಡ ಅರ್ಥವಿಲ್ಲದ್ದು. ಏಕೆಂದರೆ ಯಾವರೀತಿಯಾಗಿ ಶರೀರದ ಬಲದಿಂದ ಪುರುಷನು ಕಲ್ಲನ್ನು ಎತ್ತುತ್ತಾನೋ, ಅದರಂತೆ ಪ್ರಕೃತಿಯು ಈಶ್ವರನಿಂದ ಪ್ರೇರಿತವಾಗಿ ಜಗತ್ತಿನ ಸೃಷ್ಟ್ಯಾದಿಗಳಲ್ಲಿ ತೊಡಗುತ್ತದೆ. ಇಲ್ಲಿ ಈಶ್ವರನೇ ಪ್ರಧಾನನಾಗಿದ್ದಾನೆ. ಪ್ರಕೃತಿಯು ಅಪ್ರಧಾನವಾಗಿದೆ. ಮತ್ತು 'ನ ಋತೇ ತ್ವತ್ಕ್ರಿಯತೇ'' ಇತ್ಯಾದಿ ಶ್ರುತಿಗಳ ಆಧಾರದಿಂದ ಈಶ್ವರನಿಗೆ ಕರ್ತೃತ್ವವನ್ನು ಒಪ್ಪಬೇಕು. ಜೀವನಿಗೆ ಕರ್ತೃತ್ವವನ್ನು ಒಪ್ಪಬಾರದು ಎಂಬುದು ಈ ಅಧಿಕರಣದ ಸಾರಾಂಶ.

ಅನ್ಯಥಾಽನುಮಿತ್ಯಧಿಕರಣ - ನಿರೀಶ್ವರಸಾಂಖ್ಯರಲ್ಲೇ ಕೆಲವರು ಸೃಷ್ಟಿಕ್ರಿಯೆಯಲ್ಲಿ ಪುರುಷನೇ ಮುಖ್ಯ, ಪ್ರಕೃತಿಯು ಗೌಣ ಎನ್ನುತ್ತಾರೆ. ಅವರ ಮತದ ನಿರಾಕರಣೆಗಾಗಿ ಈ ಅಧಿಕರಣವು ಹೊರಟಿದೆ. ಸಕಲ ಶ್ರುತಿ-ಸ್ಮೃತಿ-ಯುಕ್ತಿಗಳಿಗೆ ವಿರುದ್ಧವಾದ್ದರಿಂದ ಈ ಅನೀಶ್ವರಸಾಂಖ್ಯರ ಮತವು ಅಯುಕ್ತವಾಗಿದೆ.

ವೈಶೇಷಿಕಾಧಿಕರಣ - ಪರಮಾಣುಗಳಿಂದಲೇ ಜಗತ್ತು ಹುಟ್ಟುತ್ತವೆ ಹಾಗೂ ಈ ಪರಮಾಣುಗಳ ಸಂಯೋಗಕ್ಕೆ ಈಶ್ವರನ ಇಚ್ಛೆಯು ಆವಶ್ಯಕವಾಗಿದೆ. ಆದರೆ ಆ ಈಶ್ವರನು ಉಳಿದ ದ್ರವ್ಯಗಳಂತೆ ಒಬ್ಬ ದ್ರವ್ಯ. ಇವನಲ್ಲಿ ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ ಎಂಬ ಐದು ಸಾಮಾನ್ಯಗುಣಗಳಿವೆ. ಕರ್ತೃತ್ವಕ್ಕೆ ಉಪಯೋಗಿಯಾದ ಜ್ಞಾನ, ಇಚ್ಛಾ, ಪ್ರಯತ್ನ ಎಂಬ ಮೂರು ವಿಶೇಷಗುಣಗಳಿವೆ. ಈ ಎಂಟುಗುಣಗಳನ್ನು ಬಿಟ್ಟು, ಬೇರೆ ಯಾವ ಗುಣಗಳೂ ಇವನಲ್ಲಿ ಇಲ್ಲ. ಇರುವ ಈ ಎಂಟುಗುಣಗಳೂ ಕೂಡ ಅವನ ಮಹಿಮೆಗೇನೂ ಸಾಧಕವೂ ಅಲ್ಲ. ಆದರೆ ಜೀವನಿಗೆ ಹದಿನಾಕು ಗುಣಗಳಿವೆ. ಇಷ್ಟು ವೈಶೇಷಿಕಮತದ ಸಾಮಾನ್ಯ ಪರಿಚಯ. ಈ ವೈಶೇಷಿಕರು ಅತ್ಯಂತ ಅಪ್ರಾಮಾಣಿಕವಾದ ಮತವನ್ನೇ ಸ್ಥಾಪನೆ ಮಾಡಿದ್ದಾರೆ. ಈಶ್ವರನಲ್ಲಿ ಅನಂತಗುಣಗಳಿವೆ ಎಂಬುದಾಗಿ ಶ್ರುತಿ-ಸ್ಮೃತಿಗಳು ಸಾಧಿಸುತ್ತಿರುವಾಗ ಅದಕ್ಕೆ ವಿರುದ್ಧವಾಗಿ ಎಂಟೇ ಗುಣಗಳಿವೆ ಎಂದು ಹೇಳುವುದು ಪ್ರಮಾಣಕ್ಕೆ ವಿರುದ್ಧವಾದದ್ದು. ಮತ್ತು ತ್ರ್ಯಣುಕಾದಿ ಪರಿಮಾಣವು ಚತುರಣುಕಾದಿ ಪರಿಮಾಣಕ್ಕೆ ಅಸಮವಾಯಿಕಾರಣವಾಗಿದೆ. ಆದರೆ ಪರಮಾಣು

ಹಾಗೂ ದ್ವ್ಯಣುಕಗಳ ಪರಿಮಾಣುಗಳು ದ್ವ್ಯಣುಕ ಹಾಗೂ ತ್ರ್ಯಣುಕ ಪರಿಮಾಣಕ್ಕೆ ಅಸಮವಾಯಿಕಾರಣವಾಗುವುದಿಲ್ಲ. ಕೇವಲ ದ್ವಿತ್ವ, ತ್ರಿತ್ವಸಂಖ್ಯೆಯೇ ಅಸಮವಾಯಿ-ಕಾರಣವಾಗುತ್ತದೆ ಎಂದು ವೈಶೇಷಿಕರು ಹೇಳುತ್ತಾರೆ. ಇದೂ ಕೂಡ ತಪ್ಪು. ತ್ರ್ಯಣುಕಾದಿಗಳಲ್ಲಿರುವ ಪರಿಮಾಣುಗಳಂತೆ, ಪರಮಾಣುಗಳಲ್ಲಿರುವ ಪರಿಮಾಣವೂ ಕೂಡ ಪರಿಮಾಣವೇ ಆಗಿರುವುದರಿಂದ ಕಾರಣತ್ವವನ್ನು ಒಪ್ಪಲು ಯಾವುದೇ ಆತಂಕವಿಲ್ಲ. ಮತ್ತು ಅಣುತ್ವ, ಮಹತ್ವ, ದೀರ್ಘತ್ವ, ಹ್ರಸ್ವತ್ವ ಎಂಬ ಅವಾಂತಾರಜಾತಿಯಲ್ಲೂ ಕೂಡ ಪ್ರಮಾಣವಿರುವುದಿಲ್ಲ. ಪ್ರತಿಯೊಂದು ವಸ್ತುಗಳಲ್ಲೂ ಕೂಡ ಅಪೇಕ್ಷಿಕವಾದ ಅಣುತ್ವ-ಮಹತ್ವಗಳಿವೆ ಎಂಬುದು ಅನುಭವಸಿದ್ಧವಾಗಿದೆ. ಮತ್ತು ತಾರ್ಕಿಕರು ಅಸಮವಾಯಿಕಾರಣವನ್ನು ಒಪ್ಪುತ್ತಾರೆ. ಇದೂ ಕೂಡ ತಪ್ಪು. ಏಕೆಂದರೆ ತಂತುಸಂಯೋಗಕ್ಕಿಂತ ಅತಿರಿಕ್ತವಾದ ಪಟವೇ ಇರುವುದಿಲ್ಲ. ಈಶ್ವರೇಚ್ಛೆಯನ್ನು ನಿಮಿತ್ತಕಾರಣವೆನ್ನುತ್ತಾರೆ. ಈ ಈಶ್ವರೇಚ್ಛೆಯನ್ನು ನಿತ್ಯವೆಂದಾಗಲೀ, ಅನಿತ್ಯವೆಂದಾಗಲೀ ಅವರಿಂದ ಸಮರ್ಥನೆ ಮಾಡಲು ಸಾಧ್ಯವಾಗುವುದಿಲ್ಲ. ಗುಣಮತ್ತು ಗುಣಿಗಳಿಗೆ ಅಭೇದವನ್ನು ಅಂಗೀಕಾರ ಮಾಡುತ್ತಾರೆ. ಇದೂ ಕೂಡ ಅನುಭವವಿರುದ್ಧವಾಗಿದೆ. ತಾರ್ಕಿಕರ ಮತದಲ್ಲಿ ಪ್ರಳಯದ ಕಲ್ಪನೆಯೂ ಕೂಡ ಅಯುಕ್ತವಾಗಿದೆ. ಆದ್ದರಿಂದ ತಾರ್ಕಿಕರ ಮತವು ಸಜ್ಜನರಿಂದ ನಿಂದಿಸಲ್ಪಟ್ಟದೆ.

ಸಮುದಾಯಾಧಿಕರಣ - ಬೌದ್ಧಮತದ ನಿರಾಕರಣೆಗಾಗಿ ಈ ಅಧಿಕರಣ ಹೊರಟಿದೆ. ವಿಷ್ಣುವೇ ಜಗಜ್ಜನ್ಮಾದಿಕಾರಣನಾಗಿದ್ದಾನೆಂಬುದು ತಪ್ಪು. ಏಕೆಂದರೆ ಪರಮಾಣು ಸಮುದಾಯವೇ ಜಗತ್ತಾಗಿ ಕಾಣಿಸುತ್ತಿದೆ ಎಂದು ಇವರು ಹೇಳುತ್ತಾರೆ. ಆದರೆ ಅವಯವಿಯು ಪರಮಾಣು-ಪರಿಮಾಣವೆಂದಾಗಲೀ ಪರಮಾಣುವಿನಿಂದ ಆರಬ್ಧವಾಗಿದೆ ಎಂದಾಗಲೀ, ಅಂಗೀಕಾರ ಮಾಡುವುದು ವ್ಯರ್ಥವಾಗುತ್ತದೆ. ಈ ಬೌದ್ಧರು ಜಗತ್ತನ್ನು ಕ್ಷಣಿಕವೆನ್ನುತ್ತಾರೆ. ಇವರ ನಿರಾಕರಣೆಯನ್ನು ಕೂಡ ಈ ಅಧಿಕರಣದಲ್ಲಿ ಮಾಡಿದ್ದಾರೆ. ಅಣುಹೇತುಕವಾದ ಅಣುಸಮುದಾಯವೇ ಘಟ-ಪಟಾದಿ ಕಾರ್ಯರೂಪವಾಗಿದೆ ಎನ್ನುತ್ತಾರೆ. 'ಅನೇಕ ಅಣು ಹೇತುಕಃ ಸಮುದಾಯಃ' ಎಂದೂ ಕೂಡ ಹೇಳುತ್ತಾರೆ. ಇವರ ಈ ಎಲ್ಲಾ ವಾದಗಳನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡಲಾಗಿದೆ.

ಅಸದಧಿಕರಣ - ಪಾರಮಾರ್ಥಿಕವಾದ ದೇಶ-ಕಾಲಗಳಿಂದ ಪರಿಚ್ಛೇದಶೂನ್ಯವಾದ ಶೂನ್ಯತತ್ವದಿಂದ ಜಗತ್ತಿನ ಉತ್ಪತ್ತಿಯಾಗುತ್ತದೆ. ಶ್ರೀಹರಿಯನ್ನು ಒಪ್ಪುವ ಆವಶ್ಯಕತೆಯಿಲ್ಲ. ಶ್ರುತ್ಯಾದಿಗಳೆಲ್ಲವೂ ಅಪ್ರಾಮಾಣಿಕವಾಗಿವೆ ಎಂಬುದಾಗಿ ಶೂನ್ಯಮತದವರು ಹೇಳುತ್ತಾರೆ. ಇವರ ನಿರಾಕರಣೆಯೇ ಅಸದಧಿಕರಣದ ಉದ್ದೇಶ. ಯಾವುದೇ ಧರ್ಮವಿಲ್ಲದ ಶೂನ್ಯಕ್ಕೆ ಕಾರಣತ್ವವೆಂಬ ಧರ್ಮವನ್ನು ಒಪ್ಪುವುದು ಪ್ರಮಾಣವಿರುದ್ಧವಾಗುತ್ತದೆ. ಶೂನ್ಯವೇ ಜಗದಾಕಾರವಾಗಿ ತೋರುತ್ತಿದೆ ಎಂಬ ಪ್ರತೀತಿಯು ಅನುಭವವಿರುದ್ಧವಾಗಿದೆ. ಆದ್ದರಿಂದ ಬೌದ್ಧೈಕದೇಶಿಗಳ ಈ ವಾದವು ಸಜ್ಜನರು ಅಂಗೀಕರಿಸಲು ಯೋಗ್ಯವಲ್ಲದ್ದು.

ಅನುಪಲಬ್ಧ್ಯಧಿಕರಣ - ವಿಜ್ಞಾನತತ್ವದಿಂದ ಈ ಜಗತ್ತು ಅಭಿನ್ನವಾಗಿದೆ. ಆದ್ದರಿಂದ ಈಶ್ವರನನ್ನೇಕೆ ಒಪ್ಪಬೇಕೆಂಬುದು ವಿಜ್ಞಾನವಾದಿಗಳ ಆಗ್ರಹ. ಆದರೆ ಜಗತ್ತನ್ನು ಸತ್ಯ ಎಂಬುದಾಗಿ ಅನುಭವಿಸುತ್ತಿರುವ ಪ್ರತ್ಯಕ್ಷದಿಂದ ಈ ವಾದವು ಬಾಧಿತವಾಯಿತು. ವಿಜ್ಞಾನತತ್ವಕ್ಕೂ ಜಗತ್ತಿಗೂ ಅಭೇದವನ್ನು ಒಪ್ಪಿದರೆ ಭೇದಪ್ರತೀತಿಯಿಂದ ಬಾಧವು ಬರುತ್ತದೆ. ವಿಜ್ಞಾನವು ಕ್ಷಣಿಕವಾದ್ದರಿಂದ ಜಗತ್ತೂ ಕೂಡ ಕ್ಷಣಿಕವಾಗಬೇಕಾಗುತ್ತದೆ. ಹಾಗಾಗಿ ವಿಷ್ಣುವೇ ಜಗತ್ತಿಗೆ ಕಾರಣನೆಂದು ಒಪ್ಪಲೇಬೇಕು ಎಂಬುದು ಈ ಅಧಿಕರಣದ ಅಭಿಪ್ರಾಯ.

ನೈಕಸ್ಮಿನ್ನಧಿಕರಣ - ಆಯಾ ದೇಹ ಪರಿಮಾಣವುಳ್ಳ ಆತ್ಮನಿಂದ ಹಾಗೂ ಅದೃಷ್ಟಸಾಧನೆಗಳಿಂದ ಈ ಜಗತ್ತು ಕೂಡಿದೆ. 1. ಸತ್ವ, 2. ಅಸತ್ವ, 3. ಸದಸತ್ವ, 4. ಸದಸದ್‌ವಿಲಕ್ಷಣತ್ವ, 5. ಸತ್ವೇಸತಿ ಸದ್ವಿಲಕ್ಷಣತ್ವ, 6. ಅಸತ್ವೇ ಸತಿ ಅಸದ್ವಿಲಕ್ಷಣತ್ವ, 7. ಸದಸತ್ವೇ ಸತಿ ಸದಸದ್ವಿಲಕ್ಷಣತ್ವ ಎಂಬ ಏಳು ಪ್ರಕಾರಗಳಿಂದ ಜಗತ್ತು ಕೂಡಿದೆ. ಇಂಥ ಜಗತ್ತಿಗೆ ಈಶ್ವರನಿಂದ ಆಗಬೇಕಾದ್ದೇನೂ ಇಲ್ಲ ಎಂಬುದಾಗಿ ಜೈನಮತದವರು ಹೇಳುತ್ತಾರೆ. ಜೈನವಾದಿಗಳ ಈ ಎಲ್ಲಾ ಪ್ರಕಾರಗಳು ಪ್ರಮಾಣಕ್ಕೆ ಸಮ್ಮತವಾದವುಗಳಲ್ಲ. ಒಂದೊಂದು ಪಕ್ಷದಲ್ಲಿರುವ ದೋಷಗಳೆಲ್ಲವೂ ಸೇರಿ ಎಲ್ಲಾ ದೋಷಗಳು ಜೈನರಿಗೆ ಬರುತ್ತವೆ. ಮತ್ತು ಜೀವರಿಗೆ ಆಯಾ ಶರೀರದಷ್ಟೇ ಪರಿಮಾಣವನ್ನು ಒಪ್ಪಿದರೆ ಅನಿತ್ಯತ್ವವು ಪ್ರಾಪ್ತವಾಗುತ್ತದೆ ಎಂಬುದಾಗಿ ಜೈನಮತವನ್ನು ನೈಕಸ್ಮಿನ್ನಧಿಕರಣವು ನಿರಾಕರಣೆ ಮಾಡಿದೆ.

ಪತ್ಯುರಧಿಕರಣ - ಸಾರ್ವಜ್ಞ್ಯಾದಿ ಗುಣಗಳುಳ್ಳ ರುದ್ರನೇ ಮಾಯೆಯನ್ನು ಉಪಾದಾನ ಕಾರಣವನ್ನಾಗಿ ಮಾಡಿಕೊಂಡು ಜಗತ್ತನ್ನು ನಿರ್ಮಾಣ ಮಾಡಿದ್ದಾನೆ. ಆದ್ದರಿಂದ ವಿಷ್ಣುವಿಗೆ ಜಗತ್‌ಕರ್ತೃತ್ವವನ್ನು ಒಪ್ಪಬೇಕಾಗಿಲ್ಲ ಎಂಬುದಾಗಿ ಪಾಶುಪತಮತದವರು ಹೇಳುತ್ತಾರೆ. ಇವರ ಮತವನ್ನು ಈ ಪತ್ಯುರಧಿಕರಣದಲ್ಲಿ ನಿರಾಕರಣೆ ಮಾಡಲಾಗಿದೆ 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ' ಇತ್ಯಾದಿ ಶ್ರುತಿಗಳಿಂದ ಶಿವನು ಅಸ್ವತಂತ್ರನೆಂದು ತಿಳಿಯುತ್ತಿದೆ. ಸೃಷ್ಟಿಕಾಲದಲ್ಲಿ ಇವನಿಗೆ ಅಧಿಷ್ಠಾನವೇ ಇಲ್ಲದ್ದರಿಂದ ಕರ್ತೃತ್ವವು ಕೂಡುವುದಿಲ್ಲ. ಪರಮಾತ್ಮನಲ್ಲಿ ಅಚಿಂತ್ಯಾದ್ಭುತಶಕ್ತಿಯಿರುವುದರಿಂದ ಜ್ಞಾನಾನಂದಾದಿದೇಹವಿರುವುದರಿಂದ ಕರ್ತೃತ್ವವು ಯುಕ್ತವಾಗುತ್ತದೆ. ಆದ್ದರಿಂದ ಶೈವಮತವು ತಪ್ಪು.

ಉತ್ಪತ್ತ್ಯಧಿಕರಣ - ಸಾರ್ವಜ್ಞ್ಯಾದಿ ಗುಣಗಳುಳ್ಳ ಶಕ್ತಿಯಿಂದಲೇ ಜಗತ್ತು ಹುಟ್ಟುತ್ತದೆ. ಆದ್ದರಿಂದ ವಿಷ್ಣುವಿಗೆ ಕರ್ತೃತ್ವವನ್ನು ಒಪ್ಪಬೇಕಾಗಿಲ್ಲ ಎಂಬುದು ಶಾಕ್ತರ ವಾದ. ಆದರೆ ಯಾವುದೇ ಒಂದು ಸಂತತಿಯ ಉತ್ಪತ್ತಿಗೆ ಪುರುಷನ ಅನುಗ್ರಹ ಇರಲೇಬೇಕು. ಕೇವಲ ಸ್ತ್ರೀಯಿಂದ ಸಂತಾನೋತ್ಪತ್ತಿಯು ಸಾಧ್ಯವೇ ಇಲ್ಲ. ಸ್ತ್ರೀಯಾದ ಶಕ್ತಿದೇವತೆಯಿಂದ ಬ್ರಹ್ಮಾದಿವಿಶ್ವವು ಹುಟ್ಟುವುದು ದೂರತೋಪಾಸ್ತ. ಆದ್ದರಿಂದ ಶಾಕ್ತಮತವೂ ಕೂಡ ಅಪ್ರಾಮಾಣಿಕವಾಗಿದೆ.

ಹೀಗೆ ಹನ್ನೆರಡು ಅಧಿಕರಣಗಳಲ್ಲಿ ಎಲ್ಲಾ ಮತದವರನ್ನು ವಿಮರ್ಶೆ ಮಾಡಿ, ನಿರಾಕರಣೆ ಮಾಡಿದ್ದಾರೆ.

ಪರಮಪೂಜ್ಯ।। ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರ ಪರಮಾನುಗ್ರಹದಿಂದ ಸಮಯಪಾದದ ಅನುವಾದದ ಕಾರ್ಯ ಇಲ್ಲಿಗೆ ಸಮಾಪ್ತವಾಗಿದೆ. ರಾಯರ 396ನೆಯ ವರ್ಷದ ಪಟ್ಟಾಭಿಷೇಕ ಮಹೋತ್ಸವದ ಶುಭಸಂದರ್ಭದಲ್ಲಿ ಹಾಗೂ 422ನೇ ವರ್ಷದ ವರ್ಧಂತಿಯ ಮಹೋತ್ಸವದಲ್ಲಿ ಈ ಸಮಯಪಾದದ ಭಾವದೀಪಪುಸ್ತಕವು ಬಿಡುಗಡೆಯಾಗುತ್ತಿರುವುದು ನನ್ನ ಭಾಗ್ಯವಾಗಿದೆ. ಈ ಕೃತಿ ಕುಸುಮವು ಗುರುಗಳ ಅಂತರ್ಯಾಮಿಗಳಲ್ಲಿ ಸಮರ್ಪಿತವಾಗಲಿ.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ

# ಸಮಯಪಾದದ ಸಾರಾಂಶ

## ಸಮಯಗಳ ಸ್ಥೂಲ ಪರಿಚಯ

ಸಮಯಗಳು ಎರಡು ವಿಧ - 1. ಹೈತುಕ, 2. ಪಾಷಂಡ ಎಂದು. ಹೈತುಕರು ಪುನಃ ಎರಡುವಿಧ- 1. ವೇದಪ್ರಾಮಾಣ್ಯ ಒಪ್ಪುವವರು, 2. ವೇದಪ್ರಾಮಾಣ್ಯ ಒಪ್ಪದವರು ಎಂದು. ಪಾಷಂಡಿಗಳೂ ಕೂಡ ಎರಡುವಿಧ - 1. ವೇದಪ್ರಾಮಾಣ್ಯ ಒಪ್ಪುವವರು, 2. ವೇದಪ್ರಾಮಾಣ್ಯ ಒಪ್ಪದವರು ಎಂದು.

ಕೆಲವರು ಪಾಷಂಡಿಗಳು ಎನ್ನುತ್ತಾರೆ. ಕೆಲವರು ಪಾಖಂಡಿಗಳು ಎನ್ನುತ್ತಾರೆ. 'ಪಾ' ಎಂದರೆ ವೇದ, ವೇದವನ್ನು ಯಾರು ಖಂಡನೆ ಮಾಡುತ್ತಾರೋ, ಅವರನ್ನು ಪಾಖಂಡಿಗಳೆನ್ನುತ್ತಾರೆ. 'ಪಾಷಂಡ' ಎಂಬುದು 'ಪಾಷವಿಭೇದನೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. 'ಪಾಷಂಡತೀತಿ ಪಾಷಂಡಃ' ಎಂಬ ನಿಷ್ಪತ್ತಿಯಿಂದ ಯಾರು ಸತ್ಯವಾದ ವಿಚಾರವನ್ನು ಧ್ವಂಸ ಮಾಡಿ, ಅಸತ್ಯವಾದ ಮಾರ್ಗದಲ್ಲಿ ತೆರಳುವರೋ, ಅವರು ಪಾಷಂಡಿಗಳೆಂದು ಕರೆಸಿಕೊಳ್ಳುತ್ತಾರೆ.

1. ಸಾಂಖ್ಯ, 2. ಚಾರ್ವಾಕ, 3. ಪಾತಂಜಲ, 4. ನ್ಯಾಯ, 5. ವೈಶೇಷಿಕ, ಇಷ್ಟು ಮತದವರು ಹೈತುಕರು ಎಂದು ಕರೆಸಿಕೊಳ್ಳುತ್ತಾರೆ. 1. ಬೌದ್ಧ, 2. ಜೈನ, 3. ಪಾಶುಪತಾದಿಗಳು, 4. ಪಾಷಂಡಿಗಳು ಎಂದು ಕರೆಸಿಕೊಳ್ಳುತ್ತಾರೆ. ಇವರಲ್ಲಿ ಬೌದ್ಧ ಹಾಗೂ ಜೈನರು ವೇದಪ್ರಾಮಾಣ್ಯವನ್ನು ಒಪ್ಪುವುದಿಲ್ಲ. ಪಾಶುಪತಾದಿಗಳು ವೇದಪ್ರಾಮಾಣ್ಯವನ್ನು ಒಪ್ಪುತ್ತಾರೆ. ಈ ಪಾಶುಪತಾದಿಗಳೂ ಕೂಡ ಐದು ವಿಧ - 1. ಪಾಶುಪತ, 2. ಸ್ಕಾಂಧ, 3. ಸೌರ, 4. ಶಾಕ್ತ, 5. ಗಾಣಪತ ಎಂದು. ಇದನ್ನೇ ಪಂಚಾಯತನ ಪೂಜೆಯನ್ನಾಗಿ ಆಚರಿಸುತ್ತಾರೆ. ಇವರುಗಳು ವೇದಪ್ರಾಮಾಣ್ಯವನ್ನು ಅಂಗೀಕಾರ ಮಾಡಿ, ಪರಮಾತ್ಮನನ್ನು ಅಲ್ಲಗಳೆಯುತ್ತಾರೆ.

ಹೈತುಕರನ್ನು ಮತ್ತೊಂದು ವಿಧದಲ್ಲಿ ವಿಂಗಡಣೆ ಮಾಡಬಹುದು. 1. ಸೇಶ್ವರರು, 2. ನಿರೀಶ್ವರರು ಎಂದು. ಸಾಂಖ್ಯರಲ್ಲಿ ಏಕದೇಶಿಗಳು ಹಾಗೂ ಪಾತಂಜಲಿಗಳು ಅಕ್ಷಪಾದಮತದವರು ಹಾಗೂ ಕಣಾದಮತದವರು ಸೇಶ್ವರರು ಎಂದು ಕರೆಸಿಕೊಳ್ಳುತ್ತಾರೆ.

ಸಾಂಖ್ಯಮತದಲ್ಲಿ ಏಕದೇಶದವರಾದ ನಿರೀಶ್ವರಸಾಂಖ್ಯರು ಹಾಗೂ ಚಾರ್ವಾಕರು ನಿರೀಶ್ವರರೆಂದು ಕರೆಸಿಕೊಳ್ಳುತ್ತಾರೆ. ನಿರೀಶ್ವರಸಾಂಖ್ಯಮತವನ್ನೇ ನಿರಾಕರಣೆ ಮಾಡುತ್ತಿದ್ದಾರೆ. ಇವರು ಉಳಿದೆಲ್ಲಾ ಮತಗಳಿಗಿಂತ ಪ್ರಬಲರಾದ್ದರಿಂದ ಮೊದಲು ಇವರ ನಿರಾಕರಣೆ ಸಂಗತವಾಗುತ್ತದೆ. ಈ ಸಾಂಖ್ಯರು ಪ್ರಧಾನವಾಗಿ ಎರಡು ವಿಧ - 1. ವೈದಿಕಸಾಂಖ್ಯರು, 2. ಅವೈದಿಕಸಾಂಖ್ಯರು ಎಂದು. ಸ್ವಾಯಂಭುವಮನು ಹಾಗೂ ದೇವಹೂತಿಯರಲ್ಲಿ ಅವತಾರ ಮಾಡಿದ ಕಪಿಲರೂಪಿಯಾದ ಭಗವಂತನು ಸಾಂಖ್ಯಮತವನ್ನು ಸ್ಥಾಪನೆ ಮಾಡಿದ್ದಾನೆ. ಆದರೆ ಅವನು ಉಪದೇಶಿಸಿದ ಸಾಂಖ್ಯಮತವು ತತ್ವವಾದವೇ ಆಗಿದೆ. ಅದಕ್ಕೆ ವಿರುದ್ಧವಾಗಿ ಕಪಿಲಋಷಿಯೆಂಬ ಮತ್ತೊಬ್ಬನು ನಿರೀಶ್ವರಸಾಂಖ್ಯಮತವನ್ನು ಸ್ಥಾಪನೆ ಮಾಡಿರುವನು. ವಾರ್ಷಗಣ್ಯ ಎಂಬ ಆಚಾರ್ಯನು ಪ್ರಕೃತಿಗೆ ಜಗತ್ಕಾರಣತ್ವವನ್ನು ಸಮರ್ಥಿಸಿರುವನು. ಇಂಥ ನಿರೀಶ್ವರಸಾಂಖ್ಯಮತವನ್ನು ಬ್ರಹ್ಮಸೂತ್ರದಲ್ಲಿ ನಿರಾಕರಣೆ ಮಾಡಲಾಗಿದೆ. ನಿರೀಶ್ವರಸಾಂಖ್ಯರನ್ನು ನಿರಾಕರಣೆ ಮಾಡಿದ ಮೇಲೆ, ಸೇಶ್ವರಸಾಂಖ್ಯ-ಮತವನ್ನು ನಿರಾಕರಣೆ ಮಾಡುತ್ತಾರೆ. ಆದ್ದರಿಂದ ಅಚೇತನಕ್ಕೆ ಜಗತ್ಕರ್ತೃತ್ವವನ್ನು ಒಪ್ಪುವವರು ಕೆಲವರು. ಚೇತನಕ್ಕೆ ಜಗತ್ಕರ್ತೃತ್ವವನ್ನು ಒಪ್ಪುವವರು ಕೆಲವರು. ಚೇತನ ಎಂದರೆ ಈಶ್ವರನೆಂದು ಕೆಲವರು ಹೇಳುತ್ತಾರೆ. ಜೀವನೆಂದು ಕೆಲವರು ಹೇಳುತ್ತಾರೆ. ಅವರಲ್ಲೂ ಕೂಡ ಜೀವನು ಪ್ರಧಾನನಾಗಿ ಪ್ರಕೃತಿಯು ಅಪ್ರಧಾನವಾಗಿರುತ್ತದೆಂದು ಕೆಲವರು ಹೇಳುತ್ತಾರೆ. ಜೀವನೇ ಅಪ್ರಧಾನವಾಗಿ ಪ್ರಕೃತಿಯು ಪ್ರಧಾನವಾಗಿ ಜಗತ್ಕಾರಣವಾಗುತ್ತದೆಂದು ಇನ್ನು ಕೆಲವರು ಹೇಳುತ್ತಾರೆ. ಹೀಗೆ ಸಾಂಖ್ಯರಲ್ಲೇ ಒಟ್ಟು ನಾಕು ಪಂಗಡವಿದೆ-

1. ದೇವರನ್ನು ಒಪ್ಪದೇ ಕೇವಲ ಜಡಕ್ಕೆ ಜಗತ್ಕಾರಣತ್ವವನ್ನು ಹೇಳುವ ನಿರೀಶ್ವರಸಾಂಖ್ಯರು.

2. ಈಶ್ವರನನ್ನು ಅಪ್ರಧಾನವಾಗಿ ಒಪ್ಪಿ, ಅಚೇತನವಾದ ಜಡಕ್ಕೆ ಜಗತ್ಕರ್ತೃತ್ವವನ್ನು ಒಪ್ಪುವವರು ಕೆಲವರು.

3. ಈಶ್ವರನನ್ನು ಒಪ್ಪುವ ಅವಶ್ಯಕತೆಯಿಲ್ಲ. ಜೀವನನ್ನು ಒಪ್ಪಿದರೆ ಸಾಕು, ಈ ಜೀವನು ಪ್ರಧಾನನಾಗಿದ್ದಾನೆ. ಪ್ರಕೃತಿಯು ಅಪ್ರಧಾನವಾಗಿ ಜಗತ್ಕಾರಣವಾಗುತ್ತದೆ.

4. ಜೀವನು ಅಪ್ರಧಾನವಾಗಿ ಪ್ರಕೃತಿಯೇ ಪ್ರಧಾನವಾಗಿ ಜಗತ್ಕಾರಣವಾಗುತ್ತದೆಂದು ಮತ್ತೊಂದು ಮತ. ಈ ನಾಕುಬಗೆಯ ಸಾಂಖ್ಯಮತಗಳನ್ನು ಒಂದು, ಎರಡು ಹಾಗೂ ನಾಕು ಐದನೆಯ ಅಧಿಕರಣದಲ್ಲಿ ನಿರಾಕರಣೆ ಮಾಡಿದ್ದಾರೆ. ಮಧ್ಯದಲ್ಲಿ ಮೂರನೆಯ ಅಧಿಕರಣದಲ್ಲಿ ಚಾರ್ವಾಕಮತವನ್ನು ನಿರಾಕರಣೆ ಮಾಡಿದ್ದಾರೆ. ಏಕೆಂದರೆ ಸೇಶ್ವರ ಸಾಂಖ್ಯರೂ ಕೂಡ

ಚಾರ್ವಾಕರಿಗೆ ಸಮಾನರಾಗಿದ್ದಾರೆ. ಈಶ್ವರನನ್ನು ಒಪ್ಪಿಯೂ ಕೂಡ ಏನೂ ಉಪಯೋಗವಾಗಲಿಲ್ಲ ಎಂದು ತೋರಿಸುವುದಕ್ಕಾಗಿ ಮಧ್ಯದಲ್ಲಿ ಚಾರ್ವಾಕಮತವನ್ನು ನಿರಾಕರಿಸಲಾಗಿದೆ. ಹೀಗೆ ಮೊದಲನೆಯ ಐದು ಅಧಿಕರಣಗಳಲ್ಲಿ ಚಾರ್ವಾಕ ಹಾಗೂ ಸಾಂಖ್ಯಮತವನ್ನು ನಿರಾಕರಣೆ ಮಾಡಿರುತ್ತಾರೆ.

ಮೇಲೆ ಹೇಳಿದ ವಿಷಯವನ್ನು ಮತ್ತಷ್ಟು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ನಾಕುಸೂತ್ರಗಳಿಂದ ನಿರೀಶ್ವರಾಸಂಖ್ಯಮತವನ್ನು ನಿರಾಕರಣೆ ಮಾಡಲಾಗಿದೆ. ಇದೇ ಮೊದಲನೆಯ ರಚನಾನುಪಪತ್ತ್ಯಧಿಕರಣ. ಸೇಶ್ವರಸಾಂಖ್ಯಮತ ನಿರಾಸವನ್ನು ಒಂದು ಸೂತ್ರದಲ್ಲಿ ಮುಂದೆ ಮಾಡುತ್ತಾರೆ. ಇದನ್ನು ಅನ್ಯತ್ರಾಭಾವಾಧಿಕರಣ ಎನ್ನುತ್ತಾರೆ. ಸೇಶ್ವರಸಾಂಖ್ಯಮತವು ಚಾರ್ವಾಕಮತಕ್ಕೆ ಸಮನವಾಗಿದೆ ಎಂದು ತೋರಿಸುವುದಕ್ಕಾಗಿ ಮುಂದಿನ ಅಭ್ಯುಪಗಮಾಧಿ ಕರಣದಲ್ಲಿರುವ ಒಂದು ಸೂತ್ರದಿಂದ ಚಾರ್ವಾಕಮತವನ್ನು ನಿರಾಕರಣೆ ಮಾಡಿದ್ದಾರೆ. ಪುರುಷನು ಅಪ್ರಧಾನವಾಗಿ ಪ್ರಕೃತಿಯೇ ಪ್ರಧಾನವಾಗಿ ಜಗತ್‌ಕಾರಣವಾಗುತ್ತವೆಂಬ ಸಮರ್ಥನೆಗಾಗಿ ಎರಡು ಸೂತ್ರಗಳುಳ್ಳ ಪುರುಷಾಶ್ಮಾಧಿಕರಣ ಹೊರಟಿದೆ. ಪುರುಷಪ್ರಧಾನವಾದ ಪ್ರಕೃತಿಗೆ ಜಗತ್ ಕರ್ತೃತ್ವವನ್ನು ನಿರಾಕರಣೆ ಮಾಡುವುದಕ್ಕಾಗಿ ಅನ್ಯಥಾನುಮಿತ್ಯಧಿಕರಣವು ಹೊರಟಿದೆ.

ಮುಂದೆ ತಾರ್ಕಿಕಮತವನ್ನು ನಿರಾಕರಣೆ ಮಾಡುತ್ತಾರೆ. ಈ ತಾರ್ಕಿಕರೂ ಕೂಡ ಎರಡುವಿಧ - 1. ನೈಯಾಯಿಕರು, ಮತ್ತು 2. ವೈಶೇಷಿಕರು ಎಂದು. ಗೌತಮಋಷಿಯ ಅನುಯಾಯಿಗಳನ್ನು ನೈಯಾಯಿಕರು ಎನ್ನುತ್ತಾರೆ. ಕಣಾದಿಋಷಿಗಳ ಅನುಯಾಯಿಗಳನ್ನು ವೈಶೇಷಿಕರೆನ್ನುತ್ತಾರೆ. ವೈಶೇಷಿಕಾಧಿಕರಣದಲ್ಲಿ ಕಾಣಾದರೆನಿಸಿದ ವೈಶೇಷಿಕರನ್ನು ನಿರಾಕರಣೆ ಮಾಡಿದ್ದಾರೆ. ಇವರನ್ನು ಪ್ರಾಚೀನ ತಾರ್ಕಿಕರೆಂದೂ ಕೂಡ ಕರೆಯುತ್ತಾರೆ. ಈ ಪ್ರಧಾನವಾದ ವೈಶೇಷಿಕಮತವನ್ನು ನಿರಾಕರಣೆ ಮಾಡುವುದರಿಂದ ಅಪ್ರಧಾನವಾದ ನೈಯಾಯಿಕಮತವನ್ನೂ ಕೂಡ ನಿರಾಕರಣೆ ಮಾಡಿದಂತಾಗುತ್ತದೆಂಬುದು ಸೂತ್ರಕಾರರ ಅಭಿಪ್ರಾಯ. ಈ ವೈಶೇಷಿಕರು ಹೈತುಕರಾದರೂ ಕೂಡ ದೇವರನ್ನು ಅಂಗೀಕಾರ ಮಾಡುವ ಕಾರಣ ಸೇಶ್ವರರೆಂದು ಕರೆಸಿಕೊಳ್ಳುತ್ತಾರೆ. ಹೀಗೆ ಮೊದಲನೆಯ ಆರು ಅಧಿಕರಣಗಳು ಹೈತುಕಮತದ ನಿರಾಕರಣೆಯನ್ನು ಮಾಡುತ್ತವೆ. ಇಲ್ಲಿಗೆ ಸಮಯಪಾದದಲ್ಲಿ ಹೈತುಕಮತದ ನಿರಾಕರಣೆಯು ಮುಗಿಯುತ್ತದೆ. ಮುಂದೆ ಏಳನೆಯ ಅಧಿಕರಣದಿಂದ ಹನ್ನೆರಡನೆಯ ಅಧಿಕರಣದ ತನಕ ಪಾಷಂಡಿಗಳನ್ನು ನಿರಾಕರಿಸುತ್ತಾರೆ.

ಪಾಷಂಡಿಗಳ ನಿರಾಕರಣೆಗಾಗಿ ಆರು ಅಧಿಕರಣಗಳು ಹೊರಟಿವೆ. ಪಾಷಂಡಿಗಳಲ್ಲೂ ಕೂಡ ವೇದಪ್ರಾಮಾಣ್ಯವನ್ನು ಒಪ್ಪುವವರು, ವೇದಪ್ರಾಮಾಣ್ಯವನ್ನು ಒಪ್ಪದವರು ಎಂದು ಎರಡು

ಪಂಗಡಗಳಿವೆ. ಪಾಶುಪತರು ವೇದಪ್ರಾಮಾಣ್ಯವನ್ನು ಒಪ್ಪುವವರು. ಬೌದ್ಧ ಹಾಗೂ ಜೈನರು ವೇದಪ್ರಾಮಾಣ್ಯವನ್ನು ಒಪ್ಪದವರು. ಇವರಿಬ್ಬರಲ್ಲಿ ಅತ್ಯಂತ ಬಲಿಷ್ಠರು ವೇದಪ್ರಾಮಾಣ್ಯವನ್ನು ಒಪ್ಪದ ಬೌದ್ಧರು ಹಾಗೂ ಜೈನರಾಗಿದ್ದಾರೆ. ಜೈನಗ್ರಂಥಗಳ ನಿರ್ಮಾಣಕ್ಕಿಂತ ಮೊದಲೇ ಬೌದ್ಧಗ್ರಂಥಗಳ ನಿರ್ಮಾಣವಾಗಿತ್ತು. ಹಾಗೂ ಬೌದ್ಧರು ನೀಡುವ ಉಪಪತ್ತಿಗಳೂ ಕೂಡ ಅತ್ಯಂತ ಬಲಿಷ್ಠವಾಗಿವೆ. ಈ ಕಾರಣದಿಂದ ಮೊದಲು ಬೌದ್ಧಮತವನ್ನು ನಿರಾಕರಣೆ ಮಾಡಿ, ಅನಂತರ ಜೈನಮತವನ್ನು ನಿರಾಕರಣೆ ಮಾಡುತ್ತಾರೆ.

ಬೌದ್ಧರಲ್ಲಿ ಮಹಾಯಾನ, ಹೀನಯಾನ ಪಂಗಡ ಲೋಕಪ್ರಸಿದ್ಧವಾಗಿದೆ. ಯಾರು ಬುದ್ಧನನ್ನು ದೇವನೆಂದು ಉಪಾಸನೆ ಮಾಡುವುದಕ್ಕಾಗಿ ಬುದ್ಧದೇವಸ್ಥಾನವನ್ನು ಅಂಗೀಕರಿಸುತ್ತಾರೋ, ಅವರು ಮಹಾಯಾನಿಗಳು, ಬುದ್ಧನು ದೇವನಲ್ಲ. ದೇವಸ್ಥಾನದ ಅಪೇಕ್ಷೆಯಿಲ್ಲ ಎಂದು ಹೇಳುವವರು ಹೀನಯಾನಿಗಳು. ಇದರ ಬಗ್ಗೆ ಇಲ್ಲಿ ಉಲ್ಲೇಖ ಬರುವುದಿಲ್ಲ. ಆದರೆ ಬುದ್ಧನ ಉಪದೇಶವನ್ನು ಮೂರು ಬಗೆಯಲ್ಲಿ ಅರ್ಥಮಾಡಿಕೊಂಡಿರುವ ಕಾರಣ ಬೌದ್ಧರಲ್ಲಿ ಯಾವ ಮೂರು ಪಂಗಡಗಳು ಹೊರಟಿವೆಯೋ, ಆ ಮೂವರ ಮತವನ್ನೂ ಕೂಡ ಇಲ್ಲಿ ವಿಮರ್ಶಿಸಿದ್ದಾರೆ.

1. ಬಾಹ್ಯವಾದ ಜಗತ್ತು ಇದೆ ಎಂದು ಹೇಳುವವರು.

2. ಬಾಹ್ಯವಾದ ಜಗತ್ತೇ ಇಲ್ಲ ಎಂದು ಹೇಳುವವರು.

3. ಬಾಹ್ಯವಾದ ಜಗತ್ತು ಒಳಗೂ ಇಲ್ಲ, ಹೊರಗೂ ಇಲ್ಲ ಎಂದು ಹೇಳುವವರು. ಬಾಹ್ಯವಾದ ಜಗತ್ತಿದೆ ಎಂದು ಹೇಳುವ ಪ್ರಥಮಪಕ್ಷದಲ್ಲೂ ಕೂಡ ಎರಡು ಪಂಗಡವಿದೆ. ಈ ಬಾಹ್ಯವಾದ ಜಗತ್ತು ಪ್ರತ್ಯಕ್ಷಸಿದ್ಧವೆಂದು ಹೇಳುವವರು ಕೆಲವರು. ಅನುಮಾನದಿಂದ ಸಿದ್ಧವೆಂದು ಹೇಳುವವರು ಕೆಲವರು. ಹಾಗಾಗಿ ಒಟ್ಟು ನಾಕು ಪಂಗಡವಾಯಿತು. ಇವರನ್ನೇ ವೈಭಾಷಿಕರು, ಸೌತ್ರಾಂತಿಕರು, ಯೌಗಾಚಾರ್ಯರು ಹಾಗೂ ಮಾಧ್ಯಮಿಕರು ಎಂದು ಕರೆಯಲಾಗುತ್ತದೆ. ಸೌತ್ರಾಂತಿಕರು ಬಾಹ್ಯವಾದ ಜಗತ್ತು ಪ್ರತ್ಯಕ್ಷಸಿದ್ಧವೆನ್ನುತ್ತಾರೆ. ವೈಭಾಷಿಕರು ಅನುಮೇಯವೆನ್ನುತ್ತಾರೆ. ಇವರಿಬ್ಬರನ್ನು ಏಳನೆಯ ಸಮುದಾಯಾಧಿಕರಣದಲ್ಲಿ ನಿರಾಕರಿಸಲಾಗಿದೆ. ಪ್ರಪಂಚವು ಪರಮಾಣುಗಳ ಸ್ವರೂಪರೂಪವಾಗಿರುವುದರಿಂದ ಕ್ಷಣಿಕವಾಗಿವೆ ಎಂದು ಇಬ್ಬರೂ ಕೂಡ ಹೇಳುತ್ತಾರೆ. ಜಗತ್ತು ಶೂನ್ಯವಾಗಿದೆ ಇದು ಜ್ಞಾನಾಕಾರವೂ ಅಲ್ಲ, ಜ್ಞೇಯಾಕಾರವೂ ಅಲ್ಲ ಎಂದು ಹೇಳುತ್ತಾರೆ. ಇವರು ಮಾಧ್ಯಮಿಕರಾಗಿದ್ದಾರೆ. ಇವರನ್ನು ಎಂಟನೆಯ ಅಸದಧಿಕರಣದಲ್ಲಿ ನಿರಾಕರಣೆ ಮಾಡಲಾಗಿದೆ. ಜಗತ್ತು ಜ್ಞಾನರೂಪವಾಗಿದೆ ಎಂಬುದಾಗಿ ಯೌಗಾಚಾರ್ಯರು

ಹೇಳುತ್ತಾರೆ. ಇವರ ಈ ವಿಜ್ಞಾನವಾದವನ್ನು ಒಂಬತ್ತನೆಯ ಅನುಪಲಬ್ಧ್ಯಧಿಕರಣದಲ್ಲಿ ನಿರಾಕರಣೆ ಮಾಡಲಾಗಿದೆ. ಹೀಗೆ ಬೌದ್ಧಮತದ ನಿರಾಕರಣೆಗಾಗಿ ಮೂರು ಅಧಿಕರಣಗಳು ಹೊರಟಿವೆ. ಬೌದ್ಧರು ಈಶ್ವರನನ್ನು ಒಪ್ಪದ ಕಾರಣ ನಿರೀಶ್ವರವಾದಿಗಳಂದೇ ಕರೆಸಿಕೊಳ್ಳುತ್ತಾರೆ.

ಬೌದ್ಧಮತವನ್ನು ನಿರಾಕರಣೆ ಮಾಡಿದ ಅನಂತರ ಜೈನಮತವನ್ನು ನಿರಾಕರಣೆ ಮಾಡುತ್ತಾರೆ. ಜೈನರೂ ಕೂಡ ನಿರೀಶ್ವರವಾದಿಗಳೇ ಆಗಿದ್ದಾರೆ. ಆದರೆ ಪುಣ್ಯ-ಪಾಪ, ಧರ್ಮ-ಅಧರ್ಮ ಇವುಗಳೆಲ್ಲವನ್ನೂ ಕೂಡ ಅಂಗೀಕಾರ ಮಾಡುತ್ತಾರೆ. ಋಷಭ- ರೂಪಿಯಾದ ಪರಮಾತ್ಮನನ್ನು ಆದಿತೀರ್ಥಂಕರನೆಂದು ಇವರು ಹೇಳುತ್ತಾರೆ. ಇವರಲ್ಲಿ ದಿಗಂಬರು ಹಾಗೂ ಶ್ವೇತಾಂಬರರು ಎಂಬುದಾಗಿ ಎರಡು ಬಗೆಯ ಪಂಗಡಗಳಿವೆ. ಇವರ ವೈವಿಧ್ಯದ ಬಗ್ಗೆ ಇಲ್ಲಿ ವಿಚಾರ ಮಾಡದಿದ್ದರೂ ಕೂಡ ಅವರ ಶಾಕ್ತ ವಾದವನ್ನು ಆಮೂಲಾಗ್ರವಾಗಿ ನಿರಾಕರಿಸಿದ್ದಾರೆ. ಹೀಗೆ ಬೌದ್ಧ ಹಾಗೂ ಜೈನಮತವನ್ನು ನಿರಾಕರಣೆ ಮಾಡಿದ ಮೇಲೆ ಪಂಚಾಯತನರಾದ ಪಾಶುಪತ, ಸೌರ, ಗಾಣಪತ್ಯ ಹಾಗೂ ಸ್ಕಾಂಧಮತಗಳನ್ನು ಮುಂದೆ ನಿರಾಕರಣೆ ಮಾಡುತ್ತಾರೆ. ಹತ್ತನೆಯ ಪತ್ಯುರಧಿ ಕರಣವು ಪಾಶುಪತಮತದ ನಿರಾಕರಣೆಯನ್ನು ಆಪಾತತಃ ಮಾಡುವ ಮೂಲಕ ಸೌರ, ಸ್ಕಾಂದ, ಗಾಣಪತ ಮೊದಲಾದ ಮತಗಳನ್ನೂ ಕೂಡ ನಿರಾಕರಣೆ ಮಾಡಿದೆ. ಪಾಶುಪತರಲ್ಲೂ ಕೂಡ ಶೈವ, ಪಾಶುಪತ, ಕಾಲಮುಖ, ಮಹಾವ್ರತ ಎಂಬ ನಾಕು ಪಂಗಡಗಳಿವೆ. ಇವರು ವೇದಪ್ರಾಮಾಣ್ಯವನ್ನು ಒಪ್ಪುತ್ತಾರೆ ಆದರೆ ವಿಷ್ಣುವಿಗೆ ಜಗತ್‌ಕಾರಣತ್ವವನ್ನು ಒಪ್ಪುವುದಿಲ್ಲ. ಕೊನೆಯಲ್ಲಿ ಹನ್ನೆರಡನೆಯ ಉತ್ಪತ್ತ್ಯಧಿಕರಣದಲ್ಲಿ ಶಾಕ್ತಮತವನ್ನು ನಿರಾಕರಣೆ ಮಾಡುತ್ತಾರೆ. ಜಗತ್ತಿಗೆ ಕಾರಣವಾಗಿರುವ ದೇವತೆಯೆಂದರೆ ಸ್ತ್ರೀಯಾದ ಶಕ್ತಿಯಾಗಿದ್ದಾಳೆ. ಇವರಲ್ಲಿ ಮೂರು ಪಂಗಡಗಳಿವೆ. ಮಹಾವಾಮ, ಮಧ್ಯವಾಮ, ಅಣುವಾಮ ಎಂದು. ಸರ್ವೋತ್ತಮವಾದ ಸ್ತ್ರೀಶಕ್ತಿಯಿಂದ ಜಗತ್ತು ಸೃಷ್ಟವಾಗುತ್ತದೆ ಎಂದು ಹೇಳುವವರು ಮಹಾವಾಮರು. ಪುರುಷನ ಸಹಾಯ ಬೇಕೆಂದು ಹೇಳುವವರು ಮಧ್ಯಮವಾಮರು. ಆ ಪುರುಷನೂ ಕೂಡ ಸ್ತ್ರೀಯಂತೆ ಇದ್ದಾನೆ ಎಂದು ಹೇಳುವವರು ಅಣುವಾಮರು. ಈ ಮೂರು ಪಕ್ಷಗಳನ್ನೂ ಕೂಡ ನಿರಾಕರಣೆ ಮಾಡುವ ಮೂಲಕ ಈ ಪಾದವು ಸಮಾಪ್ತವಾಗುತ್ತದೆ. ಹೀಗೆ ಜಗತ್ತಿನಲ್ಲಿರುವ ಪ್ರಧಾನವಾದ ಎಲ್ಲಾ ಸಮಯಗಳನ್ನು ಈ ಸಮಯಪಾದದಲ್ಲಿ ನಿರಾಕರಣೆ ಮಾಡಿರುತ್ತಾರೆ.

ಪರಮಾತ್ಮನು ಸಕಲಗುಣಪರಿಪೂರ್ಣನಾಗಿದ್ದಾನೆ ಎಂಬ ಪ್ರಮೇಯವನ್ನು ಸಮನ್ವಯಾಧ್ಯಾಯದಲ್ಲಿ ಸಮರ್ಥನೆ ಮಾಡಲಾಯಿತು. ಪರಮಾತ್ಮನು ಸಕಲ ದೋಷವಿದೂರನಾಗಿದ್ದಾನೆ ಎಂಬ ಪ್ರಮೇಯವನ್ನು ದ್ವಿತೀಯಾಧ್ಯಾಯದಲ್ಲಿ ಸಮರ್ಥನೆ ಮಾಡುತ್ತಿದ್ದಾರೆ. ಪ್ರಥಮಾಧ್ಯಾಯದಲ್ಲಿ ಯಾವ ಪ್ರಮೇಯವನ್ನು

ಸಮರ್ಥನೆ ಮಾಡಲಾಯಿತೋ, ಅದೇ ವಿಷಯದಲ್ಲಿ ಬರುವಂಥ ಎಲ್ಲಾ ವಿರೋಧಗಳನ್ನು ಈ ಅಧ್ಯಾಯವು ಪರಿಹರಿಸುತ್ತಿದೆ. ಈ ವಿರೋಧವನ್ನು ಪರಿಹಾರ ಮಾಡದಿದ್ದರೆ ಸರ್ವಶಬ್ದ ಸಮನ್ವಯ ಸಿದ್ಧವಾಗುವುದಿಲ್ಲ. ತನ್ಮೂಲಕವಾಗಿ ಗುಣಪರಿಪೂರ್ಣತ್ವವೂ ಕೂಡ ಸಿದ್ಧವಾಗುವುದಿಲ್ಲ. ಯುಕ್ತಿಯ ಆಧಾರದಲ್ಲಿ ಬರುವಂಥ ವಿರೋಧಗಳನ್ನು ಪ್ರಥಮಪಾದದಲ್ಲಿ ಪರಿಹರಿಸಿದ್ದಾಯಿತು. ಈಗ ಸಾಂಖ್ಯ, ಚಾರ್ವಾಕ, ವೈಶೇಷಿಕ, ಬೌದ್ಧ, ಜೈನ, ಪಾಶುಪತ ಮೊದಲಾದ ಬೇರೆ ಬೇರೆ ಮತಗಳಿಂದ ವಿರೋಧವು ಕಂಡುಬರುತ್ತದೆ. ಈ ವಿವಿಧ ದರ್ಶನಗಳಿಂದ ಪ್ರಾಪ್ತವಾಗುವ ವಿರೋಧಗಳನ್ನು ನಿರಾಕರಣೆ ಮಾಡುವುದಕ್ಕಾಗಿ ಈ ಪಾದವು ಹೊರಟಿದೆ. ಆದ್ದರಿಂದ ಇದಕ್ಕೆ ಸಮಯಪಾದ ಎಂದು ಹೆಸರು. ಹೇಗೆ ವೇದವು ಅನಾದಿಯಾಗಿದೆಯೋ, ಅದರಂತೆ ಎಲ್ಲಾ ದರ್ಶನಗಳೂ ಕೂಡ ಅನಾದಿಯಾಗಿವೆ. ಅನಾದಿಯಾದ್ದರಿಂದ ವೇದವು ಪ್ರಮಾಣ ಆಗುವುದಾದರೆ, ಎಲ್ಲಾ ದರ್ಶನಗಳೂ ಕೂಡ ಪ್ರಮಾಣವೇ ಆಗಲಿ ಎಂಬ ಸಂಶಯ ಉಂಟಾಗುತ್ತದೆ. ಅದಕ್ಕಾಗಿ ಯುಕ್ತಿ ಮತ್ತು ಪ್ರಮಾಣಗಳ ಆಧಾರದಿಂದ ಎಲ್ಲಾ ದರ್ಶನಗಳನ್ನು ಈ ಪಾದದಲ್ಲಿ ವಿಮರ್ಶಿಸುತ್ತಿದ್ದಾರೆ. ಅನಾದಿಯಾದ ಮಾತ್ರದಿಂದ ಪ್ರಮಾಣವಾಗುವುದಿಲ್ಲ. ನಿರ್ದುಷ್ಟವಾಗಿದ್ದರೆ ಮಾತ್ರ ಪ್ರಮಾಣವಾಗಲು ಸಾಧ್ಯ. ಈ ಎಲ್ಲ ದರ್ಶನಗಳು ದೋಷಪೂರಿತವಾಗಿವೆ. ಆದ್ದರಿಂದ ವೇದದಂತೆ ಪ್ರಮಾಣವಾಗಲು ಸಾಧ್ಯವಿಲ್ಲ ಎಂಬುದು ಈ ಪಾದದ ಮುಖ್ಯಹೃದಯ. ಸಮಯಪಾದದಲ್ಲಿ ಒಟ್ಟು ಹನ್ನೆರಡು ದರ್ಶನಗಳ ವಿಮರ್ಶೆಯು ಇರುತ್ತದೆ. ಇದು ಉಪಲಕ್ಷಣ. ಇದರಂತೆ ಬೆಳೆದುಕೊಂಡಿರುವ ಬೇರೆ ದರ್ಶನಗಳ ವಿರೋಧಪರಿಹಾರವನ್ನೂ ಕೂಡ ಇದರಿಂದಲೇ ತಿಳಿದುಕೊಳ್ಳಬೇಕು. ಮೊದಲು ನಾಸ್ತಿಕರನ್ನು ನಿರಾಕರಿಸಿ, ಅನಂತರ ಆಸ್ತಿಕದರ್ಶನಗಳನ್ನು ವಿಮರ್ಶಿಸುತ್ತಾರೆ. ಮೊದಲನೆಯ ರಚನಾನುಪಪತ್ತ್ಯಧಿಕರಣವು ನಿರೀಶ್ವರಸಾಂಖ್ಯಮತದ ವಿಮರ್ಶೆಗಾಗಿ ಹೊರಟಿದೆ.

## ನಿರೀಶ್ವರ ಸಾಂಖ್ಯಮತ ವಿಮರ್ಶೆ

### ರಚನಾನುಪಪತ್ತ್ಯಧಿಕರಣ

ಅದ್ವೈತಿಗಳು ಮತ್ತು ವಿಶಿಷ್ಟಾದ್ವೈತಿಗಳು ಹೀಗೆ ಹೇಳುತ್ತಾರೆ - ರಚನಾನುಪಪತ್ತ್ಯಧಿಕರಣದಿಂದ ಪ್ರಾರಂಭಿಸಿ, 'ವಿಪ್ರತಿಷೇಧಾಚ್ಚಾಸಮಂಜಸಮ್' ಎಂಬ ಸೂತ್ರದ ತನಕ ಹತ್ತು ಸೂತ್ರಗಳು ಒಂದೇ ಅಧಿಕರಣವಾಗಿವೆ. ಚೇತನನ ಅಪೇಕ್ಷೆಯಿಲ್ಲದ ಪ್ರಕೃತಿಯು ಜಗತ್ತನ್ನು ನಿರ್ಮಾಣ ಮಾಡುತ್ತದೆಂಬ ಮತದ ನಿರಾಕರಣೆಗಾಗಿ ಈ ಹತ್ತು ಸೂತ್ರಗಳಿಂದ ಕೂಡಿದ ಅಧಿಕರಣವು ಹೊರಟಿದೆ ಎಂಬುದೇ ಇಬ್ಬರ ಅಭಿಪ್ರಾಯ. ಇದು ತಪ್ಪು. 1. ನಿರೀಶ್ವರಸಾಂಖ್ಯಮತ,

2. ಸೇಶ್ವರಸಾಂಖ್ಯಮತ, 3. ಚಾರ್ವಾಕಮತ, 4. ನಿರೀಶ್ವರಸಾಂಖ್ಯರಲ್ಲಿ ಪುರುಷೋಪಸರ್ಜನಪ್ರಕೃತಿಕರ್ತೃತ್ವಮತ, 5. ಪ್ರಕೃತ್ಯುಪಸರ್ಜನ-ಪುರುಷಕರ್ತೃತ್ವಮತ. ಈ ಐದುಬಗೆಯ ಮತಗಳನ್ನು ನಿರಾಕರಿಸುವುದಕ್ಕಾಗಿ ಐದು ಅಧಿಕರಣಗಳು ಹೊರಟಿವೆ ಎಂದು ಹೇಳಬೇಕು. ಈ ಐದು ಮತಗಳನ್ನು ನಿರಾಕರಣೆ ಮಾಡದೇ, ಒಂದೇ ಅಧಿಕರಣವೆಂದು ಹೇಳುವುದು ತಪ್ಪಾಗುತ್ತದೆ. ಹಾಗೂ ಅದ್ವೈತಿಗಳು ಚಾರ್ವಾಕಮತ ವಿಮರ್ಶೆಯನ್ನು ಈ ಪಾದದಲ್ಲಿ ಮಾಡುವುದಿಲ್ಲ. ಮೂರನೆಯ ಅಧ್ಯಾಯದ ಮೂರನೆಯ ಪಾದದಲ್ಲಿರುವ 'ಏಕ ಆತ್ಮನಃ ಶರೀರೇ ಭಾವಾತ್' ಎಂಬ ಅಧಿಕರಣದಲ್ಲಿ ಚಾರ್ವಾಕಮತ ವಿಮರ್ಶೆಯನ್ನು ಮಾಡುತ್ತಾರೆ. ಆ ಪಾದವು ಗುಣಸಮನ್ವಯಕ್ಕೋಸ್ಕರ ಹೊರಟಿದೆ ಎಂಬುದಾಗಿ ಹೇಳಿ, ಚಾರ್ವಾಕಮತ ನಿರಾಕರಣೆಯನ್ನು ಮಾಡುವುದು ಅಸಂಗತವಾಗುತ್ತದೆ. ಸಮಯಪಾದವೆಂದೇ ಪ್ರಸಿದ್ಧವಾದ ಎರಡನೆಯ ಪಾದದಲ್ಲಿ ಚಾರ್ವಾಕಮತವನ್ನು ನಿರಾಕರಣೆ ಮಾಡುವುದೇ ಪ್ರಸ್ತುತವಾಗುತ್ತದೆ.

ಸಾಂಖ್ಯರು ಚೇತನ, ಅಚೇತನ ಎಂಬುದಾಗಿ ಪದಾರ್ಥಗಳು ಎರಡುವಿಧ ಎನ್ನುತ್ತಾರೆ. ನಿರೀಶ್ವರಸಾಂಖ್ಯರು ಈಶ್ವರನನ್ನು ಒಪ್ಪುವುದಿಲ್ಲ. ಪ್ರಕೃತಿಯಿಂದಲೇ ಸೃಷ್ಟಿ-ಸ್ಥಿತ್ಯಾದಿಗಳು ನಡೆಯುತ್ತವೆ.

ಪುರುಷನು ನಿರ್ವಿಕಾರನಾಗಿದ್ದಾನೆ. ಇಚ್ಛೆ, ಪ್ರಯತ್ನ, ಜ್ಞಾನ ಇವೆಲ್ಲವೂ ಅಂತಃಕರಣದ ವಿಕಾರಗಳು. ಆತ್ಮನಲ್ಲಿ ಈ ಯಾವ ಧರ್ಮಗಳೂ ಇಲ್ಲ. ನಿರ್ಲೇಪನಾಗಿದ್ದಾನೆ. ಕರ್ತೃತ್ವರಹಿತನಾಗಿದ್ದಾನೆ. ಎಲ್ಲಾ ವ್ಯಾಪಾರವನ್ನು ಪ್ರಕೃತಿಯೇ ನಿರ್ವಾಹ ಮಾಡುತ್ತದೆ. ಸಾಂಸಾರಿಕವಾದ ಸುಖ-ದುಃಖಗಳ ಅನುಭವವೂ ಕೂಡ ಪುರುಷನಿಗಿಲ್ಲ. ವಿಕಾರವಿಲ್ಲದ ಜೀವನಿಗೆ ಭೋಗವು ಅಸಾಧ್ಯ. ಸುಖ-ದುಃಖಾದಿಗಳೆಲ್ಲವೂ ಕೂಡ ಪ್ರಕೃತಿಯ ವಿಕಾರವಾದ ಅಂತಃಕರಣದಲ್ಲಿಯೇ ಇರುತ್ತದೆ. ಅದರ ವಿವೇಕ ಇಲ್ಲದ್ದರಿಂದ ಜೀವನೇ ಸುಖ-ದುಃಖಾದಿ ಭೋಗ ಎಂದು ನಾವು ವ್ಯವಹಾರ ಮಾಡುತ್ತೇವೆ.

ಪ್ರಕೃತಿ ಪುರುಷರಲ್ಲಿ ಭೇದವಿದೆ. ಇದನ್ನು ತಿಳಿಯುವುದೇ ಮೋಕ್ಷ. ತಿಳಿಯದಿರುವುದೇ ಸಂಸಾರ.

ಒಟ್ಟು ಇಪ್ಪತ್ನಾಕು ತತ್ವಗಳು. ಇವುಗಳಲ್ಲಿ ಪಂಚಭೂತಗಳು ಮತ್ತು ಹನ್ನೊಂದು ಇಂದ್ರಿಯಗಳು ಕೇವಲ ವಿಕೃತಿಗಳು. ಒಟ್ಟು ಹದಿನಾರು ತತ್ವಗಳು ಕೇವಲ ವಿಕೃತಿಗಳು. ಶಬ್ದ, ಸ್ಪರ್ಶ, ರೂಪ, ರಸ ಮೊದಲಾದ ಪಂಚತನ್ಮಾತ್ರಗಳು, ಮಹತ್ತತ್ತ್ವ, ಅಹಂಕಾರತತ್ವ ಇವುಗಳು ಪ್ರಕೃತಿಯೂ

'ಅಚೇತನಂ ನ ಸ್ವತಂತ್ರಂ ಪ್ರವರ್ತತೇ, ಅಚೇತನತ್ವಾತ್ ಘಟವತ್' ಘಟವು ಅಚೇತನವಾಗಿದೆ. ಸ್ವತಂತ್ರವಾಗಿ ಪ್ರವೃತ್ತಿ ಮಾಡುವುದಿಲ್ಲ. ಅದರಂತೆ ಈ ಪ್ರಕೃತಿಯೂ ಕೂಡ ಜಡವಾಗಿರುವುದರಿಂದ ಸ್ವತಂತ್ರವಾಗಿ ಪ್ರವೃತ್ತಿ ಮಾಡುವುದಿಲ್ಲ. ಹೀಗೆ ಸಾಂಖ್ಯರ ಅನುಮಾನಕ್ಕೆ ವಿಪರೀತವಾಗಿಯೂ ಕೂಡ ಅನುಮಾನ ಮಾಡಬಹುದು.

ಸಾಂಖ್ಯರು ಹೇಳಿದ ದೃಷ್ಟಾಂತದಲ್ಲಿ ಅಚೇತನಕರ್ತೃಕತ್ವವೆಂಬ ಸಾಧ್ಯವಿಲ್ಲದ ಕಾರಣ, ಸಾಧ್ಯವೈಕಲ್ಯದೋಷವು ಬರುತ್ತದೆ. ಜಡವಾದ ಪ್ರಪಂಚವು ಸುಖ-ದುಃಖಮೋಹಾತ್ಮಕ-ವಾಗಿರುವುದರಿಂದ ತತ್ಕಾರಣವಾದ ಪ್ರಕೃತಿಯೂ ಕೂಡ ಸುಖ-ದುಃಖಮೋಹಾತ್ಮಕ-ವಾಗಿದೆಯೆಂದು ಅನುಮಾನ ಮಾಡಿದರು. ಆದರೆ ಜಡವಾದ ಜಗತ್ತು ಸುಖ-ದುಃಖ ಮೋಹಾತ್ಮಕವೇ ಆಗಿರುವುದಿಲ್ಲ. ಆದ್ದರಿಂದ ಎರಡನೆಯ ಅನುಮಾನದಲ್ಲಿ ಹೇತ್ವಸಿದ್ಧಿ-ದೋಷವು ಬರುತ್ತದೆ. ಆಗಮವಾಕ್ಯವೂ ಕೂಡ ಸರ್ವಕರ್ತೃನಾದವನು ಸರ್ವೋತ್ತಮನಾದ ಮಹಾವಿಷ್ಣುವೇ ಆಗಿದ್ದಾನೆಂಬುದನ್ನು ಏಕಕಂಠದಿಂದ ವಿಸಂವಾದವಿಲ್ಲದೇ ಸಮರ್ಥಿಸುತ್ತಿದೆ. ಈ ವಿಷಯವನ್ನು ಈಗಾಗಲೇ ಈ ಹಿಂದೆ ಹೇಳಿರುತ್ತೇವೆ.

ಜಡಕ್ಕೆ ಕರ್ತೃತ್ವವಿಷಯದಲ್ಲಿ ಹೇಗೆ ಪ್ರಮಾಣವಿಲ್ಲವೋ, ಅದರಂತೆ ಭೋಕ್ತೃತ್ವ ಮೋಚಕತ್ವಾದಿವಿಷಯದಲ್ಲೂ ಪ್ರಮಾಣವಿಲ್ಲ ಎಂಬುದನ್ನು ಭಾಷ್ಯದಲ್ಲಿ ತೋರಿಸಿದ್ದಾರೆ. ಸಾಂಖ್ಯರ ಪಕ್ಷದಲ್ಲಿ ಪ್ರಮಾಣವೆಂಬುದೇ ಇರುವುದಿಲ್ಲ ಎಂಬುದೂ ಸಹ ಇದರ ಅರ್ಥ. ಏಕೆಂದರೆ ಈ ಸಾಂಖ್ಯರು ಪ್ರಮಾಣಗಳಿಗೆ 'ಅಪ್ರಾಮಾಣ್ಯಂ ಸ್ವತಃ' ಎಂದು ಅಂಗೀಕರಿಸುತ್ತಾರೆ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

ಯುಕ್ತಿವಿರೋಧದ ಅನಂತರ ಸಮಯವಿರೋಧವೇ ಪ್ರಬಲ

**तत्वप्रकाशिका –**

**श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः ।**

**एतत्पादप्रतिपाद्यं दर्शयति – इतरेषामिति ।। सर्वविरोधानां युक्तिमूलत्वेन तद्विरोधस्य प्राबल्यात् प्रथमपादे स निराकृतः । इतरविरोधत्रयेऽनादि-कालानुवृत्तसमयविरोधस्यैव प्रबलत्वात् श्रुतिसमन्वयसिद्धे ब्रह्मणो जगत्कारणत्वे समयविरोधं परिहर्तुं तानस्मिन् पादे निराकरोति भगवान् सूत्रकारः ।**

ಈ ಪಾದದಿಂದ ಪ್ರತಿಪಾದ್ಯವಾದ ಪ್ರಮೇಯವನ್ನು 'ಇತರೇಷಾಮ್' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

ಎಲ್ಲಾ ವಿರೋಧಗಳು ಯುಕ್ತಿಮೂಲಕವಾಗಿವೆ. ಆದ್ದರಿಂದ ಯುಕ್ತಿವಿರೋಧವು ಪ್ರಬಲವಾದ್ದರಿಂದ ಅದನ್ನು ಪ್ರಥಮಪಾದದಲ್ಲಿ ನಿರಾಕರಿಸಿದ್ದಾಯಿತು. ಉಳಿದ ಮೂರು ವಿರೋಧಗಳಲ್ಲಿ ಅನಾದಿಕಾಲದಿಂದ ಪರಂಪರಾಗತವಾದ ಸಮಯವಿರೋಧವೇ ಪ್ರಬಲವಾಗಿದೆ. ಶ್ರುತಿಸಮನ್ವಯದಿಂದ ಬ್ರಹ್ಮನಲ್ಲಿ ಯಾವ ಜಗತ್ಕಾರಣತ್ವವು ಸಿದ್ಧವಾಗಿದೆಯೋ ಇದಕ್ಕೆ ಸಮಯವಿರೋಧವು ಪ್ರಾಪ್ತವಾದರೆ ಅದನ್ನು ಈ ಪಾದದಲ್ಲಿ ಭಗವಾನ್ ಸೂತ್ರಕಾರರು ನಿರಾಕರಣೆ ಮಾಡಲು ಪ್ರವೃತ್ತರಾಗಿದ್ದಾರೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಭಾವದೀಪ

**भावदीपः – रचनानुपपत्तेश्च नानुमानम् ।।**

श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवायनमः । वक्ष्यमाणभाष्येणैव पादार्थज्ञानम्भवादादौ तत्प्रदर्शनं व्यर्थमित्यतः सङ्गत्यर्थत्वेन सार्थक्यमुपेत्य तथैव व्याचष्टे – **सर्वेति ।।** न विलक्षणत्वनयसिद्धनित्य-निर्दोषभाववेदविरोधतोऽपि साङ्ख्यादिसमयानां कुत आदौ निरास इत्यत आह – **अनादीति ।।** अनादिकालतो वृत्ताः समया हि प्रवाहतः। न चोच्छेदोऽस्ति कस्यापीत्याद्यनुभाष्योक्तेरिति भावः। उक्ताहानेस्तन्निरासो व्यर्थ इत्यत आह –**श्रुतीति ।।** कर्माकांक्षां पूरयति।। **तानिति ।।**

ಹಿಂದೆ ಹೇಳಿದ ಭಾಷ್ಯದಿಂದಲೇ ಸಮಗ್ರಪಾದದ ಅರ್ಥವು ನಮಗೆ ತಿಳಿಯುತ್ತದೆ. ಹೀಗಿರುವಾಗ ಪ್ರಾರಂಭದಲ್ಲೇಕೆ ಸಮಸ್ತ ಪಾದಾರ್ಥವನ್ನು ಹೇಳಲು ಹೊರಟಿದ್ದೀರಿ, ಇದು ವ್ಯರ್ಥವಲ್ಲವೇ?

ಈ ಪ್ರಶ್ನೆ ತಪ್ಪು. ಎರಡನೆಯ ಪಾದಕ್ಕೆ ಸಂಗತಿಯನ್ನು ತೋರಿಸುವುದಕ್ಕಾಗಿ ಪಾದಪ್ರಮೆಯವನ್ನು ಮೊದಲು ಸಂಗ್ರಹವಾಗಿ ಹೇಳಿದ್ದಾರೆ. ಆ ಸಂಗತಿಯನ್ನೇ ಟೀಕೆಯಲ್ಲಿ 'ಸರ್ವ' ಇತ್ಯಾದಿ ವಾಕ್ಯವು ನಿರೂಪಣೆ ಮಾಡುತ್ತಿದೆ. ಆದ್ದರಿಂದ ಪಾದಪ್ರಮೇಯವನ್ನು ಪಾದಪ್ರಾರಂಭದಲ್ಲಿ ಹೇಳುವುದು ವ್ಯರ್ಥವಲ್ಲ.

ನ ವಿಲಕ್ಷಣತ್ವಾಧಿಕರಣದಿಂದ ವೇದವು ನಿತ್ಯವಾಗಿದೆ ಮತ್ತು ನಿರ್ದುಷ್ಟವಾಗಿದೆ ಎಂದು ಸಾಧಿಸಲಾಯಿತು. ಅಂಥ ವೇದವಿರುದ್ಧವಾಗಿದ್ದರೂ ಕೂಡ ಸಾಂಖ್ಯಾದಿ ಸಮಯಗಳನ್ನೇ ಏಕೆ ಮೊದಲು ನಿರಾಕರಣೆ ಮಾಡುತ್ತಿದ್ದೀರಿ ? ಈ ಪ್ರಶ್ನೆಗೆ 'ಅನಾದಿ' ಇತ್ಯಾದಿ ವಾಕ್ಯವು ಉತ್ತರಿಸುತ್ತಿದೆ.

'ಅನಾದಿಕಾಲತೋ ವೃತ್ತಾಃ ಸಮಯಾ ಹಿ ಪ್ರವಾಹತಃ।
ನ ಚೋಚ್ಛೇದೋಽಸ್ತಿ ಕಸ್ಯಾಪಿ ॥

ಅಂಥ ಸಮಯಗಳು ಅನಾದಿಕಾಲದಿಂದ ಪ್ರವಾಹತಃ ಅನಾದಿಯಾಗಿವೆ. ಇವುಗಳಿಗೆ ಎಂದೂ ನಾಶವಿಲ್ಲ. ಈ ಅನುವ್ಯಾಖ್ಯಾನದ ಪ್ರಕಾರ ಎಲ್ಲಾ ಸಮಯಗಳು ಅನಾದಿನಿತ್ಯವಾಗಿವೆ ಎಂಬುದು 'ಅನಾದಿ' ಇತ್ಯಾದಿ ಟೀಕಾವಾಕ್ಯದ ಅಭಿಪ್ರಾಯ.

ಹಿಂದೆ ಸಾಧಿಸಿದ ಪ್ರಮೇಯಕ್ಕೆ ಯಾವುದೇ ಹಾನಿಯಿರುವುದಿಲ್ಲ. ಆದ್ದರಿಂದ ಸಮಯವಿರೋಧವನ್ನು ಏಕೆ ಪರಿಹಾರ ಮಾಡಬೇಕು ? ಈ ಪ್ರಶ್ನೆಗೆ 'ಶ್ರುತಿಸಮನ್ವಯ' ಎಂಬ ಪದವು ಉತ್ತರಿಸುತ್ತಿದೆ. ಈ ಪಾದದಲ್ಲಿ ಯಾವುದನ್ನು ನಿರಾಕರಣೆ ಮಾಡುತ್ತಿದ್ದೀರಿ ? ಎಂಬ ಕರ್ಮಾಕಾಂಕ್ಷೆಯು ಪ್ರಾಪ್ತವಾದರೆ 'ತಾನ್' ಎಂಬ ಪದವು ಆಕಾಂಕ್ಷೆ ಪೂರ್ಣ ಮಾಡುತ್ತದೆ.

ವಿವರಣೆ - ಪಾದಪ್ರಮೇಯವು ಮುಂದೆ ಅಧ್ಯಯನ ಮಾಡುವುದರಿಂದಲೇ ತಿಳಿಯುತ್ತಿರುವಾಗ ಪುನಃ ಪ್ರಾರಂಭದಲ್ಲಿ ಅದನ್ನು ಹೇಳುವುದು ವ್ಯರ್ಥವೆಂಬ ಪ್ರಶ್ನೆಗೆ ಸಂಗತಿಗೋಸ್ಕರ ಸಾರ್ಥಕವೆಂದು ಉತ್ತರಿಸಿದ್ದಾರೆ. ಅನಾದಿಕಾಲದಿಂದ ಎಲ್ಲಾ ಸಮಯಗಳು ಬರುತ್ತಲೇ ಇರುವುದರಿಂದ ಬಲಿಷ್ಠವಾಗಿವೆ ಎಂದು ತಿಳಿಯಬೇಕು.

ಅವಿರೋಧಾಧ್ಯಾಯ ಎನಿಸಿದ ಎರಡನೆಯ ಈ ಅಧ್ಯಾಯದಲ್ಲಿ ನಾಕು ಪಾದಗಳಿವೆ. ಇದರಲ್ಲಿ ಕ್ರಮವಾಗಿ ನಾಕು ವಿರೋಧಗಳನ್ನು ಪರಿಹರಿಸಿದ್ದಾರೆ. ಯುಕ್ತಿವಿರೋಧ, ಸಮಯವಿರೋಧ, ಶ್ರುತಿವಿರೋಧ, ನ್ಯಾಯೋಪೇತಶ್ರುತಿವಿರೋಧ ಎಂದು. ಈ ನಾಕರಲ್ಲಿ ಯುಕ್ತಿವಿರೋಧವು ಪ್ರಬಲ. ಏಕೆಂದರೆ ಪ್ರತಿಯೊಂದಕ್ಕೂ ಯುಕ್ತಿಯು ಆವಶ್ಯಕವಾದ್ದರಿಂದ ಅದರ ವಿರೋಧವು ಪ್ರಾಪ್ತವಾದರೆ ಮುಂದಿನ ಪ್ರಮೇಯವೇ ಸಿದ್ಧವಾಗುವುದಿಲ್ಲ. ಹೀಗೆ ಪ್ರಬಲವಾದ ಯುಕ್ತಿವಿರೋಧವನ್ನು ಪ್ರಥಮಪಾದದಲ್ಲಿ ನಿರಾಕರಣೆ ಮಾಡಿ ಮುಂದೆ ಸಮಯವಿರೋಧ ಶ್ರುತಿವಿರೋಧ ನ್ಯಾಯೋಪೇತಶ್ರುತಿವಿರೋಧವನ್ನು ಪರಿಹರಿಸಬೇಕಾಗಿದೆ. ಈ ಮೂರರಲ್ಲಿ ಅನಾದಿಕಾಲದಿಂದ ಬಂದಿರುವುದರಿಂದ ಸಮಯವಿರೋಧವು ಪ್ರಬಲವಾಗಿದೆ. ಅಂಥ ಸಮಯವಿರೋಧವನ್ನು ಈ ಪಾದದಲ್ಲಿ ಪರಿಹಾರ ಮಾಡುತ್ತಿರುವುದರಿಂದ ಇದಕ್ಕೆ ಸಮಯಪಾದ ಎಂದು ಹೆಸರು.

ಸಮಯವು ಹೇಗೆ ಅನಾದಿಯಾಗಿದೆಯೋ ಅದರಂತೆ ಅಪೌರುಷೇಯವಾದ ವೇದವು ಕೂಡ ಅನಾದಿಯಾಗಿದೆ. ಆದ್ದರಿಂದ ಅಪೌರುಷೇಯವಾದ ವೇದಕ್ಕಿಂತ ಸಮಯ ದುರ್ಬಲವಾಗಬಹುದಲ್ಲವೇ? ಎಂಬ ಪ್ರಶ್ನೆಯನ್ನು ಟೀಕೆಯಲ್ಲಿ ಅನಾದಿ ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ. 'ಅನಾದಿಕಾಲತೋ ವೃತ್ತಾಃ ಸಮಯಾ ಹಿ ಪ್ರವಾಹತಃ' ಎಲ್ಲಾ ಸಮಯಗಳು ಸ್ವಭಾವತಃ ಅನಾದಿನಿತ್ಯವಾಗಿವೆ ಎಂಬುದಾಗಿ ಅನುವ್ಯಾಖ್ಯಾನದಲ್ಲಿ

ಹೇಳಿದ್ದಾರೆ. ಆದ್ದರಿಂದ ವೇದವು ಹೇಗೆ ಅನಾದಿಯೋ ಅದರಂತೆ ಸಮಯಗಳೂ ಕೂಡ ಅನಾದಿಯಾಗಿವೆ. ಅನಾದಿತ್ವವಿಷಯದಲ್ಲಿ ಸಾಮ್ಯವಿದ್ದರೂ ಕೂಡ ಅಜ್ಞಾನ ಬಂದಾಗಷ್ಟೇ ವೇದವಿರೋಧವು ಸ್ಫುರಣವಾಗುತ್ತದೆ. ಸಮಯವಿರೋಧವು ವಿಮರ್ಶದೆಶೆಯಲ್ಲೂ ಕೂಡ ಪ್ರಾಪ್ತವಾಗುತ್ತದೆ. ಆದ್ದರಿಂದ ಸಮಯವಿರೋಧವೇ ಪ್ರಬಲವಾಗಿದೆ ಎಂದಂತಾಯಿತು. ಅಥವಾ ಬಹುಜನಪರಿಗೃಹಿತವಾದ್ದರಿಂದ ಪ್ರಾಜ್ಞರೆನಿಸಿದ ಕಪಿಲ ಮೊದಲಾದವರಿಂದ ಪ್ರವರ್ತಿಸಲ್ಪಟ್ಟದ್ದರಿಂದ ಸಮಯವಿರೋಧ ಪ್ರಬಲವೆಂಬುದು ಟೀಕೆಯ ಅಭಿಪ್ರಾಯ.

ಸಮಯವಿರೋಧ ಪರಿಹಾರಕ್ಕಾಗಿ ಈ ಪಾದವು ವ್ಯರ್ಥವಲ್ಲವೇ?

**तत्वप्रकाशिका – न च वाच्यमितरेषां चानुपलब्धेरिति कपिलकणादादिसमयानामुक्तानुपलब्ध्याऽनाप्तोक्तत्वेन निराकृतत्वाद् व्यर्थोऽयं पाद इति ।**

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಿಂದ ಕಪಿಲ, ಕಣಾದ ಮೊದಲಾದವರ ಸಮಯಗಳನ್ನು ಅನುಸರಿಸಿದಾಗ ಇಷ್ಟಪ್ರಾಪ್ತಿರೂಪವಾದ ಫಲವು ಸಿಗುತ್ತಿಲ್ಲ. ಆದ್ದರಿಂದ ಅವೆಲ್ಲವೂ ಅನಾಪ್ತವಾಕ್ಯಗಳೆಂದು ಈಗಾಗಲೇ ನಿರಾಕರಿಸಿದ್ದಾಗಿದೆ. ಆದ್ದರಿಂದ ಪುನಃ ಈ ಪಾದದ ಆರಂಭವು ವ್ಯರ್ಥವಲ್ಲವೆ?

ವಿವರಣೆ - ಇದೇ ಅಧ್ಯಾಯದ ಪ್ರಥಮಪಾದದ ನಾಕನೇ ಸೂತ್ರದಲ್ಲಿ 'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಿಂದ ಕಪಿಲಾದಿ ಸಮಯಗಳನ್ನು ನಿರಾಕರಿಸಿದ್ದಾಗಿದೆ. ಅವರು ಹೇಳಿದಂತೆ ಅನುಷ್ಠಾನ ಮಾಡಿದಾಗ ಫಲವು ದೊರಕುತ್ತಿಲ್ಲವಾದ್ದರಿಂದ ಅವರನ್ನು ಅನಾಪ್ತರೆಂದು ಅಲ್ಲಿಯೇ ನಿರಾಕರಣೆ ಮಾಡಿದ್ದಾಗಿದೆ. ಈ ಪಾದದಲ್ಲಿಯೂ ಅದನ್ನೇ ಪ್ರತಿಪಾದನೆ ಮಾಡಿದರೆ ಪುನರುಕ್ತಿ ಬರುತ್ತದೆಂಬುಂದು ಆಕ್ಷೇಪದ ಅಭಿಪ್ರಾಯ. (ವಾಕ್ಯಾರ್ಥಮುಕ್ತಾವಳಿ)

ವಿಶೇಷವಾಗಿ ನಿರಾಕರಣೆ ಮಾಡಲು ದ್ವಿತೀಯಪಾದ

**तत्वप्रकाशिका – तत्र सामान्यतो निराकृतानामत्र विशेषतो निराकरणात् । न ह्यनादिकालानुवृत्तानां प्रतीतिसुन्दराणां तेषां सामान्यतो निराकरणेऽधिकारिणो निःशङ्कप्रवृत्तिर्भवतीति भावः ।**

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಲ್ಲಿ ಎಲ್ಲಾ ಸಮಯಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ್ದಾಗಿದೆ. ಈ ಪಾದದಲ್ಲಿ ಪ್ರತಿಯೊಂದು ಸಮಯಗಳನ್ನು ಆಮೂಲಾಗ್ರವಾಗಿ ನಿರಾಕರಣೆ ಮಾಡಲಾಗುತ್ತಿದೆ. ಅನಾದಿಕಾಲದಿಂದ ಪರಂಪರಾಗತವಾದ ಆಪಾತತಃ ಸುಂದರವಾದ ಈ ಎಲ್ಲ ಮತಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ ಮಾತ್ರಕ್ಕೆ ಅಧಿಕಾರಿಗಳು ತತ್ವವಾದದಲ್ಲಿ ನಿಃಶಂಕಾಪ್ರವೃತ್ತಿಯನ್ನು ಸರ್ವಥಾ ಮಾಡಲಾರರು ಎಂಬುದು ಇಲ್ಲಿಯ ಅಭಿಪ್ರಾಯ.

**भावदीपः** – विशेषतो निराकृतिर्व्यर्थेत्यत आह – **न हीति ।।**

ವಿಶೇಷವಾಗಿ ಸಮಯಗಳನ್ನು ನಿರಾಕರಣೆ ಮಾಡುವುದು ವ್ಯರ್ಥವಲ್ಲವೇ? ಈ ಪ್ರಶ್ನೆಗೆ 'ನಹಿ' ಇತ್ಯಾದಿ ಗ್ರಂಥವು ಉತ್ತರಿಸುತ್ತಿದೆ.

### ರಚನಾನುಪಪತ್ತ್ಯಧಿಕರಣದ ಪ್ರಮೇಯ

**तत्वप्रकाशिका – आद्याधिकरणार्थं दर्शयति – अचेतनेति ।। समया द्विविधाः । हैतुकपाषण्डभेदात् । वेदवादिनां प्रथमपादे निराकृतत्वात् ।**

ಮೊದಲನೆಯ ಅಧಿಕರಣದ ಪ್ರಮೇಯವನ್ನು 'ಅಚೇತನ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

ಸಮಯಗಳು ಎರಡುವಿಧ - ೧. ಹೈತುಕ ೨. ಪಾಷಂಡ ಎಂದು. ವೇದವಾದವೆಂಬ ಮತ್ತೊಂದು ಸಮಯವನ್ನು ಪ್ರಥಮಪಾದದಲ್ಲೇ ನಿರಾಕರಣೆ ಮಾಡಿದ್ದಾಗಿದೆ.

### ಏಕಾದಶಸ್ಕಂಧದ ಆಧಾರದಲ್ಲಿ ಟೀಕೆಗೆ ವ್ಯಾಖ್ಯಾನ

**भावदीपः** – प्रथमतो निराकृतावचेतनपदसूचितं हेतुं वक्तुमाह – **समया इति ।।** ननु 'वेदवादरतो न स्यान्न पाषण्डी न हैतुकी' इति समयत्रैविध्यस्य एकादशस्कन्धोक्तेः कथं द्वैविध्यमित्यतोऽत्रपादे निराकार्यत्वाशयेनेति भावेनाह – **वेदवादिनामिति ।।** 'वेदेन सह वादो यो वेदवाद इतीरितः। तर्केण वेदस्यान्यार्थकल्पनं तद्विदो विदुः' इत्येकादशस्कन्धतात्पर्योक्तलक्षणवेदवादिनामित्यर्थः।

ಭಾಷ್ಯದಲ್ಲಿ ಅಚೇತನ ಪದವನ್ನು ಪ್ರಯೋಗ ಮಾಡಿದ್ದಾರೆ. ಇದರಿಂದ ಮೊದಲೇಕೆ ಸಾಂಖ್ಯಮತವನ್ನು ನಿರಾಕರಣೆ ಮಾಡುತ್ತಿದ್ದೀರಿ ? ಎಂಬ ಪ್ರಶ್ನೆಗೆ ಹೇತುವನ್ನು ನೀಡಿರುತ್ತಾರೆ. ಆ ಹೇತುವನ್ನೇ ಟೀಕೆಯಲ್ಲಿ 'ಸಮಯಾ' ಇತ್ಯಾದಿ ವಾಕ್ಯವು ವಿವರಿಸುತ್ತಿದೆ.

'ವೇದವಾದರತೋ ನ ಸ್ಯಾತ್ ನ ಪಾಷಂಡೀ ನ ಹೈತುಕೀ' ಎಂಬುದಾಗಿ ಭಾಗವತದ ಹನ್ನೊಂದನೆಯ ಸ್ಕಂಧದಲ್ಲಿ ಹೇಳಿದಂತೆ ಸಮಯಗಳು ಮೂರುರೀತಿಯಲ್ಲಿವೆ. ಹೀಗಿರುವಾಗ ಟೀಕೆಯಲ್ಲಿ ಎರಡು ಬಗೆಯ ಸಮಯಗಳೆಂದು ಹೇಗೆ ಹೇಳಿದರು ? ಎಂದರೆ ಈ ಪಾದದಲ್ಲಿ ನಿರಾಕರಣೆಗೆ ಯೋಗ್ಯವಾದ ಎರಡು ಮತಗಳನ್ನಷ್ಟೇ ಉದ್ದೇಶಿಸಿ, ಟೀಕೆಯಲ್ಲಿ ಹೇಳಿದ್ದಾರೆಂದು ತಿಳಿಯಬೇಕು. ಈ ಅಭಿಪ್ರಾಯದಿಂದ 'ವೇದವಾದಿನಾಮ್' ಎಂಬ ವಾಕ್ಯವು ಹೊರಟಿದೆ. ಪ್ರಥಮಪಾದದಲ್ಲಿ ವೇದವಾದ ಮತವನ್ನು ನಿರಾಕರಣೆ ಮಾಡಿದ್ದರಿಂದ ಒಟ್ಟು ಮೂರು ಬಗೆಯ ಮತಗಳನ್ನೂ ಕೂಡ ನಿರಾಕರಣೆ ಮಾಡಿದಂತಾಗಿದೆ. 'ವೇದವಾದರತಃ' ಎಂಬ ಪದದ ಅರ್ಥವನ್ನು ಭಾಗವತತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ - 'ವೇದೇನ ಸಹ ವಾದೋ ಯೋ ವೇದವಾದ ಇತೀರಿತಃ । ತರ್ಕೇಣ ವೇದಸ್ಯಾನ್ಯಾರ್ಥಕಲ್ಪನಂ ತದ್ವಿದೋ ವಿದುಃ' ಎಂದು.

ವಿವರಣೆ - 'ವೇದವಾದರತೋ ನ ಸ್ಯಾತ್ ನ ಪಾಷಂಡೀ ನ ಹೈತುಕೀ' ಎಂಬುದಾಗಿ ಭಾಗವತದ ಏಕಾದಶಸ್ಕಂದದಲ್ಲಿ ಸಮಯಗಳು ಮೂರು ವಿಧ ಎಂದು ಹೇಳಲಾಗಿದೆ. ಆದರೆ ಪ್ರಕೃತ ತತ್ವಪ್ರಕಾಶಿಕೆಯಲ್ಲಿ 'ಸಮಯಾಃ ದ್ವಿವಿಧಾಃ ಎಂದು ಹೇಳಿದ್ದಾರೆ. ಇದು ಹೇಗೆ? ಎಂಬ ಪ್ರಶ್ನೆಗೆ 'ವೇದವಾದಿನಾಂ' ಎಂಬ ಮಾತೇ ಉತ್ತರಿಸುತ್ತಿದೆ. ವೇದವಾದಿಗಳ ಮತವನ್ನು ಪ್ರಥಮಪಾದದಲ್ಲೇ ನಿರಾಕರಣೆ ಮಾಡಿದ್ದರಿಂದ ಇಲ್ಲಿ ಅದನ್ನು ಪರಿಗಣಿಸಿಲ್ಲ.

'ವೇದವಾದಿನಾಂ' ಎಂಬುದಕ್ಕೆ ಹೀಗರ್ಥ - 'ವೇದೇನ ಸಃ ವಾದೋ ಯಃ ವೇದವಾದಃ ಇತೀರಿತಃ ತರ್ಕೇಣ ವೇದಸ್ಯಾನ್ಯಾರ್ಥಕಲ್ಪನಂ ತದ್‌ವಿದೋ ವಿದುಃ' ಕುತರ್ಕಗಳಿಂದ ವೇದಗಳಿಗೆ ಅಪಾರ್ಥವನ್ನು ಕಲ್ಪನೆ ಮಾಡಿ ವೇದದಿಂದಲೇ ವೇದವಿರೋಧಿಯಾದ ವಾದವನ್ನು ಮಂಡಿಸುವವನು ಎಂದರ್ಥ.

## ಸಾಂಖ್ಯಮತ ಚಾರ್ವಾಕಮತಗಳು ಅತ್ಯಂತ ಬಲಿಷ್ಠ

**ತತ್ವಪ್रकाशिका – 'अक्षपादकणादौ च सांख्ययोगौ च हैतुकाः । बौद्धपाशुपताद्यास्तु पाषण्डा इति कीर्तिताः' । तत्र पाषण्डेभ्योऽपि हैतुकाः**

**प्रबलाः। युक्तिमत्त्वात् । तेषु च साङ्ख्यचार्वाकसमयस्यैवातिविरोधित्वम् । ईश्वरनिरपेक्षाचेतनप्रवृत्तिवादित्वात् ।**

'ಅಕ್ಷಪಾದಕಣಾದೌ ಚ ಸಾಂಖ್ಯಯೋಗೌ ಚ ಹೈತುಹಾಃ।
ಬೌದ್ಧಪಾಶುಪತಾದ್ಯಾಸ್ತು ಪಾಷಂಡಾ ಇತಿ ಕೀರ್ತಿತಾಃ।

ತಾರ್ಕಿಕಮತ, ವೈಶೇಷಿಕಮತ, ಸಾಂಖ್ಯಮತ, ಯೋಗಮತ, ಬೌದ್ಧಮತ ಇವೆಲ್ಲವೂ ಪಾಷಂಡಮತಗಳೆಂದು ಕರೆಯಲ್ಪಟ್ಟಿವೆ.

ಈ ಮತಗಳಲ್ಲಿ ಯುಕ್ತಿಯನ್ನು ಆಶ್ರಯಿಸಿರುವುದರಿಂದ ಪಾಷಂಡಮತಗಳಿಗಿಂತ ಹೈತುಕರು ಪ್ರಬಲರು. ಅವರಲ್ಲಿಯೂ ಸಾಂಖ್ಯಮತ, ಚಾರ್ವಾಕಮತಗಳು ಅತ್ಯಂತ ವಿರೋಧಿಯಾಗಿವೆ. ಏಕೆಂದರೆ ಈಶ್ವರನನ್ನೇ ಒಪ್ಪದೆ ಅಚೇತನದಿಂದ ಜಗತ್ತಿನ ಪ್ರವೃತ್ತಿಯೆಂದು ಒಪ್ಪುತ್ತಾರೆ.

ಯಾರು ಹೈತುಕರು ? ಎಂಬ ಪ್ರಶ್ನೆಗೆ ಉತ್ತರ

**भावदीपः –** हैतुकादयः के इत्याकाङ्क्षायां द्वितीये गीतातात्पर्योक्तनारदीयस्मृत्या दर्शयति॥ **अक्षपादेति॥** साङ्ख्यचार्वाकेति॥ चार्वाकस्याहैतुकत्वेऽपि अचेतनप्रवृत्तिवादित्वसाम्यात्साङ्ख्यमध्ये तन्निरास इति भावः॥

ಯಾರು ಹೈತುಕರು ? ಎಂಬ ಆಕಾಂಕ್ಷೆ ಬಂದರೆ ಎರಡನೆಯ ಅಧ್ಯಾಯದ ಗೀತಾತಾತ್ಪರ್ಯದಲ್ಲಿ ನಾರದೀಯಸ್ಮೃತಿಯಿಂದ ಉತ್ತರಿಸಿದ್ದಾರೆ. ಅದನ್ನೇ 'ಅಕ್ಷಪಾದ' ಇತ್ಯಾದಿ ವಾಕ್ಯದಿಂದ ಟೀಕೆಯಲ್ಲಿ ತೋರಿಸಿದ್ದಾರೆ.

'ಸಾಂಖ್ಯಚಾರ್ವಾಕ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಚಾರ್ವಾಕರು ಹೈತುಕರಲ್ಲ. ಆದರೂ ಅಚೇತನಕ್ಕೆ ಸ್ವತಂತ್ರಪ್ರವೃತ್ತಿಯನ್ನು ಒಪ್ಪುವ ಅಂಶದಲ್ಲಿ ಸಾಂಖ್ಯರಿಗೆ ಸಮನಾರಾಗಿದ್ದಾರೆ. ಆದ್ದರಿಂದ ಅವರನ್ನೂ ಕೂಡ ಸಾಂಖ್ಯರ ಮಧ್ಯದಲ್ಲೇ ನಿರಾಕರಣೆ ಮಾಡಿದ್ದಾರೆಂದು ತಿಳಿಯಬೇಕು.

ವಿವರಣೆ - ಹೈತುಕ ಮತ್ತು ಪಾಷಂಡಮತಗಳಲ್ಲಿ ಹೈತುಕರು ಪ್ರಬಲರು. ಯಾರು ವೇದವನ್ನು ಒಪ್ಪದೆ ಮತವನ್ನು ಸ್ಥಾಪನೆ ಮಾಡುತ್ತಾರೋ ಅವರು ಪಾಷಂಡಿಗಳು. ವೇದವನ್ನು ಒಪ್ಪಿ ಯುಕ್ತಿಗೆ ಪ್ರಾಬಲ್ಯವನ್ನು ಹೇಳುವವರು ಹೈತುಕರು. ಆದ್ದರಿಂದ ಇವರು

ಪಾಷಂಡಿಗಳಿಗಿಂತ ಪ್ರಬಲರು. ಹೈತುಕರಲ್ಲಿ ಸಾಂಖ್ಯ ಮತ್ತು ಚಾರ್ವಾಕರು ಈಶ್ವರನನ್ನೇ ಒಪ್ಪದ ಕಾರಣ ಅತ್ಯಂತ ವಿರೋಧಿಗಳು. ವಾಸ್ತವಿಕವಾಗಿ ಸಾಂಖ್ಯಮತದಲ್ಲಿ ಸೇಶ್ವರಸಾಂಖ್ಯಮತ ನಿರೀಶ್ವರ ಸಾಂಖ್ಯಮತವೆಂಬ ಪ್ರಭೇದವಿದೆ. ಆದರೆ ಈಶ್ವರನನ್ನು ಒಪ್ಪಿದರೂ ಪ್ರಕೃತಿಗೆ ಪ್ರಾಧಾನ್ಯವನ್ನು ಹೇಳುವುದರಿಂದ ಈಶ್ವರನನ್ನು ಒಪ್ಪಿಯೂ ಉಪಯೋಗವಿಲ್ಲ. ಆದ್ದರಿಂದ ನಿರೀಶ್ವರ ಸಾಂಖ್ಯರನ್ನೇ ಇಲ್ಲಿ ವಿವಕ್ಷಿಸಿದ್ದಾರೆ.

ನಿರೀಶ್ವರಸಾಂಖ್ಯಮತವನ್ನೇ ಮೊದಲೇಕೆ ನಿರಾಕರಿಸುತ್ತಿದ್ದಾರೆ?

**तत्वप्रकाशिका – तत्र चार्वाकसमयस्यातिविरोधित्वेऽप्यतितुच्छत्वेन प्रथमं निषेध्यताऽयोगादादौ साङ्ख्यसमयो निराकर्तव्यः । स च द्विविधः । निरीश्वरः सेश्वरश्च । तत्र निरीश्वरस्यैवातिविरोधित्वम् । अतो निरीश्वरसाङ्ख्यमतमेवादौ निराकरोतीति भावः।**

ಸಾಂಖ್ಯ ಮತ್ತು ಚಾರ್ವಾಕಮತಗಳ ನಡುವೆ ಚಾರ್ವಾಕಮತವು ಅತ್ಯಂತ ವಿರೋಧಿಯಾಗಿದೆ. ಆದರೂ ಸಹ ಈ ಮತವು ಹೇಯವಾಗಿದೆ. ಆದ್ದರಿಂದ ಇದನ್ನು ಮೊದಲು ನಿರಾಕರಣೆ ಮಾಡುವುದು ಯೋಗ್ಯವಲ್ಲ. ಹಾಗಾಗಿ ಸಾಂಖ್ಯಮತವನ್ನು ಸಮಯಪಾದದ ಪ್ರಾರಂಭದಲ್ಲಿ ನಿರಾಕರಣೆ ಮಾಡಬೇಕು.

ಈ ಸಾಂಖ್ಯಮತವು ಎರಡುವಿಧ, ನಿರೀಶ್ವರ, ಸೇಶ್ವರ ಎಂದು. ಇವೆರಡರಲ್ಲಿ ನಿರೀಶ್ವರ-ಸಾಂಖ್ಯಮತವೇ ಅತ್ಯಂತ ವಿರೋಧಿಯಾಗಿದೆ. ಆದ್ದರಿಂದ ನಿರೀಶ್ವರಸಾಂಖ್ಯಮತವನ್ನೇ ಮೊದಲು ನಿರಾಕರಣೆ ಮಾಡುತ್ತಿದ್ದಾರೆ.

ಸೇಶ್ವರಸಾಂಖ್ಯರೂ ಕೂಡ ನಿರೀಶ್ವರವಾದಿಗಳೇ?

**भावदीपः – निरीश्वरेति ।।** यद्यपि द्वितीयनयनिरस्यं साङ्ख्यमतं सेश्वरं तथापि तेनेश्वरस्य स्वातन्त्र्यास्वीकारेण निरीश्वरवादप्रायत्वादीश्वरनिरपेक्षेत्युक्तम्।। **अतिविरोधित्वेऽपीति ।।** अदृष्टमात्रानभ्युपगमादिति भावः।।

'ನಿರೀಶ್ವರ' ಇತ್ಯಾದಿ ಪದದ ಅಭಿಪ್ರಾಯ ಹೀಗಿದೆ - ವಾಸ್ತವಿಕವಾಗಿ ಎರಡನೆಯ ಅಧಿಕರಣದಲ್ಲಿ ನಿರಾಕರಣೆ ಮಾಡಲ್ಪಡುವ ಸಾಂಖ್ಯರು ಈಶ್ವರನನ್ನು ಒಪ್ಪುತ್ತಾರೆ. ಆದರೂ ಕೂಡ ಈಶ್ವರನಿಗೆ ಅವರು

ಸ್ವಾತಂತ್ರ್ಯವನ್ನು ಅಂಗೀಕಾರ ಮಾಡುವುದಿಲ್ಲ. ಅರ್ಥಾತ್ ನಿರೀಶ್ವರವಾದವನ್ನೇ ಅನುಸರಿಸಿದಂತಾಯಿತು. ಆದ್ದರಿಂದ ಅವರನ್ನೂ ಕೂಡ ನಿರೀಶ್ವರರೆಂದೇ ಇಲ್ಲಿ ಉಲ್ಲೇಖಿಸುತ್ತಾರೆ.

'ಅತಿವಿರೋಧಿತ್ವಂ' ಎಂದರೆ ಈಶ್ವರನೆಂಬ ವಿಶೇಷವನ್ನೇ ಒಪ್ಪದ ಕಾರಣ ಅತ್ಯಂತ ವಿರೋಧಿಗಳಾಗಿದ್ದಾರೆಂದಭಿಪ್ರಾಯ.

### ನಿರೀಶ್ವರಸಾಂಖ್ಯಮತದ ನಿರಾಕರಣೆಗೆ ಕಾರಣ

**तत्वप्रकाशिका – अत एवात्र हरेर्जगत्कारणत्वे निरीश्वरसाङ्ख्यमतविरोधपरिहारादस्ति शास्त्रादिसङ्गतिः । विष्णुः सर्वकर्तेत्युक्तम् । तत्र च साङ्ख्यमतविरोधे लक्षणासम्भवप्रसङ्गादसौ निराकर्तव्य एव ।**

ಈ ಅಧಿಕರಣದಲ್ಲಿ ಶ್ರೀಹರಿಯ ಜಗತ್ಕಾರಣತ್ವವಿಷಯದಲ್ಲಿ ನಿರೀಶ್ವರಸಾಂಖ್ಯಮತದ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ವಿಷ್ಣುವೇ ಸರ್ವಕರ್ತೃವಾಗಿದ್ದಾನೆಂದು ಈ ಹಿಂದೆಯೇ ಹೇಳಲಾಯಿತು. ಈ ವಿಷಯದಲ್ಲಿ ಸಾಂಖ್ಯಮತದ ವಿರೋಧವು ಪ್ರಾಪ್ತವಾದರೆ ವಿಷ್ಣುವಿನ ಸರ್ವಕರ್ತೃತ್ವಲಕ್ಷಣವು ಅಸಂಭಾವಿತವಾಗುತ್ತದೆ. ಆದ್ದರಿಂದ ಈ ಮತವನ್ನು ನಿರಾಕರಣೆ ಮಾಡಲೇಬೇಕು.

**भावदीपः – अतिविरोधित्वमिति ।।** ईश्वराख्यविशेषस्यैवानभ्युपगमादिति भावः।। **अत एवेति ।।** तन्मतस्यातिविरोधित्वेन तन्निराकरणस्यावश्यकत्वादेवेत्यर्थः। चिन्तायां पूर्वसङ्गतिसाफल्ये वक्ति।। **विष्णुरिति ।।**

'ಅತ ಏವ' ಎಂದರೆ ಸಾಂಖ್ಯರು ಅತ್ಯಂತ ವಿರೋಧಿಗಳಾದ್ದರಿಂದ ಅವರ ಮತದ ನಿರಾಕರಣೆ ಅತ್ಯಂತ ಆವಶ್ಯಕವಾಗಿರುವುದರಿಂದಲೇ ಎಂದರ್ಥ. ಅಧಿಕರಣದ ಸಂಶಯಕ್ಕೆ ಹಿಂದಿನ ಪಾದದಿಂದ ಸಂಗತಿಯನ್ನು ಹಾಗೂ ಸಾಫಲ್ಯವನ್ನು ಹೇಳಲು 'ವಿಷ್ಣುः' ಎಂಬ ವಾಕ್ಯವು ಪ್ರವೃತ್ತವಾಗಿದೆ.

### ಅಧಿಕರಣದ ವಿಷಯ ಸಂದೇಹಾದಿಗಳು

**तत्वप्रकाशिका – अतो विष्णोः सर्वकर्तृत्वं विषयः । युक्तं न वेति सन्देहः । समयविवादः सन्देहबीजम् । न युक्तमिति पूर्वः पक्षः । प्रकृतेरेव महदादिकारणत्वात् ।**

ಆದ್ದರಿಂದ ವಿಷ್ಣುವಿನ ಸರ್ವಕರ್ತೃತ್ವವೇ ಅಧಿಕರಣದ ವಿಷಯ. ಇದು ಯುಕ್ತವೋ ಅಲ್ಲವೋ? ಎಂಬುದು ಸಂದೇಹ. ಸಮಯಗಳ ವಿವಾದವೇ ಸಂದೇಹಬೀಜ. ಸರ್ವಕರ್ತೃತ್ವವು ಯುಕ್ತವಾಗುವುದಿಲ್ಲವೆಂಬುದು ಪೂರ್ವಪಕ್ಷ. ಏಕೆಂದರೆ ಪ್ರಕೃತಿಯೇ ಮಹದಾದಿತತ್ವಗಳಿಗೆ ಕಾರಣವಾಗುತ್ತದೆ.

### ಸ್ವತಂತ್ರವಾಗಿ ಅಚೇತನಕ್ಕೆ ಕರ್ತೃತ್ವವಿದೆಯೆಂದು ಪೂರ್ವಪಕ್ಷ

**भावदीपः** – अतः सङ्गतिफलयोर्भावादित्यर्थः॥ **समयेति**॥ साङ्ख्यवैष्णवसमयविवाद इत्यर्थः। अत्र न्यायविवरणे उक्तविरोधिनस्तत्तत्समयसिद्धाः पूर्वपक्षन्यायास्तद्विरोधिनोऽन्य इति प्रसिद्धमेवेत्युक्त्या एतत्पादीयन्यायविवरणाभावात्।

वत्सविवृद्धिनिमित्तं क्षीरस्य यथा प्रवृत्तिरज्ञस्य।
पुरुषस्य विमोक्षनिमित्तं तथा प्रवृत्तिः प्रधानस्य॥

इति साङ्ख्यकारिकाविवरणपरेणाचेतनस्य कर्तृत्वं स्वातन्त्र्येण निगद्यत इत्यनुव्याख्यानेनोक्ततन्मतानुरोधेनानुमानपरिकल्पितं प्रधानं जगत्कर्तृ इति भाष्यं विवृण्वन्पूर्वपक्षमाह – **प्रकृतेरिति**॥

'ಅತಃ' ಎಂಬ ಪದಕ್ಕೆ ಸಂಗತಿ ಹಾಗೂ ಫಲಗಳು ಇರುವುದರಿಂದ ಎಂದರ್ಥ. 'ಸಮಯವಿವಾದಃ' ಎಂಬುದಕ್ಕೆ ಸಾಂಖ್ಯಮತ ಹಾಗೂ ವೈಷ್ಣವಮತಗಳಲ್ಲಿ ವಿವಾದ ಇರುವಿಕೆ ಎಂದರ್ಥ.

ಪ್ರಕೃತ ನ್ಯಾಯವಿವರಣದಲ್ಲಿ 'ಉಕ್ತವಿರೋಧಿನಃ ತತ್ತತ್ಸಮಯಸಿದ್ಧಾಃ ಪೂರ್ವಪಕ್ಷನ್ಯಾಯಾಃ ತದ್ವಿರೋಧಿನೋಽನ್ಯ ಇತಿ ಪ್ರಸಿದ್ಧಮೇವ' ಹಿಂದೆ ಹೇಳಿದ ಪ್ರಮೇಯಕ್ಕೆ ವಿರೋಧಿಗಳಾದ ಯಾವ ಸಮಯಗಳಿದ್ದಾರೋ, ಅವರ ಮತದ ಪ್ರಕಾರ ಸಿದ್ಧವಾದ ನ್ಯಾಯಗಳೇ ಪೂರ್ವಪಕ್ಷನ್ಯಾಯಗಳಾಗಿವೆ. ಅದಕ್ಕೆ ವಿರುದ್ಧವಾದದ್ದು ಸಿದ್ಧಾಂತನ್ಯಾಯಗಳಾಗಿವೆ ಇದು ಪ್ರಸಿದ್ಧವೇ ಆಗಿದೆ ಎಂದು ಹೇಳಿದ್ದಾರೆ. ಆದ್ದರಿಂದ ಈ ಪಾದಕ್ಕೆ ನ್ಯಾಯವಿವರಣವು ಇರುವುದಿಲ್ಲ.

ವತ್ಸವಿವೃದ್ಧಿನಿಮಿತ್ತಂ ಕ್ಷೀರಸ್ಯ ಯಥಾ ಪ್ರವೃತ್ತಿರಜ್ಞಸ್ಯ।
ಪುರುಷಸ್ಯ ವಿಮೋಕ್ಷನಿಮಿತ್ತಂ ತಥಾ ಪ್ರವೃತ್ತಿಃ ಪ್ರಧಾನಸ್ಯ॥

ಕರುವಿನ ಅಭಿವೃದ್ಧಿಗಾಗಿ ಹಸುವಿನಲ್ಲಿ ಹಾಲು ಹೇಗೆ ಉತ್ಪನ್ನವಾಗುತ್ತದೋ, ಅದರಂತೆ ಪುರುಷನ ಮೋಕ್ಷಕ್ಕಾಗಿ ಪ್ರಕೃತಿಯು ಪ್ರವೃತ್ತಿ ಮಾಡುತ್ತದೆ. ಹೀಗೆ ಸಾಂಖ್ಯಕಾರಿಕೆಯಲ್ಲಿ ಹೇಳಿದ್ದಾರೆ. ಅದನ್ನೇ ವಿವರಣೆ ಮಾಡುತ್ತಾ ಅಚೇತನಕ್ಕೆ ಕರ್ತೃತ್ವವನ್ನು ಸ್ವತಂತ್ರವಾಗಿ ಹೇಳುತ್ತಿದ್ದಾರೆ ಎಂಬುದಕ್ಕೆ 'ಅಚೇತನಸ್ಯ ಕರ್ತೃತ್ವಂ ಸ್ವಾತಂತ್ರ್ಯೇಣ ನಿಗದ್ಯತೇ' ಎಂಬ ಅನುವ್ಯಾಖ್ಯಾನ ಶ್ಲೋಕವು ಹೇಳುತ್ತಿದೆ. ಸಾಂಖ್ಯಮತಕ್ಕೆ ಅನುಸಾರಿಯಾಗಿ ಅನುಮಾನ ಪರಿಕಲ್ಪಿತವಾದ ಪ್ರಧಾನವೇ ಜಗತ್‌ಕರ್ತೃವಾಗಿದೆ ಎಂಬ ಭಾಷ್ಯವನ್ನು ವಿವರಣೆ ಮಾಡುತ್ತಿದ್ದಾರೆ. ತನ್ಮೂಲಕ ಪೂರ್ವಪಕ್ಷವನ್ನು 'ಪ್ರಕೃತೇಃ' ಎಂಬ ವಾಕ್ಯದಿಂದ ನಿರೂಪಣೆ ಮಾಡುತ್ತಿದ್ದಾರೆ.

### ತನಗೆ ಸದೃಶವಾದದ್ದನ್ನೇ ಹುಟ್ಟಿಸಬೇಕು

**तत्वप्रकाशिका – भवितव्यं खलु कार्येण स्वसदृशकारणवतैव । अन्यथाऽतिप्रसङ्गात् । न हीश्वरस्य महदादिसारूप्यमीश्वरवादिभिरभ्युपेयते ।**

ಕಾರಣವು ತನಗೆ ಅನುಗುಣವಾದ ಕಾರ್ಯವನ್ನೇ ಹುಟ್ಟಿಸುತ್ತದೆ. ಹೀಗೆ ಒಪ್ಪದಿದ್ದರೆ ಅತಿಪ್ರಸಂಗ ಬರುತ್ತದೆ. ಈಶ್ವರನನ್ನು ಒಪ್ಪುವವರು ಈಶ್ವರನು ಮಹದಾದಿಗಳಿಗೆ ಸದೃಶನೆಂದು ಒಪ್ಪದೇ ಇರುವ ಕಾರಣ ಅವನನ್ನು ಮಹದಾದಿ ಸೃಷ್ಟಿಗೆ ಕಾರಣನೆಂದೂ ಒಪ್ಪಲಾಗುವುದಿಲ್ಲ.

### ಅನುಮಾನದಿಂದ ಅಚೇತನಕರ್ತೃತ್ವ ಸಮರ್ಥನೆ

**भावदीपः** – अत्रानुमानमाह – **भवितव्यमिति ।।** अनेन महदादिकं स्वसदृशकारणकं कार्यत्वात् घटवदित्यनुमानमुक्तं ध्येयम्। वृश्चिकताण्डुलीयकादावपि तद्देहस्य स्वसदृशकारणकत्वमस्त्येवेति भावः। विपक्षे बाधकमाह – **अन्यथेति ।। अतिप्रसङ्गादिति ।।** तन्त्वादिनापि घटाद्युत्पत्तिप्रसङ्गादित्यर्थः। सिद्धसाधनतां निराह– **नहीति ।।**

ಅನುಮಾನವನ್ನು 'ಭವಿತವ್ಯಮ್' ಎಂಬ ಟೀಕೆಯಿಂದ ತೋರಿಸುತ್ತಿದ್ದಾರೆ. ಅನುಮಾನದ ಸ್ವರೂಪ ಹೀಗಿದೆ - 'ಮಹದಾದಿಕಂ ಸ್ವಸದೃಶಕಾರಣಕಂ ಕಾರ್ಯತ್ವಾತ್ ಘಟವತ್' ಘಟವು ಕಾರ್ಯವಾಗಿದೆ. ತನಗೆ ಸದೃಶವಾದ ಕಾರಣವುಳ್ಳದ್ದಾಗಿದೆ. ಅದರಂತೆ ಮಹದಾದಿಗಳೂ ಕೂಡ ಕಾರ್ಯವಾಗಿರುವುದರಿಂದ ಸ್ವಸದೃಶವಾದ ಕಾರಣವುಳ್ಳದ್ದಾಗಿದೆ ಎಂದು. ಸೆಗಣಿಯಿಂದ ಹುಟ್ಟಿದ ವೃಶ್ಚಿಕದ ದೇಹದಲ್ಲೂ ಸ್ವಸದೃಶವಾದ

ಕಾರಣವಿರುವಿಕೆಯು ಇದ್ದೇ ಇದೆ ಎಂದು ತಿಳಿಯಬೇಕು. ವಿಪಕ್ಷದಲ್ಲಿ ಬಾಧಕವನ್ನು 'ಅನ್ಯಥಾ' ಎಂಬ ವಾಕ್ಯವು ಹೇಳುತ್ತಿದೆ. 'ಅತಿಪ್ರಸಂಗಾತ್' ಎಂದರೆ ತಂತುಗಳಿಂದ ಘಟವು ಉತ್ಪತ್ತಿಯು ಆಗಲಿ ಎಂಬ ಅತಿಪ್ರಸಂಗ ಬರುವುದರಿಂದ ಎಂದರ್ಥ. ಸಿದ್ಧಸಾಧನೆಯನ್ನು ನಿರಾಕರಣೆ ಮಾಡಲು 'ನಹಿ' ಇತ್ಯಾದಿ ವಾಕ್ಯವು ಹೊರಟಿದೆ.

**ವಿವರಣೆ** - ಯಾವುದೇ ಒಂದು ಕಾರಣವು ಕಾರ್ಯವನ್ನು ಹುಟ್ಟಿಸುವಾಗ ತನ್ನ ಸ್ವಭಾವಕ್ಕೆ ಅನುಗುಣವಾದ ಕಾರ್ಯವನ್ನು ಹುಟ್ಟಿಸುತ್ತದೆ. ಮಣ್ಣಿನಿಂದ ಘಟ ಹುಟ್ಟಿತು ಎಂದರೆ ಘಟವೂ ಕೂಡ ಮಣ್ಣಿನ ಸ್ವರೂಪವಾಗಿರುತ್ತದೆ. ಆದರಂತೆ ಮಹಾದಾದಿತತ್ವಗಳನ್ನು ಈಶ್ವರನು ಹುಟ್ಟಿಸುತ್ತಾನೆಂದರೆ ಇವನೂ ಕೂಡ ಮಹದಾದಿತತ್ವ ಸ್ವರೂಪನೇ ಆಗಿರಬೇಕು. ಆದರೆ ಈಶ್ವರನನ್ನು ಹಾಗೆ ಜಡವೆಂದು ಎಲ್ಲಿಯೂ ಹೇಳಿಲ್ಲ. ಆದ್ದರಿಂದ ಮಹದಾದಿತತ್ವಗಳಿಗೆ ಕಾರಣನೂ ಆಗುವುದಿಲ್ಲ. ಇದು ಪೂರ್ವಪಕ್ಷಿಗಳ ಧೋರಣೆ.

### ಮಧ್ಯದಲ್ಲಿ ಈಶ್ವರ ಬೇಡ

**तत्वप्रकाशिका – न च प्रकृतिप्रेरकत्वेनेश्वरोऽङ्गीकर्तव्यः । केवलप्रकृतेरेव कर्तृत्वाभ्युपगामात् । न चान्यदीश्वराङ्गीकारे प्रयोजनं पश्यामः । अतः प्रकृतेरेवाशेषकर्तृत्वान्नेश्वरस्य कर्तृत्वं वा अस्तीति उक्तमयुक्तमिति प्राप्ते सिद्धान्तयत्सूत्रमुपन्यस्य व्याचष्टे – रचनेति।।**

ಪ್ರಕೃತಿಗೆ ಪ್ರೇರಕನಾಗಿ ಈಶ್ವರನನ್ನು ಒಪ್ಪಿದರೆ ಸಾಕು ಎಂದು ಹೇಳಬಾರದು. ಇದಕ್ಕಿಂತ ನೇರವಾಗಿ ಪ್ರಕೃತಿಗೇ ಕರ್ತೃತ್ವವನ್ನು ಒಪ್ಪುವುದು ಸುಲಭ. ಪ್ರಕೃತಿಗಿಂತ ಅತಿರಿಕ್ತವಾದ ಈಶ್ವರನನ್ನು ಒಪ್ಪಲು ಪ್ರಯೋಜನವೂ ಕಾಣಿಸುತ್ತಿಲ್ಲ. ಆದ್ದರಿಂದ ಜಡವಾದ ಪ್ರಕೃತಿಗೆ ಅಶೇಷಕರ್ತೃತ್ವವನ್ನು ಒಪ್ಪಬೇಕಾದ್ದರಿಂದ ಈಶ್ವರನಿಗೆ ಕರ್ತೃತ್ವವನ್ನು ಒಪ್ಪುವುದು ಅಯುಕ್ತವಾಗಿದೆ ಎಂಬುದು ಅಧಿಕರಣದ ಪೂರ್ವಪಕ್ಷ. ಇದನ್ನು ನಿರಾಕರಣೆ ಮಾಡುವ ಸಿದ್ಧಾಂತಸಾಧಕವಾದ ಸೂತ್ರವನ್ನು 'ರಚನಾನುಪಪತ್ತೇಶ್ಚ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – नन्वीश्वराभावे कस्यापि प्रवृत्त्ययोगेन प्रकृतेः कारणत्वेमेव न स्यादिति तर्कपराहतिरिति भावेनाशङ्क्य निराह – **न चेति ।। कर्तृत्वेति ।।** स्वत एव प्रवृत्तिमत्त्वरूपकर्तृत्वाभ्युपगमादित्यर्थः ।।

ಈಶ್ವರನೇ ಇಲ್ಲದಿದ್ದರೆ ಯಾರ ಪ್ರವೃತ್ತಿಯೂ ಕೂಡ ಕೂಡುವುದೇ ಇಲ್ಲ. ಆದ್ದರಿಂದ ಪ್ರಕೃತಿಗೆ ಕಾರಣತ್ವವೂ ಕೂಡ ಇಲ್ಲದೇ ಇರಬೇಕಾದೀತು. 'ಈಶ್ವರಾಭಾವೇ ಕಸ್ಯಾಪಿ ಪ್ರವೃತ್ತ್ಯಯೋಗೇನ ಪ್ರಕೃತೇಃ ಕಾರಣತ್ವೇಮೇವ ನ ಸ್ಯಾತ್' ಹೀಗೆ ತರ್ಕಪರಾಹತಿಯು ಇರುವುದರಿಂದ ಅಚೇತನಕರ್ತೃತ್ವವು ಅಯುಕ್ತವಲ್ಲವೇ? ಎಂಬ ಆಶಂಕೆಯನ್ನು 'ನಚ' ಇತ್ಯಾದಿ ವಾಕ್ಯವು ಪರಿಹಾರ ಮಾಡುತ್ತಿದೆ. 'ಕರ್ತೃತ್ವಾಭ್ಯುಗಮಾತ್' ಎಂಬುದಕ್ಕೆ ಸ್ವತಂತ್ರವಾಗಿ 'ಪ್ರವೃತ್ತಿಮತ್ತ್ವ' ಎಂಬ ಕರ್ತೃತ್ವವನ್ನು ಅಂಗೀಕಾರ ಮಾಡಿರುವುದರಿಂದ ಎಂದರ್ಥ.

### ಸ್ವತಃಪ್ರವೃತ್ತಿ ಇರುವುದಷ್ಟೇ ಕರ್ತೃ ಎನಿಸುತ್ತದೆ

**तत्वप्रकाशिका – न कार्यं स्वसदृशकारणवत् कार्यत्वादित्यनुमानेन कारणतया कल्पितं प्रधानं जगत्कर्तृ । स्वतः प्रवृत्तिमदेव हि कर्तृ भवति । न च प्रधानस्य स्वतःप्रवृत्तिर्युक्ता अचेतनत्वाद् घटवत् । अतो युक्तं विष्णोर्जगत्कारणत्वमिति भावः**

'ಕಾರ್ಯಂ ಸ್ವಸದೃಶಕಾರಣವತ್ ಕಾರ್ಯತ್ವಾತ್' 'ಕಾರ್ಯವು ತನಗೆ ಸದೃಶವಾದ ಕಾರಣವುಳ್ಳದ್ದು ಕಾರ್ಯವಾದ್ದರಿಂದ' ಎಂಬ ಅನುಮಾನದಿಂದ ಪ್ರಕೃತಿಯೇ ಜಗತ್ತಿಗೆ ಕಾರಣವೆಂದು ಪೂರ್ವಪಕ್ಷಿಗಳು ಕಲ್ಪನೆ ಮಾಡಿ ಪ್ರಕೃತಿಯೇ ಜಗತ್ ಕರ್ತೃ ಎಂದು ಸಾಧನೆ ಮಾಡಿದರು. ಆದರೆ ಇದು ತಪ್ಪು. ಏಕೆಂದರೆ ಯಾವುದು ತನ್ನ ಶಕ್ತಿಯಿಂದಲೇ ಪ್ರವೃತ್ತಿ ಮಾಡುತ್ತದೋ ಅದು ಮಾತ್ರ ಕರ್ತೃ ಎಂದು ಕರೆಸಿಕೊಳ್ಳುತ್ತದೆ. ಪ್ರಧಾನಕ್ಕೆ ಸ್ವತಃ ಪ್ರವೃತ್ತಿಯೇ ಇರುವುದಿಲ್ಲ. ಅಚೇತನವಾದ ಘಟಕ್ಕೆ ಹೇಗೆ ಸ್ವತಃ ಪ್ರವೃತ್ತಿ ಇಲ್ಲವೋ ಅದರಂತೆ ಪ್ರಕೃತಿಯೂ ಕೂಡ ಅಚೇತನವಾದ್ದರಿಂದ ಸ್ವತಃಪ್ರವೃತ್ತಿಯನ್ನು ಮಾಡುವುದಿಲ್ಲ. ಆದ್ದರಿಂದ ವಿಷ್ಣುವೇ ಜಗತ್ತಿಗೆ ಕಾರಣನಾಗುತ್ತಾನೆಂಬುದು ಯುಕ್ತವಾಯಿತು.

### ಭಾಷ್ಯದಲ್ಲಿ ಹೇಳಿದ ಅನುಮಾನದ ವ್ಯಾಖ್ಯಾನ

**भावदीपः –अत इति ।।** ईश्वराङ्गीकारस्य निष्फलत्वादित्यर्थः ।। आकाङ्क्षाक्रमेण भाष्यं व्याचष्टे ।। **न कार्यमिति ।।** उक्तसाध्ये भाष्योक्तहेतोरप्रयोजकत्वनिरासाय

व्यतिरेकव्याप्तिमाह – **स्वतः प्रवृत्तिमदेवेति** ।। स्वतन्त्रः कर्तेति स्मरणादिति भावः। भाष्यस्थहेतोः पक्षधर्मतामाह – **न चेति** ।। अचेतनस्येति हेतुगर्भं मत्वाह – **अचेतनत्वादिति** ।। **अत इति** ।। प्रकृतेरेव कर्तृत्वमित्यस्यायोगादित्यर्थः।

'ಅತಃ' ಎಂಬ ಪದಕ್ಕೆ ಈಶ್ವರನನ್ನು ಅಂಗೀಕಾರ ಮಾಡುವುದು ನಿಷ್ಫಲವಾಗಿರುವುದರಿಂದ ಎಂದರ್ಥ. ಆಕಾಂಕ್ಷೆಯ ಪ್ರಕಾರ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಕಾರ್ಯಂ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಪ್ರಧಾನವು ಜಗತ್ಕರ್ತೃವಾಗುವುದಿಲ್ಲವೆಂಬ ಸಾಧ್ಯಕ್ಕೆ ಅಚೇತನಕ್ಕೆ ಸ್ವತಃಪ್ರವೃತ್ತಿ ಇಲ್ಲದಿರುವಿಕೆಯನ್ನು ಹೇತುವನ್ನಾಗಿ ಭಾಷ್ಯದಲ್ಲಿ ಹೇಳಿದ್ದಾರೆ. ಈ ಹೇತುವಿಗೆ ಅಪ್ರಯೋಜಕತ್ವವನ್ನು ವ್ಯತಿರೇಕವ್ಯಾಪ್ತಿಯನ್ನು 'ಸ್ವತಃ ಪ್ರವೃತ್ತಿಮದೇವ' ಎಂಬುದರಿಂದ ಟೀಕೆಯಲ್ಲಿ ಹೇಳಿರುತ್ತಾರೆ. 'ಸ್ವತಂತ್ರಃ ಕರ್ತಾ' ಎಂಬ ಸೂತ್ರದ ಪ್ರಕಾರ ಸ್ವಾತಂತ್ರ್ಯವಿದ್ದರಷ್ಟೇ ಕರ್ತೃತ್ವ ಬರುತ್ತದೆ ಎಂದು ತಿಳಿಯಬೇಕು. ಭಾಷ್ಯದಲ್ಲಿ ಹೇಳಿದ 'ಅಚೇತನಸ್ಯ ಸ್ವತಃ ಪ್ರವೃತ್ತ್ಯಭಾವಾತ್' ಎಂಬ ಹೇತುವಿಗೆ ಪಕ್ಷಧರ್ಮವನ್ನು ಸಮರ್ಥನೆ ಮಾಡುವುದಕ್ಕಾಗಿ 'ನಚ' ಇತ್ಯಾದಿ ವಾಕ್ಯವು ಹೊರಟಿದೆ. ಭಾಷ್ಯದಲ್ಲಿ ಹೇಳಿದ 'ಅಚೇತನಸ್ಯ' ಎಂಬ ಪದವು ಹೇತುಗರ್ಭಿತವಾಗಿದೆ ಎಂಬ ಅಭಿಪ್ರಾಯದಿಂದ ಟೀಕೆಯಲ್ಲಿ 'ಅಚೇತನತ್ವಾತ್' ಎಂದು ಹೇಳಿದ್ದಾರೆ. 'ಅತಃ' ಎಂಬ ಪದಕ್ಕೆ ಪ್ರಕೃತಿಗೆ ಜಗತ್ಕರ್ತೃತ್ವವು ಅಯುಕ್ತವಾಗುವುದರಿಂದ ಎಂದರ್ಥ.

**ವಿವರಣೆ** - 'ಪ್ರಧಾನಂ ನ ಜಗತ್ಕರ್ತೃ ಅಚೇತನಸ್ಯ ಸ್ವತಃಪ್ರವೃತ್ತ್ಯಭಾವಾತ್' ಎಂಬ ಅನುಮಾನವನ್ನು ಭಾಷ್ಯದಲ್ಲಿ ಹೇಳಿದರು. ಅಚೇತನಕ್ಕೆ ಸ್ವತಃಪ್ರವೃತ್ತಿ ಇಲ್ಲದಿದ್ದರೂ ಕರ್ತೃತ್ವವೇ ಇರಲಿ ಎಂಬುದಾಗಿ ಅಪ್ರಯೋಜಕಾಶಂಕೆಯನ್ನು ಮಾಡಿದರೆ ಜಗತ್ ಕರ್ತೃತ್ವವಿದ್ದರೆ ಸ್ವತಃ ಪ್ರವೃತ್ತಿ ಇದ್ದೇ ಇರುತ್ತದೆ ಎಂಬುದಾಗಿ ವ್ಯತಿರೇಕವ್ಯಾಪ್ತಿಯನ್ನು ಹೇಳುವ ಮೂಲಕ ಅಪ್ರಯೋಜಕಾಶಂಕೆಯನ್ನು ಪರಿಹಾರ ಮಾಡಿದ್ದಾರೆ. ಸ್ವಾತಂತ್ರ್ಯವಿದ್ದರಷ್ಟೇ ಕರ್ತೃತ್ವವಿರಲು ಸಾಧ್ಯ. ಸ್ವಾತಂತ್ರ್ಯವಿಲ್ಲದಿದ್ದರೆ ಕರ್ತೃತ್ವವೂ ಕೂಡ ಇರುವುದಿಲ್ಲ ಎಂದು ತಿಳಿಯಬೇಕು.

'ಸ್ವತಂತ್ರಃ ಕರ್ತಾ' ಎಂಬ ಸೂತ್ರದಂತೆ ಸ್ವಾತಂತ್ರ್ಯ ಇದ್ದಲ್ಲೇ ಕರ್ತೃತ್ವ ಇರುತ್ತದೆ. ಇದನ್ನು ಟೀಕೆಯಲ್ಲಿರುವ 'ಹಿ' ಶಬ್ದವು ಸೂಚಿಸುತ್ತಿದೆ.

ಸ್ವತಃಪ್ರವೃತ್ತಿಯ ಅಭಾವದಿಂದ ಕರ್ತೃತ್ವಾಭಾವವನ್ನು ಸಾಧನೆ ಮಾಡಿ ಅಸಿದ್ಧಿಯ ಪರಿಹಾರಕ್ಕೋಸ್ಕರ ಅಚೇತನತ್ವಹೇತುವಿನಿಂದ ಸ್ವತಃಪ್ರವೃತ್ತಿಯ ಅಭಾವವನ್ನು ನಾವು ಸಾಧನೆ ಮಾಡುತ್ತಿಲ್ಲ. ಸ್ವತಃಪ್ರವೃತ್ತಿಯನ್ನೇ ಕರ್ತೃತ್ವವೆಂದು ಹೇಳುತ್ತಿದ್ದೇವೆ. ಸಾಂಖ್ಯರು ಯಾವ

ಪ್ರಕೃತಿಯಲ್ಲಿ ಕರ್ತೃತ್ವವನ್ನು ಸಾಧನೆ ಮಾಡಲು ಇಚ್ಛಿಸುತ್ತಿದ್ದಾರೋ ಅಂಥ ಪ್ರಕೃತಿಯಲ್ಲಿ ಸ್ವತಃಪ್ರವೃತ್ತಿಯು ಇರುವುದಿಲ್ಲ. ಆದ್ದರಿಂದ ಅನುಮಾನಪರಿಕಲ್ಪಿತವಾದ ಪ್ರಧಾನವು ಸಾಕ್ಷಾತ್ತಾಗಿ ಸ್ವತಃಪ್ರವೃತ್ತಿರೂಪವಾದ ಕರ್ತೃತ್ವವನ್ನು ಹೊಂದಲು ಸಾಧ್ಯವಿಲ್ಲ.

ಹೀಗೆ ಹೇಳಿದ್ದರಿಂದ 'ಪ್ರಕೃತಿಃ ನ ಕರ್ತ್ರೀ ಸ್ವತಃ ಪ್ರವೃತ್ತ್ಯಭಾವಾತ್' ಎಂದು ಅನುಮಾನವನ್ನು ಪ್ರಯೋಗ ಮಾಡಿದಂತಾಯಿತು. ಈ ಅನುಮಾನದಲ್ಲಿ ಹೇತ್ವಸಿದ್ಧಿ ದೋಷವನ್ನು ಆಕ್ಷೇಪ ಮಾಡಿದರೆ 'ಅಚೇತನತ್ವಾತ್' ಎಂಬ ಹೇತುವನ್ನು ಹೇಳಲಾಗಿದೆ.

**तत्वप्रकाशिका – प्रामाणिकं प्रधानस्य जगत्कारणत्वं न युक्त्या निराकर्तुं शक्यमित्यत आह – चशब्देनेति ।।**

ಪ್ರಧಾನಕ್ಕೆ ಜಗತ್‌ಕಾರಣತ್ವವು ಪ್ರಮಾಣಸಿದ್ಧವಾಗಿದೆ. ಇದನ್ನು ಯುಕ್ತಿಯಿಂದ ನಿರಾಕರಣೆ ಮಾಡಲು ಸಾಧ್ಯವಿಲ್ಲ. ಎಂಬ ಆಕ್ಷೇಪಕ್ಕೆ ಭಾಷ್ಯದಲ್ಲಿ 'ಚ ಶಬ್ದೇನ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ಪ್ರಕೃತಿಗೆ ಸ್ವತಃ ಪ್ರವೃತ್ತಿಯನ್ನು ಸಾಧಿಸುವ ಅನುಮಾನ ಇಲ್ಲ

**तत्वप्रकाशिका – प्राचीनमनुमानं तु कारणत्वमात्रसाधकं न प्रकृतोपयोगि । स्वतःप्रवृत्तिसाधकं तु प्रमाणं नास्त्येवेति भावः ।।**

ಹಿಂದೆ ಪೂರ್ವಪಕ್ಷಿಗಳು ಮಾಡಿದ ಅನುಮಾನವು ಕೇವಲ ಕಾರಣತ್ವವನ್ನಷ್ಟೇ ಸಾಧಿಸುತ್ತದೆ. ಪ್ರಕೃತಕ್ಕೆ ಉಪಯೋಗವಾದದ್ದನ್ನು ಸಾಧಿಸುವುದಿಲ್ಲ. ಪ್ರಕೃತಿಯಲ್ಲಿ ಸ್ವತಃ ಪ್ರವೃತ್ತಿಯನ್ನು ಸಾಧನೆ ಮಾಡಬೇಕು. ಈ ವಿಷಯದಲ್ಲಿ ಪ್ರಮಾಣವು ಸರ್ವಥಾ ಇರುವುದಿಲ್ಲ. ಆದ್ದರಿಂದ ಪ್ರಕೃತಿಯು ಜಗತ್ತಿಗೆ ಕಾರಣ ಆಗುವುದಿಲ್ಲ.

'ರಚನಾನುಪಪತ್ತೇಶ್ಚ' ಎಂಬ ಸೂತ್ರಕ್ಕೆ ಮತ್ತೊಂದು ಅರ್ಥ

**भावदीपः –** कार्यत्वमेव मानमित्यत आह – **प्राचीनमिति ।। नास्त्येवेति ।।** दृष्टान्ताभावात् बयोऽब्वादेस्तु निरसिष्यमाणत्वादिति भावः। एतेनानुमानं न मानं विवक्षितार्थसाधकतया अनुमानरचनाया अनुपपत्तेरिति सूत्रस्यार्थान्तरमुक्तं भवति।।

ಕಾರ್ಯತ್ವವೇ ಪ್ರಕೃತಿಯ ಕಾರಣತ್ವವಿಷಯದಲ್ಲಿ ಪ್ರಮಾಣವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಪ್ರಾಚೀನಮ್ ಅನುಮಾನಂತು' ಎಂಬುದರಿಂದ ಉತ್ತರಿಸುತ್ತಾರೆ. ಪೂರ್ವಪಕ್ಷಿಗಳು ಹೇಳಿದ ಕಾರ್ಯತ್ವವು ಪ್ರಮಾಣವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಪ್ರಾಚೀನಮ್' ಎಂಬುದರಿಂದ ಉತ್ತರಿಸುತ್ತಾರೆ. 'ನಾಸ್ತ್ಯೇವ' ಎಂಬುದರ ಅಭಿಪ್ರಾಯ ಹೀಗಿದೆ - ಯಾವುದೇ ದೃಷ್ಟಾಂತವಿಲ್ಲದ ಕಾರಣ ಸ್ವತಃಪ್ರವೃತ್ತಿಸಾಧಕವಾದ ಪ್ರಮಾಣವಿರುವುದಿಲ್ಲ. ಹಾಲು, ನೀರುಗಳಲ್ಲಿ ಸ್ವತಃಪ್ರವೃತ್ತಿ ಕಾಣಿಸುತ್ತಿದೆಯಲ್ಲವೇ? ಎಂಬುದನ್ನು ಮುಂದೆ ನಿರಾಕರಣೆ ಮಾಡುತ್ತೇವೆ ಎಂದು. ಹೀಗೆ ಹೇಳಿದ್ದರಿಂದ ಸೂತ್ರಕ್ಕೆ ಮತ್ತೊಂದು ಅರ್ಥವನ್ನು ಹೇಳಿದಂತಾಯಿತು. ಸಾಂಖ್ಯರು ಹೇಳಿದ ಅನುಮಾನವು ಪ್ರಮಾಣವಲ್ಲ. ಏಕೆಂದರೆ ವಿವಕ್ಷಿತಾರ್ಥ-ಸಾಧಕವಾಗಿ ಅನುಮಾನರಚನೆಯು ಅನುಪಪನ್ನವಾಗಿದೆ ಎಂದು.

**ವಿವರಣೆ** - ಕರುವಿನ ಬೆಳವಣಿಗೆಗಾಗಿ ಹಸುವಿನ ಕೆಚ್ಚಲಿನಲ್ಲಿ ಹಾಲು ಸ್ವಾಭಾವಿಕವಾಗಿ ಉತ್ಪನ್ನವಾಗುತ್ತದೆ. ಈ ಹಾಲು ಜಡವಾಗಿದೆ. ಆದರೂ ಸ್ವತಃ ಪ್ರವೃತ್ತಿವುಳ್ಳದ್ದಾಗಿ ಕಂಡಿದೆ. ಅದರಂತೆ ಪ್ರಕೃತಿಯೂ ಕೂಡ ಜಗತ್ತಿನ ಅಭಿವೃದ್ಧಿಗಾಗಿ ಸ್ವತಃಪ್ರವೃತ್ತಿಯನ್ನು ಮಾಡುತ್ತಿದೆ ಎಂದು ಹಿಂದೆ ಸಾಂಖ್ಯರು ಹೇಳಿದ್ದರು. ಈ ಹಾಲಿನ ದೃಷ್ಟಾಂತವನ್ನು ಮುಂದೆ ನಿರಾಕರಣೆ ಮಾಡುವವರಿದ್ದಾರೆ. ಆದ್ದರಿಂದ ಕೇವಲ ದೃಷ್ಟಾಂತಬಲದಿಂದ ಅಚೇತನಕ್ಕೆ ಜಗತ್-ಕಾರಣತ್ವವನ್ನು ಒಪ್ಪಲು ಸಾಧ್ಯವಾಗುವುದಿಲ್ಲ.

'ರಚನಾನುಪಪತ್ತೇಶ್ಚ ನಾನುಮಾನಂ' ಎಂಬ ಸೂತ್ರಕ್ಕೆ ಈಗ ಮಾಡಿದ ಅರ್ಥ ಹೀಗಿದೆ- ರಚನಾನುಪಪತ್ತೇಃ = ಅನುಮಾನದ ರಚನೆಯು ಅನುಪಪನ್ನವಾಗಿರುವುದರಿಂದ ಅನುಮಾನಂ = ಸಾಂಖ್ಯರು ಹೇಳಿರುವ ಅನುಮಾನವು, ನ = ಪ್ರಮಾಣವಾಗುವುದಿಲ್ಲ ಎಂದು.

## ಬ್ರಹ್ಮಸೂತ್ರ

### ब्रह्मसूत्रम् – प्रवृत्तेश्च ।।२।।

ಅಹಂ ಕರೋಮಿ = ನಾನು ಮಾಡುತ್ತೇನೆ ಇತ್ಯಾದಿಯಾಗಿ ಚೇತನರಿಗೆ ಮಾತ್ರ ಇಚ್ಛಾನುಸಾರಿಯಾದ ಪ್ರಯತ್ನವು ಅನುಭೂತವಾಗಿದೆ. ಈ ಕಾರಣದಿಂದಲೂ ಜಡಪ್ರಕೃತಿಯು ಜಗತ್ತಿಗೆ ಕಾರಣವಾಗುವುದಿಲ್ಲ.

ಅರ್ಥ -- ಪ್ರವೃತ್ತೇಶ್ಚ = 'ಅಹಂ ಕರೋಮಿ' ಎಂಬುದಾಗಿ ಚೇತನನೇ ಪ್ರವೃತ್ತಿ ಮಾಡುವುದು ಕಂಡಿರುವುದರಿಂದ ಪ್ರಧಾನವು ಜಗತ್ಕಾರಣವಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**ब्रह्मसूत्रभाष्यम् – ।। प्रवृत्तेश्च ।।२।।**

**चेतनस्य स्वतः प्रवृत्तिदर्शनाच्च ।।२।।**

ಅನುವಾದ - ಜಡವಾದ ಪ್ರಕೃತಿಗೆ ಪ್ರಯತ್ನ ಕೂಡುವುದಿಲ್ಲ. ಚೇತನರಲ್ಲಿ ಮಾತ್ರ ಪ್ರಯತ್ನ ಇರುವುದು ಕಂಡಿದೆ.

ಪ್ರತಿಪದಾರ್ಥ -- ಚೇತನಪ್ರಪಂಚಕ್ಕೆ ಮಾತ್ರ ಸ್ವತಂತ್ರಪ್ರವೃತ್ತಿ ಇದೆಯೇ ಹೊರತಾಗಿ ಜಡವಾದುದ್ದಕ್ಕೆ ಇರುವುದಿಲ್ಲ. ಈ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ. ಚೇತನಸ್ಯ = ಚೇತನರಲ್ಲಿ ಮಾತ್ರ, ಸ್ವತಃ ಪ್ರವೃತ್ತಿಃ = ಸ್ವಾಭಾವಿಕವಾದ ಪ್ರವೃತ್ತಿಯು, ದರ್ಶನಾಚ್ಚ = ಕಂಡಿರುತ್ತದೆ. ಆದ್ದರಿಂದಲೂ ಜಡಪ್ರಕೃತಿಯು ಕಾರಣವಾಗುವುದಿಲ್ಲ.

## ಸತ್ತರ್ಕದೀಪಾವಳಿ

**सत्तर्कदीपावळिः – न च कर्तृविशेषाप्रेरितात्प्रधानात् जगद्रचनानुमातुं शक्यते । दृष्टान्ताभावात् । गृहरचनावत् कर्तृविशेषाज्जगद्रचनानुमानुं शक्यते।**

ವಿಶೇಷಕರ್ತೃವಿನಿಂದ ಪ್ರೇರಿತವಾದ ಪ್ರಧಾನವು ಜಗತ್ತನ್ನು ಸೃಷ್ಟಿ ಮಾಡಿದೆ. ಹೀಗೆ ಅನುಮಾನ ಮಾಡಲು ಸಾಧ್ಯವಿಲ್ಲ. ಈ ವಿಷಯದಲ್ಲಿ ದೃಷ್ಟಾಂತವೇ ಇರುವುದಿಲ್ಲ. ಗೃಹರಚನೆಯಂತೆ ಜಗದ್‌ರಚನೆಯು ಕರ್ತೃವಿಶೇಷದಿಂದ ಆಗುತ್ತದೆಂಬುದನ್ನು ಅನುಮಾನ ಮಾಡಲಾಗದು.

## ತತ್ವಪ್ರದೀಪ

### ಅಚೇತನವು ಜಗತ್‌ಕರ್ತೃವಾಗದು

**तत्वप्रदीपः – चेतनस्यापि निर्विकारस्य न प्रवृत्तिरित्यत आह – प्रवृत्तेश्च । 'योऽहमनुभविता स एष कार्यमारभे' इति चेतनस्यैव प्रवृत्तिदर्शनाच्च नाचेतनं जगत्कर्तृ । न च दर्शनं भ्रान्तिः । विपरीतप्रमाणाभावात् ।**

ಚೇತನನಾದರೂ ಕೂಡ ನಿರ್ವಿಕಾರನಾಗಿರುವ ಕಾರಣ ಪ್ರವೃತ್ತಿಯು ಕೂಡುವುದಿಲ್ಲ ಅಲ್ಲವೇ? ಈ ಪ್ರಶ್ನೆಗೆ 'ಪ್ರವೃತ್ತೇಶ್ಚ' ಎಂಬ ಸೂತ್ರದಿಂದ ಉತ್ತರಿಸಲಾಗಿದೆ. 'ಯೋಽಹಮನುಭವಿತಾ ಸ ಏಷ ಕಾರ್ಯಮಾರಭೇ' 'ಯಾವ ನಾನು ಜ್ಞಾನವನ್ನು ಹೊಂದಿರುವೇನೋ, ಅಂಥವನೇ ಕಾರ್ಯವನ್ನು ಪ್ರಾರಂಭಿಸುತ್ತಿದ್ದೇನೆ' ಹೀಗೆ ಚೇತನನು ಇಚ್ಛೆಯನ್ನು ಪಟ್ಟು ಕಾರ್ಯಗಳಲ್ಲಿ ಪ್ರವೃತ್ತಿ ಮಾಡುವುದು ಅನುಭವಸಿದ್ಧವಾಗಿದೆ. ಆದ್ದರಿಂದ ಅಚೇತನವಾದದ್ದು ಜಗತ್ಕರ್ತೃ ಆಗಲು ಸಾಧ್ಯವಿಲ್ಲ. ವಿನಾಕಾರಣ ಈ ಚೇತನನ ಅನುಭವವನ್ನು ಭ್ರಾಂತಿ ಎಂದು ಹೇಳಬಾರದು. ಭ್ರಾಂತಿಯೆನ್ನಬೇಕಾದರೆ ವಿಪರೀತಪ್ರಮಾಣ ಇರಬೇಕು. ಆದರೆ ವಿಪರೀತಪ್ರಮಾಣ ಇರುವುದಿಲ್ಲ.

ವಿವರಣೆ - ಸಾಂಖ್ಯರು ಜಗತ್ತಿನ ಪ್ರವೃತ್ತಿಯು ಅಚೇತನವಾದ ಪ್ರಕೃತಿಯಿಂದಲೇ ಆಗುತ್ತದೆಂದು ಹೇಳುತ್ತಾರೆ. ಅಚೇತನದಿಂದಲೇ ಜಗತ್ತಿನ ಸೃಷ್ಟ್ಯಾದಿಗಳು ನಡೆಯಲು ಸಾಧ್ಯವಿರುವಾಗ ಚೇತನವನ್ನು ಒಪ್ಪುವ ಅವಶ್ಯಕತೆಯೇ ಇಲ್ಲ. ಸಾಂಖ್ಯರ ಪರಿಕಲ್ಪನೆಯನ್ನು 'ಪ್ರವೃತ್ತೇಶ್ಚ' ಎಂಬ ಸೂತ್ರದಲ್ಲಿ ನಿರಾಕರಿಸಲಾಗಿದೆ. ಪ್ರತಿಯೊಂದು ಕಾರ್ಯಗಳು ಪ್ರಾರಂಭವಾಗುವುದು ಚೇತನನಿಂದಲೇ ಹೊರತು, ಜಡದಿಂದ ಅಲ್ಲ. ಈ ವಿಷಯದಲ್ಲಿ ಅನುಭವವೇ ಪ್ರಮಾಣವಾಗಿದೆ. ಅನುಭವವಿರುವುದರಿಂದ ಪ್ರತಿಯೊಂದು ಕಾರ್ಯಗಳು ಚೇತನನಿಂದಲೇ ಆಗುತ್ತವೆ. ಆದ್ದರಿಂದ ಅಚೇತನವಾದದ್ದು ಜಗತ್ಕರ್ತೃವಾಗುವುದಿಲ್ಲ. ಚೇತನನ ಈ ಅನುಭವವನ್ನು ಭ್ರಾಂತಿಯೆನ್ನಬೇಕಾದರೆ ಬಾಧಜ್ಞಾನವು ಉತ್ತರಕಾಲದಲ್ಲಿ ಬರಬೇಕು. ಆದರೆ ಬಾಧಜ್ಞಾನ ಬರುತ್ತಿಲ್ಲ.

ಪ್ರಾಭಾಕರರಂತೆ ಸಾಂಖ್ಯರೂ ಕೂಡ ಅಖ್ಯಾತವಾದವನ್ನು ಸಮರ್ಥಿಸುತ್ತಾರೆ

**तत्वप्रदीपः – स्यादेतत्, चेतने प्रवृत्तिर्न दृश्यते । अचेतनादेव कर्तृणो विवेकाग्रहनिबन्धनश्चेतने कर्ताऽस्मीति व्यवहारः । इदं रजतमिति व्यवहारवत्। न हि शुक्तिकामाददानोऽपि रजतार्थी शुक्तिकां रजतमवैति । चक्षुस्सम्प्रयुक्ताया शुक्तिकाया इदमिति सामान्यतः प्रतीयमानाया दोषादगृह्यमाण-विशेषायास्सादृश्याद्रजतमिति स्मर्यमाणाद्रजताद्भेदं न गृह्णाति परम् । अत इदं रजतमिति व्यवहरति, उपादत्ते च तां रजतार्थी । न च भेदस्य वस्तुस्वरूपत्वेन**

## ಬ್ರಹ್ಮಸೂತ್ರಭಾಷ್ಯ

**ब्रह्मसूत्रभाष्यम् – ।। प्रवृत्तेश्च ।।२।।**

**चेतनस्य स्वतः प्रवृत्तिदर्शनाच्च ।।२।।**

ಅನುವಾದ - ಜಡವಾದ ಪ್ರಕೃತಿಗೆ ಪ್ರಯತ್ನ ಕೂಡುವುದಿಲ್ಲ. ಚೇತನರಲ್ಲಿ ಮಾತ್ರ ಪ್ರಯತ್ನ ಇರುವುದು ಕಂಡಿದೆ.

ಪ್ರತಿಪದಾರ್ಥ -- ಚೇತನಪ್ರಪಂಚಕ್ಕೆ ಮಾತ್ರ ಸ್ವತಂತ್ರಪ್ರವೃತ್ತಿ ಇದೆಯೇ ಹೊರತಾಗಿ ಜಡವಾದುದ್ದಕ್ಕೆ ಇರುವುದಿಲ್ಲ. ಈ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ. ಚೇತನಸ್ಯ = ಚೇತನರಲ್ಲಿ ಮಾತ್ರ, ಸ್ವತಃ ಪ್ರವೃತ್ತಿಃ = ಸ್ವಾಭಾವಿಕವಾದ ಪ್ರವೃತ್ತಿಯು, ದರ್ಶನಾಚ್ಚ = ಕಂಡಿರುತ್ತದೆ. ಆದ್ದರಿಂದಲೂ ಜಡಪ್ರಕೃತಿಯು ಕಾರಣವಾಗುವುದಿಲ್ಲ.

## ಸತ್ತರ್ಕದೀಪಾವಳಿ

**सत्तर्कदीपावळिः – न च कर्तृविशेषाप्रेरितात्प्रधानात् जगद्रचनानुमातुं शक्यते । दृष्टान्ताभावात् । गृहरचनावत् कर्तृविशेषाज्जगद्रचनानुमानं शक्यते।**

ವಿಶೇಷಕರ್ತೃವಿನಿಂದ ಪ್ರೇರಿತವಾದ ಪ್ರಧಾನವು ಜಗತ್ತನ್ನು ಸೃಷ್ಟಿ ಮಾಡಿದೆ. ಹೀಗೆ ಅನುಮಾನ ಮಾಡಲು ಸಾಧ್ಯವಿಲ್ಲ. ಈ ವಿಷಯದಲ್ಲಿ ದೃಷ್ಟಾಂತವೇ ಇರುವುದಿಲ್ಲ. ಗೃಹರಚನೆಯಂತೆ ಜಗದ್‌ರಚನೆಯು ಕರ್ತೃವಿಶೇಷದಿಂದ ಆಗುತ್ತದೆಂಬುದನ್ನು ಅನುಮಾನ ಮಾಡಲಾಗದು.

## ತತ್ವಪ್ರದೀಪ

### ಅಚೇತನವು ಜಗತ್‌ಕರ್ತೃವಾಗದು

**तत्वप्रदीपः – चेतनस्यापि निर्विकारस्य न प्रवृत्तिरित्यत आह – प्रवृत्तेश्च । 'योऽहमनुभविता स एष कार्यमारभे' इति चेतनस्यैव प्रवृत्तिदर्शनाच्च नाचेतनं जगत्कर्तृ । न च दर्शनं भ्रान्तिः । विपरीतप्रमाणाभावात् ।**

ಚೇತನನಾದರೂ ಕೂಡ ನಿರ್ವಿಕಾರನಾಗಿರುವ ಕಾರಣ ಪ್ರವೃತ್ತಿಯು ಕೂಡುವುದಿಲ್ಲ ಅಲ್ಲವೇ? ಈ ಪ್ರಶ್ನೆಗೆ 'ಪ್ರವೃತ್ತೇಶ್ಚ' ಎಂಬ ಸೂತ್ರದಿಂದ ಉತ್ತರಿಸಲಾಗಿದೆ. 'ಯೋಽಹಮನುಭವಿತಾ ಸ ಏಷ ಕಾರ್ಯಮಾರಭೇ' 'ಯಾವ ನಾನು ಜ್ಞಾನವನ್ನು ಹೊಂದಿರುವೇನೋ, ಅಂಥವನೇ ಕಾರ್ಯವನ್ನು ಪ್ರಾರಂಭಿಸುತ್ತಿದ್ದೇನೆ' ಹೀಗೆ ಚೇತನನು ಇಚ್ಛೆಯನ್ನು ಪಟ್ಟು ಕಾರ್ಯಗಳಲ್ಲಿ ಪ್ರವೃತ್ತಿ ಮಾಡುವುದು ಅನುಭವಸಿದ್ಧವಾಗಿದೆ. ಆದ್ದರಿಂದ ಅಚೇತನವಾದದ್ದು ಜಗತ್ಕರ್ತೃ ಆಗಲು ಸಾಧ್ಯವಿಲ್ಲ. ವಿನಾಕಾರಣ ಈ ಚೇತನನ ಅನುಭವವನ್ನು ಭ್ರಾಂತಿ ಎಂದು ಹೇಳಬಾರದು. ಭ್ರಾಂತಿಯೆನ್ನಬೇಕಾದರೆ ವಿಪರೀತಪ್ರಮಾಣ ಇರಬೇಕು. ಆದರೆ ವಿಪರೀತಪ್ರಮಾಣ ಇರುವುದಿಲ್ಲ.

ವಿವರಣೆ - ಸಾಂಖ್ಯರು ಜಗತ್ತಿನ ಪ್ರವೃತ್ತಿಯು ಅಚೇತನವಾದ ಪ್ರಕೃತಿಯಿಂದಲೇ ಆಗುತ್ತದೆಂದು ಹೇಳುತ್ತಾರೆ. ಅಚೇತನದಿಂದಲೇ ಜಗತ್ತಿನ ಸೃಷ್ಟ್ಯಾದಿಗಳು ನಡೆಯಲು ಸಾಧ್ಯವಿರುವಾಗ ಚೇತನವನ್ನು ಒಪ್ಪುವ ಅವಶ್ಯಕತೆಯೇ ಇಲ್ಲ. ಸಾಂಖ್ಯರ ಪರಿಕಲ್ಪನೆಯನ್ನು 'ಪ್ರವೃತ್ತೇಶ್ಚ' ಎಂಬ ಸೂತ್ರದಲ್ಲಿ ನಿರಾಕರಿಸಲಾಗಿದೆ. ಪ್ರತಿಯೊಂದು ಕಾರ್ಯಗಳು ಪ್ರಾರಂಭವಾಗುವುದು ಚೇತನನಿಂದಲೇ ಹೊರತು, ಜಡದಿಂದ ಅಲ್ಲ. ಈ ವಿಷಯದಲ್ಲಿ ಅನುಭವವೇ ಪ್ರಮಾಣವಾಗಿದೆ. ಅನುಭವವವಿರುವುದರಿಂದ ಪ್ರತಿಯೊಂದು ಕಾರ್ಯಗಳು ಚೇತನನಿಂದಲೇ ಆಗುತ್ತವೆ. ಆದ್ದರಿಂದ ಅಚೇತನವಾದದ್ದು ಜಗತ್ಕರ್ತೃವಾಗುವುದಿಲ್ಲ. ಚೇತನನ ಈ ಅನುಭವವನ್ನು ಭ್ರಾಂತಿಯೆನ್ನಬೇಕಾದರೆ ಬಾಧಜ್ಞಾನವು ಉತ್ತರಕಾಲದಲ್ಲಿ ಬರಬೇಕು. ಆದರೆ ಬಾಧಜ್ಞಾನ ಬರುತ್ತಿಲ್ಲ.

ಪ್ರಾಭಾಕರರಂತೆ ಸಾಂಖ್ಯರೂ ಕೂಡ ಅಖ್ಯಾತವಾದವನ್ನು ಸಮರ್ಥಿಸುತ್ತಾರೆ

**तत्वप्रदीपः – स्यादेतत्, चेतने प्रवृत्तिर्न दृश्यते । अचेतनादेव कर्तृणो विवेकाग्रहनिबन्धनश्चेतने कर्ताऽस्मीति व्यवहारः । इदं रजतमिति व्यवहारवत्। न हि शुक्तिकामाददानोऽपि रजतार्थी शुक्तिकां रजतमवैति । चक्षुस्सम्प्रयुक्ताया शुक्तिकाया इदमिति सामान्यतः प्रतीयमानाया दोषादगृह्यमाण-विशेषायास्सादृश्याद्रजतमिति स्मर्यमाणाद्रजताद्भेदं न गृह्णाति परम् । अत इदं रजतमिति व्यवहरति, उपादत्ते च तां रजतार्थी । न च भेदस्य वस्तुस्वरूपत्वेन**

**तद्ग्रहेऽग्रहासम्भव इति वाच्यम् । स्वरूपस्यापि तस्य दोषाद्ग्रहणप्रतिबन्धात्। यच्चाभेदग्रहकारणमपरे मन्यन्ते तद्भेदाग्रहकारणं ब्रूमः । न च विना भेदग्रहात् (भदोग्रहात्) अभेदग्रहस्तेषामपीति लघ्वीयं कल्पनेति ।**

ಸಾಂಖ್ಯರು - ಚೇತನದಲ್ಲಿ ಪ್ರವೃತ್ತಿ ಕಾಣಿಸುವುದಿಲ್ಲ. ಕರ್ತೃತ್ವವಿರುವುದು ಅಚೇತನದಲ್ಲೇ ಹೊರತು, ಚೇತನದಲ್ಲಲ್ಲ. ವಿವೇಕಾಗ್ರಹದಿಂದ ಅಚೇತನದ ಜೊತೆ ಭೇದಜ್ಞಾನವಿಲ್ಲದೇ ಚೇತನನಿಗೆ 'ಅಹಂ ಕರ್ತಾ' ಎಂಬ ವ್ಯವಹಾರವು ಉಂಟಾಗಿದೆ. 'ಇದಂ ರಜತಂ' ಎಂಬ ವ್ಯವಹಾರವು ಈ ವಿಷಯದಲ್ಲಿ ಉದಾಹರಣೆಯಾಗಿದೆ.

ಶುಕ್ತಿಯನ್ನು ಸ್ವೀಕರಿಸಲು ತೆರಳುವವನಾದರೂ ರಜತಾರ್ಥಿಯಾಗಿದ್ದಾನೆ. ಅವನು ಶುಕ್ತಿಯನ್ನು ರಜತಾಭಿನ್ನವೆಂದು ಸರ್ವಥಾ ತಿಳಿಯಲಾರ. ಮತ್ತೇನೆಂದರೆ ರಜತದಿಂದ ಭೇದಜ್ಞಾನವನ್ನಷ್ಟೇ ಅವನು ಹೊಂದಿರುವುದಿಲ್ಲ. ಶುಕ್ತಿಯು ಚಕ್ಷುಃಸಂಪ್ರಯುಕ್ತವಾಗಿದೆ. ಅದನ್ನು ಕೇವಲ 'ಇದಂ' ಎಂದಷ್ಟೇ ತಿಳಿಯುತ್ತಾನೆ. ದೂರಸ್ಥತ್ವ ಚಾಕಚಕ್ಯ ಮೊದಲಾದ ದೋಷಗಳಿಂದ ಶುಕ್ತಿಯಲ್ಲಿರುವ ಶುಕ್ತಿತ್ವವೆಂಬ ಕ್ರಮವನ್ನು ಅವನು ತಿಳಿದಿರುವುದಿಲ್ಲ. ಸಾದೃಶ್ಯವಿರುವ ಪ್ರಯುಕ್ತ ರಜತವನ್ನು ಸ್ಮರಣೆ ತಂದುಕೊಳ್ಳುತ್ತಾನೆ. ಸ್ಮರ್ಯಮಾಣವಾದ ರಜತದಿಂದ ಭೇದಜ್ಞಾನವನ್ನು ಇವನು ಹೊಂದಿರುವುದಿಲ್ಲ. ಆದ್ದರಿಂದ 'ಇದಂ ರಜತಂ' ಎಂಬುದಾಗಿ ವ್ಯವಹರಿಸುತ್ತಾನೆ. ಮತ್ತು ರಜತವನ್ನು ಸ್ವೀಕರಿಸಲು ಮುಂದುವರೆಯುತ್ತಾನೆ.

ಭೇದವು ವಸ್ತುಸ್ವರೂಪಿಯಾದ್ದರಿಂದ 'ಇದಂ' ಪದಾರ್ಥದ ಜ್ಞಾನವು ಪ್ರಾಪ್ತವಾದರೆ, ರಜತಭೇದಜ್ಞಾನವೂ ಕೂಡ ಪ್ರಾಪ್ತವಾಗುತ್ತದೆ. ಹೀಗಿರುವಾಗ ರಜತಭೇದಜ್ಞಾನವು ಬಂದಿರುವುದಿಲ್ಲ ಎಂಬುದು ಹೇಗೆ ಸರಿ ? ಹೀಗೆ ಪ್ರಶ್ನಿಸಬಾರದು. ಭೇದವು ವಸ್ತುಸ್ವರೂಪಿಯಾಗಿದ್ದರೂ ಕೂಡ ದೋಷದಿಂದಾಗಿ ಆ ಭೇದಜ್ಞಾನವು ಪ್ರತಿಬದ್ಧವಾಗಿದೆ.

ಅನ್ಯಥಾಖ್ಯಾತಿವಾದಿಗಳು (ವೇದಾಂತಿಗಳು) 'ಇದಂ ರಜತಂ' ಎಂಬ ವ್ಯವಹಾರಕ್ಕೆ ರಜತಾಭೇದಜ್ಞಾನವೇ ಕಾರಣವೆಂದು ಹೇಳುತ್ತಾರೆ. ಇವರು ಅಭೇದಜ್ಞಾನಕ್ಕೆ ಯಾವುದನ್ನು ಕಾರಣವೆಂದು ಹೇಳುತ್ತಾರೋ, ಅದನ್ನೇ ನಾವು ಭೇದ ಅಗ್ರಹಕ್ಕೆ ಕಾರಣ ಎಂದು ಹೇಳುತ್ತೇವೆ. ಮತ್ತು ರಜತಾಭೇದಜ್ಞಾನವು 'ಇದಂ ರಜತಂ' ಎಂಬ ವ್ಯವಹಾರಕ್ಕೆ ಕಾರಣವೆಂದು

ಹೇಳುವವರು, ರಜತಭೇದಜ್ಞಾನವಿಲ್ಲವೆಂಬುದನ್ನು ಒಪ್ಪಲೇಬೇಕು. ಆದ್ದರಿಂದ ಭೇದ ಅಗ್ರಹವು ಕಾರಣವೆಂದು ಹೇಳುವ ಮುಖಾಂತರ ಅಭೇದಜ್ಞಾನವು ಕಾರಣವೆಂದು ಅನ್ಯಥಾಖ್ಯಾತಿವಾದಿಗಳು ಹೇಳಬೇಕು. ಇದು ಗೌರವಗ್ರಸ್ತವಾಗಿದೆ. ಇದರಿಂದ ಭೇದ ಅಗ್ರಹವೇ 'ಇದಂ ರಜತಂ' ಎಂಬ ವ್ಯವಹಾರಕ್ಕೆ ಕಾರಣವೆಂದು ಹೇಳುವುದು ಲಾಘವವಾಗಿದೆ.

ವಿವರಣೆ - ಸಾಂಖ್ಯರ ಆಕ್ಷೇಪ - ಚೇತನದಲ್ಲಿ ಪ್ರವೃತ್ತಿಯು ಕಾಣಿಸುವುದೇ ಇಲ್ಲ. ನಿಜವಾಗಿಯೂ ಕೂಡ ಅಚೇತನದಲ್ಲೇ ಪ್ರವೃತ್ತಿ ಇರುತ್ತದೆ. ಚೇತನನಿಗೆ ಆ ಚೇತನದಿಂದ ಭೇದಜ್ಞಾನವಾಗುತ್ತಿಲ್ಲ. ಘಟಪಟಾದಿಗಳ ಸೃಷ್ಟಿಯನ್ನು ಶರೀರ, ಇಂದ್ರಿಯ ಮೊದಲಾದ ಅಚೇತನಪದಾರ್ಥಗಳೇ ಮಾಡುತ್ತವೆ. ಈ ಶರೀರೇಂದ್ರಿಯಾದಿಗಳಿಂದ ಭೇದಜ್ಞಾನವಿಲ್ಲದೇ ಚೇತನನು 'ಅಹಂ ಕರ್ತಾ' ಎಂಬುದಾಗಿ ವ್ಯವಹರಿಸುತ್ತಾನೆ. ಉದಾಹರಣೆ - ಶುಕ್ತಿಯನ್ನು ಶುಕ್ತಿಯೆಂದು ವ್ಯವಹರಿಸದೇ, ರಜತವೆಂದು ವ್ಯವಹರಿಸುವಂತೆ ಭೇದಜ್ಞಾನವಿಲ್ಲದೇ ಜಡವನ್ನೇ ಚೇತನ ಎಂಬುದಾಗಿ ವ್ಯವಹರಿಸುತ್ತಾರೆ. ಶುಕ್ತಿಯನ್ನೇ ರಜತ ಎಂದು ಅವನು ತಿಳಿದಿಲ್ಲ. ಆದರೆ ಶುಕ್ತಿಗೂ, ರಜತಕ್ಕೂ ಇರುವ ಭೇದಜ್ಞಾನವನ್ನು ಹೊಂದಿರುವುದಿಲ್ಲ. ಆದ್ದರಿಂದ ಶುಕ್ತಿಯನ್ನು ರಜತಾಭಿನ್ನವೆಂದು ನೋಡುವವನು ತಿಳಿದಿರುವುದಿಲ್ಲ. ಶುಕ್ತಿಯು ಚಕ್ಷುಃಸನ್ನಿಕರ್ಷವಾಗಿದೆ. ಅದು 'ಇದಂ' ಎಂಬುದಾಗಿ ಸಾಮಾನ್ಯತಃ ಪ್ರತೀತವಾಗಿದೆ. ದೂರತಸ್ಥತ್ವ ಮೊದಲಾದ ದೋಷಗಳಿಂದ ಅದರಲ್ಲಿರುವ ಶುಕ್ತಿತ್ವ ಮೊದಲಾದ ಧರ್ಮಗಳು ಪ್ರತೀತವಾಗುತ್ತಿಲ್ಲ. ಇಂಥ ಶುಕ್ತಿಯನ್ನು ನೋಡಿದಾಗ ಸಂಸ್ಕಾರೋದ್ಬೋಧಕ್ರಮದಿಂದ ರಜತವು ಸ್ಮರ್ಯಮಾಣವಾಗಿದೆ. ಸ್ಮರ್ಯಮಾಣವಾದ ಆ ರಜತದಿಂದ ಭೇದಜ್ಞಾನವನ್ನು ಇವನು ಹೊಂದಿರುವುದಿಲ್ಲ. ಆದ್ದರಿಂದ 'ಇದಂ ರಜತಂ' ಎಂಬುದಾಗಿ ವ್ಯವಹರಿಸುತ್ತಾನೆ. ಮತ್ತು ಅದನ್ನು ಸ್ವೀಕರಿಸಲು ಮುಂದಾಗುತ್ತಾನೆ.

ಭೇದವು ವಸ್ತುಸ್ವರೂಪವಾದ್ದರಿಂದ ಇದಂ ಪದಾರ್ಥದ ಜ್ಞಾನವು ಬಂದಾಗ ರಜತದ ಭೇದಜ್ಞಾನವೂ ಕೂಡ ಬರಬೇಕಾದೀತು ? ಎಂದು ಪ್ರಶ್ನಿಸಬಾರದು. ಭೇದವು ವಸ್ತುಸ್ವರೂಪವಾಗಿದ್ದರೂ ದೋಷಪ್ರಯುಕ್ತವಾಗಿ ರಜತಭೇದ ಜ್ಞಾನವು ಬರುತ್ತಿಲ್ಲ. ಅನ್ಯಥಾಖ್ಯಾತಿವಾದಿಗಳಾದ ದ್ವೈತಸಿದ್ಧಾಂತದವರು, ತಾರ್ಕಿಕರು ಮತ್ತು ಅಭೇದಜ್ಞಾನಕ್ಕೆ ಯಾವುದನ್ನು ಕಾರಣ ಎಂಬುದಾಗಿ ಹೇಳುತ್ತಾರೋ ಅದೆಲ್ಲವನ್ನು ನಾವು ಭೇದ ಅಗ್ರಹಕ್ಕೆ ಕಾರಣವೆಂದು ಹೇಳುತ್ತೇವೆ. ಸಾದೃಶ್ಯ ಮೊದಲಾದ ದೋಷಗಳು ಅನ್ಯದನ್ಯಾತ್ಮನಾ ತೋರುವಂಥ ಅವಿದ್ಯಮಾನವಾದ ಅಭೇದಪ್ರತೀತಿಗೆ ಕಾರಣವೆಂದು ನೀವು ಯಾವುದನ್ನು

ಹೇಳುವಿರೋ, ಅದನ್ನೇ ನಾವು ಭೇದ ಅಗ್ರಹಕ್ಕೆ ಕಾರಣವೆಂದು ಹೇಳುತ್ತೇವೆ. ಮತ್ತು ಅಭೇದಜ್ಞಾನವೇ 'ಇದಂ ರಜತಂ' ಎಂಬ ವ್ಯವಹಾರಕ್ಕೆ ಕಾರಣ ಎನ್ನುವುದಾದರೆ ಭೇದ ಅಗ್ರಹವನ್ನು ಒಪ್ಪಲೇಬೇಕು. ಅದಕ್ಕಿಂತ ನೇರವಾಗಿ ಭೇದ ಅಗ್ರಹವನ್ನೇ ಕಾರಣವೆಂದು ಹೇಳುವುದು ಲಘುಕಲ್ಪನೆಯಾಗಿದೆ. ಇಷ್ಟು ಸಾಂಖ್ಯರ ಆಕ್ಷೇಪ.

ಗಮನಿಸಬೇಕಾದ ಅಂಶ - ಪ್ರಾಭಾಕರರು ಅಖ್ಯಾತವಾದಿಗಳು ಅವರಂತೆಯೇ ಸಾಂಖ್ಯರೂ ಕೂಡ ಅಖ್ಯಾತವಾದವನ್ನು ಇಲ್ಲಿ ಸಮರ್ಥಿಸಿದ್ದಾರೆ. ಅದನ್ನು ಪಂಡಿತಾಚಾರ್ಯರು ವಿವರವಾಗಿ ನಿರಾಕರಣೆ ಮಾಡುತ್ತಿದ್ದಾರೆ.

'ನ ಚ ವಿನಾ ಭೇದಗ್ರಹಾತ್ ಅಭೇದಗ್ರಹಃ ತೇಷಾಮಪೀತಿ ಲಘ್ವೀಯಂ ಕಲ್ಪನಾ ಇತಿ' ಎಂಬುದಾಗಿ ಎಲ್ಲಾ ಮುದ್ರಿತ ಪುಸ್ತಕಗಳಲ್ಲಿ ಪಾಠ ಕಾಣಿಸುತ್ತಿದೆ. ಈ ವಾಕ್ಯಕ್ಕೆ ಭೇದಜ್ಞಾನವನ್ನು ಒಪ್ಪದೇ ಅಭೇದಜ್ಞಾನವನ್ನು ಸಮರ್ಥಿಸಲು ಸಾಧ್ಯವಿಲ್ಲ. ಆದ್ದರಿಂದ ಅಭೇದಜ್ಞಾನವೇ ಭ್ರಾಂತಿಗೆ ಕಾರಣವೆಂದು ಯಾರು ಹೇಳುತ್ತಾರೋ, ಅವರಿಗೆ ಗೌರವದೋಷವು ಬರುತ್ತದೆ. ಭೇದ ಅಗ್ರಹವು ಕಾರಣವೆಂದು ಹೇಳುವ ಸಾಂಖ್ಯರಿಗೆ ಲಾಘವವಿದೆ ಎಂಬುದಾಗಿ ಅರ್ಥ. ಆದರೆ 'ನ ಚ ವಿನಾ ಭೇದಾಗ್ರಹಾತ್ ಅಭೇದಗ್ರಹಃ ತೇಷಾಮಪೀತಿ ಲಘ್ವೀಯಂ ಕಲ್ಪನಾ' ಎಂಬ ಪಾಠವನ್ನು ಇಟ್ಟುಕೊಳ್ಳಬೇಕೆಂದು ಅನಿಸುತ್ತಿದೆ. ಹೀಗೆ ಭೇದಗ್ರಹಾತ್ ಎಂಬುದನ್ನು ಭೇದ ಅಗ್ರಹಾತ್' ಎಂಬುದಾಗಿ ತಿದ್ದಿಕೊಂಡು ಓದಿದಾಗ ಹೀಗರ್ಥ - ಅಭೇದಜ್ಞಾನವು ಕಾರಣವೆಂದು ಹೇಳುವವರೂ ಕೂಡ ಭೇದ ಅಗ್ರಹವನ್ನು ಒಪ್ಪಲೇ ಬೇಕು. ಆದ್ದರಿಂದ ಅಭೇದಜ್ಞಾನವು ಕಾರಣವೆಂದು ಹೇಳುವವರಿಗೆ ಗೌರವದೋಷ ಬರುತ್ತದೆ ಎಂದರ್ಥವಾಗುತ್ತದೆ. ಈ ಪಕ್ಷವು ಸುಧಾದಲ್ಲಿ ಹೇಳಲ್ಪಟ್ಟಿದೆ. ಮತ್ತು ಹಿಂದಿನ ಪಕ್ಷಕ್ಕಿಂತ ಹೆಚ್ಚಿನ ಸ್ವಾರಸ್ಯ ಇದರಲ್ಲಿ ಕಾಣಿಸುತ್ತದೆ. ಈ ವಾಕ್ಯದ ಅರ್ಥದ ಬಗ್ಗೆ ವಿದ್ವಾಂಸರು ಇನ್ನೂ ವಿಚಾರ ಮಾಡಬೇಕು.[೧]

---

(೧) ರಚನಾನುಪಪತ್ತ್ಯಧಿಕರಣದ 'ಪ್ರವೃತ್ತೇಶ್ಚ' ಎಂಬ ಸೂತ್ರಕ್ಕೆ ಪಂಡಿತಾಚಾರ್ಯರು ಬರೆದಿರುವ ತತ್ತ್ವಪ್ರದೀಪ ಭಾಗವು ಅತ್ಯಂತ ಕಠಿಣವಾಗಿದೆ. ವಿದ್ವಾಂಸರ ಬಳಿ ಚರ್ಚಿಸಿ, ಇಲ್ಲಿ ಅನುವಾದವನ್ನು ಮಾಡಲಾಗಿದೆ. ಆದರೂ ಕೂಡ ಕೆಲವೊಂದು ವಾಕ್ಯಗಳಿಗೆ ಅರ್ಥ ಹೇಳುವುದು ಸುಲಭವಲ್ಲ. ಇದನ್ನು ಅಧ್ಯಯನ ಮಾಡುವವರು ಪುನಃ ಪುನಃ ವಿಮರ್ಶೆಯನ್ನು ಮಾಡಿ, ವಿದ್ವಾಂಸರ ಬಳಿ ಚರ್ಚಿಸಿ, ಅನಂತರ ಮೂಲಪಂಕ್ತಿಯ ಅರ್ಥವನ್ನು ಮನದಟ್ಟು ಮಾಡಿಕೊಳ್ಳಬೇಕು.

## ಗುರೂಪಾಸನೆ ಇಲ್ಲದವರಿಗೆ ಜ್ಞಾನ ದೊರಕದು

**तत्वप्रदीपः – तदप्यनुपासितगुरुभिरेवोत्प्रेक्षितमवभाति । हन्तेयं शुक्तिरियन्तं कालं रजतमिति प्रत्यभादिति बाधोत्तरकालं परामर्शदर्शनात् । तत्कालेऽपि नेदं रजतमिति परोपदेशे रजतमित्येव प्रतिभातीत्यनुभावात् । अनुभवस्य भ्रमत्वकल्पने भ्रमाङ्गीकारो भ्रमे अभ्रमत्वकल्पनमिति (भ्रमत्वकल्पनमिति) दोषद्वयापातः।**

ಸಾಂಖ್ಯರ ಈ ಎಲ್ಲಾ ವಿಚಾರಗಳು ಗುರುಗಳ ಉಪಾಸನೆ ಇಲ್ಲದೇ ಪ್ರಾಪ್ತವಾಗಿರುವ ವಿಪರೀತಜ್ಞಾನವಾಗಿದೆ. ಎಲ್ಲವೂ ಉತ್ಪ್ರೇಕ್ಷಿತವಾಗಿದೆ ಎಂದು ತಿಳಿಯುತ್ತಿದೆ. 'ಅಯ್ಯೋ ! ಇಲ್ಲಿಯ ತನಕ ಈ ಶುಕ್ತಿಯನ್ನು ರಜತ ಎಂದು ತಿಳಿದುಬಿಟ್ಟಿದ್ದೆ' ಎಂಬುದಾಗಿ ಬಾಧೋತ್ತರಕಾಲದಲ್ಲಿ ಪರಮರ್ಶ ಬರುವುದು ಕಾಣಿಸುತ್ತಿದೆ. ಭ್ರಮಕಾಲದಲ್ಲೂ ಕೂಡ ಯಾರಾದರೂ 'ಇದು ರಜತ ಅಲ್ಲ' ಎಂದು ಉಪದೇಶ ಮಾಡಿದರೂ ಕೂಡ ಭ್ರಾಂತಿ ಬಂದಿರುವವನು ಅದನ್ನು ಒಪ್ಪುವುದಿಲ್ಲ. ನನಗೆ ರಜತ ಜ್ಞಾನವೇ ಬರುತ್ತಿದೆ ಎಂಬ ಅನುಭವವಿದೆ ಎನ್ನುತ್ತಾನೆ. ಈ ಅನುಭವವನ್ನೇ 'ಭ್ರಮೆ' ಎಂದು ಹೇಳಿದರೆ ಭ್ರಮವನ್ನು ಒಪ್ಪುವುದಿಲ್ಲ ಎಂದು ಹೇಳಿ, ಈಗ ಭ್ರಮೆಯನ್ನು ಒಪ್ಪಿದಂತಾಯಿತು. ಮತ್ತು ಅಭ್ರಮವನ್ನು ಭ್ರಮೆ ಎಂದು ಕಲ್ಪನೆ ಮಾಡಿದಂತಾಯಿತು. ಹೀಗೆ ಎರಡು ದೋಷವು ಪ್ರಾಪ್ತವಾಗುತ್ತದೆ.

ವಿವರಣೆ - ಶುಕ್ತಿಯಲ್ಲಿ ರಜತಾಭೇದವೇ ತಿಳಿಯುತ್ತಿದೆ ಎಂಬುದು ಎಲ್ಲರ ಅನುಭವಸಿದ್ಧವಾಗಿದೆ. ಇಷ್ಟಾದರೂ ಸಾಂಖ್ಯರಿಗೆ ಇದು ಅರ್ಥವಾಗುತ್ತಿಲ್ಲ ಎಂದರೆ ಗುರುಗಳ ಉಪಾಸನೆಯಿಲ್ಲದೇ ಪ್ರಾಪ್ತವಾಗಿರುವ ಕೇವಲ ವಿಪರೀತಜ್ಞಾನ. ಪ್ರತಿಯೊಬ್ಬರಿಗೂ ಬಾಧೋತ್ತರಕಾಲದಲ್ಲಿ ಶುಕ್ತಿಯನ್ನು ರಜತವೆಂದೇ ತಿಳಿದುಬಿಟ್ಟಿದ್ದೇ ಎಂಬ ಅರಿವು ಬರುತ್ತಿದೆ. ಯಾರಾದರೂ ಭ್ರಾಂತಿಕಾಲದಲ್ಲಿ 'ಇದು ನಿಮಗೆ ತೋರುತ್ತಿರುವುದು ರಜತವಲ್ಲ ಕೇವಲ ಈ ವಸ್ತುವಿನಲ್ಲಿ ರಜತಭೇದವಿಲ್ಲ ಎಂದಷ್ಟೇ ಎಂದು ತಿಳಿದುಕೋ' ಎಂದು ಹೇಳಿದರೆ ಭ್ರಾಂತಿ ಬಂದಿರುವವನು ಸರ್ವಥಾ ಒಪ್ಪಲಾರ. ನನಗೆ ರಜತವೆಂದೇ ಕಾಣಿಸುತ್ತಿದೆ ಎಂದೇ ತನ್ನನ್ನು ಸಮರ್ಥಿಸುತ್ತಾನೆ. ಈ ಅನುಭವದಿಂದ ಮತ್ತು ವ್ಯವಹಾರದಿಂದ ಭ್ರಾಂತಿಕಾಲದಲ್ಲಿ ರಜತಾಭೇದಜ್ಞಾನವೇ ಬಂದಿರುತ್ತದೆಂದು ನಿರ್ಣಯವಾಗುತ್ತದೆ. ಇಷ್ಟಾದರೂ ಅವನ

ಅನುಭವವನ್ನು ಭ್ರಮೆ ಎಂದು ಕಲ್ಪನೆ ಮಾಡಿದರೆ ನೀವೂ ಕೂಡ ಅನ್ಯಥಾಖ್ಯಾತವಾದಿಗಳಂತೆ ಭ್ರಮೆಯನ್ನು ಒಪ್ಪಿದಂತಾಯಿತು. ಮತ್ತು ಅಭ್ರಮವನ್ನು ಭ್ರಮೆ ಎಂದು ಒಪ್ಪಿದಂತಾಯಿತು.

ಗಮನಿಸಬೇಕಾದ ಅಂಶ - 'ಅನುಭವಸ್ಯ ಭ್ರಮತ್ವಕಲ್ಪನೇ ಭ್ರಮಾಂಗೀಕಾರೋ ಭ್ರಮೇ ಭ್ರಮತ್ವಕಲ್ಪನಮಿತಿ ದೋಷದ್ವಯಾಪಾತಃ' ಎಂಬ ಪಾಠವು ಎಲ್ಲ ಪುಸ್ತಕಗಳಲ್ಲಿ ಕಾಣಿಸುತ್ತದೆ. ಆದರೆ 'ಭ್ರಮೆ ಅಭ್ರಮತ್ವ ಕಲ್ಪನಂ' ಎಂಬ ಪಾಠವನ್ನು ವಿವಕ್ಷಿಸುವುದು ಸೂಕ್ತ ಎನಿಸುತ್ತದೆ. ಅನುಭವವನ್ನು ಭ್ರಮೆಯೆಂದು ಕಲ್ಪನೆ ಮಾಡಿದರೆ, ಅಖ್ಯಾತಿವಾದಿಗಳು ಭ್ರಮೆಯನ್ನು ಒಪ್ಪಿದಂತಾಯಿತು ಎಂಬುದು ಮೊದಲನೆಯ ದೋಷ. ಅನುಭವವೆಂಬ ಅಭ್ರಮವನ್ನು ಭ್ರಮೆಯೆಂದು ಕಲ್ಪನೆ ಮಾಡಿದಂತಾಯಿತು ಎಂಬುದು ಎರಡನೆಯ ದೋಷ. ಈ ಅರ್ಥವನ್ನು ಬಿಟ್ಟು, ಭ್ರಮೆಯಲ್ಲಿ ಭ್ರಮವನ್ನು ಕಲ್ಪನೆ ಮಾಡಿದಂತಾಯಿತು. ಈ ಅರ್ಥದಲ್ಲಿ ಭ್ರಮೆಯನ್ನು ಹೇಳುವುದು ಅರ್ಥವಾಗದ ಸಂಗತಿಯಾಗಿದೆ. ಆದ್ದರಿಂದ 'ಅಭ್ರಮೇ ಭ್ರಮತ್ವಕಲ್ಪನಂ' ಎಂಬ ತಿದ್ದುಪಡಿ ಮಾಡಿ ಇಲ್ಲಿ ಅನುವಾದ ಮಾಡಲಾಗಿದೆ.

ಹುಟ್ಟಿದ ಸಂಸರ್ಗಪ್ರತ್ಯಯದಲ್ಲಿ ಹುಟ್ಟಿರುವುದಿಲ್ಲವೆಂಬ ಅಭಿಮಾನವು ಕೂಡದು

**तत्वप्रदीपः – संसर्गप्रत्ययेऽनुत्पन्नेऽप्युत्पन्नाभिमानाद्व्यवहार इति वदतां को दोष इति चेत्कोऽयमभिमानो नाम ? न तावद्भ्रम इति युक्तम् । औत्तरिक प्रमाणप्रवृत्तेरसामञ्जस्यप्रसङ्गात् । नेदं रजतमिति ह्यौत्तरिकः प्रत्ययो न पुनरिदं रजतमिति ज्ञानं नाऽसीदिति । प्रत्युतेदं रजतमिति ज्ञानमासीदेव मम, न चेदं तथेति भवति । ततश्चोत्पन्नेऽनुत्पन्नाभिमानादन्यथा व्यवहारस्तेषामेव परीक्षकवराकाणाम् ।**

ಸಂಸರ್ಗಪ್ರತ್ಯಯವು ಹುಟ್ಟದಿದ್ದರೂ ಕೂಡ ಹುಟ್ಟಿದೆ ಎಂಬ ಅಭಿಮಾನದಿಂದ ವ್ಯವಹಾರವನ್ನು ಮಾಡಲಾಗಿದೆ. ಹೀಗೆ ಹೇಳಿದರೆ ಏನು ದೋಷ?

ಈ ಅಭಿಮಾನಶಬ್ದಕ್ಕೆ ಏನರ್ಥ ? ಭ್ರಮೆ ಎಂಬರ್ಥವು ಯುಕ್ತವಲ್ಲ. ಹಾಗಾದಲ್ಲಿ ಔತ್ತರಿಕಪ್ರಮಾಣಪ್ರವೃತ್ತಿಯು ಅಸಮಂಜಸವಾಗುತ್ತದೆ. ಉತ್ತರಕಾಲದಲ್ಲಿ 'ನೇದಂ ರಜತಂ' ಎಂಬ ಪ್ರತ್ಯಯವೇ ಬರುತ್ತಿದೆ ಹೊರತು, 'ಇದಂ ರಜತಂ ಇತಿ ಜ್ಞಾನಮಾಸೀತ್' ಎಂಬ ಜ್ಞಾನವು ಬರುತ್ತಲೇ ಇಲ್ಲ. ಮತ್ತೇನೆಂದರೆ ವಿಪರೀತವಾಗಿ 'ಇದಂ ರಜತಂ' ಎಂಬ ಜ್ಞಾನವೇ

ನನಗಿತ್ತು ಎಂಬ ಜ್ಞಾನವೇ ಬರುತ್ತಿದೆ. ಆದರೆ ಪ್ರಕೃತ ಹಾಗಲ್ಲ. ಆದ್ದರಿಂದ ಸಂಸರ್ಗಪ್ರತ್ಯಯವು ಉತ್ಪನ್ನವಾಗಿರುವಾಗ ಅನುತ್ಪನ್ನವಾಗಿದೆ ಎಂಬುದಾಗಿ ಅಭಿಮಾನ ಮಾಡುವ ನಾವು ಪರೀಕ್ಷಕರೆಂದು ವಟಗುಟ್ಟುತ್ತಿರುವ ಕಪ್ಪೆಗಳಂತೆ ಅಖ್ಯಾತಿವಾದಿಗಳಾದ ಸಾಂಖ್ಯರಾದ ನೀವೇ ಅನ್ಯಥಾವ್ಯವಹಾರವನ್ನು ಮಾಡುತ್ತಿರುವಿರಿ.

**ವಿವರಣೆ** - ತತ್ವವಾದದಲ್ಲಿ ಸಂಸರ್ಗಪ್ರತ್ಯಯವು ಭ್ರಮೆಗೆ ಕಾರಣವೆಂದು ಹೇಳುತ್ತೇವೆ. ಅಥವಾ ಅಭೇದಜ್ಞಾನವು ಭ್ರಮೆಗೆ ಕಾರಣವೆಂದು ಹೇಳುತ್ತೇವೆ. ಅಖ್ಯಾತಿವಾದಿಗಳು ಅಭೇದ ಅಗ್ರಹವನ್ನು ಭ್ರಮೆಗೆ ಕಾರಣ ಎಂದು ಹೇಳುತ್ತಾರೆ. ಅಥವಾ ಅಸಂಸರ್ಗ ಅಗ್ರಹವನ್ನು ಭ್ರಮೆಗೆ ಕಾರಣ ಎಂದು ಹೇಳುತ್ತಾರೆ. ಭ್ರಮಕಾಲದಲ್ಲಿ ಸಂಸರ್ಗಪ್ರತ್ಯಯವೇ ಹುಟ್ಟಿರುವುದಿಲ್ಲ. ಆದರೂ ಕೂಡ ಸಂಸರ್ಗಪ್ರತ್ಯಯ ಹುಟ್ಟಿದೆ ಎಂಬ ಅಭಿಮಾನದಿಂದ ವ್ಯವಹರಿಸಲಾಗುತ್ತದೆ ಎಂದು ಸಾಂಖ್ಯರು ಹೇಳುತ್ತಾರೆ. ಇದು ತಪ್ಪು. ಅಭಿಮಾನ ಎಂದರೇನು? 'ಭ್ರಮೆ' ಎಂಬ ಅರ್ಥವನ್ನೇ ಹೇಳಬೇಕು. ಸಂಸರ್ಗಪ್ರತ್ಯಯವು ಉತ್ಪನ್ನ ಆಗದೇ ಇದ್ದರೂ ಕೂಡ ಉತ್ಪನ್ನವಾಗಿದೆ ಎಂದು ಅಭಿಮಾನವಿದೆ ಎಂದು ಹೇಳಿದರೆ, ಭ್ರಮೆಯನ್ನು ಒಪ್ಪಿದಂತೆಯೇ ಆಯಿತು. ಸಂಸರ್ಗಪ್ರತ್ಯಯವು ಬಂದಿರುವುದೇ ಇಲ್ಲ. ಅರ್ಥಾತ್ 'ಇದಂ ರಜತಂ' ಎಂಬ ಜ್ಞಾನವು ಬಂದಿರುವುದಿಲ್ಲ. ಆದರೂ 'ಇದಂ ರಜತಂ' ಎಂಬ ಜ್ಞಾನವು ಬಂದಿದೆ ಎಂಬ ಅಭಿಮಾನವಿದೆ ಎಂದು ಹೇಳುವುದಾದರೆ, ಉತ್ತರಕಾಲದಲ್ಲಿ 'ಇದಂ ರಜತಂ ಇತಿ ಜ್ಞಾನಮಾಸೀತ್' ಎಂಬ ಜ್ಞಾನವು ಯಾರಿಗೂ ಬರುತ್ತಿಲ್ಲ. ಮತ್ತೇನೆಂದರೆ 'ಇದಂ ರಜತಂ ಇತಿ ಜ್ಞಾನಮಾಸೀತ್' ಎಂಬ ಜ್ಞಾನವು ನನಗಿತ್ತು ಎಂಬ ಜ್ಞಾನವೇ ಬರುತ್ತಿದೆ. ಆದ್ದರಿಂದ ಜ್ಞಾನವು ಹುಟ್ಟದೇ ಇದ್ದರೂ ಕೂಡ ಜ್ಞಾನವು ಅಭಿಮಾನ ಮಾತ್ರ ಎಂದು ಹೇಳಬಾರದು. ಜ್ಞಾನದಲ್ಲಿ ಸಂಸರ್ಗಜ್ಞಾನ ಅಥವಾ ಅಭೇದಜ್ಞಾನ ಮಾತ್ರ ಭ್ರಾಂತಿ ಎಂದಷ್ಟೇ ಹೇಳಬೇಕು. ಆದ್ದರಿಂದ ಹುಟ್ಟಿದ ಸಂಸರ್ಗಪ್ರತ್ಯಯವನ್ನು ಹುಟ್ಟಿರುವುದಿಲ್ಲ ಎಂದು ಅಭಿಮಾನ ಮಾಡುತ್ತಿರುವ ಅಖ್ಯಾತಿವಾದಿಗಳೇ ಅನ್ಯಥಾ ವ್ಯವಹಾರ ಮಾಡುತ್ತಿದ್ದಾರೆ. 'ವರಾಕ' ಎಂಬ ಶಬ್ದಕ್ಕೆ 'ಮಂಡೂಕ' ಎಂದರ್ಥ. ಹುಟ್ಟಿದ ಸಂಸರ್ಗಪ್ರತ್ಯಯವನ್ನು ಹುಟ್ಟಿಲ್ಲ ಎಂಬುದಾಗಿ ಪರೀಕ್ಷಿಕವರಾಕರಾದ ನೀವೇ ಅನ್ಯಥಾವ್ಯವಹಾರವನ್ನು ಮಾಡುತ್ತಿದ್ದೀರಿ.

### ಅನ್ಯಥಾಖ್ಯಾತಿಯು ಹುಟ್ಟಿಯೇ ಇಲ್ಲ ಎಂದು ಹೇಳಲಾಗದು

**तत्वप्रदीपः – अथानुत्पन्नेऽपि ज्ञान उत्पन्नविवेकाग्रहादन्यथा ज्ञानमुदपादीति व्यवहारः, न पुनस्तादृशः प्रत्यय इति मतं; तदपि न युक्तम्।**

**यदिदं रजतमिति व्यवहारवदन्यथाज्ञानमासीदिति व्यवहारोऽप्ययथार्थः स्यात्। नेदं रजतमितिवन्नान्यथाख्यातिरजनिष्टेति बाधः स्यात् । नैव चासावस्ति । अन्यथाख्यातिरासीदेवेति सर्वो लोकः प्रत्येतीत्यवादिष्म । सर्वथा बाधरहितस्याप्ययथार्थत्वे । सर्वत्रानाश्वरासप्रसङ्गः ।**

ಸಾಂಖ್ಯರು - ಸಂಸರ್ಗಜ್ಞಾನರೂಪವಾದ ಅಯಥಾರ್ಥಜ್ಞಾನವು ಹುಟ್ಟಿರುವುದೇ ಇಲ್ಲ. ಆದರೂ ಕೂಡ ಹುಟ್ಟದ ಜ್ಞಾನದಲ್ಲಿ ಸಂಸರ್ಗಪ್ರತ್ಯಯ ಹುಟ್ಟಿರುವ ಜ್ಞಾನದಿಂದ ವಿವೇಕ ಗ್ರಹವಾಗುತ್ತಿಲ್ಲ. ಆದ್ದರಿಂದ ಅನ್ಯಥಾಜ್ಞಾನವು ಹುಟ್ಟಿದೆ ಎಂದು ಎಲ್ಲರೂ ವ್ಯವಹರಿಸುತ್ತಾರೆ. ವಾಸ್ತವಿಕವಾಗಿ ಅನ್ಯಥಾಜ್ಞಾನವೇ ಇರುವುದಿಲ್ಲ.

ಇದು ತಪ್ಪು. ಒಂದು ವೇಳೆ 'ಇದಂ ರಜತಂ' ಎಂಬ ವ್ಯವಹಾರದಂತೆ 'ಅನ್ಯಥಾಜ್ಞಾನಮಾಸೀತ್' ಎಂಬ ವ್ಯವಹಾರವೂ ಕೂಡ ಅಯಥಾರ್ಥ ಆಗುವುದಾದರೆ, 'ನೇದಂ ರಜತಂ' ಎಂಬ ಬಾಧಜ್ಞಾನವು ಬಂದಂತೆ 'ನ ಅನ್ಯಥಾಖ್ಯಾತಿಃ ಅಜನಿಷ್ಟ' ಎಂಬುದಾಗಿಯೂ ಬಾಧಜ್ಞಾನವು ಬರಬೇಕಾದೀತು. ಆದರೆ ಯಾರಿಗೂ ಕೂಡ ಈ ರೀತಿಯ ಬಾಧಜ್ಞಾನವು ಬರುತ್ತಿಲ್ಲ. 'ಅನ್ಯಥಾಖ್ಯಾತಿಃ ಆಸೀತ್' 'ನನಗೆ ಅನ್ಯಥಾಜ್ಞಾನವೇ ಇತ್ತು' ಎಂಬುದಾಗಿ ಸಕಲ ಲೋಕವೇ ಅನುಭವವನ್ನು ಹೊಂದಿದೆ. ಸರ್ವಥಾ ಬಾಧ ಇಲ್ಲದ್ದನ್ನೂ ಕೂಡ ಅಯಥಾರ್ಥ ಎನ್ನುವುದಾದರೆ ಲೋಕದಲ್ಲಿ ಎಲ್ಲೂ ಕೂಡ ವಿಶ್ವಾಸ ಮಾಡಲು ಸಾಧ್ಯವೇ ಆಗುವುದಿಲ್ಲ. ಎಲ್ಲವೂ ಕೂಡ ಅಯಥಾರ್ಥವೇ ಆಗುತ್ತದೆ.

ವಿವರಣೆ - ಭ್ರಮೆಸ್ಥಳದಲ್ಲಿ ಇದಂ ರಜತಂ ಎಂಬ ಜ್ಞಾನವೇ ಹುಟ್ಟಿಲ್ಲ. ಆದರೆ ಹುಟ್ಟಿದ ಜ್ಞಾನಕ್ಕಿಂತ, ಹುಟ್ಟದೇ ಇರುವ ಜ್ಞಾನದಲ್ಲಿ ವಿವೇಕ ಅಗ್ರಹವು ಆಗಿರುವುದಿಲ್ಲ. ಈ ಕಾರಣದಿಂದ 'ಜ್ಞಾನಮುತ್ಪನ್ನಮ್' ಎಂಬ ವ್ಯವಹಾರವು ಉಂಟಾಗಿದೆ. ಹಿಂದೆ ಶುಕ್ತಿಯನ್ನು ನೋಡಿ ರಜತ ಎಂದು ತಿಳಿದಿಲ್ಲ. ರಜತದಿಂದ ವಿವೇಕಗ್ರಹ ಆಗಿರುವುದಿಲ್ಲ ಎಂದು ಹೇಗೆ ಹೇಳಿದರೋ ? ಅದೇ ರೀತಿಯಲ್ಲಿ ಪ್ರಕೃತ ವಾಸ್ತವಿಕವಾಗಿ 'ಇದಂ ರಜತಂ' ಎಂಬ ಜ್ಞಾನವೇ ಹುಟ್ಟಿಲ್ಲ. ಆದರೂ ಕೂಡ ಅನುತ್ಪನ್ನವಾದ ಜ್ಞಾನಕ್ಕೆ ಉತ್ಪನ್ನಜ್ಞಾನದಿಂದ ವಿವೇಕಗ್ರಹವಾಗದೇ ಅನ್ಯಥಾವ್ಯವಹಾರವು ಉಂಟಾಗಿದೆ ಎಂದು ಹೇಳುತ್ತಾರೆ. ಆದ್ದರಿಂದ ಭ್ರಮೆಯನ್ನು ಒಪ್ಪುವ ಆವಶ್ಯಕತೆಯೇ ಇಲ್ಲ. ಭೇದಅಗ್ರಹದಿಂದಲೇ ಎಲ್ಲವೂ ಉಪಪನ್ನವಾಗುತ್ತದೆ. (ಉದಪಾದಿ ಹುಟ್ಟಿದೆ)

ಇದು ತಪ್ಪು. 'ಇದಂ ರಜತಂ' ಎಂಬ ಜ್ಞಾನವಿರುವುದಿಲ್ಲ. ಕೇವಲ ವ್ಯವಹಾರ ಎಂದು ಹೇಳುವಂತೆ ಅನ್ಯಥಾಜ್ಞಾನವೂ ಕೂಡ ಬಂದೇ ಇಲ್ಲ. ಆದರೂ ಕೂಡ 'ಅನ್ಯಥಾಜ್ಞಾನಮಾಸೀತ್' ಎಂಬ ವ್ಯವಹಾರವು ಬರುತ್ತಿದೆ ಎಂದು ಹೇಳಿದರೆ ಈ ವ್ಯವಹಾರವೂ ಕೂಡ ಅಯಥಾರ್ಥ ಆಗಬೇಕಾದೀತು. ಮತ್ತು 'ನೇದಂ ರಜತಂ' ಎಂಬ ಬಾಧಜ್ಞಾನವು ಬರುವಂತೆ 'ನ ಅನ್ಯಥಾಖ್ಯಾತಿಃ ಅಜನಿಷ್ಟ' 'ನನಗೆ ಅನ್ಯಥಾಜ್ಞಾನವು ಬಂದೇ ಇಲ್ಲ' ಎಂಬುದಾಗಿಯೂ ಕೂಡ ಬಾಧಜ್ಞಾನವು ಬರಬೇಕಾದೀತು. ಆದರೆ ಈ ರೀತಿಯಲ್ಲಿ ಬಾಧಜ್ಞಾನ ಬರುತ್ತಿಲ್ಲ. ಪ್ರತಿಯೊಬ್ಬರಿಗೂ ಕೂಡ ನನಗೆ ವಿಪರೀತಜ್ಞಾನವಿತ್ತು ಎಂದೇ ಅನುಭವವಿದೆ. ಕೇವಲ ಭೇದ ಅಗ್ರಹವಿತ್ತು ಎಂಬುದಾಗಿ ಯಾರ ಅನುಭವವೂ ಕೂಡ ಇರುವುದಿಲ್ಲ. ಮತ್ತು 'ಅನ್ಯಥಾ ಜ್ಞಾನಂ ಮಮ ಆಸೀತ್' ಎಂಬ ವ್ಯವಹಾರಕ್ಕೆ ಬಾಧವೇ ಇಲ್ಲ. ಆದರೂ ಕೂಡ ಇದನ್ನು ಭ್ರಾಂತಿ ಎಂದು ಹೇಳುವುದಾದರೆ ಜಗತ್ತಿನಲ್ಲಿ ಎಲ್ಲೂ ಕೂಡ ವಿಶ್ವಾಸ ಮಾಡಲು ಸಾಧ್ಯವೇ ಆಗುವುದಿಲ್ಲ. ಎಲ್ಲವೂ ಕೂಡ ಅಯಥಾರ್ಥ ಆಗಬೇಕಾದೀತು.

### ಅನ್ಯಥಾಖ್ಯಾತಿ ಒಪ್ಪದ ಸಾಂಖ್ಯನಿಗೆ ಗೌರವದೋಷ

**तत्वप्रदीपः – ननु वलयकारणाद्ययोगनिबन्धनो रजतादिवस्तुष्वापाततो बाधोदयः प्रतीतिषु स्वपरपक्षयोः साधारणार्थक्रियासु विवेकिनामेव युक्तितो बाध इति, तदप्यसारम् । नेयं भ्रान्तिः सैवेति विवेकग्रहणात्मकाद्बाधादबाधं श्रेयांसं वित्त । अनुत्पन्नेऽप्युत्पन्नविवेकाग्रहं व्यवहारहेतुं व्याहरतां विवेकाग्रहपरम्परा लक्ष्यते । बाध्यत्वादियमन्याख्यातिरिति निश्चिनोमीति व्यवहारस्यापि विवेकाग्रहमूलत्वात् । एकमन्यथामानं कल्पनागौरवभयात्परिजिहीर्षन्तः परिकल्पयन्त्यपरिमितानि ग्रहणस्मरणान्यन्यथाव्यवहारांश्चेति काऽत्र लघुकल्पना भवताम् ?**

ಬಳೆ, ಕಡಗ ಮೊದಲಾದ ಆಭರಣಗಳನ್ನು ಮಾಡಿಕೊಳ್ಳಲು ಸಾಧ್ಯವಾಗದ ಕಾರಣ ರಜತಾದಿ ವಸ್ತುಗಳಲ್ಲಿ ಆಪಾತತಃ ಬಾಧವು ಕಾಣಿಸುತ್ತದೆ. ಆದರೆ ರಜತಜ್ಞಾನದಲ್ಲಿ ಸ್ವಪಕ್ಷ ಹಾಗೂ ಪರಪಕ್ಷದವರಿಗೆ ಸಾಧಾರಣವಾದ ಅರ್ಥಕ್ರಿಯಗಳಲ್ಲಿ ವಿವೇಕಿಗಳಿಗಷ್ಟೇ ಯುಕ್ತಿಯಿಂದ

**यदिदं रजतमिति व्यवहारवदन्यथाज्ञानमासीदिति व्यवहारोऽप्ययथार्थः स्यात्। नेदं रजतमितिवन्नान्यथाख्यातिरजनिष्टेति बाधः स्यात् । नैव चासावस्ति । अन्यथाख्यातिरासीदेवेति सर्वो लोकः प्रत्येतीत्यवादिष्म । सर्वथा बाधरहितस्याप्ययथार्थत्वे । सर्वत्रानाश्वरासप्रसङ्गः ।**

ಸಾಂಖ್ಯರು - ಸಂಸರ್ಗಜ್ಞಾನರೂಪವಾದ ಅಯಥಾರ್ಥಜ್ಞಾನವು ಹುಟ್ಟಿರುವುದೇ ಇಲ್ಲ. ಆದರೂ ಕೂಡ ಹುಟ್ಟದ ಜ್ಞಾನದಲ್ಲಿ ಸಂಸರ್ಗಪ್ರತ್ಯಯ ಹುಟ್ಟಿರುವ ಜ್ಞಾನದಿಂದ ವಿವೇಕ ಗ್ರಹವಾಗುತ್ತಿಲ್ಲ. ಆದ್ದರಿಂದ ಅನ್ಯಥಾಜ್ಞಾನವು ಹುಟ್ಟಿದೆ ಎಂದು ಎಲ್ಲರೂ ವ್ಯವಹರಿಸುತ್ತಾರೆ. ವಾಸ್ತವಿಕವಾಗಿ ಅನ್ಯಥಾಜ್ಞಾನವೇ ಇರುವುದಿಲ್ಲ.

ಇದು ತಪ್ಪು. ಒಂದು ವೇಳೆ 'ಇದಂ ರಜತಂ' ಎಂಬ ವ್ಯವಹಾರದಂತೆ 'ಅನ್ಯಥಾಜ್ಞಾನಮಾಸೀತ್' ಎಂಬ ವ್ಯವಹಾರವೂ ಕೂಡ ಅಯಥಾರ್ಥ ಆಗುವುದಾದರೆ, 'ನೇದಂ ರಜತಂ' ಎಂಬ ಬಾಧಜ್ಞಾನವು ಬಂದಂತೆ 'ನ ಅನ್ಯಥಾಖ್ಯಾತಿಃ ಅಜನಿಷ್ಟ' ಎಂಬುದಾಗಿಯೂ ಬಾಧಜ್ಞಾನವು ಬರಬೇಕಾದೀತು. ಆದರೆ ಯಾರಿಗೂ ಕೂಡ ಈ ರೀತಿಯ ಬಾಧಜ್ಞಾನವು ಬರುತ್ತಿಲ್ಲ. 'ಅನ್ಯಥಾಖ್ಯಾತಿಃ ಆಸೀತ್' 'ನನಗೆ ಅನ್ಯಥಾಜ್ಞಾನವೇ ಇತ್ತು' ಎಂಬುದಾಗಿ ಸಕಲ ಲೋಕವೇ ಅನುಭವವನ್ನು ಹೊಂದಿದೆ. ಸರ್ವಥಾ ಬಾಧ ಇಲ್ಲದ್ದನ್ನೂ ಕೂಡ ಅಯಥಾರ್ಥ ಎನ್ನುವುದಾದರೆ ಲೋಕದಲ್ಲಿ ಎಲ್ಲೂ ಕೂಡ ವಿಶ್ವಾಸ ಮಾಡಲು ಸಾಧ್ಯವೇ ಆಗುವುದಿಲ್ಲ. ಎಲ್ಲವೂ ಕೂಡ ಅಯಥಾರ್ಥವೇ ಆಗುತ್ತದೆ.

ವಿವರಣೆ - ಭ್ರಮೆಸ್ಥಳದಲ್ಲಿ ಇದಂ ರಜತಂ ಎಂಬ ಜ್ಞಾನವೇ ಹುಟ್ಟಿಲ್ಲ. ಆದರೆ ಹುಟ್ಟಿದ ಜ್ಞಾನಕ್ಕಿಂತ, ಹುಟ್ಟದೇ ಇರುವ ಜ್ಞಾನದಲ್ಲಿ ವಿವೇಕ ಅಗ್ರಹವು ಆಗಿರುವುದಿಲ್ಲ. ಈ ಕಾರಣದಿಂದ 'ಜ್ಞಾನಮುತ್ಪನ್ನಮ್' ಎಂಬ ವ್ಯವಹಾರವು ಉಂಟಾಗಿದೆ. ಹಿಂದೆ ಶುಕ್ತಿಯನ್ನು ನೋಡಿ ರಜತ ಎಂದು ತಿಳಿದಿಲ್ಲ. ರಜತದಿಂದ ವಿವೇಕಗ್ರಹ ಆಗಿರುವುದಿಲ್ಲ ಎಂದು ಹೇಗೆ ಹೇಳಿದರೋ ? ಅದೇ ರೀತಿಯಲ್ಲಿ ಪ್ರಕೃತ ವಾಸ್ತವಿಕವಾಗಿ 'ಇದಂ ರಜತಂ' ಎಂಬ ಜ್ಞಾನವೇ ಹುಟ್ಟಿಲ್ಲ. ಆದರೂ ಕೂಡ ಅನುತ್ಪನ್ನವಾದ ಜ್ಞಾನಕ್ಕೆ ಉತ್ಪನ್ನಜ್ಞಾನದಿಂದ ವಿವೇಕಗ್ರಹವಾಗದೇ ಅನ್ಯಥಾವ್ಯವಹಾರವು ಉಂಟಾಗಿದೆ ಎಂದು ಹೇಳುತ್ತಾರೆ. ಆದ್ದರಿಂದ ಭ್ರಮೆಯನ್ನು ಒಪ್ಪುವ ಅವಶ್ಯಕತೆಯೇ ಇಲ್ಲ. ಭೇದಅಗ್ರಹದಿಂದಲೇ ಎಲ್ಲವೂ ಉಪಪನ್ನವಾಗುತ್ತದೆ. (ಉದಪಾದಿ ಹುಟ್ಟಿದೆ)

ಇದು ತಪ್ಪು. 'ಇದಂ ರಜತಂ' ಎಂಬ ಜ್ಞಾನವಿರುವುದಿಲ್ಲ. ಕೇವಲ ವ್ಯವಹಾರ ಎಂದು ಹೇಳುವಂತೆ ಅನ್ಯಥಾಜ್ಞಾನವೂ ಕೂಡ ಬಂದೇ ಇಲ್ಲ. ಆದರೂ ಕೂಡ 'ಅನ್ಯಥಾಜ್ಞಾನಮಾಸೀತ್' ಎಂಬ ವ್ಯವಹಾರವು ಬರುತ್ತಿದೆ ಎಂದು ಹೇಳಿದರೆ ಈ ವ್ಯವಹಾರವೂ ಕೂಡ ಅಯಥಾರ್ಥ ಆಗಬೇಕಾದೀತು. ಮತ್ತು 'ನೇದಂ ರಜತಂ' ಎಂಬ ಬಾಧಜ್ಞಾನವು ಬರುವಂತೆ 'ನ ಅನ್ಯಥಾಖ್ಯಾತಿಃ ಅಜನಿಷ್ಟ' 'ನನಗೆ ಅನ್ಯಥಾಜ್ಞಾನವು ಬಂದೇ ಇಲ್ಲ' ಎಂಬುದಾಗಿಯೂ ಕೂಡ ಬಾಧಜ್ಞಾನವು ಬರಬೇಕಾದೀತು. ಆದರೆ ಈ ರೀತಿಯಲ್ಲಿ ಬಾಧಜ್ಞಾನ ಬರುತ್ತಿಲ್ಲ. ಪ್ರತಿಯೊಬ್ಬರಿಗೂ ಕೂಡ ನನಗೆ ವಿಪರೀತಜ್ಞಾನವಿತ್ತು ಎಂದೇ ಅನುಭವವಿದೆ. ಕೇವಲ ಭೇದ ಅಗ್ರಹವಿತ್ತು ಎಂಬುದಾಗಿ ಯಾರ ಅನುಭವವೂ ಕೂಡ ಇರುವುದಿಲ್ಲ. ಮತ್ತು 'ಅನ್ಯಥಾ ಜ್ಞಾನಂ ಮಮ ಆಸೀತ್' ಎಂಬ ವ್ಯವಹಾರಕ್ಕೆ ಬಾಧವೇ ಇಲ್ಲ. ಆದರೂ ಕೂಡ ಇದನ್ನು ಭ್ರಾಂತಿ ಎಂದು ಹೇಳುವುದಾದರೆ ಜಗತ್ತಿನಲ್ಲಿ ಎಲ್ಲೂ ಕೂಡ ವಿಶ್ವಾಸ ಮಾಡಲು ಸಾಧ್ಯವೇ ಆಗುವುದಿಲ್ಲ. ಎಲ್ಲವೂ ಕೂಡ ಅಯಥಾರ್ಥ ಆಗಬೇಕಾದೀತು.

### ಅನ್ಯಥಾಖ್ಯಾತಿ ಒಪ್ಪದ ಸಾಂಖ್ಯನಿಗೆ ಗೌರವದೋಷ

**तत्वप्रदीपः – ननु वलयकारणाद्ययोगनिबन्धनो रजतादिवस्तुष्वापाततो बाधोदयः प्रतीतिषु स्वपरपक्षयोः साधारणार्थक्रियासु विवेकिनामेव युक्तितो बाध इति, तदप्यसारम् । नेयं भ्रान्तिः सैवेति विवेकग्रहणात्मकाद्बाधादबाधं श्रेयांसं वित्त । अनुत्पन्नेऽप्युत्पन्नविवेकाग्रहं व्यवहारहेतुं व्याहरतां विवेकाग्रहपरम्परा लक्ष्यते । बाध्यत्वादियमन्याख्यातिरिति निश्चिनोमीति व्यवहारस्यापि विवेकाग्रहमूलत्वात् । एकमन्यथामानं कल्पनागौरवभयात्परिजिहीर्षन्तः परिकल्पयन्त्यपरिमितानि ग्रहणस्मरणान्यन्यथाव्यवहारांश्चेति काऽत्र लघुकल्पना भवताम् ?**

ಬಳೆ, ಕಡಗ ಮೊದಲಾದ ಆಭರಣಗಳನ್ನು ಮಾಡಿಕೊಳ್ಳಲು ಸಾಧ್ಯವಾಗದ ಕಾರಣ ರಜತಾದಿ ವಸ್ತುಗಳಲ್ಲಿ ಆಪಾತತಃ ಬಾಧವು ಕಾಣಿಸುತ್ತದೆ. ಆದರೆ ರಜತಜ್ಞಾನದಲ್ಲಿ ಸ್ವಪಕ್ಷ ಹಾಗೂ ಪರಪಕ್ಷದವರಿಗೆ ಸಾಧಾರಣವಾದ ಅರ್ಥಕ್ರಿಯಗಳಲ್ಲಿ ವಿವೇಕಿಗಳಿಗಷ್ಟೇ ಯುಕ್ತಿಯಿಂದ

ಬಾಧವು ಪ್ರಾಪ್ತವಾಗುತ್ತದೆ. ಹೀಗೆ ಸಾಂಖ್ಯರು ಹೇಳುತ್ತಾರೆ. ಇದೂ ಕೂಡ ತಪ್ಪು. ಇದು ಭ್ರಾಂತಿಯಲ್ಲ ಎಂಬ ವಿವೇಕಗ್ರಹಣಾತ್ಮಕವಾದ ಬಾಧವನ್ನು ಒಪ್ಪುವುದಕ್ಕಿಂತ ರಜತಜ್ಞಾನದಲ್ಲಿ ಬಾಧವಿಲ್ಲ ಎಂದು ಹೇಳುವುದೇ ಶ್ರೇಯಸ್ಕರವಾಗಿದೆ ಎಂದು ತಿಳಿ.

ಅನುತ್ಪನ್ನವಾದ ಜ್ಞಾನದಲ್ಲಿ ಉತ್ಪನ್ನಜ್ಞಾನದಿಂದ ವಿವೇಕಗ್ರಹ ಇಲ್ಲ ಎಂಬುದನ್ನು ವ್ಯವಹಾರ ಹೇತು ಎಂದು ಹೇಳುವುದಾದರೆ ವಿವೇಕಾಗ್ರಹ ಪರಂಪರೆಯನ್ನೇ ಕಲ್ಪನೆ ಮಾಡಬೇಕಾಗುತ್ತದೆ. ಆದ್ದರಿಂದ ಅನವಸ್ಥಾದೋಷವು ಬರುತ್ತದೆ. ಬಾಧ್ಯತ್ವವಿರುವುದರಿಂದ ಇದು ಅನ್ಯಥಾಖ್ಯಾತಿ ಎನಿಸಿದೆ ಎಂದು ನಿಶ್ಚಯಿಸುತ್ತೇನೆ ಎಂಬ ವ್ಯವಹಾರವೂ ಕೂಡ ವಿವೇಕಾಗ್ರಹ ಮೂಲಕವಾಗಿದೆ. ಹೀಗೆ ಒಂದು ಅನ್ಯಥಾಖ್ಯಾತಿಯನ್ನು ಒಪ್ಪಿದರೆ ಕಲ್ಪನಾಗೌರವ ಬರುತ್ತದೆಂಬ ಭಯದಿಂದ ಅನ್ಯಥಾಖ್ಯಾತಿಯನ್ನೇ ಒಪ್ಪದ ಸಾಂಖ್ಯನು ಅಪರಿಮಿತವಾದ ಗ್ರಹಣಸ್ಮರಣೆಗಳನ್ನು ಅನ್ಯಥಾ-ವ್ಯವಹಾರಗಳನ್ನು ಕಲ್ಪನೆ ಮಾಡುತ್ತಿದ್ದಾನೆ. ಹೀಗಿರುವಾಗ ಇವನಿಗೆ ಲಾಘವ ಬರಲು ಹೇಗೆ ಸಾಧ್ಯ ?

ವಿವರಣೆ - ಸಾಂಖ್ಯರ ಆಕ್ಷೇಪ - ಅರ್ಥಕ್ರಿಯಾದಿಗಳಲ್ಲಷ್ಟೇ ಯುಕ್ತಿಯಿಂದ ಬಾಧವು ಪ್ರಾಪ್ತವಾಗುತ್ತದೆ. ಜ್ಞಾನದಲ್ಲಿ ಬಾಧವು ಪ್ರಾಪ್ತವಾಗುವುದಿಲ್ಲ. ಜ್ಞಾನದಲ್ಲಿ ಬಾಧವನ್ನು ಹೇಳುವ ಅವಶ್ಯಕತೆಯಿರುವುದಿಲ್ಲ. ಕಡಗ ಇತ್ಯಾದಿಗಳನ್ನು ಮಾಡಲು ಸಾಧ್ಯವಿಲ್ಲದ ಕಾರಣ 'ನೇದಂ ರಜತಂ' ಎಂಬುದಾಗಿ ಬಾಧವು ಪ್ರಾಪ್ತವಾಗಿದೆ. ಹೀಗೆ ಸ್ವಪಕ್ಷದಲ್ಲಿ ಹಾಗೂ ಪರಪಕ್ಷದಲ್ಲಿ ಸಾಧಾರಣವಾದ ಅರ್ಥಕ್ರಿಯಾದಿಗಳಲ್ಲಿ ವಿವೇಕಿಗಳಿಗೆ ಯುಕ್ತಿಯಿಂದ ಬಾಧವು ಪ್ರಾಪ್ತವಾಗಿದೆ[೧].

'ನೇದಂ ರಜತಂ' ಎಂದು ಬಾಧವು ಬರುವಂತೆ. 'ನೇಯಂ ಭ್ರಾಂತಿಃ' ಎಂಬ ಬಾಧವೂ ಬರಬೇಕಾದೀತು. ಭ್ರಾಂತಿಯು ಬಾರದೇ ವಿವೇಕಾಗ್ರಹವು ಉಂಟಾಗಿತ್ತು ಎಂದು ಹೇಳುವುದಾದರೆ ಉತ್ತರಕಾಲದಲ್ಲಿ ಇದು ಭ್ರಾಂತಿಯೇ ಅಲ್ಲ ಎಂಬುದಾಗಿ ಬರಬೇಕಾದೀತು. ಆಗ ಇಂಥ ಬಾಧವನ್ನು ಕಲ್ಪನೆ ಮಾಡುವುದಕ್ಕಿಂತ ಅಬಾಧವನ್ನೇ ಶ್ರೇಷ್ಠ ಎಂದು ಹೇಳುವುದೇ ಒಳ್ಳೇಯದು. ರಜತಕ್ಕೆ ಮಾತ್ರ ಬಾಧವಿದೆ. ರಜತಜ್ಞಾನಕ್ಕೆ ಬಾಧವು ಇರುವುದಿಲ್ಲ. ಆದ್ದರಿಂದ 'ನೇಯಂ ಭ್ರಾಂತಿಃ' ಎಂಬ ಬಾಧವನ್ನು ಒಪ್ಪುವುದಕ್ಕಿಂತ ರಜತಜ್ಞಾನಕ್ಕೆ ಬಾಧವು ಬಂದಿಲ್ಲ

(೧) 'ನನು ವಲಯಕರಣಾದ್ಯಯೋಗಃ' ಇತ್ಯಾದಿ ವಾಕ್ಯಕ್ಕೆ ಈ ಅರ್ಥವನ್ನು ಹೇಳಬಹುದು. ಆದರೆ ವಿದ್ವಾಂಸರ ಬಳಿ ಮತ್ತಷ್ಟು ವಿಚಾರ ಮಾಡಿ ಜಿಜ್ಞಾಸುಗಳ ಇದರರ್ಥವನ್ನು ತಿಳಿದುಕೊಳ್ಳಬೇಕು.

ಎಂಬುದೇ ಶ್ರೇಯಸ್ಕರವಾಗಿದೆ ಎಂದು ತಿಳಿಯಿರಿ ಎಂಬುದು 'ನೇಯಂ ಭ್ರಾಂತಿಃ' ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ.

'ಇದಂ' ಪದಾರ್ಥದಲ್ಲಿ ರಜತದಿಂದ ವಿವೇಕಾಗ್ರಹವಾಗಿದೆ. ಅನುತ್ಪನ್ನಜ್ಞಾನದಲ್ಲಿ ಉತ್ಪನ್ನಜ್ಞಾನದಿಂದ ವಿವೇಕಾಗ್ರಹವಾಗಿದೆ. ಇದೇ ವ್ಯವಹಾರಕ್ಕೆ ಕಾರಣವಾಗಿದೆ ಎಂದು ಹೇಳುತ್ತಿದ್ದೀರಿ. ಹಾಗಾದರೆ ಅಭೇದಗ್ರಹಕ್ಕೆ ಭೇದಾಗ್ರಹದಿಂದ ಭೇದಾಗ್ರಹವುಂಟಾಗಿದೆ. ಹೀಗೆ ಹೇಳುತ್ತಾ ಹೊರಟರೆ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಭಾದಿತ-ವಾಗಿರುವುದರಿಂದ ನನ್ನ ಜ್ಞಾನವು ಅಯಥಾರ್ಥವಾಗಿದೆ ಎಂದು ನಿಶ್ಚಯಿಸುತ್ತೇನೆ ಎಂಬುದಾಗಿ ವ್ಯವಹರಿಸುತ್ತಾರೆ. ಇದೂ ಕೂಡ ವಿವೇಕಾಗ್ರಹಮೂಲಕ ಎಂದು ಹೇಳಬೇಕಾದೀತು. ಆದ್ದರಿಂದ ಯಾವುದೇ ತಪ್ಪಾದ ವ್ಯವಹಾರವಿದ್ದರೂ ವಿವೇಕಾಗ್ರಹ-ನಿಬಂಧನ ಎಂದು ಹೇಳಬೇಕಾಗುತ್ತದೆ. ಆದ್ದರಿಂದ ಒಂದು ಅನ್ಯಥಾಜ್ಞಾನವನ್ನು ಒಪ್ಪುವುದು ಕಲ್ಪನಾಗೌರವಗ್ರಸ್ತವಾಗಿದೆ ಎಂದು ಯಾರು ಹೇಳುತ್ತಾರೋ, ಅವರು ಅಪರಿಮಿತವಾದ ಗ್ರಹಣ-ಸ್ಮರಣಗಳನ್ನು ಅನ್ಯಥಾವ್ಯವಹಾರಗಳನ್ನು ಕಲ್ಪನೆ ಮಾಡಬೇಕಾಗುತ್ತದೆ. ಆಗ ಅನಂತವಾದದ್ದನ್ನು ಕಲ್ಪನೆ ಮಾಡಬೇಕಾದ್ದರಿಂದ ನಿಮಗೆ ಲಾಘವವು ಹೇಗೆ ಬರಲು ಸಾಧ್ಯ? ಹಿಂದೆ ಸಾಂಖ್ಯರು ಅಭೇದಗ್ರಹಕ್ಕಿಂತ ಭೇದಾಗ್ರಹವೇ ಲಘುಭೂತವಾಗಿದೆ ಎಂದು ಹೇಳಿದ್ದರು. ಈ ಲಾಘವವನ್ನು ಸಮರ್ಥನೆ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ ಎಂಬುದರ ಸಮರ್ಥನೆಯನ್ನು ಇಲ್ಲಿಯ ತನಕ ಮಾಡಿದ್ದಾಯಿತು.

### ಮರಳಿನಲ್ಲಿ ಮನೆಕಟ್ಟುವ ಅಖ್ಯಾತಿವಾದಿಯ ಸಹವಾಸವೇ ಬೇಡ

**तत्वप्रदीपः** – अरजते रजतविवेकाग्रहवदनन्यथाख्यातावन्यथाख्याति विवेकाग्रह इष्यते चेत्तदन्यथाख्यातिरपि स्वशिरसा सबहुमानमुदूढते सद्वादिभिः। तथाऽप्यन्यथाख्यातिप्रतीतिर्नान्यथाख्यातिरिति चेदस्तु तर्हि रजत-प्रतीतिरेवान्यथाख्यातिरिति । इयमिदं रजतमिति प्रतीतिर्भ्रान्तिरिति वदन्ति च सकललौकिकपरीक्षकाः । तस्य च मूलं विवक्षमाणा भ्रान्त्यभ्रान्त्योर्भवन्त्यो-र्भेदाग्रहमाग्रहीष्ट । अहो दुर्दर्शनाभियोगपरिपाकविजृम्भिता भ्रान्तिरख्याति-वादिनां, यत्स्वयमूढावियोगिनीमिमां न जानीथेत्यलमनेन भ्रान्त्यपलापोद्यमेन सैकतावनिगृहनिर्माणवदतिदुष्करविषयेण ।

ರಜತವಲ್ಲದ್ದರಲ್ಲಿ ರಜತದ ವಿವೇಕಾಗ್ರಹ ಇಲ್ಲವೆಂದು ಹೇಗೆ ಹೇಳುತ್ತೇವೋ, ಆದರಂತೆ ಅನ್ಯಥಾಖ್ಯಾತವಾದದ್ದರಲ್ಲಿ ಅನ್ಯಥಾಖ್ಯಾತಿಯ ವಿವೇಕಾಗ್ರಹವಾಗಿರುವುದಿಲ್ಲ ಎಂದು ಅಂಗೀಕರಿಸುತ್ತೇವೆ.

ಇದೂ ಕೂಡ ತಪ್ಪು. ಹಾಗಾದರೆ ಪ್ರತಿಯೋಗಿಭೂತವಾಗಿ ಅನ್ಯಥಾಖ್ಯಾತಿಯನ್ನು ಶಿರಸ್ಸಿನಿಂದ ಬಹುಮಾನಪೂರ್ವಕವಾಗಿ ಆದರ ಮಾಡಿದಂತಾಯಿತು. ಆಹಾ ! ನೀವು ಸಜ್ಜನವಾದಿಗಳು.

ಆದರೂ ಕೂಡ ಅನ್ಯಥಾಖ್ಯಾತಿ ಪ್ರತೀತಿಯು ಅನ್ಯಥಾಖ್ಯಾತಿ ಎಂದು ಹೇಳುತ್ತೇವೆ ಎಂದರೆ ಹಾಗಾದರೆ ರಜತಪ್ರತೀತಿಯನ್ನೇ ಅನ್ಯಥಾಖ್ಯಾತಿ ಎಂದು ಹೇಳಿರಿ. ಮತ್ತು 'ಇದಂ ರಜತಂ' ಎಂಬ ಪ್ರತೀತಿಯು ಭ್ರಾಂತಿಯಾಗಿದೆ ಎಂದೇ ಎಲ್ಲಾ ಲೌಕಿಕರು ಹಾಗೂ ಜ್ಞಾನಿಗಳು ಹೇಳುತ್ತಾರೆ. ಇದಕ್ಕೆ ಏನು ಮೂಲ ? ಎಂದು ವಿಚಾರ ಮಾಡಿದಾಗ ಭ್ರಾಂತಿ ಮತ್ತು ಅಭ್ರಾಂತಿಗಳಿಗೆ ಭೇದಾಗ್ರಹವಾಗಿಲ್ಲ ಎಂದು ಸಾಂಖ್ಯರಾದ ನೀವು ಆಗ್ರಹ ಮಾಡುತ್ತಿದ್ದೀರಿ. ಏನಾಶ್ಚರ್ಯ ! ಕೆಟ್ಟದರ್ಶನದಲ್ಲಿ ಆಗ್ರಹದ ಪರಿಪಾಕದಿಂದ ಅಖ್ಯಾತಿವಾದಿಗಳ ಭ್ರಾಂತಿಯು ವಿಜೃಂಭಿಸುತ್ತಿದೆ. ಸಹಜವಾಗಿ ಬರುತ್ತಿರುವ ಅನ್ಯಥಾಖ್ಯಾತಿಯನ್ನು ನೀನು ತಿಳಿಯುತ್ತಿಲ್ಲವೆಂದರೆ ನಿನ್ನ ಮತದ ವಿಮರ್ಶೆ ಅನಾವಶ್ಯಕ. ಭ್ರಾಂತಿಯನ್ನು ಅಪಲಾಪ ಮಾಡುವುದರಲ್ಲಿ ಉದ್ಯುಕ್ತನಾದ ನೀನು ಮರಳುದಿಣ್ಣೆಯಲ್ಲಿ ಬೃಹತ್ತಾದ ಮನೆಯನ್ನು ನಿರ್ಮಾಣ ಮಾಡುವಂಥ ದುಷ್ಕರ ಕಾರ್ಯದಲ್ಲಿ ತೊಡಗಿರುವಿ. ಸಾಕು ನಿನ್ನ ಮತದ ವಿಮರ್ಶೆ.

ವಿವರಣೆ - ರಜತವಾಗದೇ ಇರುವ ಶುಕ್ತಿಯಲ್ಲಿ ರಜತದಿಂದ ಭೇದಾಗ್ರಹ ಹೇಗೆ ಇರುವುದಿಲ್ಲವೋ? ಆದರಂತೆ ಅನ್ಯಥಾಖ್ಯಾತಿ ಆಗದೇ ಇರುವ ಜ್ಞಾನದಲ್ಲಿ ಅನ್ಯಥಾಖ್ಯಾತಿಯಿಂದ ವಿವೇಕಾಗ್ರಹವು ಇರುತ್ತದೆ. ಉದಾಹರಣೆ - 'ಅಯಂ ಘಟಃ' ಎಂಬ ಯಥಾರ್ಥಜ್ಞಾನಕ್ಕೆ 'ಅಯಂ ಘಟೋ ನ' ಎಂಬ ವಿಪರೀತಜ್ಞಾನದಿಂದ ವಿವೇಕಾಗ್ರಹವು ಇರುವುದಿಲ್ಲ. ಆದ್ದರಿಂದ 'ಅಯಂ ಘಟಃ' ಎಂಬ ಯಥಾರ್ಥಜ್ಞಾನವನ್ನೂ ಕೂಡ ವಿಪರೀತಜ್ಞಾನವೆಂದು ವ್ಯವಹರಿಸುತ್ತಾನೆ. ಅನನ್ಯಥಾಖ್ಯಾತಿಯಲ್ಲಿ ಅನ್ಯಥಾಖ್ಯಾತಿಯಿಂದ ವಿವೇಕಾಗ್ರಹವಿದೆ ಎಂದು ಹೇಳುವುದಾದರೆ, ಆದಕ್ಕೆ ಪ್ರತಿಯೋಗಿಯಾದ ಅನ್ಯಥಾಖಾತಿಯನ್ನು ಒಪ್ಪಿದಂತೆಯೇ ಆಯಿತು.

ಸಾಂಖ್ಯರನ್ನು ಹಾಗೂ ಪ್ರಾಭಾಕರರನ್ನು 'ಸದ್ವಾದಿಭಿಃ' ಎಂದು ಕರೆದಿದ್ದಾರೆ. ಬಹಳ ಒಳ್ಳೆಯ ವಾದಿಗಳು ಎಂಬುದಾಗಿ ಹಾಸ್ಯ ಮಾಡಿದ್ದಾರೆಂದು ತಿಳಿಯಬೇಕು. ಅನನ್ಯಥಾಖ್ಯಾತಿಗೆ ಅನ್ಯಥಾಖಾತಿಯಿಂದ ಭೇದಗ್ರಹವಿಲ್ಲ ಎಂದು ಹೇಳುವ ಮೂಲಕ ಅನ್ಯಥಾಖ್ಯಾತಿಯನ್ನು ಒಪ್ಪಿದಂತೆ ಆಯಿತು. 'ಉದುಹ್ಯತೇ' ಎಂಬುದು 'ವಹ ಪ್ರಾಪಣೇ' ಧಾತುವಿನಿಂದ ನಿಷ್ಪನ್ನವಾಗಿದೆ. 'ಶಿರಸಾ ಧರಿಸಲ್ಪಟ್ಟಿದೆ' ಎಂಬುದು ಇದರ ಅರ್ಥ.

ಸಾಂಖ್ಯರು - ಭ್ರಾಂತಿ ಬಂದಿದೆ ಎಂಬ ಅನ್ಯಥಾಖ್ಯಾತಿ ಪ್ರತೀತಿಯನ್ನೂ ಕೂಡ ನಾವು ಅನ್ಯಥಾಖ್ಯಾತಿಯೆಂದು ಹೇಳುತ್ತೇವೆ ?

ಇದೂ ಕೂಡ ತಪ್ಪು. ಹಾಗಾದರೆ ರಜತಪ್ರತೀತಿಯನ್ನೇ ಅನ್ಯಥಾಖ್ಯಾತಿ ಎಂದು ಹೇಳುವುದು ಸೂಕ್ತವಾಗಿದೆ. ಏಕೆಂದರೆ ಸಕಲ ಲೌಕಿಕ ಪರೀಕ್ಷಕರು 'ಇದಂ ರಜತಂ ಇತಿ ಪ್ರತೀತಿಃ ಭ್ರಾಂತಿಃ' ಎಂದು ಹೇಳುತ್ತಾರೆ. ಸಕಲ ಲೋಕಸಿದ್ಧವಾದ 'ಇದಂ ರಜತಂ' ಎಂಬ ಪ್ರತೀತಿಯು ಭ್ರಾಂತಿಯಾಗಿದೆ ಎಂಬುದರ ಮೂಲವನ್ನು ಹೇಳಲು ಹೊರಟವರಾಗಿ ಭ್ರಾಂತಿಗೂ, ಅಭ್ರಾಂತಿಗೂ ಭೇದಾಗ್ರಹವನ್ನು ಹೇಳುತ್ತಿದ್ದಾರೆ. ಯಾವರೀತಿಯಾಗಿ ಶುಕ್ತಿಗೂ ರಜತಕ್ಕೂ ಭೇದಾಗ್ರಹವನ್ನು ಹೇಳುತ್ತಾರೋ, ಅದರಂತೆ ಭ್ರಾಂತಿಗೂ ಮತ್ತು ಅಭ್ರಾಂತಿಗೂ ಭೇದಾಗ್ರಹದ ಆಗ್ರಹ ಮಾಡಿದ್ದಾರೆ. ಎಷ್ಟು ಆಶ್ಚರ್ಯ ! ದುಷ್ಟಶಾಸ್ತ್ರದಲ್ಲಿ ಆಗ್ರಹದ ಪರಿಪಾಕದಿಂದ ಅಖ್ಯಾತಿವಾದಿಗಳ ಭ್ರಾಂತಿಯು ವಿಜೃಂಭಿತವಾಗಿದೆ. ಅಂಥ ಅಖ್ಯಾತಿವಾದಿಗಳಿಗೆ ಎಂಥ ಭ್ರಾಂತಿ ಬಂದಿದೆ ಎಂದರೆ ಎಲ್ಲರಿಗೂ ಸಹಜವಾಗಿ ಪ್ರಾಪ್ತವಾಗುತ್ತಿರುವ ಈ ಪ್ರತೀತಿಯನ್ನು ನೀನು ತಿಳಿದಿರುವುದಿಲ್ಲ. ಯಾವ ಈ ಸಾಂಖ್ಯನು ಭ್ರಾಂತಿಯನ್ನು ಅಪಲಾಪ ಮಾಡುತ್ತಿದ್ದಾನೋ, ಇವನು ಮರಳಿನಲ್ಲಿ ಮನೆ ಕಟ್ಟುವ ದುಷ್ಕರ ಕಾರ್ಯದಲ್ಲಿ ತೊಡಗಿದ್ದಾನೆ.

ಗಮನಿಸಬೇಕಾದ ಅಂಶ - 'ತಥಾಪಿ ಅನ್ಯಥಾಖ್ಯಾತಿ ಪ್ರತೀತಿಃ ನ ಅನ್ಯಥಾಖ್ಯಾತಿರಿತಿ ಚೇತ್' ಎಂಬುದಾಗಿ ಮುದ್ರಿತ ಪುಸ್ತಕಗಳಲ್ಲಿ ಪಾಠವಿದೆ. ಈ ವಾಕ್ಯಕ್ಕೆ ಅನ್ಯಥಾಖ್ಯಾತಿ ಪ್ರತೀತಿಯನ್ನು ಅನ್ಯಥಾಖ್ಯಾತಿಯಲ್ಲ ಎಂದು ಅಂಗೀಕಾರ ಮಾಡಿದರೆ ಎಂಬರ್ಥವಲ್ಲ ಎಂದು ಹೇಳಬೇಕು. ಆದರೆ ಈ ಅರ್ಥವು ಪ್ರಕೃತಕ್ಕೆ ಸರಿಹೊಂದುವುದಿಲ್ಲ. ಆದ್ದರಿಂದ 'ನ' ಎಂಬುದನ್ನು ತೆಗೆದು ಅನ್ಯಥಾಖ್ಯಾತಿಪ್ರತೀತಿಃ ಅನ್ಯಥಾಖ್ಯಾತಿರಿತಿ ಚೇತ್' ಎಂಬ ಪಾಠವನ್ನು ಅನುಸರಿಸಿ ಇಲ್ಲಿ ಅನುವಾದವನ್ನು ಮಾಡಲಾಗಿದೆ. ಈಗ ಹೀಗರ್ಥ - ಅನ್ಯಥಾಖ್ಯಾತಿ ಪ್ರತೀತಿಯು ನಿಜವಾಗಿಯೂ ಅನ್ಯಥಾಖ್ಯಾತಿಯು ಇಲ್ಲವೇ ಇಲ್ಲ. ಕೇವಲ ಪ್ರತೀತಿಯು ಪ್ರಾಪ್ತವಾಗಿದೆ ಎಂದು ಹೇಳುವುದಾದರೆ, ರಜತಪ್ರತೀತಿಯನ್ನೇ ಅನ್ಯಥಾಖ್ಯಾತಿಯೆಂದು

ಹೇಳಿರಿ. ಅನ್ಯಥಾಖ್ಯಾತಿಪ್ರತೀತಿಯನ್ನು ಅನ್ಯಥಾಖ್ಯಾತಿ ಎಂದು ಹೇಳುವುದಾದರೆ, ರಜತಪ್ರತೀತಿಯನ್ನು ಅನ್ಯಥಾಖ್ಯಾತಿ ಎಂದು ಹೇಳುವುದೇ ಲಘುಭೂತವಾಗಿದೆ ಎಂಬುದು ಇದರ ಅರ್ಥ. ಇದನ್ನೂ ಸಹ ವಿದ್ವಾಂಸರ ಬಳಿ ವಿಮರ್ಶೆ ಮಾಡಿ ಈ ವಾಕ್ಯದ ಅರ್ಥವನ್ನು ತಿಳಿದುಕೊಳ್ಳಬೇಕು.

### ದೋಷಪಂಜರಮತಕ್ಕೆ ಅನಾಂಜಸ್ಯ ಸಮರ್ಥನೆ

**तत्वप्रदीपः – अपि च विवक्षितरजतव्यवहर्ता व्यवहारं सम्यञ्चमसम्यञ्चं वक्ति । अभेदाग्रहादसम्यञ्चं किमिति न वदेत् । न च भेदाग्रहादेव सर्वत्र व्यवहार इति वाच्यम् । अवैत्येवेदं रजतमित्यादि । अन्यथा किमित्याददीयेति सर्वत्रानुभवादित्यास्तामस्य मतस्यामितदोषपञ्जरस्यानञ्जस्यप्रसञ्जनम् । अतः सूक्तं चेतनस्य प्रवृत्तिदर्शनाच्चेति ।।**

ಮತ್ತು ವಿವಕ್ಷಿತವಾದ 'ಇದಂ ರಜತಂ' ಎಂಬ ವ್ಯವಹಾರ ಮಾಡುವವನು ಸಮೀಚೀನ ಎಂದು ತಿಳಿಯುತ್ತಾನೋ, ಅಥವಾ ಅಸಮೀಚೀನ ಎಂದು ತಿಳಿಯುತ್ತಾನೋ? ಮೊದಲನೆಯ ಪಕ್ಷದಲ್ಲಿ ಭ್ರಮೆಯನ್ನು ಒಪ್ಪಿದಂತಾಗುತ್ತದೆ. ಎರಡನೆಯ ಪಕ್ಷದಲ್ಲಿ ವ್ಯವಹಾರವನ್ನು ಮಾಡಲು ಸಾಧ್ಯವೇ ಆಗುವುದಿಲ್ಲ. ಸಮೀಚೀನ ಅಥವಾ ಅಸಮೀಚೀನ ಎಂದು ನಿಶ್ಚಯ ಮಾಡಲು ಸಾಧ್ಯವಾಗದೇ ಭೇದಾಗ್ರಹದಿಂದ ಸಮೀಚೀನ ಎಂದು ತಿಳಿಯುತ್ತಾನೆಂದು ಉತ್ತರಿಸಿದರೆ ಅಭೇದಾಗ್ರಹದಿಂದ ಅಸಮೀಚೀನ ಎಂದೂ ಕೂಡ ಏಕೆ ಹೇಳಬಾರದು? ಭೇದಾಗ್ರಹದಿಂದಲೇ ಎಲ್ಲೆಡೆಯೂ ವ್ಯವಹಾರವನ್ನು ಕೂಡಿಸಬೇಕೆಂದು ಹೇಳುವುದು ತಪ್ಪು. ಪ್ರತಿಯೊಬ್ಬರೂ ಕೂಡ 'ಇದಂ ರಜತಂ' ಎಂದೇ ತಿಳಿಯುತ್ತಾರೆ. ಇಲ್ಲದಿದ್ದರೆ ರಜತವನ್ನು ಸ್ವೀಕರಿಸಲು ಏಕೆ ಮುಂದಾಗುತ್ತಾರೆ ? ಹೀಗೆ ಅನುಭವವಿರುವುದರಿಂದ ಅನುಭವವಿರುದ್ಧವಾದ ಈ ಸಾಂಖ್ಯರ ಅಖ್ಯಾತವಾದಮತವು ಕೇವಲ ದೋಷದ ಮನೆಯಾಗಿದೆ ಇದು ಸಮೀಚೀನವಾದ ಮತವಲ್ಲ. ಆದ್ದರಿಂದ ಭಾಷ್ಯದಲ್ಲಿ ಚೇತನದಲ್ಲಿ ಪ್ರವೃತ್ತಿಯು ಕಂಡಿದೆ ಎಂದು ಹೇಳಿರುವುದು ಅತ್ಯಂತ ಸಮಂಜಸವಾಗಿದೆ.

ವಿವರಣೆ - 'ಇದಂ ರಜತಂ' ಎಂಬುದಾಗಿ ಯಾರು ವ್ಯವಹಾರವನ್ನು ಮಾಡುತ್ತಾನೋ, ಅವನು ಆ ವ್ಯವಹಾರವನ್ನು ಸಮೀಚೀನ ಎಂದು ತಿಳಿಯುತ್ತಾನೋ, ಅಸಮೀಚೀನ ಎಂದು

ತಿಳಿಯುತ್ತಾನೋ, ತನ್ನ ವ್ಯವಹಾರವನ್ನು ಸಮೀಚೀನ ಎಂದು ತಿಳಿಯುವುದಾದರೆ 'ಇದಂ ರಜತಂ' ಎಂಬುದು ಭ್ರಮೆಯೆಂದು ಒಪ್ಪಿದಂತಾಯಿತು. ಸಮೀಚೀನ ಅಲ್ಲ ಎಂದು ಹೇಳುವುದಾದರೆ ವ್ಯವಹಾರವನ್ನು ಮಾಡಲು ಸಾಧ್ಯವೇ ಆಗುವುದಿಲ್ಲ. ಸಮೀಚೀನ ಎಂದೂ ಕೂಡ ತಿಳಿಯುವುದಿಲ್ಲ. ಅಸಮೀಚೀನ ಎಂದೂ ಕೂಡ ತಿಳಿಯುವುದಿಲ್ಲ. ತನ್ನ ವ್ಯವಹಾರವನ್ನು ಸಮೀಚೀನವಾದ ವ್ಯವಹಾರದ ದೆಸೆಯಿಂದ ಭೇದಾಗ್ರಹವಿಲ್ಲದ ಕಾರಣ ಸಮೀಚೀನ ಎಂಬುದಾಗಿ ತಿಳಿದಿದ್ದಾನೆ ಎಂದು ಹೇಳುತ್ತೇವೆ. ಹಾಗಾದರೆ ಅಭೇದಾಗ್ರಹದಿಂದ ಅಸಮೀಚೀನ ಎಂದೇಕೆ ವ್ಯವಹರಿಸಬಾರದು. ಭೇದಾಗ್ರಹ ಇರುವ ಕಾರಣ ಸಮೀಚೀನ ಎಂದು ಹೇಳುವುದಾದರೆ, ಅಭೇದಾಗ್ರಹವಿರುವುದರಿಂದ ಅಸಮೀಚೀನ ಎಂದೂ ಕೂಡ ವ್ಯವಹರಿಸಿರಿ. ಇನ್ನು ಭೇದಾಗ್ರಹದಿಂದಲೇ ಎಲ್ಲಾ ಕಡೆ ವ್ಯವಹಾರವು ನಡೆಯುತ್ತದೆ ಎಂದು ಹೇಳಬೇಕು. ಕೆಲವೆಡೆ ಅಭೇದಾಗ್ರಹದಿಂದ, ಕೆಲವೆಡೆ ಅಭೇದಗ್ರಹದಿಂದ ಎಂದು ನೀವೂ ಕೂಡ ಹೇಳಬಾರದು. ಏಕೆಂದರೆ 'ಇದಂ ರಜತಂ' ಎಂದೇ ತಿಳಿಯುತ್ತಾನೆ. ಇಲ್ಲದಿದ್ದರೆ ರಜತವನ್ನು ಸ್ವೀಕರಿಸಲು ಏಕೆ ಹೋಗುತ್ತಾನೆ ? ಹೀಗೆ ಎಲ್ಲರ ಅನುಭವವಿರುವುದರಿಂದ ಅಭೇದಜ್ಞಾನದಿಂದಲೇ ವ್ಯವಹಾರವನ್ನು ಕೂಡಿಸಬೇಕೆಂದು ಪ್ರತಿಯೊಬ್ಬರ ಅನುಭವ-ವಿರುವುದರಿಂದ ಭೇದಾಗ್ರಹದಿಂದ ವ್ಯವಹಾರವನ್ನು ಕೂಡಿಸಬೇಕೆಂಬುದು ಅಯುಕ್ತವಾಗಿದೆ. ಆದ್ದರಿಂದ ದೋಷಗಳ ಸಮೂಹಕ್ಕೆ ಆಶ್ರಯವಾದ ಈ ಮತವು ಸಮೀಚೀನವಾಗಿರುವುದಿಲ್ಲ. ಹಾಗಾಗಿ 'ಚೇತನಸ್ಯ ಪ್ರವೃತ್ತಿದರ್ಶನಾಚ್ಚ' ಎಂದು ಭಾಷ್ಯದಲ್ಲಿ ಹೇಳಿದ್ದು ಅತ್ಯಂತ ಯುಕ್ತವಾಗಿದೆ.

## ತತ್ವಪ್ರಕಾಶಿಕಾ

### ಪ್ರಕೃತಿಗೆ ಜಗತ್ಕಾರಣತ್ವ ನಿರಾಕರಣೆಗಾಗಿ ಮತ್ತೊಂದು ಹೇತು

**तत्वप्रकाशिका – एवं प्रधानस्य कारणत्वमचेतनत्वादिना निराकृत्य युक्त्यन्तरेणापि तन्निराकुर्वत्सूत्रमुपन्यस्य व्याचष्टे – प्रवृत्तेश्चेति ।।**

ಪ್ರಧಾನಕ್ಕೆ ಜಗತ್ಕಾರಣತ್ವವನ್ನು ಅಚೇತನತ್ವ ಹೇತುವಿನಿಂದ ಹಿಂದಿನ ಸೂತ್ರದಲ್ಲಿ ನಿರಾಕರಣೆ ಮಾಡಿದರು. ಪ್ರಕೃತ ಈ ಸೂತ್ರದಲ್ಲಿ ಮತ್ತೊಂದು ಯುಕ್ತಿಯನ್ನು ಹೇಳುವ ಮೂಲಕ ಜಗತ್ಕಾರಣತ್ವವನ್ನು ನಿರಾಕರಣೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸಿ ಪ್ರವೃತ್ತೇಶ್ಚ ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः – प्रवृत्तेश्च ।।२।। चेतनत्वादिनेति ।।** प्रमाणाभाव आदिपदार्थः। युक्त्यन्तरेणेति।। चेतनकर्तृत्वसाधकयुक्त्या चेत्यर्थः।

ಅಚೇತನತ್ವಾದಿನಾ' ಎಂಬಲ್ಲಿರುವ ಆದಿಪದದಿಂದ ಪ್ರಮಾಣಾಭಾವವನ್ನು ಸ್ವೀಕರಿಸಬೇಕು. 'ಯುಕ್ತ್ಯಂತರೇಣ' ಎಂಬಲ್ಲಿ ಚೇತನಕರ್ತೃತ್ವಸಾಧಕವಾದ ಯುಕ್ತಿಯಿಂದಲೂ ಕೂಡ ಎಂಬುದನ್ನು ವಿವಕ್ಷಿಸಬೇಕು.

### ಮಹದಾದಿಗಳಿಗೆ ಚೇತನವೇ ಕಾರಣ

**तत्वप्रकाशिका – महदादिसृष्टिश्चेतनेच्छानुसारिणी सृष्टित्वात् पटसृष्टिवदित्यनुमानविरूद्धत्वाच्च नाचेतनस्य कारणत्वं सम्भवति ।**

'ಮಹದಾದಿಸೃಷ್ಟಿಃ ಚೇತನೇಚ್ಛಾನುಸಾರಿಣೀ ಸೃಷ್ಟಿತ್ವಾತ್ ಪಟಸೃಷ್ಟಿವತ್' ಪಟಸೃಷ್ಟಿಯು ಸೃಷ್ಟಿಯಾಗಿದೆ. ಚೇತನದ ಇಚ್ಛೆಗೆ ಅನುಸಾರಿಯಾಗಿದೆ. ಇದರಂತೆ ಮಹದಾದಿಸೃಷ್ಟಿಯೂ ಕೂಡ ಸೃಷ್ಟಿಯಾಗಿರುವುದರಿಂದ ಚೇತನದ ಇಚ್ಛೆಗೆ ಅನುಸಾರಿಯೇ ಆಗಿರುತ್ತದೆಂಬುದಾಗಿ ಅನುಮಾನದಿಂದ ಚೇತನವೇ ಮಹಾದಾದಿತತ್ವಗಳಿಗೆ ಕಾರಣವೆಂದು ತಿಳಿಯುತ್ತದೆ. ಅಚೇತನಕಾರಣತ್ವವು ಈ ಅನುಮಾನವಿರುದ್ಧವಾಗಿರುವುದರಿಂದ ಅಚೇತನವಾದ ಪ್ರಕೃತಿಗೆ ಕಾರಣತ್ವವು ಕೂಡುವುದಿಲ್ಲ.

ಪಟಾದಿಸೃಷ್ಟಿಯಲ್ಲೂ ಕೂಡ ಚೇತನದ ವ್ಯಾಪಾರವೇ ಏಕೆ ಬೇಕು ? ಎಂದು ಪ್ರಶ್ನಿಸಬಾರದು. 'ಅಹಂ ಕರೋಮಿ' ಎಂದು ಪ್ರತೀತಿ ಇದೆ. ಇದರಿಂದ ಚೇತನನು ಅಲ್ಲಿ ಪ್ರವೃತ್ತಿಯನ್ನು ಮಾಡುತ್ತಿದ್ದಾನೆ ಎಂದು ತಿಳಿಯುತ್ತಿದೆ.

**भावदीपः** – भाष्यं दृष्टान्ते साध्यवैकल्यनिरासकमिति व्याकरिष्यन् चेतनेच्छानुसारेण यदा दृष्टः पटोद्भवः। एतादृशत्वमन्यस्य वस्तुत्वात्केन वार्यत इत्यनु- भाष्योक्तमनुमानमाह – **महदादीति ।।**

'ಚೇತನಸ್ಯ ಸ್ವತಃ ಪ್ರವೃತ್ತಿದರ್ಶನಾಚ್ಚ' ಎಂಬ ಭಾಷ್ಯವಾಕ್ಯವು ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದ ಪರಿಹಾರಕ್ಕಾಗಿ ಹೊರಟಿದೆ ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

ಚೇತನೇಚ್ಛಾನುಸಾರೇಣ ಯದಾ ದೃಷ್ಟಃ ಪಟೋದ್ಭವಃ ।
ಏತಾದೃಶತ್ವಮನ್ಯಸ್ಯ ವಸ್ತುತ್ವಾತ್ ಕೇನ ವಾರ್ಯತೇ ॥

ಚೇತನನ ಇಚ್ಛೆಗೆ ಅನುಗುಣವಾಗಿಯೇ ಪಟವು ಹುಟ್ಟುವುದು ಕಾಣಿಸುತ್ತಿದೆ. ಕೇವಲ ವಸ್ತುತ್ವ ಹೇತುವಿನಿಂದ ಇದನ್ನು ಹೇಗೆ ಅಲ್ಲಗಳೆಯುತ್ತೀರಿ ? ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದರಿಂದ ತಿಳಿಯುವ ಅನುಮಾನವನ್ನು ಮಹದಾದಿ ಇತ್ಯಾದಿ ವಾಕ್ಯದಿಂದ ಉಲ್ಲೇಖ ಮಾಡಿದ್ದಾರೆ.

### ಚೇತನವೇ ಜಗತ್‌ಕರ್ತೃ ಎಂಬುದು ಅನುಭವಸಿದ್ಧ

**तत्वप्रकाशिका – न च वाच्यं पटादिसृष्टावपि न चेतनस्य व्यापार इति। अहं करोमीति चेतनस्य प्रवृत्तिदर्शनादिति भावः ।**

ಪಟಸೃಷ್ಟಿ ಎಂಬ ದೃಷ್ಟಾಂತದಲ್ಲಿ ಚೇತನೇಚ್ಛಾನುಸಾರಿತ್ವ ಎಂಬ ಸಾಧ್ಯವಿಲ್ಲದ ಕಾರಣ ಸಾಧ್ಯವೈಕಲ್ಯವನ್ನು ಆಕ್ಷೇಪಿಸುತ್ತಾರೆ. ಆದರೆ 'ಅಹಂ ಕರೋಮಿ' ಎಂಬ ಅನುಭವ ಇರುವುದರಿಂದ ಅನುಭವವಿರುದ್ಧವಾದದ್ದನ್ನು ಆಕ್ಷೇಪ ಮಾಡಬಾರದು. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು ಬರುವುದಿಲ್ಲ.

**भावदीपः –** दर्शनपदोक्तितात्पर्यं व्यनक्ति॥ **न चेत्यादिना ।।** दर्शनादनुभवादित्यर्थः। व्यवहारः असंसर्गाग्रहाद्युक्त इति भावः॥

ಭಾಷ್ಯದಲ್ಲಿರುವ 'ದರ್ಶನ' ಪದದ ತಾತ್ಪರ್ಯವನ್ನು 'ನ ಚ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. 'ದರ್ಶನಾತ್' ಎಂದರೆ ಅನುಭವವಿರುವುದರಿಂದ ಎಂದರ್ಥ. ಅಸಂಸರ್ಗದ ಅಗ್ರಹವಿರುವ ಪ್ರಯುಕ್ತ ವ್ಯವಹಾರವು ಯುಕ್ತವಾಗುತ್ತದೆ ಎಂದು ತಿಳಿಯಬೇಕು.

### ಅನುಭವವು ವ್ಯಾವಹಾರಿಕವಲ್ಲ

**तत्वप्रकाशिका – न चेदं व्यवहारमात्रमिति वाच्यम् । बाधकाभावात्। अन्यथा विशिष्टज्ञानमात्रलोपप्रसङ्गात् । प्रकृतेः कर्तृत्वं बाधकमिति चेन्न । परस्पराश्रयप्रसङ्गात् । प्रतिपादयिष्यति चैतदिति ।।**

'ಅಹಂ ಕರೋಮಿ' ಎಂಬುದು ಕೇವಲ ವ್ಯವಹಾರ ಎಂಬ ಆಕ್ಷೇಪವು ತಪ್ಪು. 'ಅಹಂ ಕರೋಮಿ' ಎಂಬುದನ್ನು ಭ್ರಾಂತಿ ಎಂದು ಹೇಳಬೇಕೆಂದರೆ ಬಾಧಕವಿರಬೇಕು. ಆದರೆ ಯಾವುದೇ ಬಾಧಕವಿಲ್ಲ. ಹೀಗೆ ಒಪ್ಪದಿದ್ದರೆ 'ಅಯಂ ಘಟಃ' ಎಂಬ ವಿಶಿಷ್ಟಪ್ರತೀತಿಯೂ ಕೂಡ ಭ್ರಾಂತಿ ಎಂದು ಹೇಳಬೇಕಾಗುತ್ತದೆ.

ಪ್ರಕೃತಿಯ ಕರ್ತೃತ್ವವು ಬಾಧಕವಲ್ಲವೆ? ಎಂದು ಪ್ರಶ್ನಿಸಬಾರದು. ಹಾಗಾದರೆ ಅನ್ಯೂನ್ಯಾಶ್ರಯ-ದೋಷವು ಪ್ರಾಪ್ತವಾಗುತ್ತದೆ. ಇದನ್ನು ಮುಂದೆ ಸಮರ್ಥಿಸುತ್ತೇವೆ.

**भावदीपः – परस्परेति ।।** प्रकृतेः कर्तृत्वे सिद्धे अहं करोमीत्यस्य व्यवहार-मात्रत्वेनानुमानविरोधासम्भवः। सिद्धे च तस्मिन् प्रकृतेः कर्तृत्वसिद्धिरिति परस्पराश्रयेत्यर्थः। नन्वहं करोमीत्यादिप्रतीतेर्भ्रमत्वमुपेत्य घटादावपीश एव कर्ता न जीव इति प्रत्यपाद्यधस्तादुपसंहारदर्शनादित्यत्र। तथा च कथमेतदित्यत आह – **प्रतिपादयिष्यति चैतदिति ।।** स्वातन्त्र्यधीरेव भ्रान्तिर्न तु कर्तृत्वधीरपि तथा चैतत्कर्तृत्वं प्रत्यक्षोपपत्तिश्रुतिभिर्जीवस्य पारमार्थिकमेवेति प्रतिपादयिष्यते कर्ता शास्त्रार्थवत्वादित्यत्रोपरितनपाद इत्यर्थः। तत्वप्रदीपे तु निर्विकारस्य चेतनस्यापि प्रवृत्त्यनुपपत्तिरित्याशङ्क्यानुभवसिद्धत्वान्नानुपपत्तिरित्यर्थतयैतद्भाष्यं व्याख्यातम् ।।

ಅನ್ಯೋನ್ಯಾಶ್ರಯದೋಷವನ್ನು 'ಪರಸ್ಪರಾಶ್ರಯಪ್ರಸಂಗಾತ್' ಎಂದು ಹೇಳಿದ್ದಾರೆ. ಅದು ಹೀಗೆ - ಪ್ರಕೃತಿಗೆ ಕರ್ತೃತ್ವವು ಸಿದ್ಧವಾದರೆ 'ಅಹಂ ಕರೋಮಿ' ಎಂಬುದಕ್ಕೆ ವ್ಯವಹಾರಮಾತ್ರತ್ವವಿರುವುದರಿಂದ ಅನುಮಾನವಿರೋಧವು ಬರುವುದಿಲ್ಲ. ಅನುಮಾನವಿರೋಧವು ಬರುವುದಿಲ್ಲವೆಂದು ಸಿದ್ಧವಾದರೆ, ಪ್ರಕೃತಿಗೆ ಕರ್ತೃತ್ವವು ಸಿದ್ಧವಾಗುತ್ತದೆ ಎಂದು.

'ಅಹಂ ಕರೋಮಿ' ಎಂಬ ಅನುಭವವನ್ನು ಭ್ರಾಂತಿ ಎಂದು ಅಂಗೀಕರಿಸಿ, ಘಟಾದಿಗಳಿಗೂ ಕೂಡ ಈಶ್ವರನೇ ಕರ್ತೃವಾಗಿದ್ದಾನೆ ಎಂಬುದನ್ನು ಇಲ್ಲಿ 'ಉಪಸಂಹಾರದರ್ಶನಾತ್' ಎಂಬಲ್ಲಿ ಪ್ರತಿಪಾದನೆ ಮಾಡಲಾಗುತ್ತದೆ. ಆದ್ದರಿಂದ ಪ್ರಕೃತ ಜೀವಕರ್ತೃತ್ವವು ಭ್ರಾಂತಿಯಲ್ಲವೆಂದು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ 'ಪ್ರತಿಪಾದಯಿಷ್ಯತಿ ಚ' ಎಂಬುದರಿಂದ ಉತ್ತರಿಸಿದ್ದಾರೆ. ಜೀವನಿಗಿರುವ ಸ್ವಾತಂತ್ರ್ಯಜ್ಞಾನವಷ್ಟೇ ಭ್ರಾಂತಿ ಹೊರತು, ಕರ್ತೃತ್ವಜ್ಞಾನವು ಭ್ರಾಂತಿಯಲ್ಲ. ಜೀವನಲ್ಲಿರುವ ಕರ್ತೃತ್ವವು ಪ್ರತ್ಯಕ್ಷ, ಅನುಮಾನ

ಹಾಗೂ ಶ್ರುತಿಗಳಿಂದ ಪಾರಮಾರ್ಥಿಕವಾಗಿದೆ ಎಂದೇ ಮುಂದೆ ನಾವು ಸಮರ್ಥಿಸುತ್ತೇವೆ. 'ಕರ್ತಾ ಶಾಸ್ತ್ರಾರ್ಥವತ್ತ್ವಾತ್' ಎಂಬ ಮುಂದಿನ ಪಾದದಲ್ಲಿರುವ ಸೂತ್ರದಲ್ಲಿ ಈ ವಿಷಯವು ಸ್ಪಷ್ಟವಾಗುತ್ತದೆ.

ತತ್ವಪ್ರದೀಪದಲ್ಲಿ ನಿರ್ವಿಕಾರನಾದ ಚೇತನನಿಗೂ ಕೂಡ ಪ್ರವೃತ್ತಿಯು ಅನುಪಪನ್ನವಾಗುತ್ತದಲ್ಲವೇ? ಎಂದು ಆಶಂಕಿಸಿ ಅನುಭವಸಿದ್ಧವಾಗಿರುವುದರಿಂದ ಪ್ರವೃತ್ತಿ ಅನುಪಪತ್ತಿಯು ಯುಕ್ತವಾಗುವುದಿಲ್ಲ. ಹೀಗೆ ಭಾಷ್ಯವನ್ನು ವ್ಯಾಖ್ಯಾನ ಮಾಡಿದ್ದಾರೆ.

ವಿವರಣೆ - ಜೀವಕರ್ತೃತ್ವವು 'ಅಹಂ ಕರೋಮಿ' ಎಂಬ ಅನುಭವದಿಂದ ಸಿದ್ಧವಾಗಿರುವುದರಿಂದ ಚೇತನಕರ್ತೃತ್ವವನ್ನೇ ಒಪ್ಪಬೇಕು ಎಂದು ಹೇಳಿದರೆ ಪೂರ್ವಪಕ್ಷಿ 'ಅಹಂ ಕರೋಮಿ' ಎಂಬುದನ್ನು ಭ್ರಾಂತಿ ಎಂದು ಆಕ್ಷೇಪಿಸುತ್ತಾನೆ. ಆದರೆ ಭ್ರಾಂತಿ ಎಂದು ಹೇಳಬೇಕೆಂದರೆ ಅದಕ್ಕೆ ಬಾಧಕಪ್ರತೀತಿ ಇರಬೇಕು. ಆದರೆ ಬಾಧಕವಿಲ್ಲದ ಕಾರಣ 'ಅಹಂ ಕರೋಮಿ' ಎಂಬುದನ್ನು ಭ್ರಾಂತಿ ಎಂದು ಹೇಳಲು ಸಾಧ್ಯವಿಲ್ಲ. ಪ್ರತೀತಿಜ್ಞಾನಕ್ಕೆ ಬಾಧಕಜ್ಞಾನ ಇಲ್ಲದಿದ್ದರೂ ಅದನ್ನು ಭ್ರಾಂತಿ ಎನ್ನುವುದಾದರೆ 'ಅಯಂ ಘಟಃ' ಎಂಬ ವಿಶಿಷ್ಟಜ್ಞಾನವನ್ನು ಕೂಡ 'ಭ್ರಾಂತಿ' ಎಂದು ಹೇಳಬೇಕಾಗುತ್ತದೆ. ಇದನ್ನು ಪರಿಹರಿಸಲು ಪ್ರಕೃತಿಯ ಕರ್ತೃತ್ವವನ್ನು ಬಾಧಕವೆಂದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಪ್ರಕೃತಿಯು ಕರ್ತೃ ಎಂದು ಸಿದ್ಧವಾದರೆ ಈ ವಿಷಯಕ್ಕೆ ಬಾಧ ಇರುವುದರಿಂದ 'ಅಹಂ ಕರೋಮಿ' ಎಂಬುದು ಪ್ರಮಾಣ ಅಲ್ಲವೆಂದಾಗುತ್ತದೆ. 'ಅಹಂ ಕರೋಮಿ' ಎಂಬುದು ಪ್ರಮಾಣವಲ್ಲ ಎಂದು ಸಿದ್ಧವಾದರೆ ಪ್ರಕೃತಿಯೇ ಜಗತ್‌ಕರ್ತೃ ಎಂಬುದು ಸಿದ್ಧವಾಗುತ್ತದೆ.

## ಬ್ರಹ್ಮಸೂತ್ರ

## ब्रह्मसूत्रम् – पयोऽम्बुवच्चेत्तत्रापि ।।

ಹಾಲು ಸ್ವಾಭಾವಿಕವಾಗಿ ಮೊಸರಾಗುತ್ತದೆ. ನೀರು ಸ್ವಾಭಾವಿಕವಾಗಿಯೇ ತಗ್ಗಾದ ಪ್ರದೇಶದಲ್ಲಿ ಹರಿಯುತ್ತದೆ. ಅದರಂತೆ ಜಡಪ್ರಕೃತಿಯೂ ಕೂಡ ತಾನಾಗಿಯೇ ಜಗತ್ತಾಗಿ ಪರಿಣಾಮ ಹೊಂದಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಹಾಲು ನೀರು ಮೊದಲಾದವುಗಳಲ್ಲಿಯೂ ಅಂತರ್ಯಾಮಿಯಾದ ಪರಮಾತ್ಮನೇ ನೆಲೆಸಿ ಆಯಾ ಕಾರ್ಯಗಳನ್ನು ಮಾಡಿಸುತ್ತಾನೆ ಹೊರತು ಸ್ವಾಭಾವಿಕವಾಗಿ ಯಾವುದೇ ಜಡಪ್ರಕೃತಿಗೆ ಕಾರ್ಯಪ್ರವರ್ತಕತ್ವವು ಇರುವುದಿಲ್ಲ.

ಸೂತ್ರದಲ್ಲಿರುವ ಅಪಿ ಶಬ್ದವು ಹಿಂದಿನ ಸೂತ್ರದಲ್ಲಿ ಹೇಳಿದ ಚೇತನ ಪ್ರವೃತ್ತಿಯನ್ನು ಅನುಕರ್ಷ ಮಾಡುತ್ತಿದೆ. ಪಯೋಽಂಬುವತ್ = ಯಾವ ರೀತಿಯಾಗಿ ಅಚೇತನವಾದ ಹಾಲು ಮತ್ತು ನೀರುಗಳಲ್ಲಿ

ಸ್ವಾಭಾವಿಕವಾಗಿ ಪ್ರವೃತ್ತಿಯು ಕಂಡಿರುತ್ತದೋ ಅದರಂತೆ ಪ್ರಧಾನವು ಕೂಡ ಸ್ವಾಭಾವಿಕವಾಗಿ ಪ್ರವೃತ್ತಿಯನ್ನು ಮಾಡಬಹುದಲ್ಲವೇ, ಇತಿ ಚೇತ್ = ಹೀಗೆ ಪ್ರಶ್ನಿಸಬಾರದು. ಏಕೆಂದರೆ ತತ್ರಾಪಿ = ಹಾಲು ಮತ್ತು ನೀರುಗಳಲ್ಲಿಯೂ ಅಂತರ್ಯಾಮಿಯಾದ ಈಶ್ವರನು ನೆಲೆಸಿರುತ್ತಾನೆ. ಆದ್ದರಿಂದಲೇ ಇವುಗಳಲ್ಲಿ ಪ್ರವೃತ್ತಿಯು ಕಾಣಸುತ್ತಿದೆಯೇ ಹೊರತು ಸ್ವತಂತ್ರವಾದ ಪ್ರವೃತ್ತಿಯು ಎಲ್ಲಿಯೂ ಇರುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

### ಹಾಲಿನಂತೆ ಜಗತ್ತಿನ ಪ್ರವೃತ್ತಿ ಆಗಲು ಸಾಧ್ಯವಿಲ್ಲವೇ?

**ब्रह्मसूत्रभाष्यम् –।। पयोऽम्बुवच्चेत् तत्रापि ।।३।।**

**पयोऽम्बुवदचेतनस्यापि प्रवृत्तिर्युज्यत इति न युक्तम् ।**

**'एतस्य वा अक्षरस्य प्रशासने गार्गि प्राच्योऽन्या नद्यः स्यन्दन्ते याश्च श्वेतेभ्यः पर्वतेभ्यः प्रतीच्योऽन्या यां यां च दिशमनु' (बृ.५.८.९.) 'एतेन ह्व वाव पयो मण्डं भवति' इत्यादि ना तत्रापीश्वरनिमित्तप्रवृत्ति-श्रुतेः ।।३।।**

ಅನುವಾದ - ಹಾಲು ಪರಿಣಾಮ ಹೊಂದಿ ಮೊಸರಾಗುತ್ತದೆ. ನೀರು ಹರಿಯುತ್ತದೆ. ಈ ದೃಷ್ಟಾಂತದಂತೆ ಅಚೇತನವಾದ ಪ್ರಕೃತಿಯೂ ಕೂಡ ತನ್ನಷ್ಟಕ್ಕೆ ತಾನೇ ಜಗತ್ತನ್ನು ಸೃಷ್ಟಿಮಾಡುತ್ತದೆ. ಹೀಗೇಕೆ ಹೇಳಬಾರದು. ಈ ಪ್ರಶ್ನೆ ತಪ್ಪು.

ಪೂರ್ವದಿಕ್ಕಿನಲ್ಲಿ ಹರಿಯುತ್ತಿರುವ ಪಶ್ಚಿಮದಿಕ್ಕಿನಲ್ಲಿ ಹರಿಯುವ ಯಾವ ನದಿಗಳು ಇವೆಯೊ ಅವೆಲ್ಲವೂ ಬಿಳಿಯಾದ ಹಿಮಾಲಯದಿಂದ ಯಾವ ದಿಕ್ಕಿನ ಕಡೆ ಹರಿಯುತ್ತದೋ ಅವನು ಮಾತ್ರ ಪಾತಾಳ ಲೋಕದಲ್ಲಿ ಇರಲು ಸಮರ್ಥನು. ಈ ಪರಮಾತ್ಮನಿಂದಲೇ ಹಾಲು ಮೊಸರಾಗುತ್ತದೆ. ಇವೇ ಮೊದಲಾದ ಶ್ರುತಿಪ್ರಮಾಣಗಳಿಂದ ಈಶ್ವರನಿಮಿತ್ತಕವಾದ ಪ್ರವೃತ್ತಿಯೇ ಅಲ್ಲಿ ಇರುತ್ತದೆ ಎಂದು ತಿಳಿಯಬೇಕು.

ಪ್ರತಿಪದಾರ್ಥ -- ಹಿಂದಿನ ಆಕ್ಷೇಪಕ್ಕೆ ಈ ಸೂತ್ರವು ಉತ್ತರಿಸುತ್ತಿದೆ - ಪಯೋಽಂಬುವತ್ = ಹಾಲು ನೀರು ಮೊದಲಾದವುಗಳಂತೆ, ಅಚೇತನಸ್ಯಾಪಿ = ಜಡಗಳಿಗೂ, ಪ್ರವೃತ್ತಿಃ = ಚೇತನದಂತೆ ಪ್ರವೃತ್ತಿಯು, ಯುಜ್ಯತೇ ಇತಿ = ಯುಕ್ತವಾಗುತ್ತದೆ ಎಂದು ಹೇಳುವುದು, ನ ಯುಕ್ತಮ್ = ಯೋಗ್ಯವಲ್ಲ.

ಏಕೆಂದರೆ ಏತಸ್ಯ ಅಕ್ಷರಸ್ಯ = 'ಏತಸ್ಯ ಅಕ್ಷರಸ್ಯ' ಎಂದು ಪ್ರಾರಂಭಿಸಿ, ಹೇ ಗಾರ್ಗಿ = ಎಲೈ ಗಾರ್ಗಿಯೇ, ಅನ್ಯಾನದ್ಯಃ = ಕೆಲವು ನದಿಗಳು, ಪ್ರಾಚ್ಯಃ = ಪೂರ್ವದಿಕ್ಕಿನವುಗಳಾಗಿ, ಸ್ಯಂದಂತಿ = ಹರಿಯುತ್ತವೆ. ಯಾಶ್ಚ ಅನ್ಯಃ = ಇನ್ನು ಕೆಲವು, ಶ್ವೇತೇಭ್ಯಃ ಪರ್ವತೇಭ್ಯಃ = ಶುಕ್ಲ ವರ್ಣದ ಹಿಮವತ್ ಪರ್ವತಗಳಿಂದ, ಪ್ರತೀಚ್ಯಃ = ಪಶ್ಚಿಮ ದಿಕ್ಕಿನಲ್ಲಿ ಹರಿಯುತ್ತವೆ. ಯಾಂ ಯಾಂ = ಯಾವ, ಯಾವ ದಿಶಮ್ = ದಿಕ್ಕಿನಕಡೆ, ಅನು = ಅನುಸಾರಿಯಾಗಿ ಹರಿಯುತ್ತದೋ ಅವೆಲ್ಲವೂ, ಅಕ್ಷರಸ್ಯ = ಅಕ್ಷರಶಬ್ದವಾಚ್ಯನಾದ, ಪ್ರಶಾಸನೇ = ಪರಮಾತ್ಮನ ಶಾಸನ ನಿಮಿತ್ತವಾಗಿ ಎಂಬುದಾಗಿ ಹೇಳುತ್ತದೆ.

ಏತೇನ = ಈ ಪರಮಾತ್ಮನಿಂದ, ಪಯಃ = ಹಾಲು, ಮಂಡಂ = ಮೊಸರು, ಭವತಿ = ಆಗುತ್ತದೆ. ಹ = ಇದು ಪ್ರಮಾಣ ಪ್ರಮಿತವಾಗಿದೆ. ಇತ್ಯಾದಿ = ಇವೇ ಮೊದಲಾದವುಗಳಲ್ಲಿ, ತತ್ರಾಪಿ = ಜಡಪರಿಣಾಮಗಳಲ್ಲಿಯೂ, ಈಶ್ವರನಿಮಿತ್ತಪ್ರವೃತ್ತಿಶ್ರುತೇಃ = ಪರಮಾತ್ಮನ ಮೂಲಕವೇ ಪರಿಣಾಮಾದಿ ಪ್ರವೃತ್ತಿಗಳು ಆಗುತ್ತವೆ. ಹೀಗೆ ಶ್ರುತಿ ಹೇಳುತ್ತಿರುವುದರಿಂದ ಜಡಪದಾರ್ಥಕ್ಕೆ ಕರ್ತೃತ್ವವು ಸರ್ವಥಾ ಕೂಡುವುದಿಲ್ಲ

### ಸತ್ತರ್ಕದೀಪಾವಳಿ

**ಸತ್ತರ್ಕದೀಪಾವಳಿಃ – ನ ಚ ನದ್ಯುದಕಾದಿವದೀಶ್ವರಾಪ್ರೇರಿತಪ್ರಧಾನಪ್ರವೃತ್ತ್ಯಾ ಸೃಷ್ಟಿರ್ಯುಕ್ತೇತಿ ವಾಚ್ಯಮ್ । 'ಯೋಽನ್ತರೋ ಯಮಯತೇ' ಇತಿ ಶ್ರುತೇಃ ಉದಕಾದೇರಪೀಶಪ್ರೇರಿತತ್ವಸಿದ್ಧೇಃ।**

ನದಿನೀರಿನಂತೆ ಈಶ್ವರ ಪ್ರೇರಣೆ ಇಲ್ಲದೆ ಪ್ರಕೃತಿಯು ಸೃಷ್ಟಿ ಮಾಡಬಹುದಲ್ಲವೇ? ಎನ್ನಬಾರದು. 'ಯೋಽಂತರಃ ಯಮಯತೇ' ಎಂಬ ಶ್ರುತಿಯಂತೆ ನದೀ ನೀರೂ ಸಹ ಈಶ್ವರಪ್ರೇರಣೆಯಿಂದಲೇ ಹರಿಯುತ್ತದೆ.

### ತತ್ವಪ್ರಕಾಶಿಕಾ

ಹಿಂದಿನ ಸೂತ್ರದ ಮೇಲೆ ಅಧಿಕಾಕ್ಷೇಪ

**तत्वप्रकाशिका – उक्तमाक्षिप्य समादधत्सूत्रं पठित्वा व्याचष्टे – पयोऽम्बुवदिति ।। अपिपदं चेतनप्रवृत्तेराकर्षणार्थम् ।**

ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ ಸಮಾಧಾನವನ್ನು ಹೇಳುವ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸಲು 'ಪಯೋಽಂಬುವತ್' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. ಸೂತ್ರದಲ್ಲಿರುವ 'ಅಪಿ' ಪದವು 'ಚೇತನಪ್ರವೃತ್ತೇಃ' ಎಂಬುದನ್ನು ಆಕರ್ಷಣ ಮಾಡುವುದಕ್ಕಾಗಿ ಪ್ರಯುಕ್ತವಾಗಿದೆ.

ವಿವರಣೆ - ಹಿಂದಿನ ಸೂತ್ರದಲ್ಲಿ 'ಚೇತನಸ್ಯ ದರ್ಶನಾತ್' ಎಂಬೆರಡು ಪದಗಳನ್ನು ಅಧ್ಯಾಹಾರ ಮಾಡಿರುವುದರಿಂದ 'ಚೇತನಸ್ಯ ಪ್ರವೃತ್ತೇಃ ದರ್ಶನಾತ್' ಎಂಬುದಾಗಿ ಸೂತ್ರ ಶರೀರವು ಪರ್ಯವಸಿತವಾಯಿತು. ಇಲ್ಲೂ ಕೂಡ 'ಚೇತನಪ್ರವೃತ್ತೇಃ ದರ್ಶನಾತ್' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಅದಕ್ಕಾಗಿ ಸೂತ್ರದಲ್ಲಿ 'ಅಪಿ' ಪದವನ್ನು ಪ್ರಯೋಗಿಸಿದ್ದಾರೆ.

ಅಚೇತನಕ್ಕೆ ಸ್ವತಃಪ್ರವೃತ್ತಿಯು ಕಂಡಿದೆಯಲ್ಲವೆ ?

**तत्वप्रकाशिका – यदुक्तमचेतनत्वान्न स्वतःप्रवृत्तिः प्रधानस्येति तदयुक्तम् । पयसोऽचेतनस्यापि दध्याकारेण परिणामदर्शनात्, अचेतनस्याम्बुनो गतिदर्शनात् । तथा कूलस्य पतनदर्शनात् । अतोऽचेतनत्वेऽपि तद्वत्प्रधानस्यापि स्वतःप्रवृत्तिः किं न स्यात् ? इति न युक्तम् ।**

ಅಚೇತನವಾದ್ದರಿಂದ ಸ್ವತಃ ಪ್ರವೃತ್ತಿ ಇಲ್ಲವೆಂದು ಹಿಂದಿನ ಸೂತ್ರದಲ್ಲಿ ಹೇಳಲಾಯಿತು. ಇದು ಅಯುಕ್ತವಾಗಿದೆ. ಏಕೆಂದರೆ ಹಾಲು ಅಚೇತನವಾಗಿದ್ದರೂ ಕೂಡ ಮೊಸರಿನ ಆಕಾರದಲ್ಲಿ ಪರಿಣಾಮವನ್ನು ಹೊಂದುವುದು ಕಂಡಿದೆ. ಮತ್ತು ನೀರು ಅಚೇತನವಾಗಿದ್ದರೂ ಹರಿಯುವುದು ಕಂಡಿದೆ. ಸೇತುವೆಯು ತನ್ನಷ್ಟಕ್ಕೆ ತಾನು ಬೀಳುವುದು ಕಂಡಿದೆ. ಆದ್ದರಿಂದ ಪ್ರಕೃತಿಯು ಅಚೇತನವಾಗಿದ್ದರೂ ಹಾಲು ಮೊದಲಾದವುಗಳಂತೆ ಸ್ವತಃ ಪ್ರವೃತ್ತಿಯನ್ನು ಏಕೆ ಮಾಡಬಾರದು?

## ಭಾವದೀಪ

**'ಪಯೋಽಂಬ್ವಾದಿ' ಎಂಬ ಅನುವ್ಯಾಖ್ಯಾನಕ್ಕೆ ಅನುಗುಣವಾಗಿ ಸೂತ್ರವ್ಯಾಖ್ಯಾನ**

**भावदीपः – पयोऽम्बुवच्चेत्तत्रापि ।।३।।** उक्ताक्षेपप्रकारं दर्शयन् भाष्यं व्याचष्टे – **यदुक्तमिति ।।** पयोंऽब्वादि च नोपमेत्यनुभाष्यस्थादिपदानुरोधात्सूत्रोक्त-मुपलक्षणं मत्वा परोक्तमन्यदप्याह –**तथा कूलस्येति ।।** भाष्ये नञध्याहारेण न युक्तमित्युक्तम्। तदर्थ इति न युक्तमिति॥

ಹಿಂದೆ ಮಾಡಿದ ಆಕ್ಷೇಪದ ಪ್ರಕಾರವನ್ನು ತೋರಿಸುತ್ತಾ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಯದುಕ್ತಮ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ನೀರು, ಹಾಲು ಮೊದಲಾದವುಗಳಲ್ಲಿ ಸ್ವತಂತ್ರವಾದ ಪ್ರವೃತ್ತಿಯು ಕಾಣಸುತ್ತಿದೆ ಎಂಬ 'ಪಯೋಽಂಬ್ವಾದಿ ಚ ನೋಪಮಾ' ಎಂಬ ಅನುವ್ಯಾಖ್ಯಾನವು ಹೇಳುತ್ತಿದೆ. ಇಲ್ಲಿರುವ ಆದಿಪದಕ್ಕೆ ಟೀಕೆಯಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಆದಕ್ಕನುಗುಣವಾಗಿ 'ಪಯೋಽಂಬುವತ್' ಎಂಬ ಸೂತ್ರವೂ ಕೂಡ ಕೂಲಪತನಕ್ಕೆ ಉಪಲಕ್ಷಣವಾಗಿದೆ ಎಂದೂ ಕೂಡ ವ್ಯಾಖ್ಯಾನ ಮಾಡುತ್ತಿದ್ದಾರೆ. ಇದನ್ನು 'ತಥಾ ಕೂಲಸ್ಯ' ಇತ್ಯಾದಿ ವಾಕ್ಯವು ತಿಳಿಸುತ್ತಿದೆ.

ಭಾಷ್ಯದಲ್ಲಿ ನಞನ್ನು ಅಧ್ಯಾಹಾರ ಮಾಡಿದ್ದರಿಂದ 'ನಯುಕ್ತಂ' ಎಂದು ಹೇಳಿದ್ದಾರೆ. ಆದರ ಅರ್ಥವನ್ನೇ 'ನಯುಕ್ತಂ' ಎಂದು ಹೇಳಿದ್ದಾರೆ.

> ವಿವರಣೆ - ಸೂತ್ರದಲ್ಲಿ ಹಾಲು ಮತ್ತು ನೀರಿನ ದೃಷ್ಟಾಂತಗಳನ್ನಷ್ಟೇ ಹೇಳಿದ್ದಾರೆ. ಪಯೋಂಬ್ವಾದಿ ಎಂಬುದಾಗಿ ಆದಿಪದವನ್ನು ಪ್ರಯೋಗ ಮಾಡುವ ಮೂಲಕ ಇನ್ನೂ ಬೇರೆ ದೃಷ್ಟಾಂತವನ್ನು ತಿಳಿಯಬೇಕೆಂದು ಸೂಚನೆ ಮಾಡಿದ್ದಾರೆ. ಆದಕ್ಕನುಗುಣವಾಗಿ ಈ ಸೂತ್ರವನ್ನು ಅರ್ಥಮಾಡಿಕೊಳ್ಳಬೇಕು. ಆದ್ದರಿಂದ ಸೇತುವೆಯು ತನ್ನಷ್ಟಕ್ಕೆ ತಾನು ಬೀಳುವುದು ಕಾಣಸುತ್ತಿದೆ ಎಂಬುದೂ ಕೂಡ ಇಲ್ಲಿ ವಿವಕ್ಷಿತವೆಂದು ವ್ಯಾಖ್ಯಾನ ಮಾಡಿದ್ದಾರೆ.

**ಈಶ್ವರನಿಂದಲೇ ಅಚೇತನರಲ್ಲಿ ಪ್ರವೃತ್ತಿ**

**तत्वप्रकाशिका – पयोऽम्ब्वादिप्रवृत्तावपीश्वरनिमित्तत्वाभिधायक-श्रुतिसद्भावेनाचेतनत्वहेतोर्व्यभिचाराभावात् । ततश्च न तन्निदर्शनेन**

**प्रधानस्य स्वतःप्रवृत्तिराज्ञासितव्येति भावः । याः काश्चित्प्राच्यां दिशि स्थिताः काश्चित्प्रतीच्यां दिशि स्थिता नद्यः श्वेतेभ्यः पर्वतेभ्यो यां यां दिशमनुस्यन्दन्ते ता एतस्यैवाक्षरस्याऽज्ञायां सत्यां तां तां दिशमनुस्यन्दन्त इत्यर्थः ।।**

ಈ ಪೂರ್ವಪಕ್ಷವು ಅಯುಕ್ತವಾಗಿದೆ. ಹಾಲು ನೀರು ಮೊದಲಾದ ಅಚೇತನಪದಾರ್ಥದಲ್ಲಿ ಯಾವ ಪ್ರವೃತ್ತಿಯು ಕಾಣಿಸುತ್ತಿದೆಯೋ ಅದೂ ಕೂಡ ಈಶ್ವರಾಧಿನವಾಗಿಯೇ ಇರುತ್ತದೆ. ಹೀಗೆ ಶ್ರುತಿಗಳು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಅಚೇತನತ್ವಹೇತುವಿಗೆ ವ್ಯಭಿಚಾರ-ದೋಷವು ಬರುವುದಿಲ್ಲ. ಆದ್ದರಿಂದ ಅಚೇತನವಾದ ಹಾಲು ಮೊದಲಾದವುಗಳ ಉದಾಹರಣೆಯಿಂದ ಪ್ರಕೃತಿಯ ಸ್ವತಃಪ್ರವೃತ್ತಿಯನ್ನು ನಿರೀಶ್ವರವಾದಿಗಳು ಅಪೇಕ್ಷೆ ಪಡಬಾರದು ಎಂಬುದು ಸೂತ್ರದ ಅಭಿಪ್ರಾಯ.

ಪೂರ್ವದಿಕ್ಕಿನಲ್ಲಿ ಇರುವ ನದಿಗಳು, ಪಶ್ಚಿಮದಿಕ್ಕಿನಲ್ಲಿ ಇರುವ ನದಿಗಳು, ಶ್ವೇತಪರ್ವತ-ದಲ್ಲಿರುವ ನದಿಗಳು ಯಾವ ಯಾವ ದಿಕ್ಕನ್ನು ಅನುಸರಿಸಿ ಹರಿಯುತ್ತವೋ, ಆ ನದಿಗಳು ಅಕ್ಷರ ಎಂಬ ಹೆಸರನ್ನು ಹೊಂದಿರುವ ಭಗವಂತನ ಆಜ್ಞೆಯಿಂದಲೇ ಆಯಾ ದಿಕ್ಕುಗಳಲ್ಲಿ ಹರಿಯುತ್ತವೆಂಬುದು ಉಪನಿಷತ್ತಿನ ಅಭಿಪ್ರಾಯ.

**भावदीपः – अक्षरस्येति ।।** अक्षरस्य ब्रह्मत्वमक्षरनये सिद्धम्।।

ಅಕ್ಷರಾಧಿಕರಣದಲ್ಲಿ ಅಕ್ಷರಶಬ್ದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸಿದ್ದಾಗಿದೆ.

ಬ್ರಹ್ಮಸೂತ್ರ

**ब्रह्मसूत्रम् – व्यतिरेकानवस्थितेश्चानपेक्षत्वात् ।।**

ಸಕಲ ಪದಾರ್ಥಗಳಲ್ಲಿಯೂ ಈಶ್ವರನೇ ನೆಲೆಸಿ ಆಯಾ ಕ್ರಿಯೆಗಳನ್ನು ನಡೆಯುವಂತೆ ಮಾಡುತ್ತಾನೆ. ಹೀಗೆ 'ನ ಋತೇ ತ್ವತ್‌ಕ್ರಿಯತೇ' ಎಂಬ ಶ್ರುತಿಯು ಹೇಳುತ್ತಿದೆ. ಚೇತನನ ಅಪೇಕ್ಷೆಯಿಲ್ಲದೇ ಜಡಪದಾರ್ಥ ಸ್ವತಃ ಕ್ರಿಯಾಶೀಲವಾಗುತ್ತದೆನ್ನಲು ಯಾವುದೇ ದೃಷ್ಟಾಂತವು ಇರುವುದಿಲ್ಲ. ಮತ್ತು ಸಜ್ಜನರು ಇದನ್ನು ಆದರ ಮಾಡುವುದಿಲ್ಲ.

ವ್ಯತಿರೇಕಾನವಸ್ಥಿತೇಃ = 'ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ' ಎಂಬ ಶ್ರುತಿಯಿಂದ ಈಶ್ವರನಿಲ್ಲದೇ ಯಾವುದೇ ಕ್ರಿಯೆಯು ನಡೆಯುವುದಿಲ್ಲ ಎಂಬುದಾಗಿ ಸಿದ್ಧವಾಗಿರುವುದರಿಂದ ಜಡಪ್ರಕೃತಿಯೇ ಸ್ವಾಭಾವಿಕವಾಗಿ ಪ್ರವೃತ್ತಿ ಮಾಡುತ್ತದೆ ಎಂದು ಹೇಳಲು ದೃಷ್ಟಾಂತವಿಲ್ಲ. ಹಾಗೇ ಹೇಳುವ ನಿರೀಶ್ವರಸಾಂಖ್ಯಮತವು ಅಪ್ರಮಾಣವಾಗಿದೆ. ಆದ್ದರಿಂದ ಅನಪೇಕ್ಷತ್ವಾತ್ = ಸಜ್ಜನರಿಂದ ಅನಾದರಕ್ಕೆ ಪಾತ್ರವಾಗಿದೆ. ಹೀಗಿರುವಾಗ ಜಗತ್ತಿಗೆ ಪ್ರಕೃತಿಯು ಕಾರಣವಾಗಿರುವುದರಿಂದ ಬ್ರಹ್ಮಕಾರಣತ್ವಕ್ಕೆ ವಿರೋಧ ಬರುತ್ತದೆಂದು ಆಕ್ಷೇಪಿಸಲು ಬರುವುದಿಲ್ಲ

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ರಚನಾನುಪಪತ್ತ್ಯಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಭಗವಂತನಿಂದಲೇ ಎಲ್ಲ ಕರ್ಮಗಳ ಪ್ರವೃತ್ತಿ ಅಚೇತನದಿಂದಲ್ಲ

**ब्रह्मसूत्रभाष्यम् — ।। व्यतिरेकानवस्थितेश्चानपेक्षत्वात् ।।४।।**

**'न ऋते त्वत्क्रियते किञ्चनारे' (ऋ.१०.११३.९) इति तद्व्यतिरेकेण कस्यापि कर्मणोऽनवस्थितेरनपेक्षितमेवाचेतनवादिमतम् ।।४।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये रचनानुपपत्त्यधिकरणम् ।। १ ।।**

ಅನುವಾದ - ಎಲೈ ಭಗವಂತನೇ ನಿನ್ನ ಹೊರತಾಗಿ ದೂರದಲ್ಲಿ ಅಥವಾ ಸಮೀಪದಲ್ಲಿ ಯಾವುದೂ ಕ್ರಿಯಾಶೀಲವಾಗುವುದಿಲ್ಲ. ಹೀಗೆ ಶ್ರುತಿಯು ಪರಮಾತ್ಮನಿಲ್ಲದೆ ಯಾವ ವಸ್ತುವಿನ ಕ್ರಿಯೆಯೂ ನಡೆಯುವುದಿಲ್ಲ ಎಂದು ತಿಳಿಸುತ್ತದೆ. ಆದ್ದರಿಂದ ಜಡವಾದ ಪ್ರಕೃತಿಯು ಯಾರನ್ನೂ ಅಪೇಕ್ಷೆ ಮಾಡದೆ ತನ್ನಷ್ಟಕ್ಕೆ ತಾನೇ ಸೃಷ್ಟಿಕ್ರಿಯೆಯನ್ನು ನಡೆಸುತ್ತದೆಂದು ಹೇಳುವ ಅಚೇತನವಾದಿಗಳಾದ ಸಾಂಖ್ಯರ ಮತವು ಯುಕ್ತವಲ್ಲ.

ಪ್ರತಿಪದಾರ್ಥ -- ತ್ವತ್ಕ್ರಿಯತೇ = ನಿನ್ನ ಹೊರತಾಗಿ, ಆರೇ = ಸಮೀಪದಲ್ಲಾಗಲಿ ಅಥವಾ ದೂರದಲ್ಲಿಯಾಗಲಿ, ಕಿಂಚನ = ಯಾರಿಂದಲೂ ಏನನ್ನು, ನ ಕ್ರಿಯತೇ = ಮಾಡಲು ಸಾಧ್ಯವಿಲ್ಲ. ಇತಿ =

ಹೀಗೆ ಶ್ರುತಿಪ್ರಮಾಣ ಇರುವುದರಿಂದ, ತದ್ವ್ಯತಿರೇಕೇಣ = ಶ್ರೀಹರಿಯನ್ನು ಬಿಟ್ಟು, ಕಸ್ಯಾಪಿ = ಬೇರೆ ಯಾರಿಗೂ, ಕರ್ಮಣಃ = ಯಾವುದೇ ಕ್ರಿಯೆಗಳಲ್ಲಿ, ಅನವಸ್ಥಿತೇಃ = ನಿಲ್ಲಲು ಸಾಧ್ಯವಿಲ್ಲ. ಆದ್ದರಿಂದ ಅಚೇತನವಾದಿಮತಮ್ = ಜಡವಾದ ಪ್ರಕೃತಿಗೆ ಜಗತ್ ಕರ್ತೃತ್ವವನ್ನು ಒಪ್ಪುವ ನಿರೀಶ್ವರಸಾಂಖ್ಯಮತವು, ಅನಪೇಕ್ಷಿತಮೇವ = ಸಾಧಕರಿಗೆ ಅಪೇಕ್ಷಿತವಲ್ಲ. ಆದ್ದರಿಂದ ಸಂಪೂರ್ಣವಾಗಿ ನಿರಾಕರಣೆ ಮಾಡಲ್ಪಡಬೇಕು.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ರಚನಾನುಪಪತ್ತ್ಯಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

### ಸಕಲ ಕ್ರಿಯೆಗಳು ವಿಷ್ಣು ಅಧೀನ

**सत्तर्कदीपावळिः – निषुसीद गणपते गणेषु त्वामाहुर्विप्रतमं कवीनां न ऋते त्वत्क्रियते किञ्चनेति श्रुत्यन्तरादप्येषोऽर्थोऽवगम्यते । विप्रतमशब्देन मेधावितम उच्यते । मुख्यतः सर्वदेवनामवाच्यतया विष्णुरेवाभिधीयते । नहि तदन्यं प्रति त्वदृते त्वया विना किञ्चन न क्रियते इति ॥**

'ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಂ ನ ಋತೇ ತ್ವತ್ ಕ್ರಿಯತೇ ಕಿಂಚನ' ಎಂಬ ಮತ್ತೊಂದು ಶ್ರುತಿಯಿಂದಲೂ ಕೂಡ ಪರಮಾತ್ಮನಿಲ್ಲದೇ ಯಾವುದೇ ಕ್ರಿಯೆ ನಡೆಯವುದಿಲ್ಲವೆಂಬ ಅರ್ಥವು ತಿಳಿಯುತ್ತದೆ. ವಿಪ್ರತಮ ಎಂಬ ಶಬ್ದದಿಂದ ಶ್ರೇಷ್ಠಜ್ಞಾನ ಎಂಬರ್ಥವನ್ನು ತಿಳಿಸಿದ್ದಾರೆ. ಮುಖ್ಯವಾಗಿ ಎಲ್ಲಾ ದೇವತೆಗಳ ಹೆಸರುಗಳಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ಇಲ್ಲಿ ಹೇಳಲಾಗಿದೆ. ಅಂಥ ವಿಷ್ಣುವಾದ ನಿನ್ನನ್ನು ಬಿಟ್ಟು, ಯಾವುದೇ ಕಾರ್ಯ ನಡೆಯಲು ಸಾಧ್ಯವಿಲ್ಲ ಎಂಬುದು ಶ್ರುತಿಯ ಅಭಿಪ್ರಾಯ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ ರಚನಾನುಪಪತ್ತ್ಯಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

## ತತ್ತ್ವಪ್ರದೀಪ

### 'ನಿಷುಸೀದ ಗಣಪತೇ' ಎಂಬ ಶ್ರುತ್ಯರ್ಥ

**तत्वप्रदीपः – व्यतिरेकानवस्थितेश्चानपेक्षत्वात् ।। 'निषुसीदे''त्यादेरयमर्थः। इन्द्रियादिगणेषु त्वं सुनिषीद । ज्ञानिनां विशेषेण प्रकृष्टतमं त्वामाहुः । त्वदृते स्पन्दनमपि न क्रियते । आरे दूरे च । त्वन्नियत्यैव सर्वं सर्वत्र । महान्तम् अधिकानन्दं त्वां त्वमेवार्चय मघवन्सामर्थ्ययुक्तेति । न च स्वातन्त्र्येणान्यस्यार्च्यत्वं युज्यते । अस्वातन्त्र्योक्तेः । स्तोत्रा स्वेन्द्रियेषु स्थित्वा भगवन्तं प्रति स्वार्चकत्वं प्रार्थ्यत इति युक्तम् ।।**

### ।। इति रचनानुपपत्त्यधिकरणम् ।।

'ನಿಷುಸೀದ' ಇತ್ಯಾದಿ ಶ್ರುತಿಯ ಅರ್ಥ ಹೀಗಿದೆ - ಗಣಪತೇ = ಇಂದ್ರಿಯಗಳಿಗೆ ನಿಯಾಮಕನಾದ ನೀನು, ಗಣೇಷು = ಇಂದ್ರಿಯಗಳ ಒಳಗೆ, ನಿಷುಸೀದ = ಚೆನ್ನಾಗಿ ಸನ್ನಿಹಿತನಾಗು. ಕವೀನಾಂ = ಜ್ಞಾನಿಗಳ ಮಧ್ಯದಲ್ಲಿ, ವಿಪ್ರತಮಂ = ಪ್ರಕೃಷ್ಟವಾದ ಜ್ಞಾನಿಯನ್ನಾಗಿ ನಿನ್ನನ್ನು ಹೇಳುತ್ತಾರೆ. ತ್ವದೃತೇ = ನಿನ್ನನ್ನು ಬಿಟ್ಟು, ಆರೇ = ದೂರದಲ್ಲಿ ಅಥವಾ, ಕಿಂಚನ = ಯಾವುದು, ನ ಕ್ರಿಯತೇ = ಕ್ರಿಯಾಶೀಲವಾಗುವುದಿಲ್ಲ. (ಕ್ರಿಯೆಯೇ ನಡೆಯುವುದಿಲ್ಲ) ಎಲ್ಲವೂ, ಎಲ್ಲೆಡೆಯೂ ನಿನ್ನ ನಿಯಂತ್ರಣಕ್ಕೆ ಒಳಪಟ್ಟಿದೆ. ಮಹಾಂ = ದೊಡ್ಡದಾದ, ಅರ್ಕಂ = ಪರಿಮಾಣು ಯುಕ್ತವಾದ, ಚಿತ್ರಂ = ಆಶ್ಚರ್ಯರೂಪನಾದ, ತ್ವಾಂ = ನಿನ್ನನ್ನೇ, ಅರ್ಚ = ಪೂಜಿಸಿಕೋ, ಮಘವನ್ = ನೀನು ಸಾಮಾರ್ಥ್ಯದಿಂದ ಕೂಡಿರುವಿ. ಸ್ವತಂತ್ರವಾಗಿ ಬೇರೆ ಯಾರೂ ಕೂಡ ನಿನ್ನನ್ನು ಪೂಜಿಸಲು ಸಾಧ್ಯವಿಲ್ಲ. ಉಳಿದವರೆಲ್ಲರೂ ಕೂಡ ಅಸ್ವತಂತ್ರರಾಗಿದ್ದಾರೆಂದು ಈ ಶ್ರುತಿಯು ಹೇಳುತ್ತಿದೆ. ಈ ಸ್ತೋತ್ರದಿಂದ ತನ್ನ ಇಂದ್ರಿಯಗಳಲ್ಲಿದ್ದು ಭಗವಂತನನ್ನು ಕುರಿತು 'ನೀನೇ ನಿನ್ನನ್ನು ಪೂಜಿಸಿಕೋ' ಎಂಬುದಾಗಿ ಪ್ರಾರ್ಥಿಸಲಾಗಿದೆ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ತ್ವಪ್ರದೀಪದಲ್ಲಿ
ರಚನಾನುಪಪತ್ತ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

### ಅಯಸ್ಕಾಂತದಲ್ಲಿ ಸ್ವತಃ ಪ್ರವೃತ್ತಿ ಕಂಡಿದೆಯಲ್ಲವೆ ?

**तत्वप्रकाशिका – ननु श्रुतिसामर्थ्येन पयोऽम्बुनोः प्रवृत्तेरीश्वराधीनत्वेऽप्ययस्कान्ताद्यचेतनान्तरप्रवृत्तौ भविष्यति व्यभिचारः ? सेत्स्यति च प्रधानस्य प्रवृत्तौ निदर्शनम् ? उददाहरणस्यानादरणीयत्वात् । न हि पयोऽम्बुप्रवृत्तेरीश्वराधीनत्वेऽन्यथापि तन्निमित्तया भवितव्यमित्यस्ति नियामकम् ? इत्याशङ्कां परिहरत्सूत्रमुन्यस्य व्याचष्टे – व्यतिरेकेति ।।**

ಶ್ರುತಿಯ ಸಾಮರ್ಥ್ಯದಿಂದ ಹಾಲು ಮತ್ತು ನೀರುಗಳ ಪ್ರವೃತ್ತಿಯು ಈಶ್ವಾರಾಧೀನವೆಂದು ಸಿದ್ಧವಾಯಿತು. ಆದರೂ ಕೂಡ ಅಯಸ್ಕಾಂತ ಮೊದಲಾದ ಬೇರೆ ಅಚೇತನಗಳ ಪ್ರವೃತ್ತಿಯಲ್ಲಿ ಈಶ್ವರಾಧೀನ್ಯವನ್ನು ಒಪ್ಪುವ ಅವಶ್ಯಕತೆಯಿಲ್ಲ. ಆದ್ದರಿಂದ ಆ ಸ್ಥಳದಲ್ಲಿ ವ್ಯಭಿಚಾರವು ಬರುತ್ತದೆ. ಮತ್ತು ಪ್ರಧಾನವು ಸ್ವತಃಪ್ರವೃತ್ತವಾಗುತ್ತದೆನ್ನಲು ಉದಾಹರಣೆಯೂ ಕೂಡ ದೊರಕುತ್ತದೆ. ಈ ಅಯಸ್ಕಾಂತದ ಉದಾಹರಣೆಯನ್ನು ಅನಾದರ ಮಾಡಬಾರದು. ಹಾಲು ಮತ್ತು ನೀರುಗಳ ಪ್ರವೃತ್ತಿಯು ಈಶ್ವರಾಧೀನವೇ ಆಗಲಿ, ಆದರೆ ಅಚೇತನದ ಪ್ರವೃತ್ತಿಯು ಈಶ್ವಾರಾಧೀನ ಎನ್ನಲು ಏನು ನಿಯಾಮಕ ? ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ 'ವ್ಯತಿರೇಕ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः –व्यतिरेकानवस्थितेश्चानपेक्षत्वात् ।। ४।।** पूर्वेणैवेदं परिहृतं किं नेत्यत आह।। **न हीति ।।** भाष्ये पयोऽबुविषय एव श्रुत्युक्तेरिति भावः।

ಹಿಂದಿನ ಸೂತ್ರದಿಂದಲೇ ಈ ಆಕ್ಷೇಪವು ಪರಿಹಾರವಾಗಿಲ್ಲವೇನು? ಎಂಬ ಪ್ರಶ್ನೆಗೆ 'ನ ಹಿ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಭಾಷ್ಯದಲ್ಲಿ ಹಾಲು ಮತ್ತು ನೀರುಗಳೂ ಕೂಡ ಈಶ್ವರಾಧೀನ ಎಂಬ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಹೇಳಿದ್ದಾರೆಂದು ತಿಳಿಯಬೇಕು.

ವಿವರಣೆ - 'ಪ್ರಧಾನಂ ನ ಸ್ವತಂತ್ರಂ ಪ್ರವರ್ತತೇ ಅಚೇತನತ್ವಾತ್' ಎಂಬ ಅನುಮಾನಕ್ಕೆ ಅಯಸ್ಕಾಂತದಲ್ಲಿ ವ್ಯಭಿಚಾರ ಬರುತ್ತದೆ. ಅಯಸ್ಕಾಂತವು ಅಚೇತನವಾದ್ದರಿಂದ

ಹೇತು ಇದೆ. ಆದರೆ ಇದರಲ್ಲಿ ಸ್ವತಃಪ್ರವೃತ್ತಿಯೇ ಇರುವುದರಿಂದ ಸಾಧ್ಯವು ಇರುವುದಿಲ್ಲ. ಮತ್ತು 'ಪ್ರಧಾನಂ ಸ್ವತಃ ಪ್ರವರ್ತತೇ ಅಚೇತನತ್ವಾತ್ ಅಯಸ್ಕಾಂತವತ್' ಎಂಬುದಾಗಿ ಪ್ರತಿಕೂಲಾನುಮಾನದಿಂದ ಅಯಸ್ಕಾಂತದ ದೃಷ್ಟಾಂತದಿಂದ ಪ್ರಕೃತಿಯಲ್ಲಿ ಸ್ವತಃಪ್ರವೃತ್ತಿಯನ್ನೇ ಸಮರ್ಥನೆ ಮಾಡಬಹುದು.

### ಅಚೇತನಪ್ರವೃತ್ತಿಯು ಪ್ರಮಾಣವಿರುದ್ಧ

**तत्वप्रकाशिका – सर्वप्रवृत्तीनामीश्वरनिमित्तत्वस्य श्रुतिसिद्धत्वान्न कुत्राप्युक्तहेतोर्व्यभिचारो नाप्यचेतनप्रवृत्तौ निदर्शनमिति । अतः प्रमाणविरुद्धं निष्प्रमाणकं च स्वतोऽचेतनप्रवृत्तिमतमनपेक्षितमेव प्रेक्षावतामिति भावः ।**

ಎಲ್ಲಾ ವಸ್ತುಗಳ ಪ್ರವೃತ್ತಿಗೂ ಈಶ್ವರನೇ ನಿಮಿತ್ತಕಾರಣನಾಗಿದ್ದಾನೆ. ಈ ವಿಷಯವು ಶ್ರುತಿಸಿದ್ಧವಾಗಿದೆ. ಆದ್ದರಿಂದ ಅಚೇತನತ್ವಹೇತುವಿಗೆ ಎಲ್ಲಿಯೂ ಕೂಡ ವ್ಯಭಿಚಾರವೇ ಬರುವುದಿಲ್ಲ. ಮತ್ತು ಅಚೇತನಕ್ಕೆ ಸ್ವತಂತ್ರ ಪ್ರವೃತ್ತಿ ವಿಷಯದಲ್ಲಿ ಯಾವುದೇ ದೃಷ್ಟಾಂತವೂ ಕೂಡ ಇರುವುದಿಲ್ಲ. ಆದ್ದರಿಂದ ಅಚೇತನಕ್ಕೆ ಸ್ವತಃಪ್ರವೃತ್ತಿ ಇದೆ ಎಂಬುದು ಪ್ರಮಾಣ-ವಿರುದ್ಧವಾಗಿದೆ. ಮತ್ತು ಪ್ರಮಾಣವೂ ಇರುವುದಿಲ್ಲ. ಹಾಗಾಗಿ ಪ್ರೇಕ್ಷಾವಂತರು ಅಚೇತನವು ಸ್ವತಃ ಪ್ರವೃತ್ತವಾಗುತ್ತದೆಂಬ ಮತವನ್ನು ಅಂಗೀಕರಿಸುವುದಿಲ್ಲ.

ವಿವರಣೆ - 'ಏತಸ್ಯ ವಾ ಅಕ್ಷರಸ್ಯ' ಮತ್ತು 'ಏತೇನ ಹ ವಾವ' 'ನ ಋತೇ ತ್ವತ್ ಕ್ರಿಯತೇ' ಇತ್ಯಾದಿ ಶ್ರುತಿಪ್ರಮಾಣಗಳು ಸಕಲಪ್ರವೃತ್ತಿಯು ಈಶ್ವರಾಧೀನವೆಂದು ಸಮರ್ಥನೆ ಮಾಡುತ್ತಿವೆ. ಮತ್ತು ಅಚೇತನದ ಸ್ವತಂತ್ರಪ್ರವೃತ್ತಿವಿಷಯದಲ್ಲಿ ಪ್ರಮಾಣವೂ ಕೂಡ ಇರುವುದಿಲ್ಲ. ಆದ್ದರಿಂದ ಈ ಮತವನ್ನು ಉಪೇಕ್ಷೆ ಮಾಡಬೇಕು ಎಂಬುದು ಸೂತ್ರದ ಅಭಿಪ್ರಾಯ.

### 'ನಿಷುಸೀದ' ಎಂಬ ಶ್ರುತ್ಯರ್ಥ

**तत्वप्रकाशिका – इन्द्रियगणपते धनवन् यशस्विन् मखपते त्वमिन्द्रियगणेषु निषुसीद । तत्र च स्थित्वा महान्तं परमानन्दमाश्चर्यतमं त्वां त्वमेव पूजय । यतस्त्वामेव विशेषेण ज्ञानिनां प्रकृष्टतममाहुरतस्तवैव**

**पूज्यत्वम् । यतश्च त्वदृते दूरे समीपे वा न केनचित् किञ्चित् क्रियते अतस्त्वमेव पूजक इत्यर्थः । अतो निरीश्वरसाङ्ख्यमतस्याप्रमाणत्वेन तद्विरोधाभावायुक्तं हरेर्लक्षणमिति सिद्धम् ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् रचनानुपपत्त्यधिकरणम्।।**

ಗಣಪತೇ = ಸಕಲ ಇಂದ್ರಿಯಗಳಿಗೆ ನಿಯಾಮಕನಾದ ಭಗವಂತನೇ, ಮಘವನ್ = ಸಂಪತ್‌ಭರಿತನಾದವನೇ, ಯಶಸ್ವಿನ್ = ಯಶಸ್ವಿಯಾದವನೇ, ಎಲ್ಲಾ ಯಜ್ಞಗಳಿಗೂ ಅಧಿಪತಿಯಾದವನೇ ನೀನು, ಗಣೇಷು = ಇಂದ್ರಿಯಗಳ ಸಮೂಹದಲ್ಲಿ, ನಿಷುಸೀದ = ಬಂದು ನೆಲೆಸು, ಕವೀನಾಂ = ಜ್ಞಾನಿಗಳು, ತ್ವಾಂ = ನಿನ್ನನ್ನು, ವಿಪ್ರತಮಮ್ = ಸರ್ವೋತ್ತಮನನ್ನಾಗಿ, ಆಹುಃ = ಹೇಳುತ್ತಾರೆ, ಚಿತ್ರಂ = ಅತ್ಯಂತ ಆಶ್ಚರ್ಯನಾದ, ಮಹಾಮರ್ಕಂ = ಪರಮಾನಂದಸ್ವರೂಪಿಯಾದ ತ್ವಾಂ = ನಿನ್ನನ್ನು ನೀನೇ, ಅರ್ಚ =ಪೂಜಿಸಿಕೊಳ್ಳು. ಏಕೆಂದರೆ ವಿಶೇಷವಾಗಿ ಜ್ಞಾನಿಗಳು ಅತ್ಯಂತ ಶ್ರೇಷ್ಠನೆಂದು ಹೇಳುತ್ತಾರೆ. ಆದ್ದರಿಂದ ನೀನೇ ಪೂಜ್ಯನಾಗಿರುವಿ. ಯಾವ ಕಾರಣದಿಂದ ತ್ವದೃತೇ = ನಿನ್ನನ್ನು ಬಿಟ್ಟು, ಕಿಂಚನ = ಯಾವುದೂ ಕೂಡ ಆರೇ = ದೂರದ ಪದಾರ್ಥವಾಗಲಿ ಹತ್ತಿರದ ಪದಾರ್ಥವಾಗಲಿ, ನ ಕ್ರಿಯತೇ=ಯಾರಿಂದಲೂ ಸ್ವತಂತ್ರವಾಗಿ ಏನನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ನೀನೇ ಪೂಜಕನಾಗಿರುವಿ. ಎಂಬುದು ನಿಷುಸೀದ ಇತ್ಯಾದಿ ಶ್ರುತಿಯ ಅರ್ಥ.

ಹೀಗೆ ನಿರೀಶ್ವರಸಾಂಖ್ಯಮತ ಅಪ್ರಾಮಾಣಿಕವಾಗಿರುವುದರಿಂದ ಇದರ ವಿರೋಧವು ಪ್ರಾಪ್ತವಾಗುವುದಿಲ್ಲ. ಆದ್ದರಿಂದ ಶ್ರೀಹರಿಯ ಜಗಜ್ಜನ್ಮಾದಿಕಾರಣತ್ವಲಕ್ಷಣವು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ ರಚನಾನುಪಪತ್ತ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

**भावदीपः** – निषुसीद गणपते गणेषु त्वामाहुर्विप्रतमं कवीनाम्। न ऋते त्वत्क्रियते किञ्चनारे महामर्कं मघवन् चित्रमर्चेति समग्रमन्त्रार्थमाह – **इन्द्रियेति**।। मघवन्नित्यस्य कर्मनिर्णयोक्तमर्थत्रयमाह – **धनवन्नित्यादिना**।। महां अर्कं चित्रमिति पदत्रयार्थमाह – **महान्तमित्यादिना**।। अर्च पूजय। विप्रतममित्यस्यार्थः विशेषेणेत्यादि । आर इत्यस्य दूरे समीपे वेति ॥ **अत इति**।। तदुक्तप्रमेयस्याप्रामाणिकत्वात्प्रमाणविरुद्धत्वाच्चेत्यर्थः ॥

**।। इति राघवेन्द्रयतिकृते भावदीपे रचनानुपपत्त्यधिकरणम् ।।**

**ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್ ।**
**ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚಾ ॥**

ಈ ಸಮಗ್ರ ಮಂತ್ರದ ಅರ್ಥವನ್ನು 'ಇಂದ್ರಿಯ ಗಣಪತೇ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಮಘವನ್' ಎಂಬ ಪದಕ್ಕೆ ಕರ್ಮನಿರ್ಣಯದಲ್ಲಿ ಹೇಳಿದ ಮೂರು ಅರ್ಥಗಳನ್ನು 'ಧನವನ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಧನವನ್ ಯಶಸ್ವಿನ್ ಮಖಮತೇ' ಈ ಮೂರು 'ಮಘವನ್' ಎಂಬ ಪದದ ಅರ್ಥವಾಗಿದೆ. ಮಹಾ, ಅರ್ಕಂ, ಚಿತ್ರಮ್ ಎಂಬ ಮೂರು ಪದಗಳ ಅರ್ಥವನ್ನು 'ಮಹಾಂತಮ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಅರ್ಚ' ಎಂಬ ಪದಕ್ಕೆ 'ಪೂಜಿಸು' ಎಂದರ್ಥ. 'ವಿಪ್ರತಮಮ್' ಎಂಬುದರ ಅರ್ಥವನ್ನು 'ವಿಶೇಷೇಣ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಆರೇ' ಎಂಬುದಕ್ಕೆ ದೂರದಲ್ಲಿ ಅಥವಾ ಸಮೀಪದಲ್ಲಿ ಎಂದರ್ಥ. 'ಅತಃ' ಎಂಬ ಪದಕ್ಕೆ ಸಾಂಖ್ಯರು ಹೇಳಿದ ಪ್ರಮೇಯವು ಅಪ್ರಮಾಣಿಕವಾದ್ದರಿಂದ ಮತ್ತು ಪ್ರಮಾಣವಿರುದ್ಧವಾದ್ದರಿಂದ ಎಂದರ್ಥ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ರಚನಾನುಪಪತ್ತ್ಯಧಿಕರಣದ ಕನ್ನಡ ಅನುವಾದವು ಮುಗಿಯಿತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## द्वितीयाध्यायस्य द्वितीयः पादः

### रचनानुपपत्त्यधिकरणम् (२।२।१)

ಸಮಯಪಾದದ ಪ್ರವೃತ್ತಿ ಹಾಗೂ ಉದ್ದೇಶ

रचनानुपपत्तेश्च नानुमानम् ।।

इतरेषां चानुपलब्धेरित्युक्तहेतुविस्तररूपत्वात्तदन्तरं समयाविरोधोऽत्र पादेऽभिधीयते । हैतुकपाषण्डभेदेन समया द्विविधाः पूर्वोत्तराधिकरणषट्क द्वयेन निरस्यन्ते । वेदवादस्य युक्तिपाद एव निरासात् ।

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಲ್ಲಿ ಯಾವ ಹೇತುವನ್ನು ಹೇಳಿದರೋ, ಅದರ ವಿಸ್ತಾರರೂಪವಾದ್ದರಿಂದ ಯುಕ್ತಿಪಾದ ಮುಗಿದ ಮೇಲೆ ಸಮಯಗಳ ವಿರೋಧವನ್ನು ಪರಿಹಾರ ಮಾಡುವುದು ಸಂಗತವಾಗಿದೆ. ಅಂಥ ಸಮಯಗಳ ಅವಿರೋಧವನ್ನು ಎರಡನೆಯ ಈ ಪಾದದಲ್ಲಿ ಹೇಳುತ್ತಿದ್ದಾರೆ.

ಒಟ್ಟು ಸಮಯಗಳು ಎರಡು ವಿಧ - ೧. ಹೈತುಕ, ೨. ಪಾಷಂಡ ಎಂದು. ಈ ಪಾದದಲ್ಲಿ ಒಟ್ಟು ಹನ್ನೆರಡು ಅಧಿಕರಣಗಳಿವೆ. ಮೊದಲ ಆರು ಅಧಿಕರಣಗಳಲ್ಲಿ ಹೈತುಕಮತವನ್ನು ಅನಂತರದ ಆರು ಅಧಿಕರಣಗಳಲ್ಲಿ ಪಾಷಂಡಮತವನ್ನು ನಿರಾಕರಣೆ ಮಾಡಿದ್ದಾರೆ. ವೇದವನ್ನು ಅಂಗೀಕರಿಸುವವರ ವಾದವನ್ನು ಯುಕ್ತಿಪಾದದಲ್ಲಿ ನಿರಾಕರಣೆ ಮಾಡಿದ್ದಾಗಿದೆ.

**ವಿವರಣೆ** - ಸ್ಮೃತ್ಯಧಿಕರಣದ 'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಲ್ಲಿ ಎಲ್ಲಾ ಸಮಯಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದರು. ಅದರ ವಿಸ್ತಾರಕ್ಕಾಗಿ ಈ ಪಾದ ಹೊರಟಿದೆ. ಯಾರು ಅನುಮಾನವನ್ನೇ ಶರಣಾಗಿದ್ದಾರೋ ಅಂಥವರು ಹೈತುಕರು ಎಂದು ಕರೆಸಿಕೊಳ್ಳುತ್ತಾರೆ. ವೇದವನ್ನು ಪ್ರಮಾಣಗಳೆಂದು ಒಪ್ಪದವರು ಪಾಷಂಡಿಗಳು ಎಂದು ಕರೆಸಿಕೊಳ್ಳುತ್ತಾರೆ. ಈ ಸಮಯಪಾದದಲ್ಲಿ ಹೈತುಕರನ್ನು ಹಾಗೂ ಪಾಷಂಡಿಗಳನ್ನು ನಿರಾಕರಣೆ ಮಾಡಿದ್ದಾರೆ.

## 'ರಚನಾನುಪಪತ್ತೇಶ್ಚ ನಾನುಮಾನಮ್' ಎಂಬ ಸೂತ್ರದ ಅರ್ಥ

**अत्र नये निरीश्वरसाङ्ख्यमतं निरस्यते । प्रस्तावात् कर्त्रिति लभ्यते । अनुमीयत इत्यनुमानम् । ''कृत्यल्युटो बहुलम्'' इति कर्मणि ल्युट् । महदादिकार्यं सकारणं कार्यत्वादिति साङ्ख्यानुमानकल्पितं प्रधानं न कर्तृ। कुतः ? रचनानुपपत्तेर्जडस्य रचयितृत्वानुपपत्तेः । चशब्देन साधकमानाभावाच्चेति समुच्चीयते ।**

ನಿರೀಶ್ವರಸಾಂಖ್ಯಮತವನ್ನು ಈ ರಚನಾನುಪಪತ್ತ್ಯಧಿಕರಣದಲ್ಲಿ ನಿರಾಕರಣೆ ಮಾಡುತ್ತಾರೆ. ಸೂತ್ರದಲ್ಲಿ ಸಂದರ್ಭಕ್ಕನುಗುಣವಾಗಿ ಕರ್ತೃ ಎಂಬ ಪದವು ಲಭ್ಯವಾಗುತ್ತದೆ. ಅನುಮಾನಶಬ್ದಕ್ಕೆ 'ಅನುಮೀಯತೇ ಇತಿ' ಎಂಬ ನಿಷ್ಪತ್ತಿಯಿಂದ ಅನುಮಾನದಿಂದ ಸಾಧಿಸಲ್ಪಟ್ಟದ್ದು ಎಂಬರ್ಥವು ಲಭ್ಯವಾಗುತ್ತದೆ. ಅನುಮಾನಶಬ್ದದಲ್ಲಿ ಲ್ಯುಟ್ ಪ್ರತ್ಯಯವಿದೆ. ಇದು 'ಕೃತ್ಯಲ್ಯುಟೋ ಬಹುಲಮ್' (೩-೩-೧೧೩) ಎಂಬ ಸೂತ್ರದಿಂದ ಕರ್ಮಾರ್ಥದಲ್ಲಿ ಪ್ರಾಪ್ತವಾಗಿದೆ.

'ಮಹದಾದಿಕಾರಣಂ ಸಕಾರಣಂ ಕಾರ್ಯತ್ವಾತ್' 'ಕಾರ್ಯವಾಗಿರುವುದರಿಂದ ಮಹತ್ತತ್ವಾದಿಗಳು ಕಾರಣಪೂರಕವಾಗಿವೆ. ಹೀಗೆ ಸಾಂಖ್ಯರು ಅನುಮಾನದಿಂದ ಪ್ರಕೃತಿಯು ಜಗತ್‌ಕರ್ತೃವಾಗಿದೆಯೆಂದು

ಸಾಧಿಸುತ್ತಾರೆ. ಇದು ತಪ್ಪು. ಏಕೆಂದರೆ 'ರಚನಾನುಪಪತ್ತೇಃ' = ಜಡವಾದ ಪದಾರ್ಥಕ್ಕೆ ಸ್ವತಂತ್ರವಾದ ಪ್ರವೃತ್ತಿಯು ಅನುಪಪನ್ನವಾಗಿರುವುದರಿಂದ.

'ಚ' ಎಂಬ ಶಬ್ದದಿಂದ ಸಾಧಕಪ್ರಮಾಣವಿಲ್ಲದಿರುವುದರಿಂದ ಎಂಬುದನ್ನು ಸಮುಚ್ಚಯ ಮಾಡಬೇಕು.

### ಸೂತ್ರಕ್ಕೆ ಎರಡನೆಯ ವ್ಯಾಖ್ಯಾನ

ननु प्रधानस्य कर्तृत्वे अनुमानं मानमित्यतोऽप्याह । रचनेति । मानमिति शेषः । करणे ल्युट् । अनुमानं न मानम् । कुतः? अनुमानरचनाया अनुपपत्तेर्दुष्टत्वादित्यर्थः । महदादिकं सकारणकं सजातीयकारणकं सोपादानकारणकं स्वतन्त्रकारणकं चेति रचनायां सिद्धसाधनादिति भावः। एतदर्थमेव रचनेत्यनुमानमिति चोक्तिः। अन्यथा अनुपपत्तेश्च न प्रधानमित्यवक्ष्यत् । कर्तृत्वमिह स्वतःप्रवृत्तिमत्त्वं बोध्यम्।।

ಪ್ರಕೃತಿಯು ಜಗತ್ತಿಗೆ ಕರ್ತೃವಾಗಿದೆ ಎಂಬ ವಿಷಯದಲ್ಲಿ ಅನುಮಾನವು ಪ್ರಮಾಣವಾಗಿದೆ ಎಂದು ಹೇಳಿದ್ದೇವಲ್ಲವೇ? ಎಂಬ ಪ್ರಶ್ನೆಗೂ ಕೂಡ 'ರಚನಾನುಪಪತ್ತೇಃ' ಎಂಬ ಸೂತ್ರವೇ ಉತ್ತರವನ್ನು ನೀಡುತ್ತಿದೆ. ಈ ಎರಡನೆಯ ವ್ಯಾಖ್ಯಾನದಲ್ಲಿ 'ಮಾನಮ್' ಎಂಬ ಪದವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಅನುಮಾನ ಎಂಬ ಪದದಲ್ಲಿರುವ ಲ್ಯುಟ್‌ಪ್ರತ್ಯಯವನ್ನು ಕರಣಾರ್ಥದಲ್ಲಿ ವಿವಕ್ಷಿಸಬೇಕು. ಈಗ ಸೂತ್ರದ ಅರ್ಥ ಹೀಗೆ - 'ಅನುಮಾನಮ್ ನ ಮಾನಮ್ ಅನುಮಾನರಚನಾಯಾ ಅನುಪಪತ್ತೇಃ' 'ಅನುಮಾನವು ಪ್ರಮಾಣವಲ್ಲ. ಪ್ರಧಾನವು ಜಗತ್‌ಕರ್ತೃವಾಗಿದೆ ಎಂದು ಸಾಧಿಸುವ ಅನುಮಾನದ ರಚನೆಯೇ ದುಷ್ಟವಾಗಿರುವುದರಿಂದ' ಎಂದು.

'ಮಹದಾದಿಕಂ ಸಕಾರಣಕಂ ಸಜಾತೀಯಕಾರಣಕಂ ಸೋಪಾದಾನಕಾರಣಕಂ ಸ್ವತಂತ್ರಕಾರಣಕಂ ಕಾರ್ಯತ್ವಾತ್' ಮಹತ್ತತ್ವಾದಿಗಳು ಕಾರಣವುಳ್ಳವುಗಳು, ಸಜಾತೀಯವಾದ ಕಾರಣವುಗಳವುಗಳು, ಉಪಾದಾನಕಾರಣವುಳ್ಳವುಗಳು, ಸ್ವತಂತ್ರಕಾರಣವುಳ್ಳವುಗಳು ಇತ್ಯಾದಿಯಾಗಿ ಅನುಮಾನವನ್ನು ರಚನೆ ಮಾಡಬಹುದು. ಆದರೆ ಈ ಎಲ್ಲಾ ಅನುಮಾನಗಳಿಗೆ ಸಿದ್ಧಸಾಧನತಾ ದೋಷವು ಪ್ರಾಪ್ತವಾಗುತ್ತದೆ.

ಸೂತ್ರದ ಎರಡನೆಯ ಈ ಅರ್ಥವು ವಿವಕ್ಷಿತವಾದ್ದರಿಂದಲೇ ರಚನ ಮತ್ತು ಅನುಮಾನಂ ಎಂಬೆರಡು ಪದಗಳನ್ನು ಪ್ರಯೋಗಿಸಿದ್ದಾರೆ. ಇಲ್ಲದಿದ್ದರೆ 'ಅನುಪಪತ್ತೇಶ್ಚ ನ ಪ್ರಧಾನಮ್' ಎಂದಷ್ಟೇ ಸೂತ್ರವನ್ನು ಹೇಳಿದ್ದರೆ ಸಾಕಾಗುತ್ತಿತ್ತು. ಕರ್ತೃತ್ವವೆಂದರೆ ಇಲ್ಲಿ ಸ್ವತಂತ್ರಪ್ರವೃತ್ತಿವುಳ್ಳದ್ದು ಎಂಬರ್ಥವನ್ನೇ ವಿವಕ್ಷಿಸಬೇಕು.

ವಿವರಣೆ - ಸೂತ್ರಕ್ಕೆ ಒಟ್ಟು ಎರಡು ಅರ್ಥ. ೧. ಜಡವಾದ ಪ್ರಕೃತಿಗೆ ಸ್ವತಂತ್ರವಾದ ಪ್ರವೃತ್ತಿಯು ಅನುಪಪನ್ನವಾದ್ದರಿಂದ ಅನುಮಾನದಿಂದ ಸಿದ್ಧವಾದ ಪ್ರಕೃತಿಗೆ ಸ್ವತಂತ್ರಕರ್ತೃತ್ವವು ಯುಕ್ತವಾಗುವುದಿಲ್ಲ. ಈ ಪಕ್ಷದಲ್ಲಿ ಅನುಮಾನ ಶಬ್ದದಲ್ಲಿರುವ ಲ್ಯುಟ್‌ಪ್ರತ್ಯಯವು ಕರ್ಮಾರ್ಥಕವಾಗುತ್ತದೆ.

೨. ಪ್ರಕೃತಿಯೇ ಜಗತ್‌ಕರ್ತೃವಾಗಿದೆ ಎಂಬ ವಿಷಯದಲ್ಲಿ ಅನುಮಾನವು ಪ್ರಮಾಣವಲ್ಲ. ಏಕೆಂದರೆ ಹಾಗೇ ಸಾಧಿಸುವ ಅನುಮಾನಗಳೆಲ್ಲವೂ ದುಷ್ಟವಾಗುತ್ತವೆ ಇದು ಎರಡನೆಯ ವ್ಯಾಖ್ಯಾನ. ಈಗ ಅನುಮಾನ ಶಬ್ದದಲ್ಲಿರುವ ಲ್ಯುಟ್‌ಪ್ರತ್ಯಯವು ಕರಣಾರ್ಥವಾಗಿರುತ್ತದೆ. ಈ ಎರಡೂ ವ್ಯಾಖ್ಯಾನಗಳು ಸೂತ್ರಕಾರರಿಗೆ ಸಮ್ಮತವಾಗಿವೆ. ಎರಡನೆಯ ವ್ಯಾಖ್ಯಾನವು ಸಮ್ಮತವಾಗದಿದ್ದರೆ 'ಅನುಪಪತ್ತೇಶ್ಚ ನ ಪ್ರಧಾನಂ' ಎಂದಷ್ಟೇ ಸಾಕಾಗಿತ್ತು. ಇಷ್ಟರಿಂದಲೇ ಮೊದಲನೆಯ ವ್ಯಾಖ್ಯಾನವು ಸಮರ್ಥಿತವಾಗುತ್ತಿತ್ತು.

## ಮತ್ತೊಂದು ಕಾರಣದಿಂದ ಪ್ರಕೃತಿಗೆ ಜಗತ್‌ಕರ್ತೃತ್ವ ನಿರಾಕರಣೆ

**इतश्च जडं न कर्त्रित्याह -**

**प्रवृत्तेश्च ।।२-२-२।।**

**चेतनस्येति पूर्वत्रार्थात् प्रकृतमन्वेति । नानुमानमित्यस्ति । दर्शनादिति शेषः । पटादिसृष्टौ चेतनप्रवृत्तिदर्शनाच्च नानुमानं प्रधानं कर्त्रित्यर्थः । पटसृष्टिदृष्टान्तेन महदादिसृष्टावपि चेतनाधीनत्वानुमानं सुशकमिति भावः ।**

ಮತ್ತೊಂದು ಕಾರಣದಿಂದಲೂ ಕೂಡ ಜಡವಾದ ಪ್ರಕೃತಿಗೆ ಕರ್ತೃತ್ವವು ಯುಕ್ತವಾಗುವುದಿಲ್ಲ. ಇದನ್ನು ತಿಳಿಸುವುದಕ್ಕಾಗಿ 'ಪ್ರವೃತ್ತೇಶ್ಚ' ಎಂಬ ಸೂತ್ರವು ಹೊರಟಿದೆ.

ಮತ್ತೊಂದು ಕಾರಣದಿಂದಲೂ ಜಡವಾದ ಪ್ರಕೃತಿಗೆ ಜಗತ್ ಕರ್ತೃತ್ವವು ಕೂಡುವುದಿಲ್ಲ ಎಂಬುದನ್ನು ಸಮರ್ಥಿಸಲು 'ಪ್ರವೃತ್ತೇಶ್ಚ' ಎಂಬ ಸೂತ್ರವು ಹೊರಟಿದೆ. ಹಿಂದಿನ ಸೂತ್ರದಲ್ಲಿ 'ಚೇತನಸ್ಯ' ಎಂಬ ಪದವು ಅರ್ಥಾತ್ ಲಭ್ಯವಾಗಿತ್ತು. ಅದನ್ನು ಈ ಸೂತ್ರದಲ್ಲೂ ಕೂಡ ಪರಾಮರ್ಶಿಸಬೇಕು. 'ನ ಅನುಮಾನಂ' ಎಂಬೆರಡು ಪದಗಳನ್ನು ಅನುವೃತ್ತಿ ಮಾಡಬೇಕು. 'ದರ್ಶನಾತ್' ಎಂಬ ಪದವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಸೂತ್ರಕ್ಕೆ ಹೀಗರ್ಥ - ಪಟ ಮೊದಲಾದ ಸೃಷ್ಟಿಗಳಲ್ಲಿ ಚೇತನರ ಪ್ರವೃತ್ತಿಯು ಕಂಡು ಬರುವುದರಿಂದ ಸಾಂಖ್ಯರು ಹೇಳುವ ಅನುಮಾನಸಿದ್ಧವಾದ ಪ್ರಕೃತಿಗೆ ಕರ್ತೃತ್ವವು ಕೂಡುವುದಿಲ್ಲ ಎಂದು. ಪಟಸೃಷ್ಟಿಯ ಉದಾಹರಣೆಯಿಂದ ಮಹತ್ತತ್ತ್ವಾದಿಗಳ ಸೃಷ್ಟಿಯಲ್ಲೂ ಕೂಡ ಚೇತನಾಧೀನತ್ವವನ್ನು ಸುಲಭವಾಗಿ ಅನುಮಾನ ಮಾಡಬಹುದು ಎಂದಭಿಪ್ರಾಯ.

**ವಿವರಣೆ** - ಈ ಸೂತ್ರದಲ್ಲಿ 'ಚೇತನಸ್ಯ ನ ಅನುಮಾನಂ ದರ್ಶನಾತ್' ಇಷ್ಟು ಪದಗಳನ್ನು ಇಟ್ಟುಕೊಳ್ಳಬೇಕು. ಹಿಂದಿನ ಸೂತ್ರದಲ್ಲಿ ಅಚೇತನಕ್ಕೆ ಸ್ವತಂತ್ರಪ್ರವೃತ್ತಿ ಇಲ್ಲವೆಂದು ಹೇಳಲಾಯಿತು. ಅರ್ಥಾತ್ ಚೇತನಕ್ಕೆ ಸ್ವತಂತ್ರಪ್ರವೃತ್ತಿ ಇದೆ ಎಂದು ಹೇಳಿದಂತಾಯಿತು. ಹಾಗಾಗಿ 'ಚೇತನಸ್ಯ' ಎಂಬ ಪದವು ಹಿಂದಿನ ಸೂತ್ರದಲ್ಲಿ ಅರ್ಥಾತ್ ಲಭ್ಯವಾಗಿದೆ. ಅದನ್ನೇ ಇಲ್ಲೂ ಕೂಡ ಇಟ್ಟುಕೊಳ್ಳಬೇಕು. 'ಚೇತನಸ್ಯ ಪ್ರವೃತ್ತೇಃ ದರ್ಶನಾಚ್ಚ ನ ಅನುಮಾನಂ' ಎಂದು ಸೂತ್ರವನ್ನು ಹೇಳಿದಂತಾಗುತ್ತದೆ. ಪಟಾದಿ ಸೃಷ್ಟಿಗಳಲ್ಲಿ ಚೇತನಪ್ರವೃತ್ತಿಯೇ ಕಂಡಿರುವುದರಿಂದ ಜಡವಾದ ಪ್ರಧಾನವು ಕರ್ತೃವಾಗುತ್ತದೆ ಎಂದು ಹೇಳಬಾರದು ಎಂಬುದು ಈ ಸೂತ್ರದ ಅಭಿಪ್ರಾಯ.

### ನಿರ್ವಿಕಾರನಾದ ಚೇತನನಿಗೆ ಹೇಗೆ ಸ್ವತಂತ್ರಪ್ರವೃತ್ತಿ ?
### (ತತ್ವಪ್ರದೀಪದಲ್ಲಿ ಸೂತ್ರಾರ್ಥ)

**तत्त्वप्रदीपे तु चेतनस्यापि निर्विकारस्य न प्रवृत्तिरित्यत आह - प्रवृत्तेश्च । योऽहमनुभविता स एष कार्यमारभ इति चेतनस्य प्रवृत्तेरनुभवादित्युक्तम् ।**

ತತ್ವಪ್ರದೀಪಕಾರರು ಹೀಗೆ ವ್ಯಾಖ್ಯಾನ ಮಾಡುತ್ತಾರೆ - ಚೇತನನಾದರೂ ಕೂಡ ನಿರ್ವಿಕಾರನಾದ್ದರಿಂದ ಸ್ವತಂತ್ರಪ್ರವೃತ್ತಿಯು ಹೇಗೆ ಕೂಡುತ್ತದೆ ? ಈ ಪ್ರಶ್ನೆಗೆ 'ಪ್ರವೃತ್ತೇಶ್ಚ' ಎಂಬ ಸೂತ್ರವು ಹೊರಟಿದೆ. 'ಯಾವ

ನಾನು ಅನುಭವವನ್ನು ಹೊಂದಿದ್ದೇನೋ, ಅಂಥ ನಾನೇ ಕೆಲಸ ಮಾಡಲು ಪ್ರಾರಂಭಿಸಿದ್ದೇನೆ' ಹೀಗೆ ಪ್ರತಿಯೊಬ್ಬ ಚೇತನನು ಪ್ರವೃತ್ತಿ ಮಾಡುವುದು ಅನುಭವಸಿದ್ಧವಾಗಿದೆ. ಆದ್ದರಿಂದ ಚೇತನನು ನಿರ್ವಿಕಾರನಾಗಿದ್ದರೂ ಕೂಡ ಸ್ವತಂತ್ರಪ್ರವೃತ್ತಿಯನ್ನು ಮಾಡಲು ಅರ್ಹನಾಗುತ್ತಾನೆ.

### ಜಡವಾದ್ದರಿಂದ ಕರ್ತೃತ್ವ ಸಾಧ್ಯವಿಲ್ಲ

जडत्वान्न कर्तृ प्रधानमित्युक्तमाक्षिप्याह -

।। पयोम्बुवच्चेत्तत्राऽपि ।।२-२-३।।

अपीत्यनेन चेतनप्रवृत्तेर्दर्शनादित्याकृष्यते । अनुमानं न कर्त्रित्यस्ति।

ಪ್ರಕೃತಿಯು ಜಡವಾಗಿದೆ. ಆದ್ದರಿಂದಲೇ ಸ್ವತಂತ್ರಕರ್ತೃತ್ವವು ಅನುಪಪನ್ನವಾಗಿದೆ. ಹೀಗೆ ಆಕ್ಷೇಪ ಮಾಡಿ ಸಮಾಧಾನ ಹೇಳುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ -

'ಪಯೋಂಬುವಚ್ಚೇತ್ ತತ್ರಾऽಪಿ'

ಸೂತ್ರದಲ್ಲಿರುವ 'ಅಪಿ' ಎಂಬ ಪದದ ಪ್ರಯೋಗದಿಂದಲೇ 'ಚೇತನಪ್ರವೃತ್ತೇಃ ದರ್ಶನಾತ್' ಎಂಬುದನ್ನು ಹಿಂದಿನ ಸೂತ್ರದಿಂದ ವಿವಕ್ಷಿಸಬೇಕೆಂದು ತಿಳಿಯಬೇಕು. ಹಿಂದಿನಂತೆ ಈ ಸೂತ್ರದಲ್ಲೂ ಕೂಡ 'ಅನುಮಾನಂ ನ ಕರ್ತೃ' ಎಂಬ ಪದಗಳು ಲಭ್ಯವಾಗುತ್ತವೆ.

यथा पयः क्षीरं स्वतो दध्यात्मना परिणमते । यथा वा जलं स्वतो गच्छति तथाऽनुमानं कर्त्री,

ಯಾವ ರೀತಿಯಾಗಿ ಹಾಲು ಯಾರೊಬ್ಬ ಚೇತನನ ಅಪೇಕ್ಷೆಯೂ ಇಲ್ಲದೇ ಮೊಸರಾಗಿ ಪರಿಣಾಮವನ್ನು ಹೊಂದುತ್ತದೋ, ಅಥವಾ ಯಾರೊಬ್ಬರ ಅಪೇಕ್ಷೆಯೂ ಇಲ್ಲದೇ ನೀರು ತಾನಾಗಿಯೇ ಹರಿಯುತ್ತದೋ, ಅದರಂತೆ ಪ್ರಕೃತಿಯೂ ಕೂಡ ಜಗತ್ತನ್ನು ತಾನಾಗಿಯೇ ಸೃಷ್ಟಿ ಮಾಡುತ್ತದೆ. ಇಷ್ಟು ಸಾಂಖ್ಯರ ಅಭಿಪ್ರಾಯ.

### ಹಾಲು ನೀರುಗಳ ಪ್ರವೃತ್ತಿಗೂ ಈಶ್ವರನು ಬೇಕು

इति चेत् न । तत्रापि पयोम्ब्वादावपीशाख्यचेतनप्रवृत्तेर्दर्शनात् ''एतेन ह वाव पयो मण्डं भवति । एतस्य वाऽक्षरस्य प्रशासने गार्गि प्राच्यो नद्यः स्यन्दन्त'' इत्यादावित्यर्थः । ततश्च जडत्वं न व्यभिचारीति भावः । स्वतः परिणामिपयः, अम्बु तु प्रवृत्तिमात्रे दृष्टान्त इति द्वयोक्तिः।।

ಇದು ತಪ್ಪು. ಹಾಲು ನೀರುಗಳಲ್ಲೂ ಕೂಡ ಈಶ್ವರನ ಪ್ರವೃತ್ತಿಯು ಇದ್ದೇ ಇರುತ್ತದೆ. ಈ ವಿಷಯದಲ್ಲಿ 'ಏತೇನ ಹ ವಾವ ಪಯೋ ಮಂಡಂ ಭವತಿ' ಈಶ್ವರನಿಂದಲೇ ಹಾಲು ಮೊಸರಾಗುತ್ತದೆ ಎಂಬ ಶ್ರುತಿಯು ಪ್ರಮಾಣವಾಗಿದೆ. 'ಏತಸ್ಯ ವಾಽಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋ ನದ್ಯಃ ಸ್ಯಂದಂತೇ' ಅಕ್ಷರನಾಮಕನಾದ ಈಶ್ವರನಿಂದಲೇ ನದಿಗಳು ಹರಿಯುತ್ತವೆ. ಹೀಗೆ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಜಡವಾದ ಪ್ರಕೃತಿಯು ಕರ್ತೃವಾಗುವುದಿಲ್ಲ ಎಂದು ಸಾಧಿಸುವ ಅನುಮಾನಕ್ಕೆ ವ್ಯಭಿಚಾರವು ಬರುವುದಿಲ್ಲ.

ತಾನಾಗಿಯೇ ಪರಿಣಾಮ ಹೊಂದುತ್ತದೆ ಎಂಬ ವಿಷಯದಲ್ಲಿ ಹಾಲನ್ನು ಸೂತ್ರಕಾರರು ದೃಷ್ಟಾಂತವನ್ನಾಗಿ ನೀಡಿದ್ದಾರೆ. ಸ್ವತಃ ಪ್ರವೃತ್ತಿ ಮಾಡುವಿಕೆ ಎಂಬ ವಿಷಯದಲ್ಲಿ ನೀರನ್ನು ದೃಷ್ಟಾಂತವನ್ನಾಗಿ ನೀಡಿದ್ದಾರೆ.

### 'ವ್ಯತಿರೇಕಾನವಸ್ಥಿತೇಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ

अस्तु श्रुतिबलात्पयोम्ब्वादावेवम् । अयस्कान्तादिरन्यस्तु दृष्टान्तः स्यादित्यथ आह -

।। व्यतिरेकानवस्थितेश्चानपेक्षत्वात् ।।२-२-४।।

प्रकृतेशोऽन्वेति । ''न ऋते त्वत्क्रियते'' इति श्रुत्येशव्यतिरेकेण कस्यापि कर्मणोऽनवस्थानाच्च न कोऽपि दृष्टान्त इत्यनपेक्षत्वात् सद्भिरनाद रणीयत्वादनुमानकर्तृत्वस्येत्यर्थः ।

ಶ್ರುತಿಯ ಆಧಾರದಿಂದ ಹಾಲು ಮತ್ತು ನೀರುಗಳಲ್ಲಿ ಈಶ್ವರನ ಅಪೇಕ್ಷೆಯು ಆವಶ್ಯಕ ಎಂದು ಅಂಗೀಕರಿಸೋಣ. ಆದರೆ ಆಯಸ್ಕಾಂತ ಮೊದಲಾದ ಜಡಪದಾರ್ಥಗಳು ಸ್ವತಂತ್ರವಾಗಿ ಪ್ರವೃತ್ತಿ ಮಾಡುತ್ತವೆನ್ನಲು ದೃಷ್ಟಾಂತವನ್ನಾಗಿ ವಿವಕ್ಷಿಸಬಹುದಲ್ಲವೇ? ಈ ಪ್ರಶ್ನೆಗೆ ಉತ್ತರಿಸಲು 'ವ್ಯತಿರೇಕಾನುವಸ್ಥಿತೇಶ್ಚಾನಪೇಕ್ಷತ್ವಾತ್' ಎಂಬ ಸೂತ್ರವು ಹೊರಟಿದೆ.

ಹಿಂದೆ ಪ್ರಕೃತವಾದ ಈಶ ಎಂಬ ಪದವು ಇಲ್ಲೂ ಕೂಡ ಅನ್ವಯವನ್ನು ಹೊಂದುತ್ತದೆ. 'ವ್ಯತಿರೇಕಾನವಸ್ಥಿತೇಃ', ವ್ಯತಿರೇಕ = 'ನ ಋತೇ ತ್ವತ್ಕ್ರಿಯತೇ' ಎಂಬ ಶ್ರುತಿಯಿಂದ ಇದನ್ನು ತಿಳಿಯಬೇಕು. ಈಶ್ವರನಿಲ್ಲದೇ ಯಾವುದೇ ಕ್ರಿಯೆಯು, ಅನವಸ್ಥಿತೇಃ = ನಡೆಯಲು ಸಾಧ್ಯವಿಲ್ಲವಾದ್ದರಿಂದ ಜಡಕ್ಕೆ ಸ್ವತಂತ್ರವಾದ ಪ್ರವೃತ್ತಿಯಿದೆ ಎಂದು ಸಾಧಿಸಲು ಜಗತ್ತಿನಲ್ಲಿ ದೃಷ್ಟಾಂತವೇ ಇಲ್ಲ. 'ಅನಪೇಕ್ಷತ್ವಾತ್' = ಸಜ್ಜನರಿಂದ ತಿರಸ್ಕಾರಾರ್ಹವಾಗಿರುವುದರಿಂದ ಪ್ರಕೃತಿಯು ಜಗತ್ತಿಗೆ ಕರ್ತೃವಾಗಿದೆ ಎಂಬ ವಾದವು ಅಯುಕ್ತವಾಗಿದೆ. ಇಷ್ಟು ಸೂತ್ರಾರ್ಥ.

**यद्वाऽयस्कान्तादेरपि पूर्वेणैव निराससम्भवात् कैमुत्येनोक्तार्थं साधयति -व्यतिरेकेति । चेतनप्रवृत्तेरित्यस्ति । ईशव्यतिरेकेण चेतनप्रवृत्तेरप्यनवस्थानान्नानुमानं स्वतः प्रवृत्तिमदिति किमु वाच्यमित्यर्थः । अप्रमाणकं प्रमाणविरुद्धं च तन्मतं नोपादेयमिति भावः ॥१॥**

ಅಥವಾ ಆಯಸ್ಕಾಂತ ಮೊದಲಾದ ದೃಷ್ಟಾಂತಗಳೂ ಕೂಡ ಹಿಂದಿನ ಸೂತ್ರದಿಂದಲೇ ನಿರಾಕೃತವಾಗಿದೆ. ಈ ದೃಷ್ಟಾಂತದ ನಿರಾಕರಣೆಗೋಸ್ಕರ ಈ ಸೂತ್ರ ಹೊರಟಿದೆ ಎಂದು ಹೇಳಬೇಕಾಗಿಲ್ಲ. ಕೈಮುತ್ಯನ್ಯಾಯದಿಂದ ಪ್ರಧಾನಕ್ಕೆ ಕರ್ತೃತ್ವವಿಲ್ಲವೆಂಬುದರ ಸಾಧನೆಗಾಗಿ 'ವ್ಯತಿರೇಕ' ಇತ್ಯಾದಿ ಸೂತ್ರವು ಹೊರಟಿದೆ. ಈ ವ್ಯಾಖ್ಯಾನದಲ್ಲಿ 'ಚೇತನ ಪ್ರವೃತ್ತೇಃ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಈಶ್ವರನಿಲ್ಲದೇ ಚೇತನಪ್ರವೃತ್ತಿಯೇ ಕೂಡುತ್ತಿಲ್ಲ. ಹೀಗಿರುವಾಗ ಜಡಪದಾರ್ಥಕ್ಕೆ ಸ್ವತಃಪ್ರವೃತ್ತಿಯು ಹೇಗೆ ತಾನೇ ಕೂಡಲು ಸಾಧ್ಯ ? ಎಂಬುದು ಕೈಮುತ್ಯನ್ಯಾಯವಾಗಿದೆ. ಆದ್ದರಿಂದ ಜಡವಾದ ಪದಾರ್ಥಕ್ಕೆ ಪ್ರವೃತ್ತಿಯಿದೆ ಎಂಬುದು ಅಪ್ರಮಾಣಕವಾಗಿದೆ ಹಾಗೂ ಪ್ರಮಾಣವಿರುದ್ಧವಾಗಿದೆ. ಆದ್ದರಿಂದ ಸಾಂಖ್ಯಮತವು ಸ್ವೀಕಾರಕ್ಕೆ ಯೋಗ್ಯವಾಗಿರುವುದಿಲ್ಲ.

**ವಿವರಣೆ** - ಸೂತ್ರಕ್ಕೆ ಎರಡನೆಯ ವ್ಯಾಖ್ಯಾನವನ್ನು 'ಯದ್ವಾ' ಇತ್ಯಾದಿಯಾಗಿ ಹೇಳಿದ್ದಾರೆ. ವ್ಯತಿರೇಕ = ಈಶ್ವರನನ್ನು ಬಿಟ್ಟು, ಅನವಸ್ಥಿತೇಃ = ಚೇತನಕ್ಕೆ ಪ್ರವೃತ್ತಿಯು ಕೂಡುತ್ತಿಲ್ಲ, ಚ = ಜಡವಾದ ಪ್ರಕೃತಿಗೆ ಸ್ವತಂತ್ರಪ್ರವೃತ್ತಿಯು ಕೂಡುತ್ತಿಲ್ಲವೆಂದು ಪ್ರತ್ಯೇಕವಾಗಿ ಹೇಳಬೇಕೇನು ? 'ಅನಪೇಕ್ಷತ್ವಾತ್' = ಅಪ್ರಮಾಣಿಕವಾಗಿದೆ ಹಾಗೂ ಪ್ರಮಾಣವಿರುದ್ಧವಾಗಿದೆ. ಆದ್ದರಿಂದ ಸಜ್ಜನರಿಂದ ಉಪಾದೇಯವಲ್ಲ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ರಚನಾನುಪಪತ್ತ್ಯಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಅನ್ಯತ್ರಾಭಾವಾಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಅನ್ಯತ್ರಾಭಾವಾಧಿಕರಣ

## ಬ್ರಹ್ಮಸೂತ್ರ

**ब्रह्मसूत्रम् – अन्यत्राभावाच्च न तृणादिवत् ॥**

ಈಶ್ವರನ ಸನ್ನಿಧಾನದಿಂದಷ್ಟೇ ಜಗತ್ತಿನ ಸೃಷ್ಟಿಯಾಗುತ್ತದೆ. ಆ ಈಶ್ವರನು ಸಹಕಾರಿ ಕಾರಣನಾಗಿದ್ದಾನೆ. ಪ್ರಕೃತಿಯೇ ಸ್ವತಂತ್ರಕಾರಣವಾಗಿ ಜಗತ್ತನ್ನು ಸೃಷ್ಟಿ ಮಾಡುತ್ತದೆಂದು ಸೇಶ್ವರ ಸಾಂಖ್ಯರು ಹೇಳುತ್ತಾರೆ. ಈ ಮತವೂ ಕೂಡ ಅಸಾಧುವಾಗಿದೆ. ಸೇಶ್ವರಸಾಂಖ್ಯರು ಈಶ್ವರನನ್ನು ಒಪ್ಪಿದರೂ ಸ್ವತಂತ್ರನಲ್ಲವೆಂದು ಹೇಳುತ್ತಾರೆ. ಪ್ರತಿಯೊಂದು ಪದಾರ್ಥಗಳಲ್ಲಿಯೂ ಈಶ್ವರನ ಅಸ್ತಿತ್ವವು ಇರುವುದರಿಂದ ಸೇಶ್ವರಸಾಂಖ್ಯಮತವು ಅಸಾಧುವಾಗಿದೆ.

ಅರ್ಥ - ತೃಣಾದಿವತ್ = ಪೃಥಿವಿಯಿಂದ ಹುಟ್ಟಿದ ಹುಲ್ಲು ಮೊದಲಾದವುಗಳ ಹುಟ್ಟುವಿಕೆಗೆ ಹೇಗೆ ಮಳೆಯು ಕೇವಲ ಸಹಕಾರಿಕಾರಣವಾಗಿದೆಯೋ, ಅದರಂತೆ ಪ್ರಕೃತಿಜನ್ಯವಾದ ಮಹತ್ತತ್ವ ಮೊದಲಾದ ಕಾರ್ಯಗಳಿಗೂ ಈಶ್ವರನು ಕೇವಲ ಅನುಗ್ರಾಹಕನಾಗಿದ್ದಾನೆ. ಸ್ವತಂತ್ರಕಾರಣನಾಗಿಲ್ಲ. ಆದ್ದರಿಂದ ಸೇಶ್ವರಸಾಂಖ್ಯಪಕ್ಷವು, ನ = ನಿರಾಕೃತವಾಯಿತು. ಏಕೆಂದರೆ ಅನ್ಯತ್ರಾಭಾವಾತ್ = ಈಶ್ವರನ ಪ್ರೇರಣೆಯಿಲ್ಲದೇ ಜಗತ್ತೇ ಇರುವುದಿಲ್ಲ. ಮತ್ತು ಈಶ್ವರನು ಪ್ರಕೃತ್ಯಾದಿಗಳ ಇರುವಿಕೆಗೂ ಕಾರಣನಾಗಿದ್ದಾನೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಅನ್ಯತ್ರಾಭಾವಾಧಿಕರಣವು ಸಮಾಪ್ತವಾಯಿತು ॥

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

ಸೇಶ್ವರಸಾಂಖ್ಯಮತ ನಿರಾಕರಣೆಗಾಗಿ ಈ ಅಧಿಕರಣ

**ब्रह्मसूत्रभाष्यम् – सेश्वरसाङ्ख्यमतं निराकरोति । यथा पृथिव्या एव पर्जन्यानुगृहीतं तृणादिकमुत्पद्यते, एवं प्रधानादीश्वरानुगृहीतं जगदिति ॥**

ಅನುವಾದ - ಈ ಅಧಿಕರಣದಲ್ಲಿ ಪ್ರಧಾನವೇ ಜಗತ್‌ಕರ್ತೃ. ದೇವರು ಇದ್ದರೂ ಕೂಡ ಗೌಣ. ಹೀಗೆ ಹೇಳುವ ಸೇಶ್ವರಸಾಂಖ್ಯಮತವನ್ನು ನಿರಾಕರಣೆ ಮಾಡಲಾಗಿದೆ. ಯಾವ ರೀತಿಯಾಗಿ ಮಳೆಯಿಂದ ಸಹಕಾರ ಪಡೆದ ಭೂಮಿಯು ಹುಲ್ಲು ಮೊದಲಾದವುಗಳನ್ನು ತನ್ನ ಶಕ್ತಿಯಿಂದಲೇ ಹುಟ್ಟಿಸುತ್ತದೋ ಅದೇ ರೀತಿಯಾಗಿ ಈಶ್ವರನ ಸಹಕಾರಪಡೆದ ಪ್ರಕೃತಿಯು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತದೆ. ಇದು ಸೇಶ್ವರಸಾಂಖ್ಯರ ಮತ.

ಪ್ರತಿಪದಾರ್ಥ -- ಈ ಅಧಿಕರಣದ ಪ್ರಮೇಯವನ್ನು ಹೇಳುತ್ತಿದ್ದಾರೆ. ಸೇಶ್ವರಸಾಂಖ್ಯಮತಮ್ = ಪ್ರಧಾನವೇ ಜಗತ್‌ಕರ್ತೃ, ಈಶ್ವರನು ಗುಣಭೂತನಾಗಿರುತ್ತಾನೆ ಎಂದು ಹೇಳುವ. ಸೇಶ್ವರಸಾಂಖ್ಯಮತವನ್ನು, ನಿರಾಕರೋತಿ = ಈ ಅಧಿಕರಣದಲ್ಲಿ ನಿರಾಕರಣೆ ಮಾಡಲಾಗಿದೆ. ಯಥಾ = ಯಾವ ರೀತಿಯಾಗಿ, ಪೃಥಿವ್ಯಾ ಏವ = ಭೂಮಿಯಿಂದಲೇ, ಪರ್ಜನ್ಯಾನುಗೃಹೀತಂ = ಮಳೆಯ ಸಹಕಾರ ಪಡೆದ, ತೃಣಾದಿಕಮ್ = ಹುಲ್ಲು ಮೊದಲಾದವುಗಳು ಸಹಜವಾಗಿ, ಉತ್ಪದ್ಯತೇ = ಹುಟ್ಟುತ್ತವೋ, ಏವಂ = ಅದೇ ರೀತಿಯಾಗಿ, ಈಶ್ವರಾನುಗೃಹೀತಂ = ಈಶ್ವರ ಅನುಗ್ರಹ ಪಡೆದ, ಪ್ರಧಾನಾತ್ = ಪ್ರಕೃತಿಯಿಂದಲೇ, ಜಗತ್ = ಜಗತ್ತಿನ ಸೃಷ್ಟ್ಯಾದಿಗಳು ನಡೆಯುತ್ತವೆ. ಇತಿ = ಹೀಗೆಂಬುದಾಗಿ.

ಭಗವಂತನು ಮಳೆಯಂತೆ ಸಹಕಾರಿ ಕಾರಣನಲ್ಲ

**ब्रह्मसूत्रभाष्यम् – अतो ब्रवीति –**

**॥ अन्यत्राभावाच्च न तृणादिवत् ॥१॥**

ಅನುವಾದ - ಮೇಲೆ ಹೇಳಿದ ಸೇಶ್ವರಸಾಂಖ್ಯಮತವನ್ನು ನಿರಾಕರಣ ಮಾಡಲು ಸೂತ್ರವು ಹೊರಟಿದೆ. ಹುಲ್ಲು ಮೊದಲಾದವುಗಳ ಉತ್ಪತ್ತಿಯಲ್ಲಿ ಮಳೆಯು ಸಹಕಾರಿ ಆದಂತೆ ಈಶ್ವರನು ಜಗದುತ್ಪತ್ತಿಯಲ್ಲಿ ಸಹಕಾರಿಯಲ್ಲ. ಸ್ವತಂತ್ರವಾಗಿ ಉತ್ಪಾದಕನಾಗಿದ್ದಾನೆ.

ಪ್ರತಿಪದಾರ್ಥ -- ಅತಃ = ಮೇಲಿನ ಆಕ್ಷೇಪಕ್ಕೆ, ಬ್ರವೀತಿ = ಉತ್ತರವನ್ನು ನೀಡುತ್ತಿದ್ದಾರೆ. 'ಅನ್ಯತ್ರಭಾವಾಚ್ಚ ನ ತೃಣಾದಿವತ್' ಎಂಬುದಾಗಿ.

ಜಗತ್ತು ಹುಲ್ಲಿನಂತೆ ಈಶ್ವರ ಮಳೆಯಂತೆ ಅಲ್ಲ

**ब्रह्मसूत्रभाष्यम् –**

**'यच्च किञ्चिज्जगत्सर्वं दृश्यते श्रूयतेऽपि वा ।**
**अन्तर्बहिश्च तत्सर्वं व्याप्य नारायणः स्थितः ।।'**

**'ब्रह्मण्येवेदमाविरासीद्, ब्रह्मणि स्थितं, ब्रह्मणि लयमभ्युपैति ब्रह्मैवाधस्ताद्, ब्रह्मैवोपरिष्टाद्, ब्रह्म मध्यतो ब्रह्म सर्वतः, 'ब्रह्मैवेदं सर्वम्' (बृ.४.५.१) इत्यादिश्रुतिभ्योऽन्यत्र जगतोऽभावात् तृणादीनां पर्जन्यवन्नानुग्राहकत्वमात्रमीश्वरस्य ।**

ಅನುವಾದ - ಈ ಕಣ್ಣಿಗೆ ಕಾಣಸುವ ಪ್ರಪಂಚದಲ್ಲಿ ಏನೇನು ಇವೆಯೋ ಅಥವಾ ಕಿವಿಯಿಂದ ಕೇಳಿಸುತ್ತಿರುವ ಯಾವ ಪದಾರ್ಥಗಳಿವೆಯೋ ಅವುಗಳೆಲ್ಲವನ್ನು ಒಳಗಿನಿಂದ ಹಾಗೂ ಹೊರಗಿನಿಂದ ವ್ಯಾಪಿಸಿ ನಿಂತಿರುವನು. ಪ್ರತಿಯೊಂದು ವಸ್ತುಗಳ ಸ್ಥಿತಿಗೆ ಕಾರಣನಾಗಿರುವವನು ನಾರಾಯಣನೇ ಆಗಿದ್ದಾನೆ. ಇವನೇ ಜಗತ್ತಿಗೆ ಕಾರಣಪುರುಷನು.

ಬ್ರಹ್ಮನಿಂದಲೇ ಈ ಜಗತ್ತು ಉದ್ಭವವಾಗಿದೆ. ಬ್ರಹ್ಮನಲ್ಲಿಯೇ ಆಶ್ರಯ ಪಡೆದಿದೆ. ಬ್ರಹ್ಮನಿಂದಲೇ ಸಂಹಾರವನ್ನು ಹೊಂದುತ್ತದೆ. ಬ್ರಹ್ಮನು ಪ್ರತಿಯೊಂದು ವಸ್ತುಗಳ ಕೆಳಗೆ ಮೇಲೆ ಮಧ್ಯಭಾಗದಲ್ಲಿ ಮತ್ತು ಎಲ್ಲೆಡೆಯು ಅಂತರ್ಯಾಮಿಯಾಗಿ ನೆಲೆಸಿದ್ದಾನೆ.

ಬ್ರಹ್ಮನೇ ಈ ಜಗತ್ತಿನ ಎಲ್ಲಡೆಯೂ ತುಂಬಿದ್ದಾನೆ.

ಇವೇ ಮೊದಲಾದ ಶ್ರುತಿವಾಕ್ಯಗಳಿಂದ ಬ್ರಹ್ಮನನ್ನು ಬಿಟ್ಟು ಜಗತ್ತು ಅಸ್ತಿತ್ವವನ್ನು ಪಡೆದಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಹುಲ್ಲು ಬೆಳೆಯಲು ಮಳೆಯು ಕೇವಲ ಸಹಕಾರ ಮಾಡುವಂತೆ ಜಗತ್ತಿನ ಸೃಷ್ಟಿಗೆ ಬ್ರಹ್ಮನು ಕೇವಲ ಸಹಕಾರಿ ಆಗಿದ್ದಾನೆಂದು ಹೇಳುವುದು ಅಯುಕ್ತವಾಗಿದೆ.

ಪ್ರತಿಪದಾರ್ಥ -- ಯಚ್ಚ = ಯಾವ, ಕಿಂಚಿತ್ = ಸಣ್ಣ ವಸ್ತುವಿನಿಂದ ಆರಂಭಿಸಿ ಕಣ್ಣಿಗೆ ಕಾಣಿಸುವ ಪ್ರತಿಯೊಂದು, ದೃಶ್ಯತೇ = ಕಾಣುತ್ತಿದೆಯೋ, ಶ್ರೂಯತೇಽಪಿ ವಾ = ಕೇಳಿಸಲ್ಪಡುತ್ತಿದೆಯೋ, ತತ್ಸರ್ವಂ ಜಗತ್ = ಈ ಎಲ್ಲಾ ಜಗತ್ತು, ಇದರ ಅಂತಃ = ಒಳಗೂ, ಬಹಿಃ ಚ = ಹೊರಗೂ ಬ್ರಹ್ಮನಿಂದ ತುಂಬಿದೆ. ನಾರಾಯಣಃ = ಶ್ರೀಮನ್ನಾರಾಯಣನು, ವ್ಯಾಪ್ಯ = ವ್ಯಾಪಿಸಿ, ಸ್ಥಿತಃ = ನೆಲೆಸಿದ್ದಾನೆ.

ಇದಂ = ಈ ಜಗತ್ತು, ಬ್ರಹ್ಮಣಿ ಏವ = ಬ್ರಹ್ಮನಲ್ಲಿಯೇ, ಆವಿರಾಸೀತ್ = ಉದ್ಭವವನ್ನು ಪಡೆಯಿತು. ಬ್ರಹ್ಮಣಿ = ಬ್ರಹ್ಮನಲ್ಲಿಯೇ, ಸ್ಥಿತಂ = ಆಶ್ರಯವನ್ನು ಪಡೆದಿದೆ. ಬ್ರಹ್ಮನಲ್ಲಿಯೇ ಲಯಂ = ಲಯವನ್ನು. ಅಭ್ಯುಪೈತಿ = ಹೊಂದುತ್ತದೆ. ಬ್ರಹ್ಮೈವ = ಬ್ರಹ್ಮನೇ, ಅಧಸ್ತಾತ್ = ಕೆಳಭಾಗದಲ್ಲಿ, ಬ್ರಹ್ಮ = ಬ್ರಹ್ಮನು, ಉಪರಿಷ್ಟಾತ್ = ಮೇಲ್ಭಾಗದಲ್ಲಿ, ಬ್ರಹ್ಮ = ಬ್ರಹ್ಮನು. ಮಧ್ಯತಃ = ಜಗತ್ತಿನ ಮಧ್ಯಭಾಗದಲ್ಲಿ, ಬ್ರಹ್ಮೈವ = ಬ್ರಹ್ಮನೇ, ಸರ್ವತಃ = ಎಲ್ಲ ಕಡೆಗಳಲ್ಲಿ, ಬ್ರಹ್ಮೈವ = ಬ್ರಹ್ಮನೇ, ಇದಂ ಸರ್ವಂ = ಈ ಎಲ್ಲ ಜಗತ್ತು, ಇತ್ಯಾದಿಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳ ಆಧಾರದಿಂದ, ಅನ್ಯತ್ರ = ಭಗವಂತನನ್ನು ಬಿಟ್ಟು, ಜಗತೋಽಭಾವಾತ್ = ಜಗತ್ತೇ ಇಲ್ಲದ ಕಾರಣ, ತೃಣಾದೀನಾಂ = ಹುಲ್ಲು ಮೊದಲಾದವುಗಳಿಗೆ, ಪರ್ಜನ್ಯವತ್ = ಮಳೆಯಂತೆ, ಅನುಗ್ರಾಹಕತ್ವಮಾತ್ರಂ = ಸಹಕಾರವನ್ನು ಮಾತ್ರ ಹೇಳುವಿಕೆಯು, ಈಶ್ವರಸ್ಯ = ಬ್ರಹ್ಮನಿಗೆ, ನ = ಸರ್ವಥಾ ಕೂಡುವುದಿಲ್ಲ. ಈಶ್ವರನು ಸ್ವತಂತ್ರಕಾರಣನಾಗಿರುತ್ತಾನೆ.

### ಸೃಷ್ಟಿಗೆ ಲಕ್ಷ್ಮೀದೇವಿಯನ್ನು ಪ್ರೇರಿಸಿದವ ಈಶ್ವರ

**ब्रह्मसूत्रभाष्यम् –**

**स एव भूयो निजवीर्यचोदितां स्वजीवमायां प्रकृतिं सिसृक्षतीम् ।**
**अनामरूपात्मनि रूपनामनी विधित्समानोऽनुससार शास्तिकृत् ।।'**

ಅನುವಾದ - ಮೇಲೆ ಹೇಳಿದ ಸೇಶ್ವರಸಾಂಖ್ಯಮತವನ್ನು ನಿರಾಕರಣ ಮಾಡಲು ಸೂತ್ರವು ಹೊರಟಿದೆ. ಹುಲ್ಲು ಮೊದಲಾದವುಗಳ ಉತ್ಪತ್ತಿಯಲ್ಲಿ ಮಳೆಯು ಸಹಕಾರಿ ಆದಂತೆ ಈಶ್ವರನು ಜಗದುತ್ಪತ್ತಿಯಲ್ಲಿ ಸಹಕಾರಿಯಲ್ಲ. ಸ್ವತಂತ್ರವಾಗಿ ಉತ್ಪಾದಕನಾಗಿದ್ದಾನೆ.

ಪ್ರತಿಪದಾರ್ಥ -- ಅತಃ = ಮೇಲಿನ ಆಕ್ಷೇಪಕ್ಕೆ, ಬ್ರವೀತಿ = ಉತ್ತರವನ್ನು ನೀಡುತ್ತಿದ್ದಾರೆ. 'ಅನ್ಯತ್ರಭಾವಾಚ್ಚ ನ ತೃಣಾದಿವತ್' ಎಂಬುದಾಗಿ.

### ಜಗತ್ತು ಹುಲ್ಲಿನಂತೆ ಈಶ್ವರ ಮಳೆಯಂತೆ ಅಲ್ಲ

**ब्रह्मसूत्रभाष्यम् –**

**'यच्च किञ्चिज्जगत्सर्वं दृश्यते श्रूयतेऽपि वा ।**
**अन्तर्बहिश्च तत्सर्वं व्याप्य नारायणः स्थितः ।।'**

**'ब्रह्मण्येवेदमाविरासीद्, ब्रह्मणि स्थितं, ब्रह्मणि लयमभ्युपैति ब्रह्मैवाधस्ताद्, ब्रह्मैवोपरिष्टाद्, ब्रह्म मध्यतो ब्रह्म सर्वतः, 'ब्रह्मैवेदं सर्वम्' (बृ.४.५.१) इत्यादिश्रुतिभ्योऽन्यत्र जगतोऽभावात् तृणादीनां पर्जन्यवन्नानुग्राहकत्वमात्रमीश्वरस्य ।**

ಅನುವಾದ - ಈ ಕಣ್ಣಿಗೆ ಕಾಣುವ ಪ್ರಪಂಚದಲ್ಲಿ ಏನೇನು ಇವೆಯೋ ಅಥವಾ ಕಿವಿಯಿಂದ ಕೇಳಿಸುತ್ತಿರುವ ಯಾವ ಪದಾರ್ಥಗಳಿವೆಯೋ ಅವುಗಳೆಲ್ಲವನ್ನು ಒಳಗಿನಿಂದ ಹಾಗೂ ಹೊರಗಿನಿಂದ ವ್ಯಾಪಿಸಿ ನಿಂತಿರುವನು. ಪ್ರತಿಯೊಂದು ವಸ್ತುಗಳ ಸ್ಥಿತಿಗೆ ಕಾರಣನಾಗಿರುವವನು ನಾರಾಯಣನೇ ಆಗಿದ್ದಾನೆ. ಇವನೇ ಜಗತ್ತಿಗೆ ಕಾರಣಪುರುಷನು.

ಬ್ರಹ್ಮನಿಂದಲೇ ಈ ಜಗತ್ತು ಉದ್ಭವವಾಗಿದೆ. ಬ್ರಹ್ಮನಲ್ಲಿಯೇ ಆಶ್ರಯ ಪಡೆದಿದೆ. ಬ್ರಹ್ಮನಿಂದಲೇ ಸಂಹಾರವನ್ನು ಹೊಂದುತ್ತದೆ. ಬ್ರಹ್ಮನು ಪ್ರತಿಯೊಂದು ವಸ್ತುಗಳ ಕೆಳಗೆ ಮೇಲೆ ಮಧ್ಯಭಾಗದಲ್ಲಿ ಮತ್ತು ಎಲ್ಲೆಡೆಯು ಅಂತರ್ಯಾಮಿಯಾಗಿ ನೆಲೆಸಿದ್ದಾನೆ.

ಬ್ರಹ್ಮನೇ ಈ ಜಗತ್ತಿನ ಎಲ್ಲಡೆಯೂ ತುಂಬಿದ್ದಾನೆ.

ಇವೇ ಮೊದಲಾದ ಶ್ರುತಿವಾಕ್ಯಗಳಿಂದ ಬ್ರಹ್ಮನನ್ನು ಬಿಟ್ಟು ಜಗತ್ತು ಅಸ್ತಿತ್ವವನ್ನು ಪಡೆದಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಹುಲ್ಲು ಬೆಳೆಯಲು ಮಳೆಯು ಕೇವಲ ಸಹಕಾರ ಮಾಡುವಂತೆ ಜಗತ್ತಿನ ಸೃಷ್ಟಿಗೆ ಬ್ರಹ್ಮನು ಕೇವಲ ಸಹಕಾರಿ ಆಗಿದ್ದಾನೆಂದು ಹೇಳುವುದು ಅಯುಕ್ತವಾಗಿದೆ.

ಪ್ರತಿಪದಾರ್ಥ -- ಯಚ್ಚ = ಯಾವ, ಕಿಂಚಿತ್ = ಸಣ್ಣ ವಸ್ತುವಿನಿಂದ ಆರಂಭಿಸಿ ಕಣ್ಣಿಗೆ ಕಾಣಿಸುವ ಪ್ರತಿಯೊಂದು, ದೃಶ್ಯತೇ = ಕಾಣಿಸುತ್ತಿದೆಯೋ, ಶ್ರೂಯತೇಽಪಿ ವಾ = ಕೇಳಿಸಲ್ಪಡುತ್ತಿದೆಯೋ, ತತ್‌ಸರ್ವಂ ಜಗತ್ = ಈ ಎಲ್ಲಾ ಜಗತ್ತು, ಇದರ ಅಂತಃ = ಒಳಗೂ, ಬಹಿಃ ಚ = ಹೊರಗೂ ಬ್ರಹ್ಮನಿಂದ ತುಂಬಿದೆ. ನಾರಾಯಣಃ = ಶ್ರೀಮನ್‌ನಾರಾಯಣನು, ವ್ಯಾಪ್ಯ = ವ್ಯಾಪಿಸಿ, ಸ್ಥಿತಃ = ನೆಲೆಸಿದ್ದಾನೆ.

ಇದಂ = ಈ ಜಗತ್ತು, ಬ್ರಹ್ಮಣಿ ಏವ = ಬ್ರಹ್ಮನಲ್ಲಿಯೇ, ಆವಿರಾಸೀತ್ = ಉದ್ಭವವನ್ನು ಪಡೆಯಿತು. ಬ್ರಹ್ಮಣಿ = ಬ್ರಹ್ಮನಲ್ಲಿಯೇ, ಸ್ಥಿತಂ = ಆಶ್ರಯವನ್ನು ಪಡೆದಿದೆ. ಬ್ರಹ್ಮನಲ್ಲಿಯೇ ಲಯಂ = ಲಯವನ್ನು. ಅಭ್ಯುಪೈತಿ = ಹೊಂದುತ್ತದೆ. ಬ್ರಹ್ಮೈವ = ಬ್ರಹ್ಮನೇ, ಅಧಸ್ತಾತ್ = ಕೆಳಭಾಗದಲ್ಲಿ, ಬ್ರಹ್ಮ = ಬ್ರಹ್ಮನು, ಉಪರಿಷ್ಟಾತ್ = ಮೇಲ್ಭಾಗದಲ್ಲಿ, ಬ್ರಹ್ಮ = ಬ್ರಹ್ಮನು. ಮಧ್ಯತಃ = ಜಗತ್ತಿನ ಮಧ್ಯಭಾಗದಲ್ಲಿ, ಬ್ರಹ್ಮೈವ = ಬ್ರಹ್ಮನೇ, ಸರ್ವತಃ = ಎಲ್ಲ ಕಡೆಗಳಲ್ಲಿ, ಬ್ರಹ್ಮೈವ = ಬ್ರಹ್ಮನೇ, ಇದಂ ಸರ್ವಂ = ಈ ಎಲ್ಲ ಜಗತ್ತು, ಇತ್ಯಾದಿಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳ ಆಧಾರದಿಂದ, ಅನ್ಯತ್ರ = ಭಗವಂತನನ್ನು ಬಿಟ್ಟು, ಜಗತೋಽಭಾವಾತ್ = ಜಗತ್ತೇ ಇಲ್ಲದ ಕಾರಣ, ತೃಣಾದೀನಾಂ = ಹುಲ್ಲು ಮೊದಲಾದವುಗಳಿಗೆ, ಪರ್ಜನ್ಯವತ್ = ಮಳೆಯಂತೆ, ಅನುಗ್ರಾಹಕತ್ವಮಾತ್ರಂ = ಸಹಕಾರವನ್ನು ಮಾತ್ರ ಹೇಳುವಿಕೆಯು, ಈಶ್ವರಸ್ಯ = ಬ್ರಹ್ಮನಿಗೆ, ನ = ಸರ್ವಥಾ ಕೂಡುವುದಿಲ್ಲ. ಈಶ್ವರನು ಸ್ವತಂತ್ರಕಾರಣನಾಗಿರುತ್ತಾನೆ.

### ಸೃಷ್ಟಿಗೆ ಲಕ್ಷ್ಮೀದೇವಿಯನ್ನು ಪ್ರೇರಿಸಿದವ ಈಶ್ವರ

**ब्रह्मसूत्रभाष्यम् –**

**स एव भूयो निजवीर्यचोदितां स्वजीवमायां प्रकृतिं सिसृक्षतीम् ।
अनामरूपात्मनि रूपनामनी विधित्समानोऽनुससार शास्त्रिकृत् ।।'**

इति भागवते । 'द्रव्यं कर्म च कालश्च' इत्यादि च । चशब्देन प्रकृतिसत्तादिप्रदत्वं चाङ्गीकृतम् ।।१।।

## ।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये अन्यत्राभावाधिकरणम् ।। २ ।।

ಅನುವಾದ - ಜಗತ್ತಿಗೆ ಆದೇಶ ಮಾಡುವ ಶ್ರೀಹರಿಯೇ ರೂಪಗಳಿಲ್ಲದ ತನಗೆ ಆಧಾರವಾಗಿರುವ ಪ್ರಕೃತಿಯಲ್ಲಿ ಅರ್ಥ ಮತ್ತು ಶಬ್ದಗಳನ್ನು ಪುನಃ ಸೃಷ್ಟಿ ಮಾಡಲು ಶ್ರದ್ಧೆಯುಳ್ಳವನಾಗಿ ತನ್ನ ಸಾಮರ್ಥ್ಯದಿಂದ ಪ್ರೇರಿತವಾದ ತನ್ನ ಅಧೀನವಾಗಿ ಜೀವನಿಗೆ ಬಂಧವನ್ನು ನೀಡುವ ಸೃಷ್ಟಿಗೆ ತೊಡಗಿದ ಲಕ್ಷ್ಮಿಯನ್ನು ಅನುಗ್ರಹಿಸಿದನು. ಹೀಗೆ ಭಾಗವತದಲ್ಲಿ ಹೇಳಲಾಗಿದೆ. ಮತ್ತು ದ್ರವ್ಯ, ಕರ್ಮ, ಕಾಲ, ಇವೆಲ್ಲವೂ ಈಶ್ವರನ ಅಧೀನವೇ ಆಗಿವೆಯೆಂದು ಭಾಗವತ ಹೇಳುತ್ತಿದೆ. ಸೂತ್ರದಲ್ಲಿರುವ ಚಶಬ್ದದಿಂದ ಪ್ರಕೃತಿಗೆ ಶಕ್ತಿ, ಸತ್ತಾ ಮೊದಲಾದವುಗಳನ್ನು ಕೊಡುವವನು ಭಗವಂತನೇ ಆಗಿದ್ದಾನೆಂದು ಒಪ್ಪಲಾಗಿದೆ.

ಪ್ರತಿಪದಾರ್ಥ -- ಸೂತ್ರದಲ್ಲಿರುವ ಚ ಶಬ್ದವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಯಃ = ಯಾವ ಪರಮಾತ್ಮನು ಪ್ರಳಯಕಾಲದಲ್ಲಿದ್ದಾನೋ, ಸೈವ = ಅವನೇ, ಭೂಯಃ = ಮತ್ತೆ, ಶಾಸ್ತಿಕೃತ್ = ಜಗತ್ತಿನ ಶಾಸನ ಮಾಡುವ, ಸ ಏವ = ಆ ಶ್ರೀಹರಿಯೇ, ಅನಾಮರೂಪಾತ್ಮನಿ = ನಾಮ ಮತ್ತು ರೂಪಗಳಿಲ್ಲದ ತನಗೆ ಆಧಾರವಾಗಿರುವ ಪ್ರಕೃತಿಯಲ್ಲಿ, ರೂಪನಾಮನೀ = ಅರ್ಥ ಮತ್ತು ಶಬ್ದ ಪ್ರಪಂಚಗಳನ್ನು, ವಿಧಿತ್ಸಮಾನಃ = ಸೃಷ್ಟಿ ಮಾಡಲು ಇಚ್ಛೆಯುಳ್ಳವನಾಗಿ, ನಿಜವೀರ್ಯಚೋದಿತಾಂ = ತನ್ನ ಸಾಮರ್ಥ್ಯದಿಂದ ಪ್ರೇರಿತವಾದ, ಸ್ವಜೀವಮಾಯಾಮ್ = ತನ್ನ ಅಧೀನವಾಗಿ ಜೀವನಿಗೆ ಬಂಧನವನ್ನು ಉಂಟುಮಾಡುವ, ಸಿಸೃಕ್ಷತೀಮ್ = ಸೃಷ್ಟಿಗೆ ತೊಡಗಿದ, ಪ್ರಕೃತಿಂ = ಲಕ್ಷ್ಮೀದೇವಿಯನ್ನು, ಅನುಸಸಾರ = ಅನುಸರಿಸಿದನು. ಇತಿ = ಹೀಗೆ, ಭಾಗವತೇ = ಭಾಗವತ ಗ್ರಂಥದಲ್ಲಿ ಹೇಳಲಾಗಿದೆ.

ಮತ್ತು ದ್ರವ್ಯಂ ಕರ್ಮ ಚ ಕಾಲಶ್ಚ = ದ್ರವ್ಯ ಕರ್ಮ ಕಾಲ ಇವೆಲ್ಲವೂ ಭಗವಂತನ ಅನುಗ್ರಹವಿದ್ದರೆ ಮಾತ್ರ ಇರಲು ಸಾಧ್ಯ. ಇತ್ಯಾದಿಚ = ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ ಪರಮಾತ್ಮನೊಬ್ಬನೇ ಸ್ವತಂತ್ರಕರ್ತೃವೆಂದು ಸಿದ್ಧವಾಗುತ್ತದೆ. ಪರಮಾತ್ಮನು ಕೇವಲ ಅನುಗ್ರಾಹಕನಷ್ಟೇ ಅಲ್ಲ, ಚ = ಶಬ್ದೇನ ಸೂತ್ರದಲ್ಲಿರುವ ಚ ಶಬ್ದದಿಂದ, ಪ್ರಕೃತಿ ಸತ್ತಾದಿ ಪ್ರದತ್ವಂ = ಪ್ರಕೃತ್ಯಾದಿಗಳಿಗೆ ಸತ್ತಾದಿಗಳನ್ನು ಕೊಡುವವನೂ ಆಗಿದ್ದಾನೆಂದು, ಅಂಗೀಕೃತಮ್ = ಅಂಗೀಕರಿಸಲಾಗಿದೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಅನ್ಯತ್ರಾಭಾವಾಧಿಕರಣವು ಸಮಾಪ್ತವಾಯಿತು ॥

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

'ಬ್ರಹ್ಮೈವೇದಂ ಸರ್ವಂ' ಎಂಬ ಶ್ರುತ್ಯರ್ಥ

**सत्तर्कदीपावलिः – अन्यत्रेत्यादिना । ब्रह्मन्निव इति ब्रह्मणीति ग्राह्यम् । अग्निव्याप्तायःपिण्डे अयमग्निरितिवत् ब्रह्मव्याप्तं जगत् ब्रह्मैवेदं सर्वमिति श्रुत्योच्यते ।**

ಅಗ್ನಿಯಿಂದ ವ್ಯಾಪ್ತವಾದ ಅಯೋಗೋಲಕವನ್ನು ನೋಡಿ 'ಅಯಂ ಅಗ್ನಿಃ' 'ಇದು ಅಗ್ನಿ' ಎಂದು ವ್ಯವಹರಿಸುತ್ತಾರೆ. ಅದರಂತೆ ಈ ಜಗತ್ತು ಬ್ರಹ್ಮನಿಂದ ವ್ಯಾಪ್ತವಾಗಿದೆ. ಇದನ್ನು ಶ್ರುತಿಯು 'ಬ್ರಹ್ಮೈವೇದಂ ಸರ್ವಂ' 'ಈ ಜಗತ್ತು ಬ್ರಹ್ಮನೇ ಆಗಿದೆ' ಎಂದು ವ್ಯವಹರಿಸುತ್ತಿದೆ.

ವಿವರಣೆ - ಅಯಃಪಿಂಡವೇ ಅಗ್ನಿಯಲ್ಲ. ಅಯಃಪಿಂಡದ ಒಳಗೆ ಅಂತರ್ಯಾಮಿಯಾಗಿ ಅಗ್ನಿ ಇದೆ ಎಂಬುದು ಹೇಗೆ ಲೋಕದಲ್ಲಿ ಎಲ್ಲರೂ ಕೂಡ ತಿಳಿದಿದ್ದಾರೋ, ಅದರಂತೆ

ಶ್ರುತಿಯು ಬ್ರಹ್ಮನನ್ನೇ ಜಗತ್ತೆಂದು ಕರೆಯುತ್ತಿದೆ. ಜಗತ್ತಿನೊಳಗೆ ಬ್ರಹ್ಮನಿದ್ದಾನೆಂಬುದು ಇದರ ಅರ್ಥ.

'ಸರ್ವಾಂತರ್ಯಾಮಿ' ಎಂಬುದಕ್ಕೆ ವ್ಯಾಖ್ಯಾನ

**सत्तर्कदीपावळिः – सर्वान्तर्यामित्वेनात्र सर्वगत्वं नारायणस्य विवक्षितं नाकाशस्येव सर्वत्र स्थितिमात्रम् । सर्वान्तर्यामित्वादीश्वरस्य प्रकृत्यादिसत्ताप्रदत्वं तत्तच्छक्त्युद्बोधकत्वम् अन्यत्राभावाच्चेति सूत्रगतेन च शब्देन सुचितम् । पुराणवाक्याभ्यामित्युच्यते 'स एव भूयो निजवीर्यचोदित'मित्यनेन प्रकृतिशक्त्युद्बोधकत्वमुच्यते ।**

ನಾರಾಯಣನು ಸರ್ವಾಂತರ್ಯಾಮಿಯಾಗಿರುವುದರಿಂದ ಸರ್ವಗತನಾಗಿದ್ದಾನೆಂದು ಇಲ್ಲಿ ಹೇಳಲಾಗಿದೆ. ಆಕಾಶವು ಸರ್ವಗತವಾಗಿದೆ. ಅದರಂತೆ ಬ್ರಹ್ಮನು ಎಲ್ಲೆಡೆ ಕೇವಲ ಇರುವುದಷ್ಟೇ ಅಲ್ಲ. ಆಯಾ ಪದಾರ್ಥಗಳ ಪ್ರೇರಕನಾಗಿದ್ದಾನೆಂಬುದು ಶ್ರುತಿಯ ಅಭಿಪ್ರಾಯ. 'ಸರ್ವಾಂತರ್ಯಾಮಿತ್ವ' ಎಂದರೆ ಪ್ರಕೃತ್ಯಾದಿಗಳಲ್ಲಿ ನೆಲೆಸಿ, ಅವುಗಳಿಗೆ ಸತ್ತಾದಿಪ್ರದನಾಗಿದ್ದಾನೆ. ಅಂದರೆ ಪ್ರಕೃತ್ಯಾದಿಗಳಲ್ಲಿರುವ ಶಕ್ತಿಯನ್ನು ಉದ್‌ಬೋಧನೆ ಮಾಡುತ್ತಾನೆ ಎಂದರ್ಥ. ಇದು 'ಅನ್ಯತ್ರಾಭಾವಾಚ್ಚ' ಎಂಬ ಸೂತ್ರದಲ್ಲಿರುವ ಚಶಬ್ದದಿಂದ ಸೂಚಿತವಾದ ಪ್ರಮೇಯವಾಗಿದೆ. ಇದನ್ನೇ 'ಸ ಏವ ಭೂಯೋ ನಿಜವೀರ್ಯಚೋದಿತಮ್' ಇತ್ಯಾದಿ ಪುರಾಣವಾಕ್ಯಗಳಿಂದ ಪ್ರಕೃತಿಯಲ್ಲಿ ಶಕ್ತಿಯನ್ನು ಉದ್ಬೋಧನೆ ಮಾಡುತ್ತಾನೆ ಎಂಬುದಾಗಿ ಸಮರ್ಥನೆ ಮಾಡಿದ್ದಾರೆ.

'ದ್ರವ್ಯಂ ಕರ್ಮ ಚ' ಇತ್ಯಾದಿ ಶ್ಲೋಕದಲ್ಲಿ 'ದ್ರವ್ಯ'ಪದದ ಅರ್ಥ

**सत्तर्कदीपावळिः – 'द्रव्यं कर्म च कालश्च स्वभावो जीव एव च । यदनुग्रहतः सन्ति न सन्ति यदुपेक्षया' इत्यनेन प्रकृत्यादिसत्ताप्रदत्वमुच्यते । द्रव्यशब्देन पूर्वप्रकृता प्रकृतिरुच्यते । एवं नित्यानित्यजगन्नियन्तृत्वावगमात् परमेश्वरस्य तृणादिकस्य कार्यस्य पर्जन्यवन्नानुग्राहकत्वमात्रमित्यर्थः ।।**

'ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥

ಪ್ರಕೃತಿ, ಕರ್ಮ, ಕಾಲ, ಸ್ವಭಾವ, ಜೀವ ಇವುಗಳೆಲ್ಲವೂ ಯಾರ ಅನುಗ್ರಹದಿಂದ ಇರುತ್ತವೆ, ಅವನ ಅನುಗ್ರಹ ತಪ್ಪಿದರೆ ಇಲ್ಲದವುಗಳಾಗುತ್ತವೆ. ಈ ಶ್ಲೋಕದಿಂದ ಪ್ರಕೃತ್ಯಾದಿಗಳಲ್ಲಿ ಪರಮಾತ್ಮನು ನೆಲೆಸಿ, ಸತ್ತಾದಿಪ್ರದನಾಗಿದ್ದಾನೆಂದು ಹೇಳಲಾಗಿದೆ. ಇಲ್ಲಿ ದ್ರವ್ಯಶಬ್ದಕ್ಕೆ ಹಿಂದೆ ಪ್ರಕೃತವಾದ ಪ್ರಕೃತಿಯೆಂಬರ್ಥವನ್ನೇ ವಿವಕ್ಷಿಸಬೇಕು. ಹೀಗೆ ನಿತ್ಯಾನಿತ್ಯಜಗತ್ತಿಗೆ ಪರಮಾತ್ಮನು ನಿಯಾಮಕನಾಗಿದ್ದಾನೆಂದು ತಿಳಿಯುತ್ತದೆ. ಹಾಗಾಗಿ ತೃಣಾದಿಕಾರ್ಯಕ್ಕೆ ಮಳೆಯು ಹೇಗೆ ಸಹಕಾರಿಯಾಗಿದೆಯೋ, ಅದರಂತೆ ಜಗತ್ತಿನ ಸೃಷ್ಟಿಗೆ ಪರಮಾತ್ಮನು ಕೇವಲ ಸಹಕಾರಿಯಾಗಿದ್ದಾನೆಂದು ಸರ್ವಥಾ ತಿಳಿಯಬಾರದು.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಅನ್ಯತ್ರಾಭಾವಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

### ಸೇಶ್ವರಸಾಂಖ್ಯನ ಪೂರ್ವಪಕ್ಷ

**तत्वप्रदीपः – निरीश्वरे निराकृते साङ्ख्ये साङ्ख्य एव सेश्वरो ब्रूते । यदि न केवलादचेतनादुत्पत्तिरुपपत्तिमती, अस्तु तर्हि तृणादौ पजन्यवज्जगजन्म-नीश्वरस्यानुग्राहकत्वमात्रमिति ।**

ನಿರೀಶ್ವರಸಾಂಖ್ಯರನ್ನು ಹಿಂದಿನ ಅಧಿಕರಣದಲ್ಲಿ ನಿರಾಕರಣೆ ಮಾಡಿದ್ದಾಯಿತು. ಆ ಸಾಂಖ್ಯರಲ್ಲೇ ಈಶ್ವರನನ್ನು ಒಪ್ಪುವ ಮತ್ತೊಬ್ಬ ಹೀಗೆ ಹೇಳುತ್ತಾನೆ - ಕೇವಲ ಜಡದಿಂದ ಜಗತ್ತಿನ ಉತ್ಪತ್ತಿ ಕೂಡದಿದ್ದರೆ ಬೇಡ. ಹುಲ್ಲಿನ ಹುಟ್ಟುವಿಕೆಗೆ ಮಳೆಯು ಸಹಕಾರಿಯಾದಂತೆ

ಜಗತ್ತಿನ ಹುಟ್ಟುವಿಕೆಗೆ ಈಶ್ವರನು ಸಹಕಾರಿಯಾಗಿರುತ್ತಾನೆ. ಈಗ ಜಡದಿಂದ ಉತ್ಪತ್ತಿ ಹೇಳಲು ಏನು ಆತಂಕ ?

ಸಿದ್ಧಾಂತ

ಪರಮಾತ್ಮನ ವ್ಯಾಪ್ತಿ ಯಾರಿಂದ ತಾನೇ ತಿಳಿಯಲು ಸಾಧ್ಯ ?

**तत्वप्रदीपः – अतो ब्रूते - अन्यत्राभावाच्च न तृणादिवत् । ''अन्तर्बहिश्च तत्सर्वं व्याप्य नारायणः स्थितः'' । तत्सर्वं देशतः कालतो गुणतः शक्तितश्च व्याप्य स्थितः । अन्तर्बहिश्च तद्देशे तद्रहितदेशे च व्याप्तस्तत्काले तद्रहिते काले च तद्भूतैस्तदभूतैर्गुणैः शक्तिभिश्च युक्तः । ''ब्रह्मैवेदं सर्वम्'' इति सर्वस्य तदधीनत्वात् । 'तदधीनत्वादर्थवत्' इत्यादेः । ''सर्वं समाप्नोषि ततोऽसि सर्वः'' इत्यादेश्च ।**

ಸೇಶ್ವರಸಾಂಖ್ಯರ ನಿರಾಕರಣೆಗೆ 'ಅನ್ಯತ್ರಾಭಾವಾಚ್ಚ ನ ತೃಣಾದಿವತ್' ಎಂಬ ಸೂತ್ರ ಹೊರಟಿದೆ. 'ಅಂತರ್ಬಹಿಶ್ಚ ತತ್‌ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಪ್ರತಿಯೊಂದು ಪದಾರ್ಥಗಳ ಒಳಹೊರಗೆ, ಆ ನಾರಾಯಣನು ತುಂಬಿ ನಿಂತಿದ್ದಾನೆ. ಆ ನಾರಾಯಣನು ಎಲ್ಲ ದೇಶದಲ್ಲಿ, ಎಲ್ಲ ಕಾಲದಲ್ಲಿ ಗುಣದಿಂದ ಶಕ್ತಿಯಿಂದ ತುಂಬಿ ನಿಂತಿದ್ದಾನೆ. ದೇಶದ ಒಳಹೊರಗೆ ಆ ದೇಶವಿಲ್ಲದ ಸ್ಥಳದಲ್ಲೂ ನಿಂತಿದ್ದಾನೆ. ಎಲ್ಲ ಕಾಲದಲ್ಲಿ ನಿಂತಿದ್ದಷ್ಟೇ ಅಲ್ಲ, ಈ ಕಾಲವಿಲ್ಲದ ಕಾಲದಲ್ಲೂ ನಿಂತಿದ್ದಾನೆ. ಎಲ್ಲಾ ಭೂತಗಳಲ್ಲಿ ನೆಲೆಸಿದ್ದಾನೆ. ಎಲ್ಲ ಭೂತಗಳನ್ನು ಮೀರಿಯೂ ನೆಲೆಸಿದ್ದಾನೆ. ಅಂಥವನು ಎಲ್ಲ ಗುಣಗಳಿಂದ ಶಕ್ತಿಗಳಿಂದ ಉಪಬೃಂಹಿತನಾಗಿದ್ದನೆ. 'ಬ್ರಹ್ಮೈವೇದಂ ಸರ್ವಂ' ಎಂಬ ಶ್ರುತಿಯು ಸಕಲವೂ ಅವನ ಅಧೀನ ಎನ್ನುತ್ತಿದೆ. 'ತದಧೀನತ್ವಾತ್ ಅರ್ಥವತ್ 'ಎಂಬ ಸೂತ್ರವು ಇದನ್ನು ಪುಷ್ಟೀಕರಿಸುತ್ತಿದೆ. 'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ' 'ಎಲ್ಲವನ್ನು ಹೊಂದಿರುವುದರಿಂದ ಸರ್ವ ಎನಿಸಿರುವಿ' ಎಂಬ ಶ್ರುತಿ ಇದನ್ನೇ ವಿವರಿಸಿದೆ.

ಸೂತ್ರಾರ್ಥ

**तत्वप्रदीपः – ब्रह्मणोऽन्यत्र जगतः सृष्ट्यादेः तच्छक्तेश्चाभावान्नानुग्राहकत्व-मात्रं तस्य । किन्तु जगदुत्पादकत्वादिकमुपादानादिशक्तिप्रदत्वं चास्तीति ।**

**।। इत्यन्त्राभावाधिकरणम् ।।**

ಸೂತ್ರಾರ್ಥ ಹೀಗಿದೆ - ಅನ್ಯತ್ರ = ಬ್ರಹ್ಮನನ್ನು ಬಿಟ್ಟು, ಜಗತ್ತಿನ ಸೃಷ್ಟಿಯೇ ಆಗದು. ಅಂಥ ಶಕ್ತಿಯು ಆ ಜಗತ್ತಿಗಿಲ್ಲ. ಆದ್ದರಿಂದ ಈಶ್ವರ ಎಂದರೆ ಜಗತ್ತಿಗೆ ಅನುಗ್ರಹ ಮಾಡುವ ಶಕ್ತ ಎಂದಷ್ಟೇ ಅರ್ಥವಲ್ಲ. ಜಗತ್ತನ್ನು ಉತ್ಪತ್ತಿ ಮಾಡುತ್ತಾನೆ. ಅದಕ್ಕೆ ಉಪಾದಾನಕಾರಣವಾದ ಪ್ರಕೃತ್ಯಾದಿಗಳಿಗೂ ಶಕ್ತಿಯನ್ನು ನೀಡುತ್ತಾನೆ ಎಂದರ್ಥ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ
ಅನ್ಯತ್ರಾಭಾವಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

ಸೇಶ್ವರಸಾಂಖ್ಯಮತದ ನಿರಾಕರಣೆಗಾಗಿ ಈ ಅಧಿಕರಣ

**तत्वप्रकाशिका – अधिकरणार्थं दर्शयति – सेश्वरेति ।। अत एवात्र विष्णोः स्वतन्त्रकर्तृत्वे सेश्वरसाङ्ख्यसमयविरोधनिरासादस्ति शास्त्रादिसङ्गतिः।**

ಈ ಅಧಿಕರಣದ ಪ್ರಮೇಯವನ್ನು ಭಾಷ್ಯಕಾರರು 'ಸೇಶ್ವರಸಾಂಖ್ಯಮತಂ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ಆದ್ದರಿಂದ ಈ ಅಧಿಕರಣದಲ್ಲಿ ವಿಷ್ಣುವಿನ ಸ್ವತಂತ್ರಕರ್ತೃತ್ವ ವಿಷಯದಲ್ಲಿ ಸೇಶ್ವರಸಾಂಖ್ಯಮತದ ವಿರೋಧವನ್ನು ನಿರಾಕರಣೆ ಮಾಡಿದಂತಾಯಿತು. ಆದ್ದರಿಂದ ಶಾಸ್ತ್ರಾದಿ-ಸಂಗತಿಗಳು ಇರುತ್ತವೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ

# ಭಾವದೀಪ

**भावदीपः – अन्यत्राभावाच्च न तृणादिवत् ।।१।।** त एवेत्युक्तं व्यनक्ति ॥ **अत्रेति ।।** कर्तृत्वस्य परसंमतत्वात्स्वतन्त्रेत्युक्तम् ।

'ಅತ ಏವ' ಎಂದು ಹೇಳಿದ್ದನ್ನೇ 'ಅತ್ರ' ಇತ್ಯಾದಿ ವಾಕ್ಯವು ವಿವರಿಸುತ್ತಿದೆ. ಕರ್ತೃತ್ವವನ್ನು ಸಾಂಖ್ಯರೂ ಕೂಡ ಒಪ್ಪಿದ್ದಾರೆ. ಹಾಗಾಗಿ ಸ್ವತಂತ್ರ ಎಂಬ ವಿಶೇಷಣವನ್ನು ನೀಡಿದ್ದಾರೆ. ಸ್ವತಂತ್ರಕರ್ತೃತ್ವವನ್ನು ವಿಷ್ಣುವಿನಲ್ಲಿ ಸೇಶ್ವರಸಾಂಖ್ಯರು ಒಪ್ಪಿರುವುದಿಲ್ಲ.

ವಿವರಣೆ - 'ನ ಋತೇ ತ್ವತ್‌ಕ್ರಿಯತೇ' ಇತ್ಯಾದಿ ಶ್ರುತಿಯು ಗುಣಭರಿತನಾದ ಈಶ್ವರ ವಿಷಯಕವಾಗಿದೆ. ಆದ್ದರಿಂದ 'ವ್ಯತಿರೇಕಾನವಸ್ಥಿತೇಃ' ಎಂಬ ಸೂತ್ರದಲ್ಲಿ ಹೇಳಿದ ದೋಷವು ಬರುವುದಿಲ್ಲ. ಹಿಂದೆ ನಿರೀಶ್ವರಸಾಂಖ್ಯವಾದಿಗಳನ್ನು ನಿರಾಕರಿಸಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯಸಂಗತಿಯು ಪ್ರಾಪ್ತವಾಗುತ್ತದೆ. ಈ ಮತದಲ್ಲಿ ಸಾಂಖ್ಯರು ಈಶ್ವರನನ್ನು ಒಪ್ಪಿದರೂ ಕೂಡ ಈಶ್ವರನಿಗೆ ಸ್ವಾತಂತ್ರ್ಯವನ್ನು ಒಪ್ಪದ ಕಾರಣ ನಿರೀಶ್ವರವಾದದಲ್ಲಿ ಅಂತರ್ಭಾವ ಆಗುವುದಿಲ್ಲ. ಆದ್ದರಿಂದ ಈಶ್ವರನನ್ನು ಒಪ್ಪುವ ವೈಶೇಷಿಕಾದಿಮತದ ಜೊತೆ ಇದನ್ನು ಸೇರಿಸಿಲ್ಲ. (ವಾಕ್ಯಾರ್ಥಮುಕ್ತಾವಳಿ)

ಅಧಿಕರಣದ ವಿಷಯ ಸಂಶಯಗಳು

**तत्वप्रकाशिका – स्वातन्त्र्येण जगत्कर्तेश्वर इति निगदितम् । तस्य च साङ्ख्यसमयविरोधे लक्षणानुपपत्तिः स्यात् इत्यवश्यं निरसनीयः । तद्धरेः स्वातन्त्र्येण जगत्कारणत्वं विषयः । युक्तमयुक्तं वेति संशयः । मतविमतिः सन्देहबीजम् ।**

ವಿಷ್ಣುವೇ ಜಗತ್ತಿಗೆ ಸ್ವತಂತ್ರಕರ್ತೃ ಆಗಿದ್ದಾನೆಂದು ಈ ಹಿಂದೆ ಹೇಳಲಾಯಿತು. ವಿಷ್ಣುವಿನ ಈ ಜಗತ್‌ಕರ್ತೃತ್ವಲಕ್ಷಣಕ್ಕೆ ಸಾಂಖ್ಯಮತದ ವಿರೋಧವು ಬರುತ್ತದೆ. ಆದ್ದರಿಂದ ಇದು ವಿಷ್ಣುವಿನ

ಲಕ್ಷಣವಾಗುವುದಿಲ್ಲ. ಅದಕ್ಕಾಗಿ ಈ ಸಾಂಖ್ಯಮತವನ್ನು ಅವಶ್ಯವಾಗಿ ನಿರಾಕರಣೆ ಮಾಡಬೇಕು. ವಿಷ್ಣುವು ಸ್ವತಂತ್ರನಾಗಿ ಜಗತ್ತಿಗೆ ಕಾರಣ ಎಂಬುದು ಈ ಅಧಿಕರಣದ ವಿಷಯ. ಜಗತ್ಕಾರಣತ್ವವು ವಿಷ್ಣುವಿನಲ್ಲಿ ಯುಕ್ತವೋ ಅಯುಕ್ತವೋ? ಎಂಬುದು ಸಂದೇಹ. ಮತಗಳಲ್ಲಿರುವ ವೈಮತ್ಯವೇ ಸಂದೇಹಬೀಜ.

### ಪ್ರಕೃತಿಗೆ ಈಶ್ವರನು ಅನುಗ್ರಾಹಕ

**तत्वप्रकाशिका – पूर्वपक्षयति – यथेति ।। नेश्वरस्य स्वतन्त्रकर्तृत्वं युक्तम्। प्रधानादेव जगदुत्पत्तेः सम्भवात् । न चाचेतनस्य स्वतः प्रवृत्त्यनुपपत्तिरित्युक्तमेवेति वाच्यम् । प्रधानादेव जगदुत्पत्तावीश्वरस्यानुग्राहकत्वाभ्युपगमात् ।**

ಅಧಿಕರಣದ ಪೂರ್ವಪಕ್ಷವನ್ನು 'ಯಥಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಈಶ್ವರನಿಗೆ ಸ್ವತಂತ್ರಕರ್ತೃತ್ವವು ಅಯುಕ್ತವಾಗಿದೆ. ಪ್ರಕೃತಿಯಿಂದಲೇ ಜಗತ್ತು ಹುಟ್ಟುವಾಗ ಈಶ್ವರನೇಕೆ ಬೇಕು. ಅಚೇತನವಾದ ಪ್ರಕೃತಿಗೆ ಸ್ವತಃಪ್ರವೃತ್ತಿಯು ಅನುಪಪನ್ನವೆಂದು ಈಗಾಗಲೇ ಹೇಳಿದ್ದೇವಲ್ಲವೆ? ಎಂದು ಪ್ರಶ್ನಿಸಬಾರದು. ಪ್ರಕೃತಿಯಿಂದಲೇ ಜಗತ್ತು ಹುಟ್ಟುತ್ತದೆ. ಇಂಥ ಪ್ರಕೃತಿಗೆ ಈಶ್ವರನು ಅನುಗ್ರಾಹಕನಾಗಿದ್ದಾನೆಂದು ಒಪ್ಪುತ್ತೇವೆ.

**भावदीपः** – पूर्वोक्तदोषास्पृष्टतोक्तिपरतया भाष्यमवतार्य व्याचष्टे।। **न चेति** ।।

ಹಿಂದೆ ಹೇಳಿದ ದೋಷವು ಪ್ರಾಪ್ತವಾಗುವುದಿಲ್ಲವೆಂದು ಹೇಳುವವರಾಗಿ ಭಾಷ್ಯಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡಲು 'ನ ಚ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

### ಸಸ್ಯೋತ್ಪತ್ತಿಗೆ ಮಳೆಯಂತೆ ಈಶ್ವರನು

**तत्वप्रकाशिका – यथा खलु पृथिव्येव तृणादिकार्याणां प्रधानं कारणं पर्जन्यानुग्रहेण चोत्पादयति । तथा प्रधानस्यैव प्राधान्यमीश्वरस्त्वनुग्राहकमात्रमिति न तस्य स्वातन्त्र्येण जगत्कारणत्वलक्षणं युक्तमिति भावः ।**

ಹುಲ್ಲು ಮೊದಲಾದ ಸಸ್ಯಗಳ ಉತ್ಪತ್ತಿಗೆ ಭೂಮಿಯೇ ಮುಖ್ಯ ಕಾರಣ. ಮಳೆಯು ಕೇವಲ ಸಹಕಾರಿ. ಅದರಂತೆ ಪ್ರಧಾನವೇ ಜಗತ್ತಿನ ಉತ್ಪತ್ತಿಗೆ ಮುಖ್ಯಕಾರಣ. ಈಶ್ವರನು ಕೇವಲ ಸಹಕಾರಿ. ಹೀಗಿರುವಾಗ ಸ್ವತಂತ್ರಕಾರಣತ್ವ ಲಕ್ಷಣವು ಈಶ್ವರನಲ್ಲಿ ಯುಕ್ತವಾಗುವುದಿಲ್ಲ.

**भावदीपः** – भाष्ये तृणादिवदिति सूत्रांशानुरोधेन दृष्टान्ते दार्ष्टांतिके च कार्यमात्रे पर्जन्याद्यनुग्रहोक्तावपि कारणेऽपि तदनुग्रहो ध्येयः सौत्रचशब्दव्यावृत्त्यर्थत्वात्तस्येति भावेन कार्यकारणयोरुभयत्रानुग्रहान्वयाय पर्जन्यानुगृहीतानामित्युक्त्वा पर्जन्यानुग्रहेणेति ईश्वरस्तदनुग्राहकमात्रमिति चोक्तम् ॥

'ತೃಣಾದಿವತ್' ಎಂಬ ಸೂತ್ರಕ್ಕೆ ಅನುಗುಣವಾಗಿ ಭಾಷ್ಯದಲ್ಲಿ ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ದೃಷ್ಟಾಂತವೆನಿಸಿದ ತೃಣದಲ್ಲಿ ದಾರ್ಷ್ಟಾಂತವೆನಿಸಿದ ಜಗತ್ತಿನಲ್ಲಿ ಪರ್ಜನ್ಯನ ಅನುಗ್ರಹ ಹಾಗೂ ಈಶ್ವರನ ಅನುಗ್ರಹವನ್ನಷ್ಟೇ ಹೇಳಿದ್ದಾರೆ. ಆದರೆ ಉಪಲಕ್ಷಣಯಾ ಕಾರಣವನ್ನೂ ಕೂಡ ತದನುಗ್ರಹವನ್ನು ತಿಳಿಯಬೇಕು. ಇದು ಸೂತ್ರದಲ್ಲಿರುವ ಚಶಬ್ದದಿಂದ ವ್ಯಾವೃತ್ತವಾಗುತ್ತದೆ. ಈ ಅಭಿಪ್ರಾಯದಿಂದ ಕಾರ್ಯಕಾರಣಗಳೆರಡರಲ್ಲೂ ಅನುಗ್ರಹವನ್ನು ತಿಳಿಸುವುದಕ್ಕಾಗಿ 'ಪರ್ಜನ್ಯಾನುಗ್ರಹೇಣ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಮತ್ತು 'ಈಶ್ವರಸ್ತು ಅನುಗ್ರಾಹಕಮಾತ್ರಮ್' ಎಂದೂ ಕೂಡ ಹೇಳಿದ್ದಾರೆ.

ವಿವರಣೆ - ಟೀಕೆಯಲ್ಲಿ 'ಪರ್ಜನ್ಯಾನುಗ್ರಹೇಣ' ಎಂಬ ಪದವಿದೆ. ದಾರ್ಷ್ಟಾಂತಿಕದಲ್ಲಿ 'ಈಶ್ವರಃ ಅನುಗ್ರಾಹಕಮಾತ್ರಮ್' ಎಂಬ ಪದವಿದೆ. ಈ ಎರಡುಪದಗಳ ಸ್ವಾರಸ್ಯವನ್ನು ಇಲ್ಲಿ ತಿಳಿಸುತ್ತಿದ್ದಾರೆ. ಸಸ್ಯೋತ್ಪತ್ತಿಗೆ ಮಳೆಯು ಸಹಕಾರಿ ಕಾರಣ ಆಗಿದೆ ಎಂಬುದು ಭಾಷ್ಯದಿಂದ ತಿಳಿಯುವ ವಿಷಯ. ಆದರೆ ಇದೇ ಮಳೆಯು ಕಾರಣವಾದ ಭೂಮಿಗೂ ಕೂಡ ಸಹಕಾರಿ ಕಾರಣವೆಂದು ತಿಳಿಯಬೇಕು. ಇದರಂತೆ ದಾರ್ಷ್ಟಾಂತಿಕದಲ್ಲಿ ಜಗತ್ತಿನ ಸೃಷ್ಟಿಗೆ ಈಶ್ವರನು ಅನುಗ್ರಾಹಕನಾಗಿದ್ದಾನೆಂಬುದು ಭಾಷ್ಯದಿಂದ ತಿಳಿಯುವ ವಿಷಯ. ಇದರ ಜೊತೆ ಜಗತ್ತಿನ ಸೃಷ್ಟಿಗೆ ಕಾರಣವಾದ ಪ್ರಕೃತಿಗೂ ಕೂಡ ಈಶ್ವರನು ಕೇವಲ ಅನುಗ್ರಾಹಕನಾಗಿದ್ದಾನೆಂಬ ಅಂಶವನ್ನು ತಿಳಿಯಬೇಕು. ಏಕೆಂದರೆ ಮುಂದೆ ಸಿದ್ಧಾಂತದಲ್ಲಿ ಈ ಎರಡು ವಿಷಯಗಳನ್ನು ನಿರಾಕರಣೆ ಮಾಡುತ್ತಾರೆ. ಸೂತ್ರದಲ್ಲಿರುವ 'ಚ'ಶಬ್ದದಿಂದ ಈಶ್ವರನು ಕೇವಲ ಕಾರ್ಯದಲ್ಲಷ್ಟೇ ಇದ್ದು, ಅವುಗಳ ಸತ್ತಾದಿಗಳಿಗೆ ಕಾರಣನಾಗಿರುವುದಲ್ಲ. ಕಾರಣವೆನಿಸಿದ ಪ್ರಕೃತ್ಯಾದಿಗಳಲ್ಲಿ ನೆಲೆಸಿ, ಅವುಗಳ ಸತ್ತಾದಿಗಳನ್ನು ನೀಡುತ್ತಾನೆಂದು ವ್ಯಾಖ್ಯಾನ ಮಾಡುತ್ತಾನೆ. ಅದಕ್ಕನುಗುಣವಾದ ಪೂರ್ವಪಕ್ಷವನ್ನು ಇಲ್ಲಿ ತಿಳಿಯಬೇಕು.

ವಿಷ್ಣು ಕೇವಲ ಸಹಕಾರಿಯಲ್ಲ ಸರ್ವಪ್ರೇರಕ

**तत्वप्रकाशिका – सिद्धान्तयत्सूत्रमवतार्य व्याचष्टे ।। अत इति ।। युक्तमेव विष्णोर्जगत्कारणत्वं स्वातन्त्र्येण न तु यथा तृणादीनां पर्जन्योऽनुग्राहकस्तथाऽनुग्राहकत्वमात्रम् । सर्वपदार्थानां सत्तादिप्रदानाय सर्वगतत्वोक्तेरीश्वरप्रेरणामन्तरेण कस्यापि वस्तुनः सत्त्वस्यैवाभावात् ।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ 'ಅತಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಸ್ವಾತಂತ್ರ್ಯೇಣ ಜಗತ್ಕಾರಣತ್ವವು ವಿಷ್ಣುವಿನ ಲಕ್ಷಣವೆಂದು ಹೇಳಿದ್ದು ಯುಕ್ತವೇ ಆಗಿದೆ. ಹೊರತಾಗಿ ಹುಲ್ಲು ಮೊದಲಾದ ಸಸ್ಯಗಳಿಗೆ ಮಳೆಯ ನೀರು ಸಹಕಾರಿಯಾದಂತೆ ವಿಷ್ಣು ಜಗದುತ್ಪತ್ತಿಗೆ ಕೇವಲ ಸಹಕಾರಿಯಾಗಿರುವುದಿಲ್ಲ. ಪ್ರತಿಯೊಂದು ಪದಾರ್ಥಗಳಿಗೆ ಸತ್ತಾ ಮೊದಲಾದವುಗಳನ್ನು ನೀಡುವ ಮೂಲಕ ಸರ್ವಗತನಾಗಿದ್ದಾನೆ. ಭಗವಂತನ ಪ್ರೇರಣೆಯಿಲ್ಲದೆ ಯಾವುದೇ ವಸ್ತುಗಳಿಗೆ ಅಸ್ತಿತ್ವವೇ ಕೂಡುವುದಿಲ್ಲ.

**भावदीपः** – आकाङ्क्षितं पूरयन् व्युत्क्रमेण भाष्यं व्याचष्टे।। **युक्तमेवेति**।। तृणाधीनामित्यादेरर्थो न त्वित्यादि। यच्च किञ्चिदित्यादिसर्वगतत्वश्रुत्युक्तेः प्रकृतोपयोगायोक्तम्।। **सर्वपदार्थानां सत्तादिप्रदानायेति**।। एतल्लाभोऽग्रे व्यक्तः। श्रुतिभ्य इत्यस्य भावार्थः।। **सर्वगतत्वोक्तेरिति**।। अन्यत्रेत्यादेः अन्यत्रान्याधीनत्वेन राज्ञि राष्ट्रमितिवत्। ईश्वरप्रेरणामन्तरेणेत्यादिरर्थः।।

ಭಾಷ್ಯದಲ್ಲಿ 'ಅತ ಬ್ರವೀತಿ' ಎಂದು ಹೇಳಿದ್ದಾರೆ. ಇಲ್ಲ ಆಕಾಂಕ್ಷಿತವಾದದ್ದನ್ನು ಪೂರಣ ಮಾಡಿಕೊಳ್ಳುವ ಮೂಲಕ ವ್ಯುತ್ಕ್ರಮಣದಿಂದ ಭಾಷ್ಯವನ್ನು ವ್ಯಾಖ್ಯಾನಿಸಲು 'ಯುಕ್ತಮೇವ' ಇತ್ಯಾದಿ ಟೀಕಾವಾಕ್ಯವು ಹೊರಟದೆ. 'ತೃಣಾದೀನಾಮ್' ಇತ್ಯಾದಿ ಭಾಷ್ಯವಾಕ್ಯದ ಅರ್ಥವನ್ನು 'ನತು' ಇತ್ಯಾದಿಯಾಗಿ ಟೀಕೆಯಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಯಚ್ಚ ಕಿಂಚಿತ್' ಇತ್ಯಾದಿ ಸರ್ವಗತತ್ವಶ್ರುತಿಯಲ್ಲಿ ಹೇಳಿದ್ದು ಪ್ರಕೃತಕ್ಕೆ ಉಪಯೋಗವಾಗುತ್ತದೆಂಬುದನ್ನು 'ಸರ್ವಪದಾರ್ಥಾನಾಂ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ

ಮಾಡಿದ್ದಾರೆ. 'ಸತ್ತಾದಿಪ್ರದಾನಾಯ' ಎಂದು ಹೇಳಿದ್ದರ ಲಾಭವು ಮುಂದೆ ಸ್ಪಷ್ಟವಾಗುತ್ತದೆ. ಇದು 'ಶ್ರುತಿಭ್ಯಃ' ಎಂಬ ಭಾಷ್ಯದಲ್ಲಿ ಭಾವಾರ್ಥವಾಗಿದೆ. 'ಸರ್ವಗತತ್ವೋಕ್ತೇಃ' ಎಂಬ ಟೀಕೆಗೆ ಹೀಗರ್ಥ - ಸೂತ್ರದಲ್ಲಿರುವ 'ಅನ್ಯತ್ರ' ಎಂಬುದಕ್ಕೆ ಬ್ರಹ್ಮನನ್ನು ಬಿಟ್ಟು ಬೇರೆಡೆ ಜಗತ್ತು ಅಭಾವಾತ್ = ಇಲ್ಲದಿರುವುದರಿಂದ ಎಂದರ್ಥ. ಬ್ರಹ್ಮನನ್ನು ಬಿಟ್ಟು ಇತರರ ಅಧೀನವಾಗಿರುವುದಿಲ್ಲ ಎಂದು ತಿಳಿಯಬೇಕು. ಹೇಗೆ ರಾಜನಲ್ಲಿ 'ರಾಷ್ಟ್ರಮ್' ಎಂಬ ಪದಪ್ರಯೋಗವಿದೆಯೋ, ಅದರಂತೆ ಬ್ರಹ್ಮನನ್ನು ಬಿಟ್ಟು ಜಗತ್ತಿಲ್ಲ, ಬ್ರಹ್ಮನೇ ಜಗತ್ತಾಗಿದ್ದಾನೆ ಎಂಬುದಕ್ಕೂ ಕೂಡ ಅರ್ಥವನ್ನು ತಿಳಿಯಬೇಕು. ಈಶ್ವರಪ್ರೇರಣೆಯಿಲ್ಲದೇ ಜಗತ್ತು ಇರುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ - ಸಾಂಖ್ಯರು ಅನುಗ್ರಾಹಕಶಬ್ದಕ್ಕೆ ತನ್ನ ಶಕ್ತಿಯಿಂದಲೇ ಜಗದಾಕಾರವಾಗಿ ಪರಿಣಾಮವನ್ನು ಹೊಂದುವ ಪ್ರಧಾನಕ್ಕೆ ಪರಮಾತ್ಮನು ದೂರದಲ್ಲಿದ್ದು ಜಲದಾನಾದಿಗಳ ಮೂಲಕ ಸ್ವಲ್ಪ ಮಾತ್ರ ಉಪಕಾರಕನಾಗಿದ್ದಾನೆಂದು ಹೇಳುತ್ತಾರೆ. ಇಂಥ ಅನುಗ್ರಾಹಕತ್ವವನ್ನು ಈಶ್ವರನಲ್ಲಿ ಸರ್ವಥಾ ಒಪ್ಪಬಾರದೆಂದು ನಿರಾಕರಿಸಿದ್ದಾರೆ. (ಗುರ್ವರ್ಥದೀಪಿಕಾ)

ಪ್ರಧಾನದಿಂದ ಜಗತ್ತು ಉತ್ಪತ್ತಿಯಾಗುವಾಗ ಈಶ್ವರನಲ್ಲಿ ಒಪ್ಪಿದ ಅನುಗ್ರಾಹಕತ್ವವೆಂದರೆ ಫಲೋಪಕಾರಿಲಿಂಗತ್ವರೂಪವಾದದ್ದು ಹೊರತು ಸಾಧನೋಪಕಾರಿರೂಪತ್ವವಾದದ್ದು ಅಲ್ಲ. ಆದ್ದರಿಂದಲೇ ಭಾಷ್ಯದಲ್ಲಿ ಮಳೆಯ ಸಹಕಾರಿವುಳ್ಳದ್ದು ಹುಲ್ಲು. ಈಶ್ವರನ ಸಹಕಾರವುಳ್ಳದ್ದು ಜಗತ್ತು ಎಂಬುದಾಗಿ ಹೇಳಿರುತ್ತಾರೆ. (ವಾಕ್ಯಾರ್ಥಮುಕ್ತಾವಳಿ)

### ಪ್ರಕೃತಿಯ ಸತ್ತಾದಿಗಳಿಗೂ ವಿಷ್ಣುವೇ ಕಾರಣ

**ತತ್ವಪ್ರಕಾಶಿಕಾ – न हि 'यदधीनं यस्य सत्तादि' तत्तस्यानुग्राहकमात्रमिति भावः । 'ब्रह्मैवेदं सर्वम्' इति तदधीना सत्तेत्युच्यते । न केवलं कार्यस्येश्वराधीनत्वान्नानुग्राहकत्वमात्रं तस्य किन्तु सर्वकारणत्वेनाभ्युपगत-प्रकृतिसत्तादेरपि तदधीनत्वम् । अतश्च विष्णोरेव स्वातन्त्र्यमिति सप्रमाणकं सूत्राक्षरार्थमाह – स इति ।।**

ಯಾವ ವಸ್ತುವಿನ 'ಸತ್ತಾ' ಮೊದಲಾದವು ಯಾರ ಅಧೀನವೋ ಆ ವ್ಯಕ್ತಿಯು ಆ ವಸ್ತುವಿಗೆ ಕೇವಲ ಅನುಗ್ರಾಹಕನಾಗಲು ಸಾಧ್ಯವಿಲ್ಲ ಎಂಬುದು ಈ ಅಧಿಕರಣದ ಅಭಿಪ್ರಾಯ. 'ಬ್ರಹ್ಮೈವೇದಂ' ಎಂಬ ಶ್ರುತಿಯು ಸಮಸ್ತ ಜಗತ್ತಿನ ಅಸ್ತಿತ್ವವು ಭಗವದಧೀನವೆಂದು

ಹೇಳುತ್ತಿದೆ. ಕೇವಲ ಜಗತ್ತು ಈಶ್ವರನ ಅಧೀನವಾದ್ದರಿಂದ ಅನುಗ್ರಾಹಕವೆಂದು ಅಭಿಪ್ರಾಯವಲ್ಲ. ಸರ್ವಕಾರಣವೆಂದು ಅಂಗೀಕಾರ ಮಾಡಿರುವುದರಿಂದ ಪ್ರಕೃತಿಯ ಸತ್ತಾದಿಗಳೂ ಕೂಡ ಭಗವದಧೀನವೇ ಆಗಿವೆ. ಆದ್ದರಿಂದಲೂ ಜಗತ್ತಿನ ಉತ್ಪತ್ತಿವಿಷಯದಲ್ಲಿ ವಿಷ್ಣುವೇ ಸ್ವತಂತ್ರ ಎಂಬ ವಿಷಯವು ಪ್ರಮಾಣದಿಂದ ನಿಶ್ಚಿತವಾಗಿದೆ ಎಂಬ ಸೂತ್ರದ ಅಭಿಪ್ರಾಯವನ್ನು ಭಾಷ್ಯಕಾರರು 'ಸಚ' ಇತ್ಯಾದಿಯಾಗಿ ಪ್ರತಿಪಾದನೆ ಮಾಡುತ್ತಿದ್ದಾರೆ.

**भावदीपः – तदधीना सत्तेति ।।** 'यदधीना यस्य सत्ता तत्तदित्येव भण्यते' इत्युक्तेरिति भावः। स एवेत्यादिभाष्य सौत्रचशब्दव्याख्यानमित्याह– **न केवलमिति ।।** सत्ताप्रदत्वं चेति चशब्दार्थव्यक्तिरियं भाष्यपदमेवानुवदति।। **नानुग्राहकत्वमात्रमिति ।।** नसमासेन समस्तमेतत्पदम् । अनुग्राहकत्वामात्रविरोधीत्यर्थः।। **तदधीनत्वमिति ।।** नानुग्राहकत्वमात्रमित्यनुषङ्गः ।।

'ತದಧೀನಾ ಸತ್ತಾ' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ - 'ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ' ಯಾವ ಪದಾರ್ಥದ ಇರುವಿಕೆಯು ಯಾರ ಅಧೀನವೋ, ಆ ಪದಾರ್ಥವನ್ನು ಅದೇ ಎಂಬುದಾಗಿ ಕರೆಯಲಾಗುತ್ತದೆ. ಆದ್ದರಿಂದ 'ಬ್ರಹ್ಮೇವೇದಂ ಸರ್ವಂ' ಎಂಬ ಶ್ರುತಿಯು ಜಗತ್ತನ್ನೇ ಬ್ರಹ್ಮವೆಂದು ಕರೆದಿದೆ. ಏಕೆಂದರೆ ಈ ಜಗತ್ತು ಬ್ರಹ್ಮನ ಅಧೀನವಾಗಿದೆ.

'ಸ ಏವ' ಇತ್ಯಾದಿ ಭಾಷ್ಯವು ಸೂತ್ರದಲ್ಲಿರುವ ಚಶಬ್ದದ ವ್ಯಾಖ್ಯಾನವಾಗಿದೆ ಎಂಬುದನ್ನು 'ನ ಕೇವಲಮ್' ಇತ್ಯಾದಿಯಾಗಿ ವಿವರಿಸುತ್ತಿದ್ದಾರೆ. ಆಯಾ ಪದಾರ್ಥಗಳಿಗೆ ಸತ್ತಾಪದಾರ್ಥವೂ ಕೂಡ ಚಶಬ್ದದ ವ್ಯಾಖ್ಯಾನವಾಗಿದೆ ಎಂಬುದನ್ನು ತಿಳಿಸಲು ಭಾಷ್ಯದಲ್ಲಿರುವ ಪದವನ್ನೇ 'ನಾನುಗ್ರಾಹಕತ್ವ ಮಾತ್ರಮ್' ಎಂಬುದಾಗಿ ಅನುವಾದ ಮಾಡಿದ್ದಾರೆ. 'ನಾನುಗ್ರಾಹಕಮಾತ್ರಮ್' ಎಂಬುದು ಸಮಸ್ತ ಪದವಾಗಿದೆ. ಇದು ನ ಸಮಾಸವೆಂದು ತಿಳಿಯಬೇಕು. ಅನುಗ್ರಾಹಕತ್ವಮಾತ್ರಕ್ಕೆ ವಿರೋಧಿಯಾದದ್ದು ಎಂದರ್ಥ. 'ತದಧೀನತ್ವಮ್' ಎಂಬಲ್ಲಿ 'ನಾನುಗ್ರಾಹಕತ್ವಮಾತ್ರಮ್' ಎಂಬುದನ್ನು ಅನುಷಂಗ ಮಾಡಬೇಕು.

### ಭಾಗವತವಾಕ್ಯದ ಅರ್ಥ ವಿವರಣೆ

**तत्वप्रकाशिका – 'स एव' इति हर्यधीनोद्बोधत्वं प्रकृतेरुच्यते । द्रव्यमिति तदधीनसत्त्वम् । स्वजीवमायां स्वाधीनां जीवबन्धिकाम् ।**

**सिसृक्षतीं सर्जनोन्मुखीम्। आत्मनि आत्माधारत्वेन । चशब्देन सूचितमिति शेषः । अतः सेश्वरसाङ्ख्यमतस्याप्रामाणिकत्वेनाविरोधाद्युक्तं हरेर्जगत्कारणमिति सिद्धम् ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् अन्यत्रभावाधिकरणम्।।**

ಭಾಷ್ಯದಲ್ಲಿ ಉದಾಹರಿಸಿದ ಭಾಗವತದ ಮಾತಿನಲ್ಲಿ 'ಸ ಏವ' ಎಂಬುದರಿಂದ ಪ್ರಕೃತಿಯು ಭಗವಂತನ ಅಧೀನವೆಂದು ಹೇಳಲಾಗಿದೆ. 'ದ್ರವ್ಯಂ ಕರ್ಮ ಚ' ಎಂಬ ಪ್ರಮಾಣದಿಂದ ಪ್ರಕೃತಿಯಲ್ಲಿರುವ ಸತ್ತಾವು ಭಗವಂತನ ಅಧೀನವೆಂದು ಹೇಳಲಾಗಿದೆ.

'ಸ್ವಜೀವಮಾಯಾಂ' ಎಂಬ ಪದಕ್ಕೆ ತನ್ನ ಅಧೀನವಾದ ಜೀವನಿಗೆ ಬಂಧಕಳಾದ ಲಕ್ಷ್ಮೀ ಎಂದರ್ಥ. 'ಸಿಸೃಕ್ಷತೀಂ' ಎಂಬುದಕ್ಕೆ ಸೃಷ್ಟಿಗೆ ಉನ್ಮುಖಳಾಗಿ ಎಂದು 'ಆತ್ಮನಿ' ಎಂಬುದಕ್ಕೆ ತನ್ನಲ್ಲಿ ಆಶ್ರಯಿಸಿರುವಂತೆ ಎಂದರ್ಥ. ಸೂತ್ರದಲ್ಲಿರುವ ಚ ಶಬ್ದದಿಂದ ಈ ಎಲ್ಲಾ ಪ್ರಮಾಣಗಳನ್ನು ಸೂಚನೆ ಮಾಡಿದ್ದಾರೆ ಎಂದು ಶೇಷಪೂರಣೆ ಮಾಡಿಕೊಳ್ಳಬೇಕು.

ಆದ್ದರಿಂದ ಸೇಶ್ವರಸಾಂಖ್ಯಮತವು ಕೂಡ ಅಪ್ರಾಮಾಣಿಕವಾಗಿದೆ. ಇದರ ವಿರೋಧವು ಶ್ರೀಹರಿಯ ಜಗತ್ಕಾರಣತ್ವಕ್ಕೆ ಸರ್ವಥಾ ಬರುವುದಿಲ್ಲ. ಆದ್ದರಿಂದ ಶ್ರೀಹರಿಯು ಸ್ವತಂತ್ರವಾಗಿ ಜಗತ್ಸೃಷ್ಟ್ಯಾದಿಕಾರಣ ಎಂಬ ಪ್ರಮೇಯವು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ
ಅನ್ಯತ್ರಾಭಾವಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

**भावदीपः** – **सूत्राक्षरेति ।।** चशब्दरूपेत्यर्थः। तथा च न केवलम न्यक्षाभावादित्यनेनोक्तं कार्यस्येश्वराधीनत्वमेवेश्वरसाङ्ख्योक्तस्यानुग्राहकत्वमात्रस्य विरोधि किं तु स एवेत्यादिप्रमाणसिद्धं सौत्रचशब्दसूचितं सर्वहेतुभूत-प्रकृतिसत्तादेरीश्वराधीनत्वमपि विरोधीत्यर्थः।। **सूचितमितीति ।।** तथा च

प्रकृतिसत्तादिप्रदत्वं चाङ्गीकृतं सूत्रकृतेति सौत्रचशब्देन सूचितमित्यर्थः इति भावः ॥ **अत इति ॥** सर्वस्येशाधीनत्वावेदकश्रुतिस्मृतिविरोधादित्यर्थः ॥

॥ इति राघवेन्द्रयतिकृते भावदीपे अन्यत्रभावाधिकरणम् ॥

'ಸೂತ್ರಾಕ್ಷರ ಎಂದರೆ ಚಶಬ್ದರೂಪವಾದ ಸೂತ್ರದ ಅಕ್ಷರದಿಂದ ಎಂದರ್ಥ. ಇದರ ಅಭಿಪ್ರಾಯ ಹೀಗಿದೆ - 'ಅನ್ಯತ್ರ ಜಗತೋಽಭಾವಾತ್' ಇತ್ಯಾದಿ ಭಾಷ್ಯವಾಕ್ಯದಿಂದ ಕಾರ್ಯವು ಈಶ್ವರಾಧೀನ-ವಾಗಿದೆಯೆಂದು ಸಮರ್ಥಿಸಿದರು. ಇದರಿಂದ ಸೇಶ್ವರಸಾಂಖ್ಯನ ಅಭಿಪ್ರಾಯವಾದ ಈಶ್ವರನ ಅನುಗ್ರಾಹಕತ್ವವು ಸರ್ವಥಾ ಕೂಡುವುದಿಲ್ಲ ಎಂದು ಹೇಳಿದಂತಾಯಿತು. ಸೇಶ್ವರಸಾಂಖ್ಯನ ಈ ಅನುಗ್ರಾಹಕತ್ವಕ್ಕೆ 'ಅನ್ಯತ್ರಾಭಾವಾತ್' ಇತ್ಯಾದಿಯಾಗಿ ಹೇಳಿದ್ದು ಮಾತ್ರ ವಿರೋಧ ಮಾಡುತ್ತಿರುವುದಲ್ಲ. 'ಸ ಏವ' ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾದ ಸೂತ್ರದಲ್ಲಿರುವ ಚಶಬ್ದದಿಂದ ಸೂಚಿತವಾದ ಸಕಲಕ್ಕೂ ಕಾರಣವೆನಿಸಿದ ಪ್ರಕೃತ್ಯಾದಿಗಳ ಸತ್ತಾಪ್ರವೃತ್ತಿ ಪ್ರತೀತಿಗಳು ಈಶ್ವರಾಧೀನವಾಗಿದೆ ಎಂಬುದೂ ಕೂಡ ವಿರೋಧ ಮಾಡುತ್ತಿದೆ.

'ಸೂಚಿತಮ್' ಎಂದರೆ ಪ್ರಕೃತ್ಯಾದಿಗಳಿಗೆ ಈಶ್ವರನೇ ಸತ್ತಾದಿಗಳನ್ನು ನೀಡುತ್ತಾನೆ ಎಂಬುದು ಸೂತ್ರದಲ್ಲಿರುವ ಚಶಬ್ದದಿಂದ ಸೂತ್ರಕಾರರು ಸೂಚಿಸಿದ್ದಾರೆಂದು ತಿಳಿಯಬೇಕು. 'ಅತಃ' ಎಂಬ ಪದಕ್ಕೆ ಎಲ್ಲವೂ ಈಶ್ವರಾಧೀನವಾಗಿದೆ ಎಂದು ಹೇಳುವ ಶ್ರುತಿ-ಸ್ಮೃತಿಗಳ ವಿರೋಧವಿರುವುದರಿಂದ ಎಂದರ್ಥ.

ವಿವರಣೆ - ಸೇಶ್ವರಸಾಂಖ್ಯನು ಹುಲ್ಲಿನ ಉತ್ಪತ್ತಿಗೆ ಮಳೆಯು ಹೇಗೆ ಸಹಕಾರಿಕಾರಣವೋ, ಅದರಂತೆ ಈಶ್ವರನು ಜಗತ್ತಿನ ಉತ್ಪತ್ತಿಗೆ ಸಹಕಾರಿಕಾರಣನೆಂದು ಹೇಳಿದನು. ಇದು ತಪ್ಪು. ಈಶ್ವರನನ್ನು ಬಿಟ್ಟು ಜಗತ್ತು ಅಸ್ತಿತ್ವವನ್ನು ಪಡೆಯಲು ಸಾಧ್ಯವೇ ಇಲ್ಲ. ಆದ್ದರಿಂದ ಕಾರ್ಯವೆನಿಸಿದ ಜಗತ್ತಿಗೆ ಈಶ್ವರನನ್ನು ಕೇವಲ ಅನುಗ್ರಾಹಕನೆಂದು ಹೇಳಬಾರದು. ಆ ಕಾರ್ಯಪ್ರಪಂಚದ ಒಳಗಡೆ ನಿಂತು ಪ್ರತಿಯೊಂದು ವಸ್ತುಗಳ ಸೃಷ್ಟಿಸ್ಥಿತಿ ಸಂಹಾರಗಳಿಗೆ ಕಾರಣನಾಗಿದ್ದಾನೆಂದು ತಿಳಿಯಬೇಕು. ಇದು ಸೂತ್ರದ ಅರ್ಥ.

'ಚ'ಶಬ್ದದಿಂದ ಮತ್ತೊಂದು ಸ್ವಾರಸ್ಯವನ್ನು ಭಾಷ್ಯಕಾರರು ತಿಳಿಸುತ್ತಿದ್ದಾರೆ. ಕಾರ್ಯಪ್ರಪಂಚದಲ್ಲಷ್ಟೇ ಪರಮಾತ್ಮನು ನಿಂತು ಸೃಷ್ಟ್ಯಾದಿಗಳನ್ನು ಮಾಡುತ್ತಿರುವುದಲ್ಲ.

ಸಮಸ್ತ ಜಗತ್ತಿಗೆ ಕಾರಣವೆನಿಸಿದ ಯಾವ ಪ್ರಕೃತಿ ಇದೆಯೋ, ಅದರಲ್ಲಿರುವ ಸತ್ತಾದಿಗಳಿಗೂ ಕೂಡ ಈಶ್ವರನೇ ಕಾರಣನಾಗಿದ್ದಾನೆ. ಹೀಗಿರುವಾಗ ಈಶ್ವರನನ್ನು ಸಹಕಾರಿ ಕಾರಣನೆಂದು ಹೇಳುವುದು ಹಾಸ್ಯಾಸ್ಪದವಾದ ವಿಚಾರ. ಸೇಶ್ವರಸಾಂಖ್ಯನು ಈಶ್ವರನು ಕೇವಲ ಅನುಗ್ರಾಹಕ-ನಾಗಿದ್ದಾನೆಂಬುದಕ್ಕೆ ಕಾರ್ಯಪ್ರಪಂಚವು ಈಶ್ವರನ ಅಧೀನವಾಗಿದೆ ಎಂಬುದು ವಿರೋಧಿ-ಯಾಗಿದೆ. ಅಷ್ಟೇ ಅಲ್ಲದೇ ಕಾರಣದಲ್ಲಿರುವ ಸತ್ತಾದಿಗಳೂ ಕೂಡ ಈಶ್ವರನ ಅಧೀನವಾಗಿದೆ ಎಂಬುದು ವಿರೋಧಿಯಾಗಿದೆ. ಇಷ್ಟು ಅಭಿಪ್ರಾಯವನ್ನು ಸೂತ್ರದಿಂದ ತಿಳಿಯಬೇಕು.

## ಭಾವದೀಪದ ವೈಶಿಷ್ಟ್ಯ

* ಪೂರ್ವಪಕ್ಷದಲ್ಲಿ ಕಾರ್ಯಕ್ಕೆ ಮಾತ್ರ ಪರ್ಜನ್ಯನ ಅನುಗ್ರಹವಲ್ಲ. ಕಾರಣಕ್ಕೂ ಪರ್ಜನ್ಯನ ಅನುಗ್ರಹವನ್ನು ತಿಳಿಯಬೇಕು. ಕಾರ್ಯವೆನಿಸಿದ ಜಗತ್ತಿನ ಸೃಷ್ಟಿಗೆ ಮಾತ್ರ ಈಶ್ವರನು ಅನುಗ್ರಾಹಕನಲ್ಲ. ಪ್ರಕೃತ್ಯಾದಿಗಳಿಗೂ ಅನುಗ್ರಾಹಕನೆಂದು ತಿಳಿಯಬೇಕು. ಈ ಪೂರ್ವಪಕ್ಷವು 'ತೃಣಾದಿವತ್' ಎಂಬ ಪದದಿಂದ ಹಾಗೂ ಚಶಬ್ದದಿಂದ ವ್ಯಾವೃತ್ತವಾಗುತ್ತದೆ. 'ಅನ್ಯತ್ರಾಭಾವಾತ್' ಎಂಬ ಸೂತ್ರಾಂಶದಿಂದ ಕಾರ್ಯಕ್ಕೆ ಈಶ್ವರನು ಕೇವಲ ಅನುಗ್ರಾಹಕನಾಗಿದ್ದಾನೆಂಬುದು ನಿರಾಕೃತವಾಗುತ್ತದೆ. ಸೂತ್ರದಲ್ಲಿರುವ ಚಶಬ್ದದಿಂದ ಕಾರಣಕ್ಕೆ ಈಶ್ವರನು ಕೇವಲ ಅನುಗ್ರಾಹಕನಾಗಿದ್ದಾನೆಂಬ ಪೂರ್ವಪಕ್ಷವು ನಿರಾಕೃತವಾಗುತ್ತದೆ. ಈ ಪ್ರಮೇಯವನ್ನು ಅವಶ್ಯವಾಗಿ ಗಮನಿಸಬೇಕು.

* ಭಾಷ್ಯದಲ್ಲಿ 'ಯಚ್ಚ ಕಿಂಚಿತ್ ಜಗತ್ಸರ್ವಂ' ಎಂಬ ಶ್ರುತಿಯಿಂದ ಪರಮಾತ್ಮನು ಎಲ್ಲೆಡೆ ವ್ಯಾಪ್ತನಾಗಿದ್ದಾನೆಂದು ಹೇಳಿದ್ದಾರೆ. ಎಲ್ಲವೂ ಈಶ್ವರಾಧೀನವೆನ್ನಲು ಈ ವ್ಯಾಪ್ತತ್ವವು ಹೇಗೆ ಉಪಯೋಗವಾಗುತ್ತದೆಂದೇ ತಿಳಿಯುವುದಿಲ್ಲ. ಇದನ್ನು 'ಸರ್ವಪದಾರ್ಥಾನಾಂ' ಎಂಬ ಟೀಕಾಪಂಕ್ತಿಯು ವ್ಯಾಖ್ಯಾನ ಮಾಡುತ್ತಿದೆ. ಭಗವಂತನು ಪ್ರತಿಯೊಂದು ಪದಾರ್ಥಗಳಿಗೆ

ಸತ್ತಾ, ಪ್ರತೀತಿ ಪ್ರವೃತ್ತಿಯನ್ನು ನೀಡುವುದಕ್ಕಾಗಿ ಸರ್ವಗತನಾಗಿದ್ದಾನೆಂಬ ಸಮರ್ಥನೆ ಅತ್ಯಂತ ರೋಚಕವಾಗಿದೆ.

* 'ಸ ಏವ ಭೂಯೋ ನಿಜವೀರ್ಯಚೋದಿತಾಂ' ಇತ್ಯಾದಿ ಭಾಷ್ಯದಿಂದ ಪ್ರಕೃತಿಯು ಭಗವಂತನ ಅಧೀನವೆಂದು ಭಾಷ್ಯದಲ್ಲಿ ಸಮರ್ಥನೆ ಮಾಡಿದ್ದಾರೆ. ಈ ವಾಕ್ಯವು ಸೂತ್ರದಲ್ಲಿರುವ ಚಶಬ್ದದಲ್ಲಿರುವ ವ್ಯಾಖ್ಯಾನಕ್ಕೋಸ್ಕರ ತಿಳಿಸಲು ಹೊರಟಿದೆಯೆಂದು ತಿಳಿಸಲು 'ನ ಕೇವಲಂ' ಇತ್ಯಾದಿ ಟೀಕಾಪಂಕ್ತಿಯು ಹೊರಟಿದೆ ಎಂಬ ವ್ಯಾಖ್ಯಾನವೂ ಕೂಡ ಅಪೂರ್ವವಾಗಿದೆ.

* 'ನಾನುಗ್ರಾಹಕತ್ವಮಾತ್ರಂ' ಎಂಬುದು ಸಮಸ್ತ ಪದವೆಂದು ಒಪ್ಪಿ, ಅನುಗ್ರಾಹಕತ್ವಮಾತ್ರಕ್ಕೆ ವಿರೋಧಿ ಎಂಬರ್ಥವನ್ನು ಹೇಳಿರುವುದು ಅತ್ಯಂತ ಉಚಿತವಾಗಿದೆ.

* ಸಾಂಖ್ಯರ ಅನುಗ್ರಾಹಕತ್ವಮಾತ್ರಕ್ಕೆ ಕಾರ್ಯವು ಈಶ್ವರಾಧೀನವಾಗಿದೆ ಎಂಬುದಷ್ಟೇ ವಿರೋಧಿಯಲ್ಲ. ಪ್ರಕೃತ್ಯಾದಿಗಳ ಸತ್ತಾದಿಪ್ರದತ್ವವೂ ಕೂಡ ವಿರೋಧಿಯಾಗಿದೆ ಎಂಬ ವೈಶಿಷ್ಟ್ಯವನ್ನು ತಿಳಿಯಬೇಕು.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ ಅನ್ಯತ್ರಾಭಾವಾಧಿಕರಣದ ಕನ್ನಡ ಅನುವಾದವು ಮುಗಿಯಿತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## अन्यत्राभावाधिकरणम् - २

ಈಶ್ವರನು ಅಪ್ರಧಾನ ಪ್ರಕೃತಿಯು ಪ್ರಧಾನ

**अन्यत्राभावाच्च न तृणादिवत् ।।२-२-५।।**

अत्र ''न ऋत'' इति श्रुतेर्गुणभूतेशपरत्वसम्भवान्न मे प्रागुक्तदोष इति पूर्वाक्षेपेण प्रवृत्तमीशगुणकप्रधानकर्तृमतं निरस्यते ।

'ನ ಋತೇ ತತ್‌ಕ್ರಿಯತೇ' ಎಂಬ ಶ್ರುತಿಯು ಈಶ್ವರನಲ್ಲಿ ಮುಖ್ಯತಾತ್ಪರ್ಯವನ್ನು ಹೊಂದಿರುವುದಿಲ್ಲ ಎಂಬ ವಿಷಯವನ್ನು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ದೋಷ ನಮಗೆ ಬರುವುದಿಲ್ಲ ಎಂಬುದಾಗಿ ಅಧಿಕವಾದ ಆಕ್ಷೇಪವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆ. ಹಿಂದಿನ ಅಧಿಕರಣದ ಪ್ರಮೇಯವನ್ನು ಆಕ್ಷೇಪ ಮಾಡಿ ಹೊರಟದೆ. ಈಶ್ವರನು ಅಪ್ರಧಾನಕರ್ತೃವಾಗಿದ್ದಾನೆ. ಪ್ರಕೃತಿಯು ಮುಖ್ಯಕರ್ತೃವಾಗಿದೆ ಎಂಬುದಾಗಿ ಸಾಂಖ್ಯೈಕದೇಶಿಗಳು ಹೇಳುತ್ತಾರೆ. ಇವರ ಮತದ ನಿರಾಕರಣೆಯನ್ನು ಈ ಅನ್ಯತ್ರಾಭಾವಾಧಿಕರಣದಲ್ಲಿ ಮಾಡುತ್ತಿದ್ದಾರೆ.

ವಿವರಣೆ - 'ನ ಋತೇ ತತ್‌ಕ್ರಿಯತೇ' ಎಂಬ ಶ್ರುತಿಯು ಈಶ್ವರನನ್ನು ಬಿಟ್ಟು ಯಾವುದೇ ಕಾರ್ಯಗಳು ನಡೆಯಲು ಸಾಧ್ಯವೇ ಇಲ್ಲ ಎಂದು ಹೇಳುತ್ತಿದೆ. ಆದ್ದರಿಂದ ಈಶ್ವರನನ್ನು ಒಪ್ಪದ ನಿರೀಶ್ವರಸಾಂಖ್ಯಮತದವರಿಗೆ ಶ್ರುತಿವಿರೋಧವು ಪ್ರಾಪ್ತವಾಗುತ್ತದೆ ಎಂಬುದಾಗಿ ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲಾಯಿತು. ಇದಕ್ಕೆ ನಿರೀಶ್ವರಸಾಂಖ್ಯೈಕ-ದೇಶಿಗಳು ಹೀಗೆ ಉತ್ತರಿಸಲು ಪ್ರಯತ್ನಿಸುತ್ತಿದ್ದಾರೆ - ಈಶ್ವರನನ್ನು ಒಪ್ಪುತ್ತೇವೆ. ಆದರೆ ಅವನು ಮುಖ್ಯವಾದ ಜಗತ್‌ಕರ್ತೃವಲ್ಲ. ಅಮುಖ್ಯವಾದ ಜಗತ್‌ಕರ್ತೃ ಆಗಿದ್ದಾನೆ. ಈ

ದೃಷ್ಟಿಯಿಂದ 'ನ ಋತೇ ತತ್‌ಕ್ರಿಯತೇ' ಎಂಬ ಶ್ರುತಿಯು ಹೊರಟಿದೆ. ಮುಖ್ಯಕರ್ತೃತ್ವವು ಪ್ರಕೃತಿಗೆ ಇರುವುದರಿಂದ ಪ್ರಕೃತಿವಾದವೂ ಕೂಡ ಸಮಂಜಸವಾಗುತ್ತದೆ ಎಂಬುದು ಇವರ ಅಭಿಪ್ರಾಯ. ಈ ಸಾಂಖ್ಯೈಕದೇಶಿಗಳ ಮತದ ನಿರಾಕರಣೆಗಾಗಿ ಅನ್ಯತ್ರಾಭಾವಾಧಿಕರಣವು ಹೊರಟಿದೆ.

ईशः प्रकृतस्तत्सृज्यं जगच्च । चोऽनुक्तसमुच्चये । अन्यत्र ईशादन्याधारत्वेन जगतोऽभावात् तत्प्रेरणां विना कस्यापि कार्यस्य सत्त्वाभावादिति यावत् । चशब्दात् प्रकृत्यादिकारणसत्तादेरपीशायत्तत्वाच्च। तृणादीनां पर्जन्य इव नेशोऽनुग्राहकमात्रं किन्तु सर्वस्वतन्त्र एवेत्यर्थः । न हि यदधीनं यत्सत्तादि तत्त्यानुग्राहकमात्रमिति भावः । भाष्योक्तश्रुत्यादिना हेतुः सिद्ध इति ध्येयम्। अन्यानधीनत्वेशाधीनत्वयोर्लाभायैवं विन्यासः ।।२।।

ಈಶ್ವರ ಮತ್ತು ಅವನಿಂದ ಸೃಷ್ಟಿಸಲ್ಪಟ್ಟ ಜಗತ್ತು ಈ ಅಧಿಕರಣದಲ್ಲಿ ಪ್ರಸಕ್ತವಾಗಿದೆ. ಚಶಬ್ದವು ಅನುಕ್ತವಾದದ್ದನ್ನು ಸಮುಚ್ಚಯ ಮಾಡುತ್ತಿದೆ.

ಸೂತ್ರಾರ್ಥ ಹೀಗೆ - ಅನ್ಯತ್ರ = ಈಶ್ವರನಲ್ಲದೇ ಮತ್ತೊಂದು ಆಧಾರವಾದ ಪದಾರ್ಥವು, ಅಭಾವಾತ್ = ಜಗತ್ತಿಗೆ ಇಲ್ಲದ್ದರಿಂದ ಈಶ್ವರನ ಪ್ರೇರಣೆಯಿಲ್ಲದೇ ಯಾವುದೇ ಕಾರ್ಯವು ನಡೆಯಲು ಸಾಧ್ಯವಿಲ್ಲದ್ದರಿಂದ ಎಂದು ಅಭಿಪ್ರಾಯ. 'ಚ'ಶಬ್ದದಿಂದ ಇದನ್ನು ತಿಳಿಯಬೇಕು. ಪ್ರಕೃತಿ ಮೊದಲಾದ ಕಾರಣಗಳ ಅಸ್ತಿತ್ವವು ಈಶ್ವರಾಧೀನವಾಗಿದ್ದರಿಂದಲೂ ಕೂಡ ಎಂದು. ನ ತೃಣಾದಿವತ್ = ಹುಲ್ಲು ಮೊದಲಾದವುಗಳಿಗೆ ಮಳೆಯು ಹೇಗೆ ಕೇವಲ ಅನುಗ್ರಾಹಕವಾಗಿದೆಯೋ, ಅದರಂತೆ ಈಶ್ವರನು ಕೇವಲ ಅನುಗ್ರಾಹಕನಾಗಿರುವುದಿಲ್ಲ. ಮತ್ತೇನೆಂದರೆ ಸರ್ವತಂತ್ರಸ್ವತಂತ್ರನಾಗಿದ್ದಾನೆ. ಯಾವ ವಸ್ತುವಿನ ಅಸ್ತಿತ್ವಾದಿಗಳು ಯಾರ ಅಧೀನವೋ, ಅವನು ಆ ವಸ್ತುವಿಗೆ ಅನುಗ್ರಾಹಕನಷ್ಟೇ ಆಗಲು ಸಾಧ್ಯವಿಲ್ಲ ಎಂದಭಿಪ್ರಾಯ.

ಭಾಷ್ಯದಲ್ಲಿ ಹೇಳಿದ ಶ್ರುತ್ಯಾದಿಗಳಿಂದ ಹೇತುವು ಸಿದ್ಧವಾಗಿದೆ ಎಂದು ತಿಳಿಯಬೇಕು. ಪ್ರಕೃತ್ಯಾದಿಗಳು ಮತ್ತೊಬ್ಬರ ಅಧೀನವಾಗಿಲ್ಲ ಈಶ್ವರನ ಅಧೀನವೇ ಆಗಿದೆ ಎಂಬುದರ ಲಾಭಕ್ಕಾಗಿ ಹೀಗೆ ಸೂತ್ರವಿನ್ಯಾಸವನ್ನು ಮಾಡಿದ್ದಾರೆ.

**ವಿವರಣೆ** - ಸಮಸ್ತ ಜಗತ್ತಿಗೆ ಈಶ್ವರನೇ ಆಧಾರನಾಗಿದ್ದಾನೆ. ಈಶ್ವರನ ಪ್ರೇರಣೆಯಿಲ್ಲದೇ ಜಗತ್ತಿನಲ್ಲಿ ಯಾವುದೇ ಕಾರ್ಯಗಳು ಸಂಭವಿಸಲು ಸಾಧ್ಯವಿಲ್ಲ. ಪ್ರಕೃತಿ ಮೊದಲಾದವುಗಳಿಗೂ ಕೂಡ ಪರಮಾತ್ಮನೇ ನಿಯಾಮಕನಾಗಿದ್ದಾನೆ. ಪ್ರಕೃತ್ಯಾದಿಗಳ ಅಸ್ತಿತ್ವ ಇರುವುದೇ ಪರಮಾತ್ಮನಿಂದ. ಹೀಗಿರುವಾಗ ಈಶ್ವರನು ಕೇವಲ ಅನುಗ್ರಾಹಕನೆಂದು ಹೇಳುವುದು ಹೇಗೆ ಯುಕ್ತವಾಗುತ್ತದೆ ? ಎಂಬುದು ಸೂತ್ರದ ಅಭಿಪ್ರಾಯ. ಈ ಸೂತ್ರದಲ್ಲಿ ಪ್ರತಿಯೊಂದು ಪದಾರ್ಥಗಳಿಗೂ ಈಶ್ವರನೇ ಆಧಾರನಾಗಿದ್ದಾನೆ. ಮತ್ತೊಂದು ಆಧಾರವಾಗಿರುವುದಿಲ್ಲ. ಪ್ರಕೃತ್ಯಾದಿಗಳಿಗೂ ಕೂಡ ಈಶ್ವರನೇ ಕಾರಣನಾಗಿದ್ದಾನೆ ಎಂಬುದಾಗಿ ಎರಡು ಹೇತುವನ್ನು ಹೇಳಿದ್ದಾರೆ. ಈ ಹೇತುಗಳಿಗೆ ಅಸಿದ್ಧಿದೋಷವನ್ನು ಆಕ್ಷೇಪ ಮಾಡಿದರೆ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗಳ ಆಧಾರದಿಂದ ಈ ದೋಷವನ್ನು ಪರಿಹರಿಸಬೇಕು. 'ಯಚ್ಚ ಕಿಂಚಿತ್ ಜಗತ್ಸರ್ವಂ' ಎಂಬ ಉಪನಿಷತ್ತು ಸಮಸ್ತ ಜಗತ್ತಿಗೆ ಈಶ್ವರನೇ ಆಧಾರನಾಗಿದ್ದಾನೆಂದು ಹೇಳುತ್ತಿದೆ. 'ಬ್ರಹ್ಮಣ್ಯೇವೇದ ಆವಿರಾಸೀತ್' ಇತ್ಯಾದಿ ಶ್ರುತಿಯು ಪ್ರಕೃತ್ಯಾದಿಗಳಿಗೂ ಈಶ್ವರನೇ ಕಾರಣನಾಗಿದ್ದಾನೆಂದು ಹೇಳುತ್ತಿದೆ. ಆದ್ದರಿಂದ ಹೇತ್ವಸಿದ್ಧಿಗೆ ಅವಕಾಶವಿಲ್ಲ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಅನ್ಯತ್ರಾಭಾವಾಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಅಭ್ಯುಪಗಮಾಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಅಭ್ಯುಪಗಮಾಧಿಕರಣ

## ಬ್ರಹ್ಮಸೂತ್ರ

**ब्रह्मसूत्रम् – अभ्युपगमेऽप्यर्थाभावात् ॥**

**ಚಾರ್ವಾಕ ತನ್ನ ವಾದವನ್ನು ಸಿದ್ಧಾಂತವಲ್ಲವೆಂದು ಹೇಳಿದರೆ ನಮ್ಮ ಇಷ್ಟವು ಸಿದ್ಧವಾಯಿತು. ತನ್ನ ವಾದವು ಸಿದ್ಧಾಂತವೆಂದು ಹೇಳಿದರೆ ವಿಷಯಪ್ರಯೋಜನಗಳಿಲ್ಲವೆಂದು ಅವನೇ ಒಪ್ಪಿಕೊಂಡಿರುವುದರಿಂದ ಸ್ವವ್ಯಾಹತಿ ಬರುತ್ತದೆ.**

ಅರ್ಥ -- 'ನ' ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳಬೇಕು. ಅನಭ್ಯುಪಗಮೇऽಪಿ = ತಮ್ಮ ಮತವನ್ನು ಚಾರ್ವಾಕರು ಸಿದ್ಧಾಂತವೆಂದು ಒಪ್ಪದಿದ್ದರೆ ನಮ್ಮ ಇಷ್ಟವು ಸಿದ್ಧವಾಯಿತು. ಅಭ್ಯುಪಗಮೇऽಪಿ = ತಮ್ಮ ಮತವು ಸಿದ್ಧಾಂತಸ್ಥಾಪಕವೆಂದು ಒಪ್ಪಿದರೂ ಕೂಡ, ಅರ್ಥಾಭಾವಾತ್ = ವಿಷಯಪ್ರಯೋಜನ ಮೊದಲಾದವನ್ನು ಇಲ್ಲವೆಂದು ಅವನು ಹೇಳಿರುವುದರಿಂದ ಸ್ವವ್ಯಾಹತಿ ದೋಷವು ಬರುತ್ತದೆ. ಆದ್ದರಿಂದ ಚಾರ್ವಾಕನ ಪಕ್ಷವು ಅಯುಕ್ತವಾಯಿತು.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ

ಅಭ್ಯುಪಗಮಾಧಿಕರಣವು ಸಮಾಪ್ತವಾಯಿತು ॥

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

ಧರ್ಮಾಧರ್ಮಗಳನ್ನು ಒಪ್ಪದವನಿಗೆ ಶಾಸ್ತ್ರವೇಕೆ ?

**ब्रह्मसूत्रभाष्यम् – लोकायतिकपक्षं निराकरोति –**

**।। अभ्युपगमेऽप्यर्थाभावात् ।।१।।**

**यस्य धर्माधर्मौ न स्तस्तत्सिद्धान्ते किं प्रयोजनम् ? अतः स्वव्याहतेरेवोपेक्ष्यः ।।१।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये अभ्युपगमाधिकरणम् ।। ३ ।।**

ಅನುವಾದ - ಚಾರ್ವಾಕಮತವನ್ನು ನಿರಾಕರಣೆ ಮಾಡಲು ಈ ಅಧಿಕರಣ ಹೊರಟಿದೆ.

ಯಾವ ವ್ಯಕ್ತಿಗೆ ಧರ್ಮ-ಅಧರ್ಮ ಇವುಗಳಲ್ಲಿ ವಿಶ್ವಾಸವಿಲ್ಲವೋ ಅಂಥ ಚಾರ್ವಾಕಸಿದ್ಧಾಂತವನ್ನು ಒಪ್ಪುವುದರಿಂದ ಏನು ಪ್ರಯೋಜನ? ಪ್ರಯೋಜನವಿಲ್ಲದೆ ಸಿದ್ಧಾಂತವನ್ನು ಒಪ್ಪುವುದು ಸ್ವವ್ಯಾಹತವಾಗುತ್ತದೆ. ಆದ್ದರಿಂದ ಈ ಮತವು ಉಪೇಕ್ಷೆ ಮಾಡಲು ಅರ್ಹವಾಗಿದೆ.

ಪ್ರತಿಪದಾರ್ಥ -- ಚಾರ್ವಾಕಮತ ನಿರಾಕರಣೆಗಾಗಿ ಈ ಅಧಿಕರಣ ಹೊರಟಿದೆ. ಲೋಕಾಯತಿಕಪಕ್ಷಂ = ಚಾರ್ವಾಕನ ಪಕ್ಷವನ್ನು, ನಿರಾಕರೋತಿ = ನಿರಾಕರಿಸುತ್ತಿದ್ದಾರೆ. ಯಸ್ಯ = ಯಾವ ದಾರ್ಶನಿಕನಿಗೆ, ಧರ್ಮಾಧರ್ಮೌ = ಪುಣ್ಯ ಹಾಗೂ ಪಾಪಗಳು, ನ ಸ್ತಃ = ತನ್ನ ಸಿದ್ಧಾಂತದಲ್ಲಿ ಅಂಗೀಕಾರ ಮಾಡಿರುವುದಿಲ್ಲವೋ, ತತ್‌ಸಿದ್ಧಾಂತೇ = ಅವನ ಸಿದ್ಧಾಂತದಲ್ಲಿ, ಕಿಂ ಪ್ರಯೋಜನಂ = ಯಾವ ಪ್ರಯೋಜನವಿದೆ, ಅತಃ = ಆದ್ದರಿಂದ ಸ್ವವ್ಯಾಹತೇಃ = ನನ್ನ ತಾಯಿ ಬಂಜೆ ಎಂಬಂತೆ ಸ್ವವ್ಯಾಹತಿ ಎಂಬ ದೋಷವಿರುವುದರಿಂದ ಉಪೇಕ್ಷ್ಯಃ = ಈ ಮತವು ಉಪೇಕ್ಷಣೀಯವಾಗಿದೆ.

।। ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಅಭ್ಯುಪಗಮಾಧಿಕರಣವು ಸಮಾಪ್ತವಾಯಿತು ।।

### ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

# ಸತ್ತರ್ಕದೀಪಾವಳಿ

### ಚಾರ್ವಾಕನ ಶಾಸ್ತ್ರದಲ್ಲಿ ವಿಷಯವಿಲ್ಲ

**सत्तर्कदीपावळिः – प्रत्यक्षैकप्रमाणवादिनो जगदनित्यं मन्यमानस्य लोकायतस्य शास्त्रं विषयप्रयोजनरहितत्वादुपेक्षणीयम् । तथाहि – घटादेस्तावत्प्रत्यक्षसिद्धत्वेन ज्ञापनानुपयोगान्नासौ विषयः । धर्मादेरनङ्गीकारात् न सोऽपि विषयो वक्तुं शक्यते ।**

ಪ್ರತ್ಯಕ್ಷಮಾತ್ರ ಪ್ರಮಾಣವಾಗಿದೆ. ಈ ಜಗತ್ತು ಅನಿತ್ಯವಾಗಿದೆ ಎಂದು ಚಾರ್ವಾಕನು ಹೇಳುತ್ತಾನೆ. ಇಂಥವನ ಶಾಸ್ತ್ರವು ವಿಷಯಪ್ರಯೋಜನರಹಿತವಾಗಿರುವುದರಿಂದ ಉದಾಸೀನಕ್ಕೆ ಅರ್ಹವಾಗಿದೆ. ಅದು ಹೀಗೆ - ಘಟಾದಿಗಳು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಇದನ್ನು ತಿಳಿಸುವುದು ಶಾಸ್ತ್ರದ ಉದ್ದೇಶವೆಂದು ಹೇಳಲಾಗದು. ಧರ್ಮಾದಿಗಳೇ ಶಾಸ್ತ್ರಕ್ಕೆ ವಿಷಯವಾಗಬೇಕು. ಆದರೆ ಅದನ್ನು ಚಾರ್ವಾಕನು ಅಂಗೀಕಾರ ಮಾಡಿರುವುದೇ ಇಲ್ಲ.

### ಸಮಯವೇ ಇಲ್ಲದವನು ಸಮಯಿ ಎನಿಸಲಾಗರ

**सत्तर्कदीपावळिः – धर्मार्थमधर्मनिवृत्त्यर्थं च लोकायासनिवृत्तेः धर्माद्यभाववादस्य लोकोपकारः प्रयोजनमिति न वाच्यम् । धर्माद्यभावज्ञाने परस्परहिंसादिना अपकारस्यैव प्राप्तेः । न च लोकोपकारेण चार्वाकस्य प्रयोजनम् । अदृष्टाभावात् । अतो धर्माद्यभावं वदत स्वसमयस्यानर्थक्यमङ्गीकृतमेवेति नासौ समयीत्येतत्प्रतिपादयति – लोकेत्यादिना।।**

ಧರ್ಮಕ್ಕಾಗಿ ಅಧರ್ಮಪರಿಹಾರಕ್ಕಾಗಿ ಲೋಕವು ಕಷ್ಟಪಡುತ್ತಿದೆ. ಈ ಕಷ್ಟದ ಪರಿಹಾರ ಮಾಡುವುದೇ ನಮ್ಮ ಉದ್ದೇಶ. ಧರ್ಮಾಧರ್ಮಗಳೇ ಇಲ್ಲವೆಂದು ಹೇಳಿದಾಗ ಲೋಕವು ಕಷ್ಟಪಡುವುದನ್ನು ನಿಲ್ಲಿಸುತ್ತದೆ. ಇಂಥ ಲೋಕೋಪಕಾರವೇ ಚಾರ್ವಾಕರ ಶಾಸ್ತ್ರಕ್ಕೆ ಪ್ರಯೋಜನವೆಂದು ಹೇಳಬಹುದಲ್ಲವೇ?

ಇದು ತಪ್ಪು. ಧರ್ಮಾಧರ್ಮಗಳಿಲ್ಲ ಎಂಬ ಜ್ಞಾನ ಬಂದರೆ ಲೋಕದಲ್ಲೆಲ್ಲೆಡೆ ಪರಸ್ಪರ ಹಿಂಸೆಯೇ ಉಂಟಾಗುತ್ತದೆ. ಇದರಿಂದ ಜನರಿಗೆ ಅಪಕಾರ ಮಾಡಿದಂತಾಗುತ್ತದೆ.

ಲೋಕೋಪಕಾರ ಮಾಡುವುದರಿಂದ ಚಾರ್ವಾಕನಿಗೆ ಏನೂ ಪ್ರಯೋಜನವಿಲ್ಲ. ಅದೃಷ್ಟವನ್ನಂತೂ ಒಪ್ಪಿಲ್ಲ. ಹಾಗಾಗಿ ಧರ್ಮಾದಿಗಳಿಲ್ಲವೆಂದು ಹೇಳುವ ಚಾರ್ವಾಕನು ತನ್ನ ಸಿದ್ಧಾಂತಕ್ಕೆ ವೈಯರ್ಥ್ಯವನ್ನು ಅಂಗೀಕಾರ ಮಾಡಿರುತ್ತಾನೆ. ಸಮಯವೇ ಇಲ್ಲದ ಇವನು ಸಮಯೀ ಎನಿಸಿಕೊಳ್ಳಲಾರ. ಇದನ್ನೇ 'ಲೋಕಾಯತಿಕಪಕ್ಷಂ ನಿರಾಕರೋತಿ' ಇತ್ಯಾದಿ ಭಾಷ್ಯವು ಪ್ರತಿಪಾದನೆ ಮಾಡುತ್ತಿದೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

### ಚಾರ್ವಾಕನ ನಿರಾಕರಣೆ ಸಂದರ್ಭೋಚಿತ

**तत्वप्रदीपः – निरीश्वरनिरासप्रस्तावे तदनतिविप्रकृष्टत्वाल्लोकायतिकपक्षो निरस्यते । सेश्वरः कश्चित्साङ्ख्यत्वसामान्यादन्तरा तं चामुं च निराकृतः । न च तदीश्वरस्येश्वरत्वम् । अनुग्रहमात्रशक्तिमत्त्वेनाऽस्वातन्त्र्यात् । अव्याप्तत्वाच्च केषाञ्चित्तद्यूथ्यानाम् । अतो निराकर्तव्योऽसौ ।**

ನಿರೀಶ್ವರವಾದಿಗಳನ್ನು ನಿರಾಕರಣೆ ಮಾಡುವ ಈ ಸಂದರ್ಭದಲ್ಲಿ ನಿರೀಶ್ವರವಾದಿಗೆ ಹತ್ತಿರನಾದ ಚಾರ್ವಾಕನ ಪಕ್ಷವನ್ನು ಇಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಒಬ್ಬ ಸೇಶ್ವರಸಾಂಖ್ಯನನ್ನು ಹಾಗೂ ಚಾರ್ವಾಕನನ್ನು ಮಧ್ಯದ ಎರಡು ಅಧಿಕರಣದಲ್ಲಿ ನಿರಾಕರಣೆ ಮಾಡಲಾಗುತ್ತಿದೆ. ಸೇಶ್ವರಸಾಂಖ್ಯನು ಹಾಗೂ ಇವನು ಒಂದಂಶದಲ್ಲಿಯೂ ಸಾಂಖ್ಯತ್ವಧರ್ಮವುಳ್ಳವರಾಗಿದ್ದಾರೆ. ಸೇಶ್ವರಸಾಂಖ್ಯನು ಈಶ್ವರನನ್ನು ಒಪ್ಪಿದರೂ ಅವನಲ್ಲಿ ಈಶ್ವರತ್ವವೇ ಇಲ್ಲ. ಕೇವಲ ಅನುಗ್ರಾಹಕಶಕ್ತಿಯನ್ನು ಹೊಂದಿರುವುದರಿಂದ ಅವನು ಅಸ್ವತಂತ್ರನಾಗಿದ್ದಾನೆ. ಮತ್ತು ಅವರಲ್ಲೇ ಕೆಲವರು ಇಂಥ ಈಶ್ವರನನ್ನು ಒಪ್ಪಲಾರರು. ಆದ್ದರಿಂದ ಇವರನ್ನು ಪ್ರಕೃತ ನಿರಾಕರಣೆ ಮಾಡಲೇಬೇಕು.

**ವಿವರಣೆ** - ಹಿಂದಿನ ಅಧಿಕರಣದಲ್ಲಿ ನಿರೀಶ್ವರಸಾಂಖ್ಯರನ್ನು ನಿರಾಕರಣೆ ಮಾಡಲಾಯಿತು. ಮುಂದೆ ಸೇಶ್ವರಸಾಂಖ್ಯರನ್ನು ನಿರಾಕರಿಸುವವರಿದ್ದಾರೆ. ಪ್ರಕೃತ ಈ ಅಭ್ಯುಪಗಮಾಧಿಕರಣದಲ್ಲಿ ಚಾರ್ವಾಕಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ಸಾಂಖ್ಯಮತದ ಮಧ್ಯದಲ್ಲಿ ಈ ಚಾರ್ವಾಕರನ್ನು ಏಕೆ ನಿರಾಕರಣೆ ಮಾಡುತ್ತಿದ್ದಾರೆ ? ಎಂಬ ಪ್ರಶ್ನೆಗೆ ಎರಡು ರೀತಿಯಲ್ಲಿ ಉತ್ತರ ತಿಳಿಯಬೇಕು. ನಿರೀಶ್ವರಸಾಂಖ್ಯರನ್ನು ನಿರಾಕರಣೆ ಮಾಡಿದ ಮೇಲೆ, ನಿರೀಶ್ವರಮತವೇ ಆದ ಚಾರ್ವಾಕಮತವು ಬುದ್ಧಿಯಲ್ಲಿ ಸನ್ನಿಹಿತವಾಗುತ್ತದೆ. ಸೇಶ್ವರಸಾಂಖ್ಯರು ಈಶ್ವರನನ್ನು ಒಪ್ಪುವುದರಿಂದ ಅದಕ್ಕಿಂತ ಮೊದಲು ಚಾರ್ವಾಕಮತದ ನಿರಾಕರಣೆಯು ಪ್ರಸ್ತುತವಾಗುತ್ತದೆ. ಮತ್ತು ಸೇಶ್ವರಸಾಂಖ್ಯರ ಹಾಗೂ ನಿರೀಶ್ವರಸಾಂಖ್ಯರಮಧ್ಯದಲ್ಲಿ ಚಾರ್ವಾಕಮತವನ್ನು ನಿರಾಕರಣೆ ಮಾಡಿದ್ದರಿಂದ ಸೇಶ್ವರಸಾಂಖ್ಯರೂ ಕೂಡ ನಿರೀಶ್ವರರಂತೆಯೇ ಆಗಿದ್ದಾರೆ ಎಂಬ ಪ್ರಮೇಯವನ್ನು ಇದರಿಂದ ತಿಳಿಸಿದ್ದಾರೆ. ಈಶ್ವರನನ್ನು ಅವರು ಒಪ್ಪುತ್ತಾರೆ. ಆದರೆ ಕೇವಲ ಅನುಗ್ರಾಹಕಶಕ್ತಿಯನ್ನಷ್ಟೇ ಒಪ್ಪುವುದರಿಂದ ಅಸ್ವಾತಂತ್ರ್ಯವನ್ನೇ ಈಶ್ವರನಿಗೆ ಹೇಳುತ್ತಾರೆ. ಮತ್ತು ಅವನು ವ್ಯಾಪ್ತನಲ್ಲ ಎನ್ನುತ್ತಾರೆ. ಇಂಥ ಈಶ್ವರನನ್ನು ಒಪ್ಪಿದರೂ ಕೂಡ ಒಪ್ಪದಂತೆಯೇ ಆಗುತ್ತದೆ. ಹಾಗಾಗಿ ಸೇಶ್ವರಸಾಂಖ್ಯರೂ ಕೂಡ ನಿರೀಶ್ವರವಾದಿಗಳಲ್ಲೇ ಸೇರುತ್ತಾರೆಂಬ ಪ್ರಮೇಯವನ್ನು ಗಮನಿಸಬೇಕು.

ಚಾರ್ವಾಕಮತ ನಿರಾಕರಣೆಯು ಅತ್ಯಂತ ಪ್ರಸ್ತುತ

**तत्वप्रदीपः – स्वतन्त्रं सर्वशक्तिं सर्वव्याप्तमीशं विदुषां न चानीश्वरवादिभ्य ईश्वरमनीश्वरं वदतामतिशैष्ट्यमस्ति। अश्रोत्रियत्वं च सपङ्क्तीनां व्यञ्जयितुरन्तराले बहिश्चरस्योपालम्भस्सभ्यानां सारस्यमाधत्ते । गुणोपसंहारपादे समयनिराकरण मनवसुरदुःस्थं च ।**

ಸ್ವತಂತ್ರನಾದ ಸರ್ವಶಕ್ತಿಯುಳ್ಳ, ಸರ್ವವ್ಯಾಪ್ತನಾದ, ಈಶ್ವರನನ್ನು ಪ್ರತಿಪಾದನೆ ಮಾಡುವ ಸೂತ್ರಕಾರರಿಂದ ಈ ಸೇಶ್ವರಸಾಂಖ್ಯರ ಮತವು ನಿರಾಕರಣೆಗೆ ಅರ್ಹವೇ ಆಗಿದೆ. ಅನೀಶ್ವರವಾದಿಗಳಿಗಿಂತ ಈ ಸೇಶ್ವರಸಾಂಖ್ಯರಲ್ಲಿ ಯಾವುದೇ ವೈಶಿಷ್ಟ್ಯವು ಕಾಣಸುವುದಿಲ್ಲ. ಪಂಕ್ತಿಯಲ್ಲಿ ಅಶ್ರೋತ್ರಿಯರು ಕುಳಿತಿದ್ದಾರೆಂದು ಹೇಳುವಾಗ ಮಧ್ಯದಲ್ಲಿ ಭ್ರಷ್ಟನು ಆಗಮಿಸಿದರೆ ಅವನನ್ನೂ ಕೂಡ ತಿರಸ್ಕರಿಸುವುದನ್ನು ಹೇಗೆ ಸಭ್ಯರು ಸಮಂಜಸವಾದದ್ದೆಂದು ಸ್ವೀಕರಿಸುತ್ತಾರೋ,

ಆದರಂತೆ. ಚಾರ್ವಾಕಮತನಿರಾಸವು ಪ್ರಸ್ತುತವಾಗುತ್ತದೆ ಗುಣೋಪಸಂಹಾರಪಾದದಲ್ಲಿ ಸಮಯದ ನಿರಾಕರಣೆಯು ಸಂಗತವಾಗುವುದಿಲ್ಲ.

ವಿವರಣೆ - ಸೂತ್ರಕಾರರು ಪರಮಾತ್ಮನನ್ನು ಸರ್ವಜ್ಞನು, ಸರ್ವಶಕ್ತನು, ಸರ್ವವ್ಯಾಪ್ತನೂ ಇತ್ಯಾದಿಯಾಗಿ ಪ್ರತಿಪಾದನೆ ಮಾಡುತ್ತಾರೆ. ಇದಕ್ಕೆ ವಿರುದ್ಧವಾಗಿ ಪ್ರತಿಪಾದನೆ ಮಾಡುವ ಸೇಶ್ವರಸಾಂಖ್ಯನು ನಿರಾಕರಣೆಗೆ ಅರ್ಹನೇ ಆಗಿದ್ದಾನೆ. ಇಂಥ ಸೇಶ್ವರಸಾಂಖ್ಯರು ನಿರೀಶ್ವರವಾದಿಗಳಿಗಿಂತ ಯಾವುದೇ ವೈಶಿಷ್ಟ್ಯವನ್ನು ಹೊಂದಿರುವುದಿಲ್ಲ. (ಅತಿಶೈಷ್ಟ್ಯಂ = ವೈಶಿಷ್ಟ್ಯ) ಏಕೆಂದರೆ ಈಶ್ವರನನ್ನು ಒಪ್ಪಿದ್ದರೂ ಕೂಡ ಅವನನ್ನು ಅನೀಶ್ವರನೆಂದು ಅಸ್ವತಂತ್ರನೆಂದು ಹೇಳುತ್ತಾನೆ. ಆದ್ದರಿಂದ ನಾಸಿಕ್ಯವಾದದಲ್ಲಿ ಇವನ ಮತವು ಪರ್ಯವಸಾನ ಹೊಂದುತ್ತದೆ. ಹೀಗೆ ವೇದಪ್ರಾಮಾಣ್ಯ ಈಶ್ವರ ಮೊದಲಾದವುಗಳನ್ನು ಒಪ್ಪುತ್ತೇನೆಂದು ಹೇಳಿಕೊಳ್ಳುವ ನಮ್ಮ ಪಂಕ್ತಿಯಲ್ಲೇ ಕುಳಿತಿರುವ ಈ ಸಾಂಖ್ಯಾದಿಗಳು ಶ್ರೋತ್ರಿಯರಾಗಿರುವುದಿಲ್ಲ. ಅಶ್ರೋತ್ರಿಯರಾದ್ದರಿಂದ ನಮ್ಮ ಪಂಕ್ತಿಯಲ್ಲಿ ಕುಳಿತುಕೊಳ್ಳಲು ಅನರ್ಹರಾಗಿದ್ದಾರೆಂದು ನಾವು ಹೇಳುತ್ತಿದ್ದೇವೆ. ಹೀಗೆ ಪಂಕ್ತಿಯಲ್ಲಿ ಕುಳಿತಿರುವವರೇ ಅಪಾಂಕ್ತೇಯರೆಂದು ಸಾಧಿಸುತ್ತಿರುವಾಗ ಒಬ್ಬ ಭ್ರಷ್ಟನು ಪಂಕ್ತಿಯಲ್ಲಿ ಕುಳಿತುಕೊಳ್ಳಲು ಆಗಮಿಸಿದಾಗ ಅವನನ್ನೂ ಕೂಡ ಹೇಗೆ ತಿರಸ್ಕರಿಸುತ್ತಾರೋ, ಈ ತಿರಸ್ಕಾರವನ್ನು ಸಜ್ಜನರು ಅರ್ಥಪೂರ್ಣವೆಂದು ಹೇಗೆ ಆದರಿಸುತ್ತಾರೋ, ಆದರಂತೆ ಪಂಕ್ತಿಯಲ್ಲಿ ಕುಳಿತ ಸಾಂಖ್ಯಾದಿಸಮಯಿಗಳು ಅಶ್ರೋತ್ರಿಯರಾಗಿದ್ದಾರೆ. ಇವರ ನಡುವೆ ಭ್ರಷ್ಟನಂತೆ (ಬಹಿಷ್ಟನಂತೆ) ಇರುವ ಚಾರ್ವಾಕನ ನಿರಾಕರಣೆಯೂ ಕೂಡ ಜ್ಞಾನಿಜನರಿಗೆ ಸಮಂಜಸವೆಂದೇ ಭಾಸವಾಗುತ್ತದೆ.

ಅದ್ವೈತಿಗಳು ದ್ವಿತೀಯಾಧ್ಯಾಯದ ತೃತೀಯಪಾದವನ್ನು ಗುಣೋಪಸಂಹಾರಪಾದ ಎನ್ನುತ್ತಾರೆ. ಅಲ್ಲಿ ಚಾರ್ವಾಕಮತವನ್ನು ನಿರಾಕರಣೆ ಮಾಡುತ್ತಾರೆ. ಗುಣೋಪಸಂಹಾರ-ಪಾದದಲ್ಲಿ ಕೇವಲ ಭಗವಂತನ ಗುಣಗಳನ್ನಷ್ಟೇ ಸಮನ್ವಯ ಮಾಡಬೇಕು. ಸಮಯ-ನಿರಾಕರಣೆಯು ಅಪ್ರಸ್ತುತವಾಗುತ್ತದೆ. ಹಾಗಾಗಿ ದ್ವಿತೀಯಾಧ್ಯಾಯದ ದ್ವಿತೀಯಪಾದ ಎನಿಸಿದ ಈ ಸಮಯಪಾದದಲ್ಲಿ ಚಾರ್ವಾಕಮತನಿರಾಕರಣೆಯು ಪ್ರಸ್ತುತವಾಗುತ್ತದೆ.

ಗಮನಿಸಬೇಕಾದ ಅಂಶ - ಮುದ್ರಿತಪುಸ್ತಕಗಳಲ್ಲಿ 'ಸ್ವತಂತ್ರಂ ಸರ್ವಶಕ್ತಿಂ ಸರ್ವವ್ಯಾಪ್ತಂ ಈಶಂ ವಿದುಷಾಂ' ಇತ್ಯಾದಿಯಾಗಿ ವಾಕ್ಯಸಂದರ್ಭವಿದೆ. ಆದರೆ ಯಥಾವತ್ತಾಗಿ ಹೀಗೆ ವಿವಕ್ಷಿಸಿದರೆ ಅರ್ಥವನ್ನು ಹೇಳುವುದು ಕಠಿಣವಾಗುತ್ತದೆ. ಆದ್ದರಿಂದ

'ಸ್ವತಂತ್ರಂ ಸರ್ವಶಕ್ತಿಂ ಸರ್ವವ್ಯಾಪ್ತಂ ಈಶಂ ವಿದುಷಾ' ಎಂದು ತಿದ್ದುಪಡಿ ಮಾಡಿ ದಂಡವನ್ನು ಹಾಕಿ ಅನುವಾದ ಮಾಡಲಾಗಿದೆ.[೧]

## ಶಾಸ್ತ್ರಕ್ಕೆ ಪ್ರಯೋಜನವಿಲ್ಲ

**तत्वप्रदीपः – अभ्युपगमेऽप्यर्थाभावात् । यस्य धर्माधर्मौ तत्फलं च स्वर्गनिरयनिश्श्रेयसादि नास्ति प्रमाणाभावात्तत्सिद्धान्ते स्वाभ्युपगत्यैव न प्रयोजनम् । प्रत्यक्षैकप्रमाणप्रणयिनश्च न परप्रतिबोधनप्रयोजनं शास्त्रम् । अतश्च न धर्माद्यभावबोधनेन परोपकारः प्रयोजनं वाच्यम् । तेन च परोपकारो न प्रत्यक्षः । केन च तदभावामयमज्ञो व्यज्ञासीदनादृतान्यमानः । अनुपलब्धिमात्रादभावनिश्चयश्चातिप्रसङ्गी ।**

ಯಾರ ಪಕ್ಷದಲ್ಲಿ ಧರ್ಮ, ಅಧರ್ಮ ಇವುಗಳ ಫಲವೆನಿಸಿದ ಸ್ವರ್ಗ, ನರಕ, ಮೋಕ್ಷ ಮೊದಲಾದವುಗಳನ್ನು ಅಂಗೀಕಾರ ಮಾಡಿಲ್ಲವೋ, ಏಕೆಂದರೆ ಯಾವುದೇ ಪ್ರಮಾಣವನ್ನು ಆ ಸಿದ್ಧಾಂತದವರು ಅಂಗೀಕಾರ ಮಾಡಿರುವುದಿಲ್ಲ. ಆದ್ದರಿಂದ ಇವರ ಶಾಸ್ತ್ರಕ್ಕೆ ಪ್ರಯೋಜನ-ವಿರುವುದಿಲ್ಲ. ಕೇವಲ ಪ್ರತ್ಯಕ್ಷವು ಪ್ರಮಾಣವೆಂದು ಇವರು ಹೇಳುತ್ತಾರೆ. ಆಗ ಇನ್ನೊಬ್ಬನಿಗೆ ತಿಳಿಸುವಿಕೆ ಎಂಬ ಪ್ರಯೋಜನವನ್ನೂ ಕೂಡ ಶಾಸ್ತ್ರಕ್ಕೆ ಹೇಳಲಾಗದು. ಆದ್ದರಿಂದ ಧರ್ಮಾದ್ಯಭಾವವನ್ನು ತಿಳಿಸುವುದೇ ಲೋಕೋಪಕಾರವಾಗಿದೆ. ಲೋಕೋಪಕಾರವು ಪ್ರತ್ಯಕ್ಷಸಿದ್ಧವಲ್ಲ. ಧರ್ಮಾದ್ಯಭಾವಗಳನ್ನು ಯಾವುದೇ ಪ್ರಮಾಣವು ಪ್ರಮಾಣವೇ ಅಲ್ಲವೆಂದು ಹೇಳುವ ಅಜ್ಞನಾದ ಚಾರ್ವಾಕನಿಂದ ತಿಳಿಯಲೂ ಕೂಡ ಸಾಧ್ಯವಿಲ್ಲ. ಅನುಪಲಬ್ಧವಾದ ಮಾತ್ರದಿಂದ ಧರ್ಮಾದಿಗಳೇ ಇಲ್ಲವೆಂಬ ನಿಶ್ಚಯವು ಅತಿಪ್ರಸಂಗಗ್ರಸ್ತವಾಗಿದೆ.

ವಿವರಣೆ - ಚಾರ್ವಾಕರು ಪ್ರತ್ಯಕ್ಷವನ್ನು ಮಾತ್ರ ಪ್ರಮಾಣ ಎನ್ನುತ್ತಾರೆ. ಇವನಿಗೆ ಪ್ರಯೋಜನಾದಿಗಳನ್ನೂ ಕೂಡ ಸಮರ್ಥನೆ ಮಾಡಲಾಗದು. ಧರ್ಮಾದ್ಯಭಾವ

(೧) 'ಸ್ವತಂತ್ರಂ ಸರ್ವಶಕ್ತಿಂ' ಇತ್ಯಾದಿ ವಾಕ್ಯವು ಮತ್ತು 'ಅಶ್ರೋತ್ರಿಯತ್ವಂ ಚ' ಎಂಬ ವಾಕ್ಯವು ಅತ್ಯಂತ ಕಠಿಣವಾಗಿದೆ. ವಿದ್ವಾಂಸರ ಬಳಿ ಚರ್ಚಿಸಿ ಮೇಲಿನಂತೆ ಅನುವಾದ ಮಾಡಲಾಗಿದೆ. ಆದರೂ ಕೂಡ ಜಿಜ್ಞಾಸುಗಳು ಪುನಃ ಈ ವಾಕ್ಯದ ಅರ್ಥವನ್ನು ಜ್ಞಾನಿಜನರ ಬಳಿ ತಿಳಿದು ಅರ್ಥಮಾಡಿಕೊಳ್ಳಬೇಕು.

ಬೋಧನದಿಂದ ಯಾವುದೇ ಪ್ರಯೋಜನವಿರುವುದಿಲ್ಲ. ಪರೋಪಕಾರವೇ ಪ್ರಯೋಜನವೆಂದರೆ ಅದು ಪ್ರತ್ಯಕ್ಷಸಿದ್ಧವಲ್ಲ. ಆದ್ದರಿಂದ ಧರ್ಮಾದಿಗಳು ಇಲ್ಲವೆಂಬ ಅಭಾವಬುದ್ಧಿಯನ್ನು ಹೊಂದಲು ಈ ಅಜ್ಞಾನಿಗೆ ಸಾಧ್ಯವೇ ಇಲ್ಲ. (ಅನಾದೃತಾನ್ಯಮಾನಃ = ಬೇರೆ ಪ್ರಮಾಣವನ್ನು ಪ್ರಮಾಣವೇ ಇಲ್ಲವೆಂದು ತಿರಸ್ಕರಿಸುವ) ಅನುಪಲಬ್ಧವಾದ ಮಾತ್ರದಿಂದ ಧರ್ಮಾದಿಗಳೇ ಇಲ್ಲವೆಂದು ನಿಶ್ಚಯ ಮಾಡಬಾರದು. ಕಾಶ್ಮೀರದಲ್ಲಿರುವ ಘಟವು ಕೇರಳದಲ್ಲಿ ಅನುಪಲಬ್ಧವಾಗುತ್ತಿರುವುದರಿಂದ ಇಲ್ಲವೆಂದು ಹೇಳಬೇಕಾಗುತ್ತದೆ.

**तत्वप्रदीपः – न च लोकोपकारादपि तस्य प्रयोजनम् । अदृष्टाभावात् । सुखदुःखादेः स्वाभाविकत्वात् । प्रत्युत हिंसादोषनिषेधनात्स्वस्यापि वधाद्यनर्थप्रसिः । अतः स्वव्याहतेरेवोपेक्ष्यः । स्वव्याहतिर्हि महतीयम् - अनुमानमागमश्च न प्रमाणं व्यभिचारादिति मद्वाक्यादवगन्तव्यमिति । निष्फलं मच्छास्त्रमिति तु महीयसी । स्ववधान्न दोष इति महिष्ठा । अतो न तदुत्तरे परेण प्रयतनीयमित्यर्थः ॥**

**॥ इत्यभ्युपगमाधिकरणम् ॥**

ಲೋಕೋಪಕಾರದಿಂದಲೂ ಕೂಡ ಪ್ರಯೋಜನವನ್ನು ಚಾರ್ವಾಕನಿಗೆ ಸಮರ್ಥಿಸಲಾಗದು. ಏಕೆಂದರೆ ಅವನು ಅದೃಷ್ಟವನ್ನೇ ಒಪ್ಪಿಲ್ಲ. ಸುಖ-ದುಃಖಾದಿಗಳು ಸ್ವಾಭಾವಿಕವಾಗಿದೆ. ಆದ್ದರಿಂದ ಹಿಂಸಾದಿಗಳು ಎಲ್ಲೆಡೆಯೂ ಉಂಟಾಗಬೇಕಾದ್ದರಿಂದ ತನಗೂ ಕೂಡ ಮರಣವೇ ಬರಬೇಕಾದೀತು. ಹೀಗೆ ಸ್ವವ್ಯಾಹತಿಗಳಾಗಿರುವುದರಿಂದ ಇವರ ಮತವನ್ನು ಉಪೇಕ್ಷೆ ಮಾಡಬೇಕು. ಸ್ವವ್ಯಾಹತಿಯು ಅತ್ಯಂತ ದೊಡ್ಡ ದೋಷವಾಗಿದೆ. ಅದನ್ನು ಹೀಗೆ ತಿಳಿಯಬೇಕು- ''ಅನುಮಾನ ಹಾಗೂ ಆಗಮಗಳು ಪ್ರಮಾಣವಲ್ಲ ವ್ಯಭಿಚರಿತವಾದ್ದರಿಂದ'' ಎಂಬ ನನ್ನ ವಾಕ್ಯದಿಂದ ತಿಳಿಯಬೇಕು. ಇದು ಹೇಗೆ ಸಾಧ್ಯ ? ಇದು ಸ್ವವ್ಯಾಹತವಾಗಿದೆ. ಏಕೆಂದರೆ ಈ ವಾಕ್ಯವೇ ಅನುಮಾನ ಸ್ವರೂಪವಾಗಿದೆ. ಮತ್ತು 'ನಿಷ್ಫಲಂ ಮಚ್ಛಾಸ್ತ್ರಂ' ಎಂಬುದೂ ಕೂಡ ತುಂಬಾ ದೊಡ್ಡ ಮಾತು. ಶಾಸ್ತ್ರವೆಂದರೆ ಫಲವುಳ್ಳದ್ದೆಂದರ್ಥ. ಪುನಃ ನಿಷ್ಫಲವೆಂದು ಹೇಳುವುದು ಸ್ವವ್ಯಾಹತವಾಗಿದೆ. 'ಸ್ವವಧಾನ್ನ ದೋಷಃ' 'ನನ್ನನ್ನು ಸಂಹಾರ ಮಾಡುವುದರಿಂದ ದೋಷವಿಲ್ಲ'

ಎಂಬುದೂ ಕೂಡ ತುಂಬಾ ದೊಡ್ಡ ಮಾತು. ಆದ್ದರಿಂದ ಅವರ ಉತ್ತರದಿಂದ ಯಾರು... ನೂ ಕೂಡ ಪ್ರವೃತ್ತಿ ಮಾಡಲು ಸಾಧ್ಯವಿಲ್ಲ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ ಅಭ್ಯುಪಗಮಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

ಚಾರ್ವಾಕಮತ ನಿರಾಕರಣೆಗಾಗಿ ಈ ಅಧಿಕರಣ

**तत्वप्रकाशिका – अधिकरणार्थं दर्शयति ।। लोकायतिकेति ।। अत एवात्र विष्णोर्जगत्कारणत्वे चार्वाकसमयविरोधपरिहारादस्ति शास्त्रादिसङ्गतिः ।**

ಈ ಅಧಿಕರಣದ ಪ್ರಮೇಯವನ್ನು 'ಲೋಕಯತಿಕಪಕ್ಷಮ್' ಎಂಬ ಭಾಷ್ಯದಿಂದ ತೋರಿಸುತ್ತಿದ್ದಾರೆ. ಆದ್ದರಿಂದಲೇ ವಿಷ್ಣುವಿನ ಜಗತ್ಕಾರಣತ್ವಕ್ಕೆ ಚಾರ್ವಾಕಮತದ ವಿರೋಧವನ್ನು ಪರಿಹರಿಸಿದಂತಾಯಿತು. ಇದರಿಂದ ಶಾಸ್ತ್ರಾದಿಸಂಗತಿಗಳನ್ನು ತೋರಿಸಿದಂತಾಯಿತು.

ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ

# ಭಾವದೀಪ

**भावदीपः –** अत एवेत्युक्तार्थम्। एवमग्रेपि।

ಹಿಂದೆ ಹೇಳಿದ ಪ್ರಮೇಯದಿಂದಲೇ ಎಂಬುದು 'ಅತ ಏವ' ಎಂಬ ಪದದ ಅರ್ಥವಾಗಿದೆ. ಮುಂದೂ ಕೂಡ 'ಅತ ಏವ' ಎಂಬ ಪದಕ್ಕೆ ಇದೇ ಅರ್ಥವನ್ನು ತಿಳಿಯಬೇಕು.

ವಿವರಣೆ - ಅಚೇತನವಾದ ಪ್ರಕೃತಿಗೆ ಜಗತ್ಕಾರಣತ್ವವನ್ನು ಒಪ್ಪುವುದು ಬೇಡ. ಶರೀರವು ಚೇತನವಾದ್ದರಿಂದ ಇದಕ್ಕೆ ಕರ್ತೃತ್ವವನ್ನು ಒಪ್ಪಬಹುದಾದ್ದರಿಂದ ಈಶ್ವರನ ಅವಶ್ಯಕತೆ ಇರುವುದಿಲ್ಲವೆಂಬುದು ಚಾರ್ವಾಕರ ಅಭಿಪ್ರಾಯ. ಸಾಂಖ್ಯರನ್ನು ಕುರಿತು ಹೇಗೆ

ಶ್ರುತ್ಯಾದ್ಯಭಾವವು ಪ್ರಾಪ್ತವಾಯಿತೋ ಅದರಂತೆ ಚಾರ್ವಾಕರಿಗೆ ಶ್ರುತ್ಯಾದ್ಯಭಾವವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಶ್ರುತ್ಯಾದಿಗಳಿಗೆ ಪ್ರಾಮಾಣ್ಯವನ್ನು ಇವರು ಒಪ್ಪುವುದಿಲ್ಲ. ಹೀಗೆ ಹಿಂದಿನ ಅಧಿಕರಣದ ಮೇಲೆ ಅಭ್ಯಧಿಕಾಶಂಕೆಯಿಂದ ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಅನಂತರ್ಯಸಂಗತಿ ಇರುತ್ತದೆ.

### ಅಭ್ಯುಪಗಮಾಧಿಕರಣದ ವಿಷಯವೇನು ?

**तत्वप्रकाशिका – हरिर्जगत्कर्तेत्युक्तम् । तत्र चार्वाकमतविरोधेनाभावाप्त्तेस्तन्निराकार्यमेव । तदीश्वरस्य जगत्कर्तृत्वं विषयः । युक्तं न वेति सन्देहः। विप्रतिपत्तिः सन्देहबीजम् ।**

ಶ್ರೀಹರಿಯೇ ಜಗತ್ತಿಗೆ ಕಾರಣಕರ್ತಾ ಎಂದು ಈಗಾಗಲೇ ಹೇಳಿದ್ದಾಗಿದೆ. ಈ ವಿಷ್ಣುವಿನ ಜಗತ್‌ಕರ್ತೃತ್ವಲಕ್ಷಣಕ್ಕೆ ಚಾರ್ವಾಕಮತದಿಂದ ವಿರೋಧ ಬರುವುದರಿಂದ ಇದನ್ನು ವಿಷ್ಣುವಿನ ಲಕ್ಷಣವೆಂದೇ ಹೇಳಲಾಗದು. ಆದ್ದರಿಂದ ಚಾರ್ವಾಕಮತವನ್ನು ನಿರಾಕರಣೆ ಮಾಡಲೇ ಬೇಕು.

ಈಶ್ವರನ ಜಗತ್‌ಕರ್ತೃತ್ವವೇ ಅಧಿಕರಣದ ವಿಷಯ. ಇದು ವಿಷ್ಣುವಿನಲ್ಲಿ ಯುಕ್ತವೋ ಅಯುಕ್ತವೋ ? ಎಂಬುದು ಸಂದೇಹ. ಮತಗಳಲ್ಲಿ ವಿಪ್ರತಿಪತ್ತಿಯು ಸಂದೇಹಬೀಜ.

### ಸಾಂಖ್ಯರಂತೆ ಚಾರ್ವಾಕರಿಗೆ ಶ್ರುತಿವಿರೋಧವಿಲ್ಲ

**तत्वप्रकाशिका – न युक्तमिति पूर्वः पक्षः । अन्तरेणापीश्वरं पूर्वपूर्वस्मादुत्तरोत्तरोत्पत्तिसम्भवात् । कचित्स्वभावादेव मदिरोत्पत्तिवदुपपत्तेश्च। न च साङ्ख्यं प्रतीव श्रुत्यादिबाधो वक्तुं युक्तः । तस्याप्रामाण्यात् ।**

ಈಶ್ವರನಿಗೆ ಜಗತ್‌ಕರ್ತೃತ್ವವೇ ಇಲ್ಲದಿರುವ ು ಅಧಿಕರಣದ ಪೂರ್ವಪಕ್ಷ. ಈಶ್ವರನನ್ನು ಒಪ್ಪದಿದ್ದರೂ ಕೂಡ ಜಗದುತ್ಪತ್ತಿಯನ್ನು ಕೂಡಿಸಬಹುದು. ಹಿಂದಿನ ಪದಾರ್ಥಗಳು ಮುಂದಿನ ಪದಾರ್ಥಗಳಿಗೆ ಕಾರಣವಾಗಿವೆ ಎಂದೇ ಹೇಳಬಹುದು. ಕೆಲವೆಡೆ ಸ್ವಭಾವದಿಂದಲೇ ಮದಿರೋತ್ಪತ್ತಿಯಂತೆ ಉಪಪನ್ನವಾಗುತ್ತದೆ. ಸಾಂಖ್ಯರಿಗೆ ಶ್ರುತ್ಯಾದಿಬಾಧವನ್ನು ಹೇಳಿದಂತೆ ಇವರಿಗೆ ಹೇಳಲಾಗದು. ಏಕೆಂದರೆ ಚಾರ್ವಾಕರು ಶ್ರುತಿಗೆ ಅಪ್ರಾಮಾಣ್ಯವನ್ನು ಒಪ್ಪಿದ್ದಾರೆ.

**भावदीपः –** कथं तर्हि प्रथमोत्पत्तिरित्यत आह – **क्वचिदिति ।।** धान्या दितो यथा मदिरोत्पत्तिस्तथा पृथिव्यादिभूतस्वभावादेवेत्यर्थः। पूर्वोक्तदोषास्पृष्टतामाह – **न चेति ।।** 'चार्वाकैरुच्यते मानमक्षजं नापरं क्वचित्' इत्यनुभाष्योक्ततन्मतानुरोधेन हेतुमाह – **तस्येति ।।**

ಈಶ್ವರನನ್ನು ಒಪ್ಪದಿದ್ದರೆ ಮೊದಲು ಜಗತ್ತು ಹೇಗೆ ಹುಟ್ಟಿತು ? ಈ ಪ್ರಶ್ನೆಗೆ 'ಕ್ವಚಿತ್' ಎಂಬ ವಾಕ್ಯವು ಉತ್ತರಿಸುತ್ತಿದೆ. ಸುರೆಯನ್ನು ಹುಟ್ಟಿಸುವ ಸ್ವಭಾವ ಧಾನ್ಯಾದಿಗಳಲ್ಲಿದೆ. ಅದರಂತೆ ಜಗತ್ತನ್ನು ಹುಟ್ಟಿಸುವ ಸ್ವಭಾವ ಪೃಥಿವ್ಯಾದಿ ಭೂತಗಳಲ್ಲಿದೆ. ಹೀಗೆ ಸ್ವಭಾವದಿಂದಲೇ ಜಗತ್ತು ಹುಟ್ಟುತ್ತದೆ, ಈಶ್ವರನ ಅಪೇಕ್ಷೆ ಇರುವುದಿಲ್ಲ ಎಂಬುದು ಚಾರ್ವಾಕರ ಅಭಿಪ್ರಾಯ. ಹಿಂದಿನ ಮತದವರಿಗಿರುವ ದೋಷ ನಮಗಿಲ್ಲ ಎಂಬುದನ್ನು ತೋರಿಸಿದ್ದಾರೆ.

'ಚಾರ್ವಾಕೈರುಚ್ಯತೇ ಮಾನಮಕ್ಷಜಂ ನಾಪರಂ ಕ್ವಚಿತ್'

'ಪ್ರತ್ಯಕ್ಷ ಮಾತ್ರ ಪ್ರಮಾಣ. ಅನುಮಾದಿಗಳು ಪ್ರಮಾಣವಲ್ಲ ಎಂದು ಚಾರ್ವಾಕರು ಹೇಳುತ್ತಾರೆ' ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಅದಕ್ಕನುಗುಣವಾಗಿ 'ತಸ್ಯ' ಎಂಬ ವಾಕ್ಯದಿಂದ ಹೇತುವನ್ನು ಹೇಳಿದ್ದಾರೆ.

ವಿವರಣೆ - 'ಪೂರ್ವಪೂರ್ವಸಾತ್ಮ್ಯ' ಎಂಬುದಾಗಿ ಹೇಳಿರುವುದು ಭೂಮಿ ಬೆಟ್ಟ ಮೊದಲಾದವುಗಳ ಉತ್ಪತ್ತಿಯ ವಿಷಯದಲ್ಲಿ, ಸ್ವಭಾವದಿಂದಲೇ ಮದಿರೋತ್ಪತ್ತಿಯಂತೆ ಉತ್ಪತ್ತಿಯನ್ನು ಹೇಳಿದ್ದು ಜೀವೋತ್ಪತ್ತಿಯ ವಿಷಯದಲ್ಲಿ, ತೆಂಗಿನ ಮರದ ಒಳಗೆ ಇರುವ ನೀರು ಅದರ ಹೂವನ್ನು ಕತ್ತಿಯಿಂದ ತುಂಡು ಮಾಡಿದಾಗ ಮದಿರ ರೂಪದಿಂದ ಹೊರಗೆ ಬರುತ್ತದೆ. ಅದರಂತೆ ದೇಹದಲ್ಲಿ ಜೀವನು ಇದ್ದಾನೆಂದು ತಿಳಿಯಬೇಕು. ಹೀಗೆ ಚಾರ್ವಾಕರು ಭೂಮಿ ಮೊದಲಾದವುಗಳ ಉತ್ಪತ್ತಿಯ ಬಗ್ಗೆ ಮತ್ತು ಜೀವೋತ್ಪತ್ತಿಯ ಬಗ್ಗೆ ಸಮರ್ಥನೆ ಮಾಡುತ್ತಾರೆ. ಅದನ್ನು ಪ್ರಕೃತ ಟೀಕೆಯಲ್ಲಿ 'ಕ್ವಚಿತ್' ಇತ್ಯಾದಿ ವಾಕ್ಯದಿಂದ ಉಪಸ್ಥಾಪನೆ ಮಾಡಿದ್ದಾರೆ.

ಧರ್ಮ, ಅಧರ್ಮ, ದೇವರು ಎಲ್ಲವೂ ಸುಳ್ಳು

**तत्वप्रकाशिका – न च धर्माद्यसिद्धिविरोधः । तदनभ्युपगमात् । न हि धर्माद्यनभ्युपगमे किञ्चिद्बाधं पश्यामः । न ह्येतस्याभावापराधेन सत्यामपि**

**बाह्यसामग्र्यां कार्यानुत्पादो दृष्टो येन जानीमोऽस्त्यलौकिकं कारणमिति । अतोऽदृष्टस्य वस्तुनोऽभावान्नेश्वरस्य जगत्कारणत्वलक्षणं युक्तमिति प्राप्ते सिद्धान्तयत्सूत्रमुपन्यस्य व्याचष्टे – अभ्युपगमेऽपीति ।।**

ಶ್ರುತಿಯನ್ನು ಅಪ್ರಮಾಣವೆಂದರೆ ಧರ್ಮಾದಿಗಳೇ ಸಿದ್ಧವಾಗುವುದಿಲ್ಲ. ಆದ್ದರಿಂದ ಧರ್ಮಾದಿಸಿದ್ಧಿಯ ವಿರೋಧವು ಬರುತ್ತದಲ್ಲವೆ ? ಎನ್ನಬಾರದು. ನಾವು ಧರ್ಮಾದಿಗಳನ್ನು ಕೂಡ ಒಪ್ಪುವುದಿಲ್ಲ. ಧರ್ಮಾದಿಗಳನ್ನು ಒಪ್ಪದಿದ್ದರೆ ಯಾವುದೇ ಬಾಧಕವು ಕಾಣಿಸುತ್ತಿಲ್ಲ. ಸಕಲಬಾಹ್ಯಸಾಮಗ್ರಿಗಳಿದ್ದು ಧರ್ಮಾದಿಗಳಿಲ್ಲ ಎಂಬ ಕಾರಣದಿಂದ ಯಾವುದಾದರು ಒಂದು ಕಾರ್ಯವು ಉತ್ಪನ್ನವಾಗಿಲ್ಲ ಎಂದು ಕಂಡಿದ್ದರೆ ಅಲೌಕಿಕವಾದ ಧರ್ಮಾದಿಗಳನ್ನು ಪ್ರಮಾಣವೆಂದು ಒಪ್ಪಬಹುದಿತ್ತು. ಆದರೆ ಹಾಗೆ ಕಂಡಿಲ್ಲ. ಆದ್ದರಿಂದ ಕಣ್ಣಿಗೆ ಕಾಣಿಸದ ಯಾವುದೇ ವಸ್ತುವೇ ಇರುವುದಿಲ್ಲ. ಹಾಗಾಗಿ ಜಗತ್ಕಾರಣತ್ವವು ಅಯುಕ್ತವಾಗಿದೆ. ಇಷ್ಟು ಈ ಅಧಿಕರಣದ ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಪರಿಹಾರಕವಾದ ಸಿದ್ಧಾಂತವನ್ನು 'ಅಭ್ಯುಪಗಮೇಽಪಿ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – यस्येत्यादिभाष्यसूचितमाह – **तदनभ्युपगमादिति** ।। कार्यानुत्पत्तिरेव बाधिकेत्यत आह – **न ह्येतस्येति** ।। **अत इति** ।। दृष्टसामग्र्यैव कार्योत्पत्तिसम्भवादित्यर्थः ।।

'ಯಸ್ಯ' ಇತ್ಯಾದಿ ಭಾಷ್ಯದಿಂದ ಸೂಚಿತವಾದ ಅಭಿಪ್ರಾಯವನ್ನು 'ತದನಭ್ಯುಪಗಮಾತ್' ಎಂಬುದರಿಂದ ಹೇಳಿದ್ದಾರೆ. ಧರ್ಮಾದಿಗಳನ್ನು ಒಪ್ಪದಿದ್ದರೆ ಕಾರ್ಯದ ಅನುತ್ಪತ್ತಿಯೇ ಬಾಧಕವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ನ ಹ್ಯೇತಸ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಅತಃ' ಎಂಬ ಪದಕ್ಕೆ ದೃಷ್ಟಸಾಮಗ್ರಿಯಿಂದಲೇ ಕಾರ್ಯೋತ್ಪತ್ತಿಯು ಆಗುತ್ತಿರುವಾಗ ಎಂದರ್ಥ.

ಚಾರ್ವಾಕನ ಸಿದ್ಧಾಂತದಲ್ಲಿ ಪ್ರಯೋಜನವೇ ಇಲ್ಲ

**तत्वप्रकाशिका – युक्तमेव विष्णोर्जगत्कारणत्वमिति । यदुक्तम् - अदृष्टार्थ एव नास्तीति कुतो जगदीश्वरः कुतस्तरां जगत्कारणत्वमिति । तत्**

**प्रष्टव्यम् । तस्तिद्धान्ते किं प्रयोजनमिति । अपेक्षितं खलु शास्त्रेऽधिकार्यादि । तत्र न तावद्धर्मस्वर्गापवर्गादि, अनभ्युपगमात् ।**

ವಿಷ್ಣುವಿನ ಜಗತ್ಕಾರಣತ್ವವು ಯುಕ್ತವೇ ಆಗಿದೆ. ಅದೃಷ್ಟಾರ್ಥವೇ ಇಲ್ಲದಿದ್ದಾಗ ಜಗತ್ತಿಗೆ ಈಶ್ವರನು ಇರಲು ಹೇಗೆ ಸಾಧ್ಯ ? ಅವನಲ್ಲಿ ಜಗತ್ಕಾರಣತ್ವವು ಇರಲು ಕೂಡ ಹೇಗೆ ಸಾಧ್ಯ ? ಎಂದು ಚಾರ್ವಾಕರು ಕೇಳಿದ್ದರು. ಇಂಥವರನ್ನು ಕುರಿತು ಪ್ರಶ್ನಿಸುತ್ತೇವೆ.

ಇಂಥ ಸಿದ್ಧಾಂತದಿಂದ ಏನು ಪ್ರಯೋಜನ? ಶಾಸ್ತ್ರದಲ್ಲಿ ಅಧಿಕಾರ ಪ್ರಯೋಜನ ಸಂಬಂಧಗಳು ಅತ್ಯಂತ ಆವಶ್ಯಕ. ಚಾರ್ವಾಕನು ಧರ್ಮ, ಸ್ವರ್ಗ, ಮೋಕ್ಷ ಯಾವುದನ್ನು ಕೂಡ ಅಂಗೀಕಾರ ಮಾಡಿರುವುದಿಲ್ಲ. ಆದ್ದರಿಂದ ಅದೃಷ್ಟವಾದ ಪ್ರಯೋಜನವೇ ಇಲ್ಲ.

### 'ಕಿಂ ಪ್ರಯೋಜನಮ್' ಎಂಬ ಭಾಷ್ಯಕ್ಕೆ ಎರಡು ವ್ಯಾಖ್ಯಾನ

**भावदीपः – किंप्रयोजनमिति भाष्यं प्रश्नार्थत्वेन व्याचष्टे – तत्र प्रष्टव्यमिति ।।** किंशब्दस्याक्षेपार्थत्वं मत्वा यस्येत्यादिभाष्यतात्पर्यमाह – **न तावदिति ।।** भाष्येऽधर्मशब्दो धर्मादन्यतज्जन्यस्वर्गादिपर इति दर्शितम् । एतेनाभ्युपगमेऽपि त्वदीयसिद्धान्तेऽपि अर्थाभावात् धर्मादिलक्षणादृष्टरूपप्रयोजनाभावाभ्युपगमाददृष्टं प्रयोजनं नास्तीति सूत्रार्थो दर्शितः।

'ಕಿಂ ಪ್ರಯೋಜನಮ್' ಎಂಬ ಭಾಷ್ಯವು ಪ್ರಶ್ನಾರ್ಥದಲ್ಲಿ ಪ್ರಯುಕ್ತವಾಗಿದೆ ಎಂದು 'ತತ್ರ ಪ್ರಷ್ಟವ್ಯಮ್' ಎಂಬ ಟೀಕಾಪಂಕ್ತಿಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಕಿಂ' ಶಬ್ದಕ್ಕೆ ಆಕ್ಷೇಪಾರ್ಥತ್ವವನ್ನು ಅಂಗೀಕಾರ ಮಾಡಿ, 'ಯಸ್ಯ' ಇತ್ಯಾದಿ ಭಾಷ್ಯತಾತ್ಪರ್ಯವನ್ನು 'ನ ತಾವತ್' ಎಂಬ ವಾಕ್ಯದಿಂದ ಹೇಳಿರುತ್ತಾರೆ. ಭಾಷ್ಯದಲ್ಲಿರುವ ಅಧರ್ಮಶಬ್ದಕ್ಕೆ ಧರ್ಮಕ್ಕಿಂತ ಭಿನ್ನವಾದ, ಧರ್ಮದಿಂದ ಹುಟ್ಟಿದ ಸ್ವರ್ಗ ಎಂಬರ್ಥವನ್ನು ತಿಳಿಯಬೇಕು. ಸೂತ್ರಾರ್ಥ ಹೀಗಿದೆ - 'ಅಭ್ಯುಪಗಮೇऽಪಿ' = ನಿನ್ನ ಸಿದ್ಧಾಂತದಲ್ಲೂ ಕೂಡ 'ಅರ್ಥಾಭಾವಾತ್' = ಧರ್ಮಾದಿ ರೂಪವಾದ ಅದೃಷ್ಟವೆಂಬ ಪ್ರಯೋಜನದ ಇಲ್ಲದಿರುವಿಕೆಯನ್ನು ಅಂಗೀಕಾರ ಮಾಡಿರುವುದರಿಂದ ಅದೃಷ್ಟಪ್ರಯೋಜನವಂತು ಹೇಳಲು ಸಾಧ್ಯವಿಲ್ಲ ಎಂದು.

ಚಾರ್ವಾಕ ಮತದಿಂದ ಏನು ಪ್ರಯೋಜನ ?

**तत्वप्रकाशिका – नापि दृष्टं धनादि, तदभावात् । वार्तादिप्रयोजनत्वाच्च तस्य । न च धर्माद्यभावबोधनद्वारा लोकोपकारः । तदभावज्ञाने परस्परहिंसादिनाऽपकारस्यैव प्राप्तेः।**

ಇದರಂತೆ ದೃಷ್ಟವಾದ ಹಣ ಮೊದಲಾದ ಲಾಭವು ಕೂಡ ಚಾರ್ವಾಕನ ಸಿದ್ಧಾಂತದಿಂದ ದೊರೆಯುವುದಿಲ್ಲ. ಏಕೆಂದರೆ ಅವನ ಶಾಸ್ತ್ರವನ್ನು ಕೇಳಿದಾಗ ಹಣ ಸಿಗುತ್ತಿಲ್ಲ. ವಾಣಿಜ್ಯದಿಂದಷ್ಟೇ ಹಣವು ದೊರೆಯುತ್ತದೆ. ಧರ್ಮಾದಿಗಳು ಇರುವುದಿಲ್ಲವೆಂಬ ಪರಿಜ್ಞಾನ ಬಂದಲ್ಲಿ ಪರಸ್ಪರ ಹಿಂಸಾದಿಗಳಿಂದ ಅಪಕಾರವೇ ಪ್ರಾಪ್ತವಾಗುತ್ತದೆ.

ಸೂತ್ರಕ್ಕೆ ಪುನಃ ಮೂರು ವ್ಯಾಖ್ಯಾನ

**भावदीपः** – आक्षेपार्थकभाष्यस्थकिंशब्देन सूचितं दृष्टफलाभावं च व्यनक्ति – **नापीत्यादिना ।।** वार्ता वाणिज्यम् । एतेनार्थाभावात् शास्त्रेण धनादिरूप-दृष्टप्रयोजनाभावात् अभ्युपगमे त्वदीयसिद्धान्ते दृष्टमपि प्रयोजनं नास्तीति सूत्रार्थो दर्शितः । न च तेन लोकोपकारः । धर्माद्यभावज्ञाने परस्परहिंसादिनाऽपकारस्यैव प्राप्तेरिति तत्वनिर्णयोक्तं हृदि कृत्वाह - **न चेति ।। लोकोपकार इति ।।** इदानीं धर्मादिबुद्ध्या कामोपभोगोपरुद्धानां लोकानां धर्माद्यभावबोधने यथेष्टं प्रवृत्तिसम्भवात् उपकारः प्रयोजनं भवतीत्यर्थः।। **परस्परहिंसेति ।।** धनवनिताद्यपहारार्थमिति भावः। एतेनाभ्युपगमेऽपि लोकोपकारः फलमित्यङ्गीकारेऽपि अर्थाभावाच्छास्त्रा लोकोपकाररूप-प्रयोजनस्याभावात् प्रत्युतानर्थस्यैव भावात् तत्सिद्धान्ते लोकोपकारोऽपि फलं न भवतीत्यपि सूत्रवृत्तिर्दर्शिता।

ಆಕ್ಷೇಪಾರ್ಥಕವಾದ ಭಾಷ್ಯದಲ್ಲಿರುವ 'ಕಿಂ' ಶಬ್ದದಿಂದ ದೃಷ್ಟವಾದ ಪ್ರಯೋಜನವಿಲ್ಲ ಎಂಬುದನ್ನು ಸೂಚನೆ ಮಾಡಿದ್ದಾರೆ. ಅದನ್ನೇ 'ನಾಪಿ' ಇತ್ಯಾದಿ ಗ್ರಂಥವು ವ್ಯಾಖ್ಯಾನ ಮಾಡುತ್ತಿದೆ. 'ವಾರ್ತಾ' ಎಂಬ ಪದಕ್ಕೆ 'ಆರ್ಥಿಕವ್ಯವಹಾರ' ಎಂದರ್ಥ. ಹೀಗೆ ಹೇಳಿದ್ದರಿಂದ ಸೂತ್ರವನ್ನು ಮತ್ತೊಂದು ರೀತಿಯಲ್ಲಿ

ವ್ಯಾಖ್ಯಾನ ಮಾಡಿದಂತಾಯಿತು - 'ಅರ್ಥಾಭಾವಾತ್' ಶಾಸ್ತ್ರದಿಂದ ಹಣ ಮೊದಲಾದ ದೃಷ್ಟಪ್ರಯೋಜನ-ವಿಲ್ಲದ್ದರಿಂದ, 'ಅಭ್ಯುಪಗಮೇ' ನಿನ್ನ ಸಿದ್ಧಾಂತದಲ್ಲಿ 'ಅಪಿ' ದೃಷ್ಟವಾದ ಪ್ರಯೋಜನವೂ ಕೂಡ ಇರುವುದಿಲ್ಲ ಎಂದು.

'ನ ಚ ತೇನ ಲೋಕೋಪಕಾರಃ ಧರ್ಮಾದ್ಯಭಾವಜ್ಞಾನೇ ಪರಸ್ಪರಹಿಂಸಾದೀನಾऽಪಕಾರಸ್ಯೈವ ಪ್ರಾಪ್ತೇಃ' 'ಅಂಥ ಚಾರ್ವಾಕನಿಂದ ಲೋಕಕ್ಕೇನೂ ಪ್ರಯೋಜನವಿಲ್ಲ. ಧರ್ಮಾಧರ್ಮವೇ ಇಲ್ಲವೆಂಬ ಪರಿಜ್ಞಾನವನ್ನು ಮೂಡಿಸಿದರೆ ಪರಸ್ಪರ ಹಿಂಸೆಯೇ ಉಂಟಾಗುತ್ತದೆ. ಇದರಿಂದ ಲೋಕಕ್ಕೆ ಅಪಕಾರ ಮಾಡಿದಂತೆ ಆಗುತ್ತದೆ' ಎಂಬುದಾಗಿ ವಿಷ್ಣುತತ್ವನಿರ್ಣಯದಲ್ಲಿ ಹೇಳಿದ್ದಾರೆ. ಅದನ್ನೇ ಮನಸ್ಸಿನಲ್ಲಿಟ್ಟು ಕೊಂಡು 'ನ ಚ' ಇತ್ಯಾದಿ ವಾಕ್ಯವು ಹೊರಟಿದೆ. 'ಲೋಕೋಪಕಾರಃ' ಎಂಬುದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು - ಪ್ರಕೃತ ಧರ್ಮಾಧರ್ಮಗಳಿವೆ ಎಂಬ ಬುದ್ಧಿಯಿಂದ ಕಾಮನೆಗಳ ಉಪಭೋಗ ಮಾಡುವುದನ್ನು ಜನರು ಬಿಟ್ಟಿದ್ದಾರೆ. ಆ ಜನರಿಗೆ ಧರ್ಮಾಧರ್ಮವೇ ಇಲ್ಲ ಎಂದು ಬೋಧನೆ ಮಾಡಿದರೆ ಯಥೇಚ್ಛವಾಗಿ ಪ್ರವೃತ್ತಿ ಮಾಡುತ್ತಾರೆ. ಇದೇ ನಾನು ಲೋಕಕ್ಕೆ ಮಾಡುವ ಉಪಕಾರ ಎಂದು ಚಾರ್ವಾಕನು ಹೇಳುತ್ತಾನೆ ಎಂದು.

'ಪರಸ್ಪರಹಿಂಸಾದಿನಾ' ಎಂಬುದರ ಅಭಿಪ್ರಾಯ ಹೀಗಿದೆ - ಇವನು ಧನವುಳ್ಳವನು ಎಂದು ತಿಳಿದಾಗ ಅವನಲ್ಲಿರುವ ಹಣವನ್ನು ಕದಿಯುತ್ತಾನೆ. ಹೆಣ್ಣು ಇದೆ ಎಂದು ತಿಳಿದಾಗ ಹೆಣ್ಣನ್ನು ಅಪಹಾರ ಮಾಡುತ್ತಾನೆ. ಇವುಗಳೆಲ್ಲವೂ ಕೂಡ ಪರಸ್ಪರ ಹಿಂಸೆಯಾಗಿವೆ ಎಂದು ತಿಳಿಯಬೇಕು. ಇದರಿಂದ ಸೂತ್ರಕ್ಕೆ ಮತ್ತೊಂದು ಅರ್ಥವನ್ನು ಹೇಳಿದಂತಾಯಿತು - 'ಅಭ್ಯುಪಗಮೇऽಪಿ' = ಲೋಕೋಪಕಾರವೇ ಫಲವಾಗಿದೆ ಎಂದು ಅಂಗೀಕಾರ ಮಾಡಿದರೂ ಕೂಡ 'ಅರ್ಥಾಭಾವಾತ್' = ಶಾಸ್ತ್ರದಿಂದ ಲೋಕೋಪಕಾರವೆಂಬ ಪ್ರಯೋಜನವಿಲ್ಲದ ಕಾರಣ, ವಿಪರೀತವಾಗಿ ಅನರ್ಥವೇ ಉಂಟಾಗುವುದರಿಂದ ಚಾರ್ವಾಕಸಿದ್ಧಾಂತದಲ್ಲಿ ಲೋಕೋಪಕಾರವೂ ಕೂಡ ಫಲವಾಗುವುದಿಲ್ಲ ಎಂದು.

ವಿವರಣೆ - 'ವಾರ್ತಾದಿಪ್ರಯೋಜನತ್ವಾಚ್ಚ' ಎಂಬ ಟೀಕಾವಾಕ್ಯದಲ್ಲಿರುವ ವಾರ್ತಾ ಎಂಬ ಪದಕ್ಕೆ 'ವಾಣಿಜ್ಯ' ಎಂದರ್ಥ. ಆದಿ ಪದದಿಂದ ಕೃಷಿಯನ್ನು ವಿವಕ್ಷಿಸಬೇಕು. ವ್ಯಾಪಾರ ಕೃಷಿ ಮೊದಲಾದವುಗಳಿಂದ ಹಣ ದೊರೆಯುತ್ತದೆ. ಶಾಸ್ತ್ರವನ್ನು ಕೇಳುವುದರಿಂದ ಹಣ ದೊರೆಯುವುದಿಲ್ಲ ಎಂದರ್ಥ. ಚಾರ್ವಾಕರು ಧರ್ಮಾಧರ್ಮವನ್ನು ಒಪ್ಪದಿದ್ದರೆ ಅವರ ಶಾಸ್ತ್ರಕ್ಕೆ ಯಾವುದೇ ಪ್ರಯೋಜನ ಇರುವುದಿಲ್ಲ ಎಂಬುದು ಸಿದ್ಧಾಂತಿಗಳಾದ ನಮ್ಮ ಅಭಿಪ್ರಾಯವಾಗಿದೆ.

ಧರ್ಮಾದಿಗಳನ್ನು ಒಪ್ಪದಿದ್ದರೆ ಶಾಸ್ತ್ರಕ್ಕೆ ವಿಷಯವೂ ಕೂಡ ಇರುವುದಿಲ್ಲ. ಧರ್ಮಾದ್ಯಭಾವವನ್ನೇ ವಿಷಯ ಎನ್ನಬೇಕು. ಇದನ್ನು ಪ್ರತಿಪಾದಿಸುವುದರಿಂದ ಲೋಕಕ್ಕೆ ಯಾವುದೇ ಉಪಕಾರವಾಗುವುದಿಲ್ಲ. ಅಷ್ಟೇ ಅಲ್ಲದೆ ಧರ್ಮಾದ್ಯಭಾವದ ಪರಿಜ್ಞಾನದಿಂದ ಪರಸ್ಪರ ಹಿಂಸಾದಿಗಳೇ ಉಂಟಾಗುತ್ತವೆ. ಲೋಕೋಪಕಾರವನ್ನು ಫಲವೆಂದು ಅಂಗೀಕಾರ ಮಾಡಿದರೂ ಧರ್ಮವೇ ಇಲ್ಲದ್ದರಿಂದ ಚಾರ್ವಾಕ ಶಾಸ್ತ್ರದಿಂದ ಲೋಕೋಪಕಾರರೂಪವಾದ ಪ್ರಯೋಜನ ಇರುವುದಿಲ್ಲ. ಆದರಿಂದ ಅನರ್ಥವೇ ಆಗುತ್ತದೆ. ಆದ್ದರಿಂದ ಲೋಕೋಪಕಾರವನ್ನು ಫಲವೆಂದು ಹೇಳಲು ಸಾಧ್ಯವಿಲ್ಲ.

ಚಾರ್ವಾಕಶಾಸ್ತ್ರವು ಕುರಿಕಾಯುವವನಂತೆ ಉಪಕಾರಿಯೆ?

**तत्वप्रकाशिका – न चोपकारोऽपि स्वरूपतः प्रयोजनमिति । तेनापि प्रयोजनं वाच्यम् । न तावददृष्टं तदभावात् । नापि दृष्टम् । न हि कुवर्त्मना गच्छन्तं प्रति मार्गोपदेष्टाऽविपालो लौकिकैरदृष्टनिरपेक्षैरुपक्रियते । अतो न किञ्चित्समयस्य प्रयोजनम् ।**

ಉಪಕಾರವು ಸ್ವರೂಪತಃ ಪ್ರಯೋಜನವೆಂದು ಅವರೂ ಕೂಡ ಒಪ್ಪಿರುವುದಿಲ್ಲ. ಸುಖದ ಪ್ರಾಪ್ತಿ ದುಃಖದ ನಿವೃತ್ತಿಗಳೇ ಉಪಕಾರದ ಪ್ರಯೋಜನ. ಈ ಉಪಕಾರದಿಂದ ದೊರೆಯುವ ಪ್ರಯೋಜನವು ಅದೃಷ್ಟರೂಪವೆಂದು ಹೇಳಲಾಗದು. ಏಕೆಂದರೆ ಚಾರ್ವಾಕರು ಅದೃಷ್ಟವನ್ನೇ ಒಪ್ಪಿರುವುದಿಲ್ಲ. ದೃಷ್ಟಪ್ರಯೋಜನವು ಇದೆ ಎಂದೂ ಹೇಳಲು ಸಾಧ್ಯವಿಲ್ಲ. ದಾರಿ ತಪ್ಪಿದ ಮನುಷ್ಯನಿಗೆ ಮಾರ್ಗವನ್ನು ಉಪದೇಶಿಸುವ ಕುರಿಕಾಯುವವನೇ ಮೊದಲಾದ ಲೌಕಿಕರಿಗೂ ಅದೃಷ್ಟದ ಅಪೇಕ್ಷೆ ಇರುವುದಿಲ್ಲ. ಆದರೂ ಉಪಕಾರ ಮಾಡುವುದು ಕಂಡಿದೆ. ಆದ್ದರಿಂದ ಚಾರ್ವಾಕಸಿದ್ಧಾಂತಕ್ಕೆ ಯಾವುದೇ ಪ್ರಯೋಜವಿನಲ್ಲ.

'ಕಿಂ ಪ್ರಯೋಜನಂ' ಎಂಬ ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ

**भावदीपः** – न चोपकारेण तस्य प्रयोजनं अदृष्टाभावादिति तत्वनिर्णयोक्त्यनुरोधेन लोकोपकारेणापि किं प्रयोजनमिति भाष्यार्थमुपेत्याह – **न चेति** ।। अदृष्टाभावेनैव दृष्टमपि नेत्याह – **नापि दृष्टमिति** ।। ननु कथं दृष्टं नास्ति। उपकारकर्तरि उपकृतो लोकः प्रत्युपकारं करिष्यति। यथा लोके अजाविपालाय तेनोपदिष्टमार्गो लोको

द्रविणादि ददाति तद्वदित्यत आह – **ना हीति ।।** सत्यमेतदविपालो लौकिकैरुपक्रियत इति। तदुपकर्तुः प्रत्युपकाराददृष्टमस्तीत्यनुसन्धानस्य सत्त्वात् त्वया तु तदनुसन्धानम दृष्टाभावबोधनेन त्यादितमिति उपकृतोऽपि लोकः किमर्थं प्रत्युपकारं कुर्यादिति भावः। अयमप्यर्थः पूर्ववत्सूत्रारूढ ऊह्यः।

ಲೋಕಕ್ಕೆ ಉಪಕಾರ ಮಾಡುವುದರಿಂದ ಚಾರ್ವಾಕನಿಗೆ ಏನೂ ಪ್ರಯೋಜನವಿಲ್ಲ ಎಂಬುದಾಗಿ 'ನ ಚೋಪಕಾರೇಣ ತಸ್ಯ ಪ್ರಯೋಜನಂ ಅದೃಷ್ಟಾಭಾವಾತ್' ಎಂದು ತತ್ವನಿರ್ಣಯದಲ್ಲಿ ಹೇಳಿದ್ದಾರೆ. ಅದಕ್ಕನುಗುಣವಾಗಿ ಲೋಕೋಪಕಾರದಿಂದಲೂ ಕೂಡ ಏನು ಪ್ರಯೋಜನ ? ಎಂದು ಭಾಷ್ಯಕ್ಕೆ 'ನ ಚ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. ಅದೃಷ್ಟಪ್ರಯೋಜನವಿಲ್ಲದ್ದರಿಂದಲೇ ದೃಷ್ಟಪ್ರಯೋಜನವೂ ಕೂಡ ಇಲ್ಲವೆಂಬುದನ್ನು 'ನಾಪಿ ದೃಷ್ಟಂ' ಎಂಬ ವಾಕ್ಯವು ಹೇಳುತ್ತಿದೆ.

ದೃಷ್ಟ ಪ್ರಯೋಜನ ಏಕಿಲ್ಲ ? ಯಾರು ಉಪಕಾರ ಮಾಡುತ್ತಾನೋ, ಅವನಿಗೆ ಲೋಕವು ಪ್ರತ್ಯುಪಕಾರ ಮಾಡುವುದು ಕಂಡಿದೆ. ಉದಾಹರಣೆ - ಆಡು ಮೇಯಿಸುವವನು ದಾರಿ ತೋರಿದಾಗ ಅವನಿಗೆ ದಾರಿಹೋಕನು ಹಣವನ್ನು ಕೊಡುತ್ತಾನೆ. ಹೀಗಿರುವಾಗ ದೃಷ್ಟಪ್ರಯೋಜನವಿಲ್ಲವೆಂದು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ 'ನ ಹಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಹೌದು ! ಲೋಕದಲ್ಲಿ ಕುರಿ ಮೇಯಿಸುವವನಿಗೆ ಲೌಕಿಕರು ಉಪಕಾರ ಮಾಡುತ್ತಾರೆ. ಏಕೆಂದರೆ ಆ ಉಪಕಾರ ಮಾಡುವವನಿಗೆ ಪ್ರತ್ಯುಪಕಾರ ಮಾಡಿದಾಗ ಅದೃಷ್ಟಪ್ರಯೋಜನವಿದೆಯೆಂಬ ಅನುಸಂಧಾನ ಇರುತ್ತದೆ. ಆದರೆ ಚಾರ್ವಾಕನಾದ ನಿನಗೆ ಅಂಥ ಅನುಸಂಧಾನವೇ ಇರುವುದಿಲ್ಲ. ಅದನ್ನೇ ಅಲ್ಲಗಳೆಯುತ್ತಿರುವಿ. ಆದ್ದರಿಂದ ಉಪಕೃತನಾದವನೂ ಕೂಡ ಪುನಃ ಪ್ರತ್ಯುಪಕಾರವನ್ನೇಕೆ ನಿನಗೆ ಮಾಡುತ್ತಾನೆ ? ಈ ಅರ್ಥವನ್ನೂ ಕೂಡ ಹಿಂದಿನಂತೆ ಸೂತ್ರಾರೂಢ ಮಾಡಬೇಕು.

ವಿವರಣೆ - ಸೂತ್ರಾರ್ಥ - ಅಭ್ಯುಪಗಮೇಽಪಿ = ಅದೃಷ್ಟಪ್ರಯೋಜನವಿಲ್ಲದಿದ್ದರೂ ದೃಷ್ಟಪ್ರಯೋಜನವಿದೆ ಎಂದು ಅಂಗೀಕಾರ ಮಾಡಿದರೂ ಕೂಡ, ಅರ್ಥಾಭಾವಾತ್ = ಧರ್ಮಾಧರ್ಮಗಳು ಇಲ್ಲದ ಕಾರಣ ಪ್ರತ್ಯುಪಕಾರವು ಕೂಡುವುದಿಲ್ಲ.

ಅದೃಷ್ಟಪ್ರಯೋಜನವಿಲ್ಲದಿರುವಂತೆ ದೃಷ್ಟಪ್ರಯೋಜನವೂ ಸಹ ಇಲ್ಲ. ಉಪಕಾರ ಮಾಡಿದ ವ್ಯಕ್ತಿಯಲ್ಲಿ ಲೋಕವು ಪ್ರತ್ಯುಪಕಾರವನ್ನು ಮಾಡಿಯೇ ಮಾಡುತ್ತಾರೆ. ಆಡು

ಕಾಯುವವನು ದಾರಿ ತಪ್ಪಿದವನಿಗೆ ಸರಿಯಾದ ದಾರಿಯನ್ನು ತೋರಿಸಿದರೆ ಹಣ ಮೊದಲಾದವುಗಳನ್ನು ಪಡೆಯಬಹುದೆಂಬುದು ಲೋಕದಲ್ಲಿ ಕಂಡಿದೆಯಲ್ಲವೆ? ಎಂಬ ಪ್ರಶ್ನೆಗೆ 'ನ ಹಿ' ಎಂಬ ಟೀಕೆಯಿಂದ ಉತ್ತರಿಸಿದ್ದಾರೆ. ಅಲ್ಲಿ ಪ್ರತ್ಯುಪಕಾರದಿಂದ ಅದೃಷ್ಟ ಇದೆ ಎಂಬ ಅನುಸಂಧಾನ ಇರುವುದರಿಂದ ಹಾಗೆ ಹಣವನ್ನು ನೀಡುತ್ತಾನೆ. ಆದರೆ ಚಾರ್ವಾಕನಾದ ನಿನಗೆ ಅದೃಷ್ಟದ ಅನುಸಂಧಾನವೇ ಇರುವುದಿಲ್ಲ. ಆದ್ದರಿಂದ ನಿನ್ನಿಂದ ಉಪಕೃತವಾದ ಲೋಕವು ನಿನಗೆ ಏಕೆ ಪ್ರತ್ಯುಪಕಾರವನ್ನು ಮಾಡುತ್ತದೆ ಎಂದು ಅಭಿಪ್ರಾಯ.

### ಚಾರ್ವಾಕಮತಕ್ಕೆ ವಿಷಯವೇ ಇಲ್ಲ

**तत्वप्रकाशिका – नापि विषयः अदृष्टाभावात् । नापि दृष्टः । 'अप्राप्ते शास्त्रमर्थवत्' इति न्यायात् । नापि धर्मादिभ्रान्तिनिरासाय तदभावः । तदुपायाभावात् ।**

ಚಾರ್ವಾಕಮತದಲ್ಲಿ ವಿಷಯವೂ ಕೂಡ ಇರುವುದಿಲ್ಲ. ಏಕೆಂದರೆ ಅದೃಷ್ಟವನ್ನೇ ಅವರು ಒಪ್ಪಿರುವುದಿಲ್ಲ. ದೃಷ್ಟವಿಷಯವೂ ಕೂಡ ಇರುವುದಿಲ್ಲ. ಅಪ್ರಾಪ್ತವಾದದ್ದಷ್ಟರಲ್ಲೇ ಶಾಸ್ತ್ರವು ಅರ್ಥವತ್ತಾಗುತ್ತದೆ. ದೃಷ್ಟವಿಷಯವನ್ನು ಹೇಳಿದರೆ ಶಾಸ್ತ್ರಕ್ಕೆ ಅಪೂರ್ವತ್ವವು ಉಂಟಾಗುವುದಿಲ್ಲ. ಇನ್ನು ಧರ್ಮಾದಿಭ್ರಾಂತಿನಿರಾಸಕ್ಕೋಸ್ಕರ ಶಾಸ್ತ್ರವು ಹೊರಟಿರುವುದರಿಂದ ಸಾರ್ಥಕವೆನ್ನಬೇಕು. ಆದರೆ ಧರ್ಮಾದಿಗಳಿಲ್ಲ ಎಂದು ತಿಳಿಸುವ ಯಾವ ಸಾಧನವೂ ಕೂಡ ಕಾಣಿಸುತ್ತಿಲ್ಲ.

### 'ಕಿಂ ಪ್ರಯೋಜನಂ' ಎಂಬ ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ

**भावदीपः** – भाष्ये प्रयोजनपदेन प्रयुज्यते प्रवर्त्यते अधिकारी येनेति व्युत्पत्त्या विषयपरोऽपीति भावेन तद्भाष्यं विषयाक्षेपपरतया व्याचष्टे॥ **नापीति ।। अप्राप्त इति ।।** मानान्तरावेद्यस्यैव शास्त्रवेद्यत्वादित्यर्थः। एतेनार्थाभावात् दृष्टादृष्टरूप-विषयाभावादिति सूत्रार्थो दर्शितः॥

ಭಾಷ್ಯದಲ್ಲಿ 'ಪ್ರಯೋಜನ' ಪದಕ್ಕೆ 'ವಿಷಯ' ಎಂದರ್ಥ. 'ಪ್ರಯುಜ್ಯತೇ ಅಧಿಕಾರೀ ಯೇನ ಇತಿ ಪ್ರಯೋಜನಮ್' ಎಂಬ ವ್ಯುತ್ಪತ್ತಿಯಿಂದ ಯಾವುದರಿಂದ ಅಧಿಕಾರಿಯು ಪ್ರವೃತ್ತಿ ಮಾಡುತ್ತಾನೋ,

ಅದು ಪ್ರಯೋಜನ ಎನಿಸುತ್ತದೆ. ಆಗ ಪ್ರಯೋಜನ ಪದಕ್ಕೆ ವಿಷಯ ಎಂಬರ್ಥವನ್ನು ಹೇಳಿದಂತಾಗುತ್ತದೆ. ಈ ಅಭಿಪ್ರಾಯದಿಂದ 'ಕಿಂ ಪ್ರಯೋಜನಂ' ಎಂಬ ಭಾಷ್ಯವು ಹೊರಟಿದೆ. ಅರ್ಥಾತ್ ವಿಷಯವನ್ನು ಆಕ್ಷೇಪ ಮಾಡುತ್ತಿದೆ. ಹೀಗೆ 'ನಾಪಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಅಪ್ರಾಪ್ತೇ' ಎಂಬ ವಾಕ್ಯಕ್ಕೆ ಹೀಗರ್ಥ - ಬೇರೆ ಪ್ರಮಾಣದಿಂದ ತಿಳಿಯಲ್ಪಡದೇ ಇರುವ ವಿಷಯವನ್ನು ಶಾಸ್ತ್ರವು ತಿಳಿಸುತ್ತದೆ ಎಂದರ್ಥ. ಹೀಗೆ ಹೇಳಿದ್ದರಿಂದ 'ಅರ್ಥಾಭಾವಾತ್' ಎಂಬ ಸೂತ್ರಕ್ಕೆ ದೃಷ್ಟವಿಷಯ ಹಾಗೂ ಅದೃಷ್ಟವಿಷಯವು ಇಲ್ಲದ್ದರಿಂದ ನಿನ್ನ ಪಕ್ಷವು ಅಯುಕ್ತವಾಯಿತು ಎಂಬರ್ಥವನ್ನು ಹೇಳಿದಂತಾಯಿತು.

### ಕೇವಲ ಪ್ರತ್ಯಕ್ಷಾದಿಗಳಿಂದ ಧರ್ಮಾಧರ್ಮವನ್ನು ತಿಳಿಸಲು ಸಾಧ್ಯವಿಲ್ಲ

**तत्वप्रकाशिका – न हि प्रत्यक्षं धर्माद्यभावं गृह्णाति । अपरामर्शेऽदर्शनात् । परामर्शे दर्शनं तु नानुमानाद्भिद्यते । विषयप्रयोजनाभावे काऽधिकारिणं प्रत्याशा?**

ಪ್ರತ್ಯಕ್ಷವು ಧರ್ಮಾದ್ಯಭಾವವನ್ನು ತಿಳಿಸುತ್ತದೆಂದು ಹೇಳಬಹುದಲ್ಲವೆ? ಎನ್ನಬಾರದು. ಇಂದ್ರಿಯದಿಂದ ಘಟಾಭಾವವು ತಿಳಿಯುವಂತೆ ಧರ್ಮಾದ್ಯಭಾವವು ತಿಳಿಯುತ್ತಿಲ್ಲ. ಪರಾಮರ್ಶ ಮಾಡದಿದ್ದಾಗ ಧರ್ಮಾದ್ಯಭಾವವು ತಿಳಿಯುವುದಿಲ್ಲ. ಪರಾಮರ್ಶ ಮಾಡಿದ ಮೇಲೆ ಧರ್ಮಾದ್ಯಭಾವವು ತಿಳಿಯುತ್ತದೆಂದು ಹೇಳಬೇಕು. ಆದರೆ ಈ ಪರಾಮರ್ಶವು ಅನುಮಾನಸ್ವರೂಪವೇ ಆಗುತ್ತದೆ ಹೊರತು ಪ್ರತ್ಯಕ್ಷರೂಪವಾಗುವುದಿಲ್ಲ. ಹೀಗೆ ವಿಷಯ-ಪ್ರಯೋಜನಗಳಿಲ್ಲದೆ ಇದ್ದಾಗ ಚಾರ್ವಾಕಮತದ ಶಾಸ್ತ್ರಕ್ಕೆ ಅಧಿಕಾರಿಯನ್ನು ಅಪೇಕ್ಷೆ ಪಡಲು ಹೇಗೆ ಸಾಧ್ಯ ?

### ಚಾರ್ವಾಕನು ಅನುಮಾನವನ್ನು ಒಪ್ಪಲೇಬೇಕು

**भावदीपः – अपरामर्श इति ।।** धर्मादिकं नास्ति प्रत्यक्षेणानुपलंभादित्यादि-परामर्शाभावे धर्माद्यभावस्याप्रतीतेः ।। **परामर्श इति ।।** परामर्शे धर्माद्यभावदर्शनं त्वित्यर्थः । परामर्शपदेनानुमितिकरणस्य दर्शनपदेनानुमितेश्च त्वयैवोक्तत्वादितिभावः ।

'ಅಪರಾಮರ್ಶೇ ದರ್ಶನಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರಿಂದ 'ಧರ್ಮಾದಿಕಂ ನಾಸ್ತಿ ಪ್ರತ್ಯಕ್ಷೇಣಾನುಪಲಂಭಾತ್' ಎಂಬ ಅನುಮಾನವಿಲ್ಲದಿದ್ದರೆ ಧರ್ಮಾದ್ಯಭಾವವು ಪ್ರತೀತವೇ ಆಗುವುದಿಲ್ಲ

ಎಂದರ್ಥ. 'ಪರಾಮರ್ಶದರ್ಶನಾತ್' ಎಂಬುದಕ್ಕೆ ಪರಾಮರ್ಶ ಮಾಡಿದಾಗ ಧರ್ಮಾದ್ಯಭಾವದ ಪ್ರತೀತಿ ಬರುತ್ತದೆಂಬುದು ಕಂಡಿದೆ ಎಂದರ್ಥ. 'ಪರಾಮರ್ಶ' ಪದಕ್ಕೆ 'ಅನುಮಿತಿಕರಣ' ಎಂದರ್ಥ. 'ದರ್ಶನ' ಪದಕ್ಕೆ 'ಅನುಮಿತಿ' ಎಂದರ್ಥ ಎಂಬುದಾಗಿ ನೀನೇ ಹೇಳಿರುವಿ. ಆದ್ದರಿಂದ ಪ್ರತ್ಯಕ್ಷ ಮಾತ್ರ ಪ್ರಮಾಣವೆಂದು ಹೇಳಲಾಗದು.

ಸಿದ್ಧಾಂತ ಎಂದು ಯಾವುದನ್ನು ಕರೆಯಬೇಕು ?

**तत्वप्रकाशिका – माऽस्तु मत्सिद्धान्ते प्रयोजनादीति चेत्तर्हि 'यः सिद्धान्तोऽसौ प्रयोजनादिमान्' इति नियमात् । अतः सिद्धान्तेऽपि प्रयोजनाद्यभावाभ्युपगमे तस्य स्वव्याहतिः स्यात् ।**

ನನ್ನ ಸಿದ್ಧಾಂತಕ್ಕೆ ಪ್ರಯೋಜನಾದಿಗಳೇ ಬೇಡ ಎಂದು ಹೇಳಲಾಗದು. ಯಾವುದು ಸಿದ್ಧಾಂತವೋ ಅದರಲ್ಲಿ ಪ್ರಯೋಜನಾದಿಗಳು ಇರಲೇಬೇಕೆಂಬ ನಿಯಮವಿದೆ. ಆದ್ದರಿಂದ ನಿನ್ನ ಮತವನ್ನು ಸಿದ್ಧಾಂತವೆಂದು ಒಪ್ಪಿ ಪ್ರಯೋಜನಾದಿಗಳು ಇಲ್ಲವೆಂದು ಹೇಳಿದರೆ ಸ್ವವ್ಯಾಹತಿ-ದೋಷವು ಪ್ರಾಪ್ತವಾಗುತ್ತದೆ.

'ಅತಃ ಸ್ವವ್ಯಾಹತೇರೇವ' ಎಂಬ ಭಾಷ್ಯಕ್ಕೆ ವ್ಯಾಖ್ಯಾನ

**भावदीपः –** अतः स्वव्याहतेरेवेति भाष्यं विवरितुमाह – **मास्त्विति ।।** अत इति भाष्यस्थपदानुवादः तस्यार्थः। सिद्धान्तेऽपीत्यादि। तेनाभ्युपगमेऽप्यर्थाभावादिति सूत्रमर्थगत्या व्याख्यातं भवति।

'ಸ್ವವ್ಯಾಹತೇರೇವ' ಎಂಬ ಭಾಷ್ಯವನ್ನು ವಿವರಿಸಲು 'ಮಾಸ್ತು' ಇತ್ಯಾದಿ ಗ್ರಂಥವು ಹೊರಟಿದೆ. 'ಅತಃ' ಎಂಬುದು ಭಾಷ್ಯದಲ್ಲಿರುವ 'ಅತಃ' ಎಂಬ ಪದದ ಅನುವಾದವಾಗಿದೆ. ಅದಕ್ಕೆ 'ಸಿದ್ಧಾಂತೇऽಪಿ' ಇತ್ಯಾದಿ ಪದಗಳು ವ್ಯಾಖ್ಯಾನ ಮಾಡುತ್ತಿವೆ. ಇದರಿಂದ 'ಅಭ್ಯುಪಗಮೇऽಪ್ಯರ್ಥಾಭಾವಾತ್' ಎಂಬ ಸೂತ್ರಕ್ಕೆ ಪ್ರಯೋಜನಾದಿಗಳಿರುವುದಿಲ್ಲ ಎಂಬರ್ಥವನ್ನು ಹೇಳಿದಂತಾಯಿತು.

ಚಾರ್ವಾಕಮತದ ಭಯವಿಲ್ಲ

**तत्वप्रकाशिका – न ह्यभ्युपगमोऽप्रयोजनश्चेति युक्तम् । मे माता वन्ध्येतिवत् स्वव्याहतं च वदन् भवानुपेक्ष्य एव जायते न तु परिहाराय विषय इति भावः । अतश्चार्वाकसमयस्यानुपपन्नत्वेनाविरोधकत्वाद्युक्तं जगत्कारणत्वं ब्रह्मण इति सिद्धम् ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् अभ्युपगमाधिकरणम्।।**

ಸಿದ್ಧಾಂತವನ್ನು ಒಪ್ಪಿ ಪ್ರಯೋಜನವಿಲ್ಲವೆಂದು ಹೇಳುವುದು ಯುಕ್ತವಲ್ಲ. 'ನನ್ನ ತಾಯಿಯು ಬಂಜೆ' ಎನ್ನುವುದು ಹೇಗೆ ಸ್ವವ್ಯಾಹತ ಆಗಿದೆಯೋ, ಅದರಂತೆ ನೀನೂ ಕೂಡ ಸ್ವವ್ಯಾಹತವಾಗಿ ಮಾತನಾಡುತ್ತಿರುವುದರಿಂದ ನಿರ್ಲಕ್ಷ್ಯಕ್ಕೆ ಒಳಗಾಗಿರುವಿ. ನಿನ್ನ ಆಕ್ಷೇಪಗಳಿಗೆ ಉತ್ತರ ಕೊಡುವ ಅವಶ್ಯಕತೆಯಿಲ್ಲ.

ಹೀಗೆ ಚಾರ್ವಾಕಸಮಯವು ಅತ್ಯಂತ ಅನುಪಪನ್ನವಾಗಿರುವುದರಿಂದ ಇದರ ವಿರೋಧವು ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣವು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ
ಅಭ್ಯುಪಗಮಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

### ಸ್ವವ್ಯಾಹತಿಯ ಉಪಪಾದನೆ

**भावदीपः –** स्वव्याहतिमुपपादयति।। **न हीति ।।** मत्सिद्धान्त इत्यनेन सप्रयोजनत्वाद्यविनाभूतसिद्धान्तत्वमभ्युपगम्य मास्तु प्रयोजनादीत्यनेनाप्रयोजकत्वाद्युक्ति व्याहतेत्यर्थः। तेनानिष्टं कथं भवेदित्यनुव्याख्यानसुधायां नञा निर्दिष्टमनित्यमित्युक्त-दिशा वाक्यादौ नेति वक्तव्यमिति निषेधस्यानित्यत्वान्मे मातेति प्रयोगः साधुः। अत्र भाष्ये उपेक्ष्य इत्युक्त्या टीकायां न युक्तमित्युक्त्या सूत्रे पूर्वस्मान्नञनुवृत्तिः सूचिता।। **अत इति ।।** स्वव्याहतत्वादित्यर्थः ।।

**।। इति राघवेन्द्रयतिकृते भावदीपे अभ्युपगमाधिकरणम् ।।**

ಸ್ವವ್ಯಾಹತಿಯನ್ನು ಉಪಪಾದನೆ ಮಾಡಲು 'ನ ಹಿ' ಇತ್ಯಾದಿ ಟೀಕೆಯು ಹೊರಟಿದೆ. ಪೂರ್ವಪಕ್ಷಿಯು 'ಮಾಽಸ್ತು ಮತ್ಸಿದ್ಧಾಂತೇ ಪ್ರಯೋಜನಾದಿ' ನನ್ನ ಸಿದ್ಧಾಂತದಲ್ಲಿ ಪ್ರಯೋಜನಾದಿಗಳು ಇರುವುದು ಬೇಡ ಎಂದು ಹೇಳಿದ್ದಾನೆ. ಸಿದ್ಧಾಂತವೆಂದರೆ ಪ್ರಯೋಜನಾದಿಗಳಿಂದ ಕೂಡಿರುವುದು ಎಂದರ್ಥ. ಹೀಗೆ ಸಿದ್ಧಾಂತದಿಂದ ಪ್ರಯೋಜನಾದಿಗಳನ್ನು ಅಂಗೀಕಾರ ಮಾಡಿ, 'ಮಾಸ್ತು ಪ್ರಯೋಜನಾದಿ' ಎಂದು ಅಪ್ರಯೋಜಕತ್ವವನ್ನು ಹೇಳುವ ಮಾತು ವ್ಯಾಹತವಾಗಿದೆ ಎಂದರ್ಥ.

'ತೇನಾನಿಷ್ಟಂ ಕಥಂ ಭವೇತ್' ಎಂಬ ಅನುವ್ಯಾಖ್ಯಾನದ ಸುಧೆಯಲ್ಲಿ 'ನಞಾ ನಿರ್ದಿಷ್ಟಮನಿತ್ಯಮ್' ನಞ್‌ನಿಂದ ನಿರ್ದಿಷ್ಟವಾದದ್ದು ಅನಿತ್ಯವಾಗಿದೆ ಎಂದು ಹೇಳಿದ್ದಾರೆ. ಆದರ ಪ್ರಕಾರ ವಾಕ್ಯದ ಪ್ರಾರಂಭದಲ್ಲಿ 'ನ' ಎಂದು ಹೇಳಬೇಕು. ಆಗ ನಿಷೇಧವು ಅನಿತ್ಯವೆಂದು ತಿಳಿಯುತ್ತದೆ. 'ಮೇ ಮಾತಾ' ಎಂಬ ಪ್ರಯೋಗವು ಸಾಧುವಾಗುತ್ತದೆ.

ಪ್ರಕೃತ ಭಾಷ್ಯದಲ್ಲಿ 'ಉಪೇಕ್ಷ್ಯಃ' ಎಂದು ಹೇಳಿದ್ದರಿಂದ ಟೀಕೆಯಲ್ಲಿ 'ನಯುಕ್ತಂ' ಎಂದು ಹೇಳಿದ್ದರಿಂದ ಹಿಂದಿನ ಸೂತ್ರದಿಂದ ಈ ಸೂತ್ರದಲ್ಲಿ 'ನ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕೆಂದು ಸೂಚನೆ ಮಾಡಿದಂತಾಯಿತು. 'ಅತಃ' ಎಂಬ ಪದಕ್ಕೆ ಸ್ವವ್ಯಾಹತಿ ಇರುವುದರಿಂದ ಎಂದರ್ಥ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಅಭ್ಯುಪಗಮಾಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

## ಭಾವದೀಪದ ವೈಶಿಷ್ಟ್ಯ

* ಯಾರೂ ಕಾರಣರಿಲ್ಲದೇ ಜಗತ್ತು ಹೇಗೆ ಹುಟ್ಟಲು ಸಾಧ್ಯ ? ಎಂಬ ಪ್ರಶ್ನೆಗೆ, ಧಾನ್ಯಾದಿಗಳಿಂದ ಸಹಜವಾಗಿ ಸುರೆಯು ಹೇಗೆ ಹುಟ್ಟುತ್ತದೋ, ಅದರಂತೆ ಎಂಬ ದೃಷ್ಟಾಂತವು ಸಮಂಜಸವಾಗಿದೆ.
* 'ಕಿಂ ಪ್ರಯೋಜನಂ' ಎಂಬ ಭಾಷ್ಯದಲ್ಲಿರುವ 'ಕಿಂ' ಶಬ್ದಕ್ಕೆ ಪ್ರಶ್ನಾರ್ಥ ಹಾಗೂ ಆಕ್ಷೇಪಾರ್ಥತ್ವವನ್ನು ಹೇಳಲಾಗಿದೆ.
* ಭಾಷ್ಯದಲ್ಲಿರುವ ಅಧರ್ಮ ಶಬ್ದದಿಂದ ಸ್ವರ್ಗಾದಿಗಳು ಎಂದರ್ಥ ಎಂಬುದನ್ನು ಟೀಕೆಯಿಂದ ಸಮರ್ಥಿಸಿದ್ದಾರೆ.
* ಅಭ್ಯುಪಗಮೇಽಪ್ಯರ್ಥಾಭಾವಾತ್' ಎಂಬ ಸೂತ್ರಕ್ಕೆ ಆರು ಅರ್ಥಗಳನ್ನು ಹೇಳಿದ್ದಾರೆ. ೧. ಅಭ್ಯುಪಗಮೇಽಪಿ = ನಿನ್ನ ಸಿದ್ಧಾಂತದಲ್ಲೂ ಕೂಡ, ಅರ್ಥಾಭಾವಾತ್ = ಅದೃಷ್ಟವಾದ ಪ್ರಯೋಜನವನ್ನು ಒಪ್ಪದಿರುವುದರಿಂದ ಅದೃಷ್ಟಪ್ರಯೋಜನವಿಲ್ಲ.

  ೨. ಅರ್ಥಾಭಾವಾತ್ = ಶಾಸ್ತ್ರದಿಂದ ದೃಷ್ಟಪ್ರಯೋಜನವು ದೊರಕದ ಕಾರಣ, ಅಭ್ಯುಪಗಮೇ = ನಿನ್ನ ಸಿದ್ಧಾಂತದಲ್ಲಿ, ಅಪಿ = ದೃಷ್ಟಪ್ರಯೋಜನವೂ ಇಲ್ಲ.

  ೩. ಅಭ್ಯುಪಗಮೇಽಪಿ = ಲೋಕೋಪಕಾರವೇ ಫಲವಾಗಿವೆ ಎಂದು ಅಂಗೀಕರಿಸಿದರೂ, ಅರ್ಥಾಭಾವಾತ್ = ಶಾಸ್ತ್ರಕ್ಕೆ ಲೋಕೋಪಕಾರವೆಂಬ ಪ್ರಯೋಜನವಿಲ್ಲದ್ದರಿಂದ ಅದರಿಂದ ಅನರ್ಥವೇ ಆಗುವುದರಿಂದ ಲೋಕೋಪಕಾರವೂ ಕೂಡ ಫಲವಾಗುವುದಿಲ್ಲ.

  ೪. ಅಭ್ಯುಪಗಮೇಽಪಿ = ಉಪಕಾರ ಮಾಡುವುದೇ ಪ್ರಯೋಜನವೆಂದು ಅಂಗೀಕರಿಸಿದರೂ, ಅರ್ಥಾಭಾವಾತ್ = ಅದೃಷ್ಟವಾದದ್ದನ್ನು ಅಂಗೀಕರಿಸದ ಕಾರಣ ಪ್ರತ್ಯುಪಕಾರವನ್ನು ಯಾರೂ ಮಾಡುವುದಿಲ್ಲ. ಆದ್ದರಿಂದ ಲೋಕೋಪಕಾರವು ಫಲವಾಗವುದಿಲ್ಲ.

೫. ಅಭ್ಯುಪಗಮೇಽಪಿ = ನಿನ್ನ ಸಿದ್ಧಾಂತವನ್ನು ಒಪ್ಪಿದರೂ, ಅರ್ಥಾಭಾವಾತ್ = ದೃಷ್ಟವಿಷಯ ಹಾಗೂ ಅದೃಷ್ಟವಿಷಯವು ಇಲ್ಲದ್ದರಿಂದ ವಿಷಯವನ್ನೇ ನಿರೂಪಣೆ ಮಾಡಲಾಗದು.

೬. ಅಭ್ಯುಪಗಮೇಽಪಿ = ನಿನ್ನ ಮತವನ್ನು ಸಿದ್ಧಾಂತವೆಂದು ಅಂಗೀಕಾರ ಮಾಡಿ, ಪ್ರಯೋಜನಾದಿಗಳು ಇಲ್ಲವೆಂದು ಅಂಗೀಕಾರ ಮಾಡಿದರೆ, ಅರ್ಥಾಭಾವಾತ್ = ಸ್ವವ್ಯಾಹತಿ ಬರುವುದರಿಂದ ಉಪೇಕ್ಷೆಗೆ ಅರ್ಹವಾಗಿದೆ.

* ಭಾಷ್ಯದಲ್ಲಿರುವ 'ಉಪೇಕ್ಷ್ಯಃ' ಎಂಬ ಪದದಿಂದ ಹಿಂದಿನ ಸೂತ್ರದಲ್ಲಿರುವ 'ನ' ಎಂಬುದನ್ನು ಈ ಸೂತ್ರದಲ್ಲೂ ಅನುವೃತ್ತಿ ಮಾಡಬೇಕೆಂದು ಸೂಚನೆ ಮಾಡಿದ್ದಾರೆ. ಇದನ್ನೇ 'ನಯುಕ್ತಂ' ಎಂಬ ಟೀಕೆಯಲ್ಲೂ ಹೇಳಿದ್ದಾರೆ.

**।। श्रीजानकीवदनाम्भोजराजहंसाय रामचन्द्राय नमः ।।**

**।। श्री गुरुभ्यो नमः ।।**

**श्री राघवेन्द्रतीर्थविरचिता**

# तन्त्रदीपिका

**अभ्युपगमाधिकरणम्-३**

अभुपगमेऽप्यर्थाभावात् ।।२-२-६।।

अत्र श्रुत्यप्रामण्यान्न मे प्रागुक्तदोष इति प्राप्तं चार्वाकमतं निरस्यते । नेत्यस्ति । अर्थशब्दो विषयप्रयोजनपरः । त्वदीयशास्त्रस्य सिद्धान्तत्वमुपगम्यते न वा । अन्त्येऽस्मदिष्यम् । आद्ये विषयप्रयोजनवत्त्वं नोपेयते उतोपेयते । नाद्यः । अभ्युपगमेऽपि सिद्धान्तत्वाऽभ्युपगमेऽपि तद्व्यापकयोरर्थयोरभावाऽभ्युपगमाद् व्याहत्यापातात् । नान्त्यः, दृष्टादृष्टयोर्विषयप्रयोजनयोरभावान्न युक्तं तन्मतमित्यर्थः ।।३।।

ವೇದ ಅಪ್ರಮಾಣವಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಹೇಳಿದ ಯಾವುದೇ ದೋಷ ನಮಗೆ ಬರುವುದಿಲ್ಲ ಎಂದು ಚಾರ್ವಾಕನು ಕೇಳುತ್ತಾನೆ. ಇವನ ಮತವನ್ನು ಈ ಅಭ್ಯುಪಗಮಾಧಿಕರಣದಲ್ಲಿ ನಿರಾಕರಣೆ ಮಾಡಲಾಗುತ್ತಿದೆ.

ಸೂತ್ರದಲ್ಲಿ 'ನ' ಎಂಬುದನ್ನು ಅನುವೃತ್ತಿ ಮಾಡಬೇಕು. ಅರ್ಥ ಎಂಬ ಶಬ್ದಕ್ಕೆ ವಿಷಯ ಮತ್ತು ಪ್ರಯೋಜನ ಎಂಬೆರಡರ್ಥವನ್ನು ವಿವಕ್ಷಿಸಬೇಕು. ನಿನ್ನ ಶಾಸ್ತ್ರವು ಸಿದ್ಧಾಂತವಾಗಿದೆ ಎಂಬುದಾಗಿ ನೀನು ಅಂಗೀಕಾರ ಮಾಡುತ್ತೀಯೋ ಇಲ್ಲವೋ ? ಮಾಡುವುದಿಲ್ಲ ಎಂದರೆ ನಮಗೆ ಇಷ್ಟಾಪತ್ತಿ. ಸಿದ್ಧಾಂತವೆಂದು ಅಂಗೀಕರಿಸುವುದಾದರೆ ಪುನಃ ಪ್ರಶ್ನಿಸುತ್ತೇವೆ. ವಿಷಯಪ್ರಯೋಜನಗಳನ್ನು ಅಂಗೀಕಾರ ಮಾಡುವುದಿಲ್ಲವೋ, ಅಥವಾ ಅಂಗೀಕಾರ ಮಾಡುವಿಯೋ? ಮೊದಲನೆಯ ಪಕ್ಷ ತಪ್ಪು. ವಿಷಯಪ್ರಯೋಜನಗಳಿಲ್ಲವೆಂದು ಅಂಗೀಕಾರ ಮಾಡುವುದಾದರೆ, ಅಭ್ಯುಪಗಮೇಽಪಿ = ನಿನ್ನ ಶಾಸ್ತ್ರವು ಸಿದ್ಧಾಂತವೆಂದು ಒಪ್ಪಿದರೆ, ಅರ್ಥಾಭಾವಾತ್ = ಸಿದ್ಧಾಂತತ್ವಕ್ಕೆ ವ್ಯಾಪಕವಾದ ವಿಷಯ ಮತ್ತು ಪ್ರಯೋಜನಗಳು ಇಲ್ಲವೆಂದು ಒಪ್ಪಿರುವುದರಿಂದ, ವ್ಯಾಹತಿದೋಷವು ಬಂದೀತು. ಎರಡನೆಯ ಪಕ್ಷವೂ ಕೂಡ ತಪ್ಪು. ಏಕೆಂದರೆ ಚಾರ್ವಾಕನ ಶಾಸ್ತ್ರಕ್ಕೆ ದೃಷ್ಟವಾದ ವಿಷಯಪ್ರಯೋಜನಗಳು ಅಥವಾ ಅದೃಷ್ಟವಾದ ವಿಷಯಪ್ರಯೋಜನಗಳು ಇರುವುದಿಲ್ಲ. ಆದ್ದರಿಂದ ಚಾರ್ವಾಕಮತವು ಅಯುಕ್ತವಾಗಿದೆ.

ವಿವರಣೆ - ಚಾರ್ವಾಕನು ತನ್ನ ಶಾಸ್ತ್ರಕ್ಕೆ ವಿಷಯಪ್ರಯೋಜನಾದಿಗಳನ್ನು ಅಂಗೀಕಾರ ಮಾಡದಿದ್ದರೆ ವ್ಯಾಹತಿ ದೋಷವು ಬರುತ್ತದೆ. ಏಕೆಂದರೆ ಯಾವುದೇ ಒಂದು ಮತವು ಸಿದ್ಧಾಂತ ಎಂದು ಕರೆಸಿಕೊಳ್ಳಬೇಕಾದರೆ ವಿಷಯಪ್ರಯೋಜನಗಳು ಇರಬೇಕು. ಸಿದ್ಧಾಂತತ್ವವು ವಿಷಯಪ್ರಯೋಜನಗಳಿಂದ ವ್ಯಾಪ್ತವಾಗಿದೆ. ವಿಷಯಪ್ರಯೋಜನಗಳೆಂಬ ವ್ಯಾಪಕವು ಇಲ್ಲದೇ ಸಿದ್ಧಾಂತತ್ವವೆಂಬ ವ್ಯಾಪ್ಯವು ಇರಲು ಸಾಧ್ಯವಿಲ್ಲ. ಒಂದು ವೇಳೆ ಚಾರ್ವಾಕನು ತನ್ನ ಶಾಸ್ತ್ರದಲ್ಲಿ ವಿಷಯಪ್ರಯೋಜನಾದಿಗಳು ಇದೆಯೆಂದು ಒಪ್ಪಿದರೆ ಆ ವಿಷಯ ಪ್ರಯೋಜನಗಳು ದೃಷ್ಟವಿಷಯಕವೋ? ಅದೃಷ್ಟ ವಿಷಯಕವೋ ? ದೃಷ್ಟವಾದ ವಿಷಯಾದಿಗಳನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಶಾಸ್ತ್ರವು ಅನಾವಶ್ಯಕ. ಅದೃಷ್ಟವಾದ ಯಾವುದೇ ಪದಾರ್ಥವನ್ನೇ ಒಪ್ಪದ ಕಾರಣ ಅದೃಷ್ಟಪ್ರಯೋಜನವೂ ಕೂಡ ಇರಲು ಸಾಧ್ಯವಿಲ್ಲ. ಆದ್ದರಿಂದ ಚಾರ್ವಾಕಮತವು ಅತ್ಯಂತ ಅಯುಕ್ತವಾಗಿದೆ. ಇಷ್ಟು 'ಅಭ್ಯುಪಗಮೇಽಪಿ ಅರ್ಥಾಭಾವಾತ್' ಎಂಬ ಸೂತ್ರದ ಅಭಿಪ್ರಾಯ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಅಭ್ಯುಪಗಮಾಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಪುರುಷಾರ್ಥಾಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ವೇದ ಅಪ್ರಮಾಣವಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಹೇಳಿದ ಯಾವುದೇ ದೋಷ ನಮಗೆ ಬರುವುದಿಲ್ಲ ಎಂದು ಚಾರ್ವಾಕನು ಕೇಳುತ್ತಾನೆ. ಇವನ ಮತವನ್ನು ಈ ಅಭ್ಯುಪಗಮಾಧಿಕರಣದಲ್ಲಿ ನಿರಾಕರಣೆ ಮಾಡಲಾಗುತ್ತಿದೆ.

ಸೂತ್ರದಲ್ಲಿ 'ನ' ಎಂಬುದನ್ನು ಅನುವೃತ್ತಿ ಮಾಡಬೇಕು. ಅರ್ಥ ಎಂಬ ಶಬ್ದಕ್ಕೆ ವಿಷಯ ಮತ್ತು ಪ್ರಯೋಜನ ಎಂಬೆರಡರ್ಥವನ್ನು ವಿವಕ್ಷಿಸಬೇಕು. ನಿನ್ನ ಶಾಸ್ತ್ರವು ಸಿದ್ಧಾಂತವಾಗಿದೆ ಎಂಬುದಾಗಿ ನೀನು ಅಂಗೀಕಾರ ಮಾಡುತ್ತೀಯೋ ಇಲ್ಲವೋ ? ಮಾಡುವುದಿಲ್ಲ ಎಂದರೆ ನಮಗೆ ಇಷ್ಟಾಪತ್ತಿ. ಸಿದ್ಧಾಂತವೆಂದು ಅಂಗೀಕರಿಸುವುದಾದರೆ ಪುನಃ ಪ್ರಶ್ನಿಸುತ್ತೇವೆ. ವಿಷಯಪ್ರಯೋಜನಗಳನ್ನು ಅಂಗೀಕಾರ ಮಾಡುವುದಿಲ್ಲವೋ, ಅಥವಾ ಅಂಗೀಕಾರ ಮಾಡುವಿಯೋ? ಮೊದಲನೆಯ ಪಕ್ಷ ತಪ್ಪು. ವಿಷಯಪ್ರಯೋಜನಗಳಿಲ್ಲವೆಂದು ಅಂಗೀಕಾರ ಮಾಡುವುದಾದರೆ, ಅಭ್ಯುಪಗಮೇಽಪಿ = ನಿನ್ನ ಶಾಸ್ತ್ರವು ಸಿದ್ಧಾಂತವೆಂದು ಒಪ್ಪಿದರೆ, ಅರ್ಥಾಭಾವಾತ್ = ಸಿದ್ಧಾಂತತ್ವಕ್ಕೆ ವ್ಯಾಪಕವಾದ ವಿಷಯ ಮತ್ತು ಪ್ರಯೋಜನಗಳು ಇಲ್ಲವೆಂದು ಒಪ್ಪಿರುವುದರಿಂದ, ವ್ಯಾಹತಿದೋಷವು ಬಂದೀತು. ಎರಡನೆಯ ಪಕ್ಷವೂ ಕೂಡ ತಪ್ಪು. ಏಕೆಂದರೆ ಚಾರ್ವಾಕನ ಶಾಸ್ತ್ರಕ್ಕೆ ದೃಷ್ಟವಾದ ವಿಷಯಪ್ರಯೋಜನಗಳು ಅಥವಾ ಅದೃಷ್ಟವಾದ ವಿಷಯ-ಪ್ರಯೋಜನಗಳು ಇರುವುದಿಲ್ಲ. ಆದ್ದರಿಂದ ಚಾರ್ವಾಕಮತವು ಅಯುಕ್ತವಾಗಿದೆ.

ವಿವರಣೆ - ಚಾರ್ವಾಕನು ತನ್ನ ಶಾಸ್ತ್ರಕ್ಕೆ ವಿಷಯಪ್ರಯೋಜನಾದಿಗಳನ್ನು ಅಂಗೀಕಾರ ಮಾಡದಿದ್ದರೆ ವ್ಯಾಹತಿ ದೋಷವು ಬರುತ್ತದೆ. ಏಕೆಂದರೆ ಯಾವುದೇ ಒಂದು ಮತವು ಸಿದ್ಧಾಂತ ಎಂದು ಕರೆಸಿಕೊಳ್ಳಬೇಕಾದರೆ ವಿಷಯಪ್ರಯೋಜನಗಳು ಇರಬೇಕು. ಸಿದ್ಧಾಂತತ್ವವು ವಿಷಯಪ್ರಯೋಜನಗಳಿಂದ ವ್ಯಾಪ್ತವಾಗಿದೆ. ವಿಷಯಪ್ರಯೋಜನಗಳೆಂಬ ವ್ಯಾಪಕವು ಇಲ್ಲದೇ ಸಿದ್ಧಾಂತತ್ವವೆಂಬ ವ್ಯಾಪ್ಯವು ಇರಲು ಸಾಧ್ಯವಿಲ್ಲ. ಒಂದು ವೇಳೆ ಚಾರ್ವಾಕನು ತನ್ನ ಶಾಸ್ತ್ರದಲ್ಲಿ ವಿಷಯಪ್ರಯೋಜನಾದಿಗಳು ಇದೆಯೆಂದು ಒಪ್ಪಿದರೆ ಆ ವಿಷಯ ಪ್ರಯೋಜನಗಳು ದೃಷ್ಟವಿಷಯಕವೋ? ಅದೃಷ್ಟ ವಿಷಯಕವೋ ? ದೃಷ್ಟವಾದ ವಿಷಯಾದಿಗಳನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಶಾಸ್ತ್ರವು ಅನಾವಶ್ಯಕ. ಅದೃಷ್ಟವಾದ ಯಾವುದೇ ಪದಾರ್ಥವನ್ನೇ ಒಪ್ಪದ ಕಾರಣ ಅದೃಷ್ಟಪ್ರಯೋಜನವೂ ಕೂಡ ಇರಲು ಸಾಧ್ಯವಿಲ್ಲ. ಆದ್ದರಿಂದ ಚಾರ್ವಾಕಮತವು ಅತ್ಯಂತ ಅಯುಕ್ತವಾಗಿದೆ. ಇಷ್ಟು 'ಅಭ್ಯುಪಗಮೇಽಪಿ ಅರ್ಥಾಭಾವಾತ್' ಎಂಬ ಸೂತ್ರದ ಅಭಿಪ್ರಾಯ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಅಭ್ಯುಪಗಮಾಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಪುರುಷಾರ್ಥಾಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಪುರುಷಾಶ್ಮಾಧಿಕರಣ

## ಬ್ರಹ್ಮಸೂತ್ರ

### ब्रह्मसूत्रम् – पुरुषाश्मवदिति चेत्तत्रापि ॥

ಶರೀರವು ಜಡವಾಗಿದೆ ಆದರೂ ಚೇತನನ ಸಂಪರ್ಕದಿಂದ ಕಲ್ಲು ಮೊದಲಾದ ವಸ್ತುಗಳನ್ನು ಹೊತ್ತು ತರುವಂತೆ ಜಡವಾದ ಪ್ರಕೃತಿಯೇ ಈಶ್ವರನ ಸಂಪರ್ಕದಿಂದ ಸೃಷ್ಟಿಕಾರ್ಯವನ್ನು ಮಾಡುತ್ತದೆ ಎಂದು ಹೇಳಬಾರದು.

ಶಾರೀರಿಕ ಕ್ರಿಯೆಯು ಕೇವಲ ಚೇತನನ ಸಂಪರ್ಕದಿಂದಷ್ಟೇ ಆಗುತ್ತಿರುವುದಲ್ಲ. ಹೊರತಾಗಿ 'ನ ಋತೇ ತ್ವತ್ ಕ್ರೀಯತೇ' ಎಂಬ ಶ್ರುತಿಯಂತೆ ಪರಮಾತ್ಮನಿಂದಲೇ ಶಾರೀರಿಕ ಕ್ರಿಯೆಯು ನಡೆಯುತ್ತಿದೆ. ಆದ್ದರಿಂದ ದೃಷ್ಟಾಂತವೇ ಸರಿಯಿಲ್ಲ.

ಪುರುಷಾಶ್ಮವತ್ = ಯಾವರೀತಿಯಾಗಿ ಅಚೇತನವಾದ ಶರೀರವು ಚೇತನನ ಸಂಬಂಧದಿಂದ ಕಲ್ಲು ಮೊದಲಾದವುಗಳ ತರುವಿಕೆಯಲ್ಲಿ ಪ್ರವೃತ್ತಿಯನ್ನು ಮಾಡುತ್ತದೋ, ಅದರಂತೆ ಅಚೇತನವಾದ ಪ್ರಕೃತಿಯು ಚೇತನನಾದ ಈಶ್ವರನ ಸಂಬಂಧದಿಂದ ಜಗತ್ತಿನ ಸೃಷ್ಟಿಪ್ರಕ್ರಿಯೆಯಲ್ಲಿ ತೊಡಗುತ್ತದೆ. ಇತಿ ಚೇತ್ ನ = ಹೀಗೆ ಹೇಳಬಾರದು. ಏಕೆಂದರೆ ತತ್ರಾಪಿ = ಶರೀರಪ್ರವೃತ್ತಿಯಲ್ಲಿಯೂ ಚೇತನನಾದ ಈಶ್ವರನೇ ಕರ್ತೃವಾಗಿದ್ದಾನೆ. ಆದ್ದರಿಂದ ದೃಷ್ಟಾಂತವೈಷಮ್ಯವಿದೆ. ಆದ್ದರಿಂದ ಸೇಶ್ವರಸಾಂಖ್ಯರು ಹೇಳುವ ಪ್ರಕೃತಿಯೇ ಜಗತ್‌ಕರ್ತೃತ್ವವಾಗುವುದು ಅಸಾಧುವಾಗಿದೆ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

ನಿರೀಶ್ವರಸಾಂಖ್ಯರ ಏಕದೇಶಗಳ ಮತ ನಿರಾಕರಣೆಗಾಗಿ ಈ ಅಧಿಕರಣ

**ब्रह्मसूत्रभाष्यम् – पुरुषोपसर्जनप्रकृतिकर्तृवादमपाकरोति –**

**।। पुरुषाश्मवदिति चेत् तथाऽपि ।।१।।**

**यथा चेतनसम्बन्धादचेतनमेव शरीरमश्मादिकमादाय गच्छति एवमचेतनाऽपि प्रकृतिः पुरुषसम्बन्धात् प्रवर्तत इति चेन्न । 'न ऋते त्वत्क्रियते' इति तत्रापि तथात्वे दृष्टान्ताभावात् ।।१।।**

ಅನುವಾದ - ಜಗತ್ತಿನ ಸೃಷ್ಟಿಯ ವಿಷಯದಲ್ಲಿ ಚೇತನನು ಅಮುಖ್ಯನಾಗಿದ್ದಾನೆ. ಪ್ರಕೃತಿಯು ಮುಖ್ಯವಾಗಿದೆ. ಹೀಗೆ ಯಾವ ದಾರ್ಶನಿಕರು ಒಪ್ಪುತ್ತಾರೋ ಅಂಥ ಚೇತನದ ಸಂಬಂಧದಿಂದ ಅಚೇತನವಾದ ಶರೀರವು ಕಲ್ಲು ಮೊದಲಾದ ಭಾರ ವಸ್ತುಗಳನ್ನು ಹೊತ್ತು ನಡೆಯುತ್ತದೋ ಅದರಂತೆ ಪ್ರಕೃತಿಯು ಜಡವಾಗಿದ್ದರೂ ಪುರುಷನ ಸಂಬಂಧದಿಂದ ಜಗತ್ತಿನ ಸೃಷ್ಟಿಯನ್ನು ಮಾಡಲು ಸಮರ್ಥವಾಗಿರುತ್ತದೆ. ಹೀಗೆ ನಿರೀಶ್ವರಸಾಂಖ್ಯರು ಹೇಳುತ್ತಾರೆ. ಇದು ತಪ್ಪು.

'ನ ಋತೇ ತ್ವತ್ಕ್ರಿಯತೇ' ಎಂಬ ಶ್ರುತಿ ಪ್ರಮಾಣದಂತೆ ಪರಮಾತ್ಮನ ಪ್ರೇರಣೆಯಿಲ್ಲದೆ ಜಗತ್ತಿನ ಸೃಷ್ಟಿಯು ನಡೆಯಲು ಸಾಧ್ಯವಿಲ್ಲ. ಶರೀರದ ಪ್ರವೃತ್ತಿಯಲ್ಲಿಯೂ ಪರಮಾತ್ಮನ ಪ್ರೇರಣೆ ಬೇಕು. ಪುರುಷನು ಗೌಣವಾಗಿದ್ದಾನೆ, ಜಡವಾದ ಪ್ರಕೃತಿಯು ಪ್ರಧಾನವಾಗಿದೆ. ಇದರಿಂದ ಸೃಷ್ಟಿಯು ನಡೆಯುತ್ತದೆ ಎನ್ನಲು ಯಾವುದೇ ದೃಷ್ಟಾಂತವಿರುವುದಿಲ್ಲ. ಮತ್ತು ಪರಮಾತ್ಮನ ಪ್ರೇರಣೆಯಿಲ್ಲದೆ ಯಾವುದೇ ಪ್ರವೃತ್ತಿಯೂ ಕೂಡ ನಡೆಯುತ್ತಿದೆ ಎನ್ನಲು ಲೋಕದಲ್ಲಿ ದೃಷ್ಟಾಂತವಿಲ್ಲ.

ಪ್ರತಿಪದಾರ್ಥ -- ಪುರುಷೋಪಸರ್ಜನಪ್ರಕೃತಿಕರ್ತೃವಾದಮ್ = ಚೇತನನಾದ ಪುರುಷನು ಗೌಣವಾಗಿದ್ದಾನೆ. ಅಚೇತನವಾದ ಪ್ರಕೃತಿಯು ಪ್ರಧಾನವಾಗಿದೆ. ಈ ಪ್ರಕೃತಿಯೇ ಜಗತ್ತಿಗೆ ಕಾರಣವಾಗಿದೆ ಎಂಬ ನಿರೀಶ್ವರಸಾಂಖ್ಯಮತವನ್ನು, ಅಪಾಕರೋತಿ = ನಿರಾಕರಣೆ ಮಾಡುತ್ತಿದ್ದಾರೆ.

ಯಥಾ = ಯಾವರೀತಿಯಾಗಿ, ಅಚೇತನಮೇವ = ಜಡವೇ ಆಗಿರುವ, ಶರೀರಮ್ = ಶರೀರವು, ಚೇತನಸಂಬಂಧಾತ್ = ಜೀವನ ಸಂಪರ್ಕದಿಂದ, ಅಶ್ಮಾದಿಕಮಾದಾಯ = ಕಲ್ಲು ಮೊದಲಾದ ಪದಾರ್ಥಗಳನ್ನು ಎತ್ತಿಕೊಂಡು, ಗಚ್ಛತಿ = ಹೋಗುತ್ತದೋ, ಏವಂ = ಅದೇ ರೀತಿಯಾಗಿ, ಪ್ರಕೃತಿಃ = ಪ್ರಕೃತಿಯು, ಅಚೇತನಾऽಪಿ = ಜಡವಾಗಿದ್ದರೂ, ಪುರುಷಸಂಬಂಧಾತ್ = ಚೇತನಸಂಬಂಧದಿಂದ, ಪ್ರವರ್ತತೇ = ಜಗತ್ತಿನ ಸೃಷ್ಟಿಸಂಬಂಧದಲ್ಲಿ ತೊಡಗುತ್ತದೆ. ಇತಿ ಚೇತ್ = ಹೀಗೆ ನಿರೀಶ್ವರಸಾಂಖ್ಯವಾದಿಗಳು ಹೇಳುವುದು, ನ = ತಪ್ಪು.

ಏಕೆಂದರೆ 'ನ ಋತೇ ತ್ವತ್ಕ್ರಿಯತೇ ಇತಿ' = ಶ್ರೀಹರಿಯನ್ನು ಬಿಟ್ಟು ಯಾರಲ್ಲಿಯೂ ಕರ್ತೃತ್ವ ಇಲ್ಲವೆಂದು ಶ್ರುತಿ ಹೇಳುತ್ತಿರುವುದರಿಂದ, ತತ್ರಾಪಿ = ಶರೀರದ ಪ್ರವೃತ್ತಿಯಲ್ಲಿಯೂ, ತಥಾತ್ವೇ = ಪರಮಾತ್ಮಾಧೀನತ್ವವು ಸಿದ್ಧವಾಗುತ್ತದೆ. ದೃಷ್ಟಾಂತಾಭಾವಾತ್ = ಚೇತನನು ಗೌಣವಾಗಿ ಜಡವು ಪ್ರಧಾನವಾಗಿ ಸೃಷ್ಟಿಯು ನಡೆಯುತ್ತದೆನ್ನಲು ಯಾವುದೇ ದೃಷ್ಟಾಂತ ಇರುವುದಿಲ್ಲ.

### ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

### ಪ್ರತಿಯೊಂದರ ಪ್ರವೃತ್ತಿಯೂ ಈಶ್ವರನ ಪ್ರೇರಣೆ ಆವಶ್ಯಕ

**सत्तर्कदीपावळिः – निरीश्वरसाङ्ख्यैकदेशमतम् अनूद्य दूषयति । पुरुषेत्यादिना । जगदुत्पत्तौ केवलप्रधानस्य प्रवृत्त्यसम्भवेऽपि पुरुषसम्बन्धात्प्रवृत्तिर्युज्यते । चेतनसम्बन्धादचेतनस्यैव घटादिनिष्पत्तौ प्रवृत्तिदर्शनादिति वाच्यम् । य आत्मानमन्तरो यमयतीत्यादिश्रुतौ जीवप्रवृत्तेः भगवत्कारितत्वश्रवणेन तदप्रेरितप्रवृत्तौ दृष्टान्ताभावात् ।**

ನಿರೀಶ್ವರಸಾಂಖ್ಯರಲ್ಲೇ ಏಕದೇಶಿಗಳ ಮತವನ್ನು ಅನುವಾದ ಮಾಡಿ ದೂಷಣೆ ಮಾಡಲು 'ಪುರುಷೋಪಸರ್ಜನ' ಇತ್ಯಾದಿ ಭಾಷ್ಯವು ಹೊರಟಿದೆ. ಜಗತ್ತನ್ನು ಸೃಷ್ಟಿ ಮಾಡಲು ಕೇವಲ ಜಡಭೂತವಾದ ಪ್ರಕೃತಿಗೆ ಸಾಧ್ಯವಿಲ್ಲ. ಆದರೂ ಕೂಡ ಪುರುಷನ ಸಂಬಂಧದಿಂದ ಪ್ರವೃತ್ತಿ ಮಾಡಬಹುದು. ಚೇತನನ ಸಂಬಂಧದಿಂದ ಅಚೇತನವಾದ ಶರೀರವು ಘಟಪಟಾದಿಗಳನ್ನು ಸೃಷ್ಟಿ ಮಾಡುವುದು ಕಂಡಿದೆ.

ಇದು ತಪ್ಪು. 'ಯ ಆತ್ಮಾನಮಂತರೋ ಯಮಯತಿ' ಇತ್ಯಾದಿ ಶ್ರುತಿಗಳಲ್ಲಿ ಜೀವಪ್ರವೃತ್ತಿಯೂ ಕೂಡ ಭಗವದಧೀನವೆಂದು ಹೇಳಲಾಗಿದೆ. ಭಗವಂತನ ಪ್ರೇರಣೆಯಿಲ್ಲದೇ ಯಾರಿಂದಲೂ ಯಾವ ಪ್ರವೃತ್ತಿಯೂ ಕೂಡ, ಸಾಧ್ಯವೇ ಇಲ್ಲ. ಆ ವಿಷಯದಲ್ಲಿ ದೃಷ್ಟಾಂತವೇ ಇರುವುದಿಲ್ಲ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

### ಅಧಿಕರಣಗಳ ಸಂಗತಿ ಸಂಗ್ರಹ

**तत्वप्रदीपः – अचेतनमेव प्रवर्तत इति प्रथमतः प्रत्यादिष्टम् । अचेतनमेव भूतचतुष्कं संयोगविशेषाच्चेतनीभूय प्रवर्तते मदिराद्रव्यवत् । तदपाये पुनरचेतनीभवतीत्यनन्तरमपोहितम् । सम्प्रति यद्यप्यचेतनमेव कर्तृ तथाऽपि तदङ्गभूतचेतनः कश्चिदस्तीत्येतन्मतमपास्यति । पुरुषाश्मवदिति चेत्तथाऽपि ॥**

ಅಚೇತನವೇ ಸ್ವತಃ ಪ್ರವೃತ್ತಿ ಮಾಡುತ್ತದೆಂದು ಮೊದಲು ಹೇಳಿದರು. ಅದರ ನಿರಾಕರಣೆಯನ್ನೂ ಕೂಡ ಅಲ್ಲಿಯೇ ಮಾಡಲಾಯಿತು. ಅನಂತರ ಮದಿರದ್ರವ್ಯವು ಹೇಗೆ ಸ್ವತಃ ಧಾನ್ಯದಿಂದ ಹುಟ್ಟುತ್ತದೋ, ಅದರಂತೆ ಅಚೇತನವೇ ಆದ ನಾಕು ಭೂತಗಳ ಸಂಯೋಗವಿಶೇಷದಿಂದ ಚೇತನವು ಪ್ರವೃತ್ತಿ ಮಾಡುತ್ತದೆ. ಪ್ರವೃತ್ತಿಯ ಅನಂತರ ಪುನಃ ಅಚೇತನವಾಗಿ ಉಳಿಯುತ್ತವೆ ಎಂಬ ಮತವನ್ನು ನಿರಾಕರಣೆ ಮಾಡಲಾಯಿತು.

ಪ್ರಕೃತ ಅಚೇತನವೇ ಕರ್ತೃವಾಗಿದೆ ಎಂಬುದು ವಾಸ್ತವ. ಆದರೂ ಅದಕ್ಕೆ ಅಂಗಭೂತವಾದ ಯಾವುದೋ ಒಂದು ಚೇತನವಿದೆ ಎಂಬ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ಅದಕ್ಕಾಗಿ 'ಪುರುಷಾಶ್ಮವದಿತಿ ಚೇತ್ ತಥಾऽಪಿ' ಎಂಬ ಸೂತ್ರವು ಹೊರಟಿದೆ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

ಜೀವಸಹಿತವಾದ ಪ್ರಕೃತಿಯು ಜಗತ್ತಿಗೆ ಕಾರಣವೆಂಬ ಮತ ನಿರಾಕರಣೆ

**तत्वप्रकाशिका – अधिकरणप्रतिपाद्यं दर्शयति – पुरुषेति ।। अत्र विष्णोः सर्वकर्तृत्वे निरीश्वरसाङ्ख्यैकदेशमतविरोधपरिहारादस्ति शास्त्रादिसङ्गतिः । विष्णोर्जगत्कारणत्वमुक्तम् । तत्रैव मतविरोधेऽसम्भवप्राप्तेरवश्यनिरसनीयं तद्भवति । ईश्वरस्य जगत्कारणत्वं विषयः । युक्तमयुक्तं वेति सन्देहः । समयविप्रतिपत्तिः सन्देहबीजम्।**

ಈ ಅಧಿಕರಣದಿಂದ ಪ್ರತಿಪಾದ್ಯವಾದ ಪ್ರಮೇಯವನ್ನು ಭಾಷ್ಯದಲ್ಲಿ 'ಪುರುಷೋಪಸರ್ಜನ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ವಿಷ್ಣುವಿನ ಸರ್ವಕರ್ತೃತ್ವಲಕ್ಷಣಕ್ಕೆ ನಿರೀಶ್ವರಸಾಂಖ್ಯೈಕದೇಶಿಗಳ ಮತದ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಲಾಯಿತು. ಈ ವಿಷಯದಲ್ಲಿ ಮತವಿರೋಧವು ಪ್ರಾಪ್ತವಾದಾಗ ಜಗತ್ಕಾರಣತ್ವವು ವಿಷ್ಣುವಿನಲ್ಲಿ ಅಸಂಗತವಾಗುತ್ತದೆ. ಆದ್ದರಿಂದ ಅವಶ್ಯವಾಗಿ ಈ ಮತವನ್ನು ನಿರಾಕರಣೆ ಮಾಡಲೇಬೇಕು.

ಈಶ್ವರನ ಜಗತ್ಕಾರಣತ್ವವೇ ಅಧಿಕರಣದ ವಿಷಯ. ಈಶ್ವರನಲ್ಲಿ ಜಗತ್ಕಾರಣತ್ವವು ಯುಕ್ತವೋ ಅಯುಕ್ತವೋ ? ಎನ್ನುವುದು ಸಂದೇಹ. ಸಮಯದ ವಿಪ್ರತಿಪತ್ತಿಯು ಸಂದೇಹಬೀಜ. .

ವಿವರಣೆ - ಸಾಂಖ್ಯಮತವು ಎರಡುವಿಧ - ೧) ಕೇವಲ ಅಚೇತನವು ಜಗತ್ತಿಗೆ ಕಾರಣ.

೨) ಚೇತನನಿಂದ ಸಹಿತವಾದ ಅಚೇತನವು ಜಗತ್ತಿಗೆ ಕಾರಣ ಎಂದು. ಈ ಎರಡು ಮತಗಳಲ್ಲಿ ಮೊದಲನೆಯದ್ದು ನಿರೀಶ್ವರಸಾಂಖ್ಯಮತ. ಇದನ್ನು ಮೊದಲನೆಯ ರಚನಾನುಪಪತ್ತ್ಯಧಿಕರಣದಲ್ಲಿ ನಿರಾಕರಣೆ ಮಾಡಿದ್ದಾಯಿತು.

ಎರಡನೆಯದು ಪುನಃ ಎರಡುವಿಧ - ೧) ಅಪ್ರಧಾನನಾದ ಈಶ್ವರನಿಂದ ಅನುಗೃಹೀತವಾಗಿ ಪ್ರಧಾನವು ಜಗತ್ತಿಗೆ ಕಾರಣ. ೨) ಜೀವನಿಂದ ಕೂಡಿದ ಪ್ರಧಾನವು ಜಗತ್ತಿಗೆ ಕಾರಣ ಎಂದು. ಈ ಎರಡು ಪಕ್ಷಗಳಲ್ಲಿ ಅಂತಿಮವಾಗಿ ನಿರೀಶ್ವರವಾದದಲ್ಲಿ ಪರ್ಯವಸಾನವಾಗುವ ಅಪ್ರಧಾನನಾದ ಈಶ್ವರನಿಂದ ಅನುಗ್ರಹಿಸ್ಪಟ್ಟ ಪ್ರಧಾನವು ಜಗತ್ತಿಗೆ ಕಾರಣವೆಂಬ ಮೊದಲನೆಯ ಮತವನ್ನು ಎರಡನೆಯ ಅನ್ಯತ್ರಾಭಾವಾಧಿಕರಣದಲ್ಲಿ ನಿರಾಕರಣೆ ಮಾಡಲಾಯಿತು.

ಇನ್ನು ಜೀವನಿಂದ ಕೂಡಿದ ಪ್ರಧಾನವು ಜಗತ್ತಿಗೆ ಕಾರಣವೆಂಬ ಎರಡನೆಯ ಪಕ್ಷ ಪುನಃ ಎರಡುವಿಧ. ೧) ಜೀವನು ಅಪ್ರಧಾನನಾಗಿದ್ದಾನೆ. ಪ್ರಕೃತಿಯೇ ಪ್ರಧಾನವಾಗಿದೆ. ೨) ಪ್ರಕೃತಿ ಅಪ್ರಧಾನ ಜೀವ ಪ್ರಧಾನವಾಗಿದ್ದಾನೆ ಎಂದು. ಈ ಎರಡು ಪಕ್ಷಗಳಲ್ಲಿ ಜೀವನು ಅಪ್ರಧಾನನಾಗಿದ್ದಾನೆಂಬುದು ನಿರೀಶ್ವರಸಾಂಖ್ಯಮತದ ಏಕದೇಶವೇ ಆಗಿರುವುದರಿಂದ ಇದು ಅತ್ಯಂತ ವಿರುದ್ಧವೇ ಆಗಿದೆ. ಆದ್ದರಿಂದ ಪ್ರಕೃತ ಈ ಪುರುಷಾರ್ಥಾಧಿಕರಣದಲ್ಲಿ ಇದನ್ನು ನಿರಾಕರಣೆ ಮಾಡುತ್ತಿದ್ದಾರೆ.

ಇಲ್ಲಿ ನಿರಾಕರಣೆ ಮಾಡಲ್ಪಟ್ಟ ಮತವು ಅತ್ಯಂತ ವಿರೋಧಿಯಾಗಿರುವುದರಿಂದ ರಚಾನಾನುಪತ್ಯಧಿಕರಣದಲ್ಲಿಯೇ ಈ ಅಧಿಕರಣವನ್ನು ಹೇಳಬೇಕಿತ್ತಲ್ಲವೆ?

ಈ ಪ್ರಶ್ನೆ ತಪ್ಪು. ಅಭ್ಯಧಿಕಾಶಂಕೆಗೆ ಅನುಗುಣವಾಗಿ ಅಧಿಕರಣಗಳ ಕ್ರಮವು ಯುಕ್ತಿಬದ್ಧವಾಗಿದೆ. ಅದು ಹೀಗೆ - ಪರಮಚೇತನನಾದ ಭಗವಂತನೇ ಸಕಲಕ್ಕೂ ಕಾರಣನಾಗಿದ್ದಾನೆಂದು ಹಿಂದೆ ಹೇಳಲಾಯಿತು. ಈ ತತ್ವಕ್ಕೆ ಜಡವಾದ ಪ್ರಕೃತಿಯೇ ಕಾರಣವೆಂಬ ವಾದವು ನೇರವಾಗಿ ವಿರೋಧಿಯಾಗಿರುವುದರಿಂದ ಮೊದಲು ಕೇವಲ ಪ್ರಕೃತಿಕರ್ತೃತ್ವವಾದವನ್ನು ನಿರಾಕರಣೆ ಮಾಡಿದರು. ಪುನಃ ಕೇವಲ ಅಚೇತನವು ಜಗತ್ತಿಗೆ ಕಾರಣವಾಗುವುದು ಬೇಡ ಈಶ್ವರನ ಅನುಗ್ರಹವುಳ್ಳ ಅಚೇತನವು ಜಗತ್ತಿಗೆ ಕಾರಣವಾಗಲಿ? ಎಂಬ ಆಶಂಕೆಯು ಪ್ರಾಪ್ತವಾದರೆ ಎರಡನೆಯ ಅನ್ಯತ್ರಾಭಾವಾಧಿಕರಣದಲ್ಲಿ ಅದನ್ನು ನಿರಾಕರಣೆ ಮಾಡಿದರು.

ಅಚೇತನಕ್ಕೆ ಕರ್ತೃತ್ವವನ್ನು ಒಪ್ಪವುದೇ ಬೇಡ. ಚೈತನ್ಯಾಶ್ರಯವಾದ ಶರೀರಕ್ಕೆ ಕರ್ತೃತ್ವವನ್ನು ಒಪ್ಪೋಣ ಎಂಬ ಆಶಂಕೆಯು ಪ್ರಾಪ್ತವಾದರೆ ಅಭ್ಯುಪಗಮಾಧಿಕರಣದಲ್ಲಿ ಈ ಮತವನ್ನು ನಿರಾಕರಣೆ ಮಾಡಿದರು. ಕೇವಲ ಅಚೇತನಕ್ಕೆ ಕರ್ತೃತ್ವವು ಯುಕ್ತವಾಗಿದ್ದರೂ

ಚೇತನಸಂಬಂಧದಿಂದ ಕರ್ತೃತ್ವವು ಯುಕ್ತವಾಗಬಹುದು. ಆದ್ದರಿಂದ ಈಶ್ವರನ ಆವಶ್ಯಕತೆ ಏಕೆ ? ಎಂಬ ಆಶಂಕೆಯು ಪ್ರಾಪ್ತವಾದರೆ ನಾಕನೆಯ ಈ ಪುರುಷಾಶ್ಮಾಧಿಕರಣವು ಹೊರಟಿದೆ. ಹೀಗೆ ಅಧಿಕರಣಗಳ ಕ್ರಮವು ಯುಕ್ತಿಯುಕ್ತವಾಗಿರುವುದರಿಂದ ಈ ಪುರುಷಾಶ್ಮಾಧಿಕರಣಕ್ಕೆ ಆನಂತರ್ಯಸಂಗತಿಯು ಅತ್ಯಂತ ಸಂಗತವಾಗಿದೆ (ವಾಕ್ಯಾರ್ಥಮುಕ್ತಾವಳಿ)

### ಪೂರ್ವಪಕ್ಷದ ವಿವರಣೆ

**ತತ್ವಪ್ರಕಾಶಿಕಾ – पूर्वपक्षस्य सूत्र एवोक्तत्वात्तदुपन्यस्य पूर्वपक्षांशं तावद्याचष्टे – पुरुषेति ।। न हरेर्जगत्कारणत्वं युक्तम् । प्रधानस्यैव कर्तृत्वेनेश्वरस्य वैयर्थ्यात् ।**

ಪೂರ್ವಪಕ್ಷವನ್ನು ಸೂತ್ರಕಾರರೇ ಹೇಳಿದ್ದಾರೆ. ಆದ್ದರಿಂದ ಸೂತ್ರವನ್ನು ಉಪನ್ಯಾಸ ಮಾಡಿ ಪೂರ್ವಪಕ್ಷದ ಭಾಗವನ್ನು (ಪುರುಷ) ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಶ್ರೀಹರಿಗೆ ಜಗತ್ಕಾರಣತ್ವವು ಕೂಡುವುದಿಲ್ಲ. ಪ್ರಕೃತಿಯೇ ಕರ್ತೃ ಎನಿಸಿರುವುದರಿಂದ ಈಶ್ವರನು ವ್ಯರ್ಥವಾಗುತ್ತಾನೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಭಾವದೀಪ

**भावदीपः – ।। पुरुषाश्मवदिति चेत्तथाति ।। ७ ।।** अचेतनापि प्रकृतिः प्रवर्तत इति भाष्यसूचितहेतुमाह – **प्रधानस्येति ।। कर्तृत्वेनेति ।।** स्वतः प्रवृत्तिमत्त्वेनेत्यर्थः ।

ಅಚೇತನವಾದರೂ ಕೂಡ ಪ್ರಕೃತಿಯು ಪ್ರವೃತ್ತಿ ಮಾಡುತ್ತದೆಂಬ ವಿಷಯದಲ್ಲಿ ಭಾಷ್ಯಸೂಚಿತವಾದ ಹೇತುವನ್ನು 'ಪ್ರಧಾನಸ್ಯ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ಕರ್ತೃತ್ವೇನ' ಎಂಬುದಕ್ಕೆ 'ಸ್ವತಃ ಪ್ರವೃತ್ತಿಯಿರುವುದರಿಂದ' ಎಂದರ್ಥ.

### ಅನುಮಾನದಿಂದ ಪೂರ್ವಪಕ್ಷದ ಸಮರ್ಥನೆ

**ತತ್ವಪ್ರಕಾಶಿಕಾ – अचेतनस्य स्वतःप्रवृत्तिर्दूषितेति चेन्न । केवलप्रधानस्य कारणत्वानुपपत्तावपि पुरुषोपसर्जनस्य तदुपपत्तेः । भवति चात्र प्रयोगः ।**

**'विप्रतिपन्ना प्रवृत्तिः पुरुषोपसर्जनाचेतननिमित्ता, प्रवृत्तित्वात्, अश्मानयनादिप्रवृत्तिवत्' इति ।**

ಅಚೇತನಕ್ಕೆ ಸ್ವತಃ ಪ್ರವೃತ್ತಿಯು ಕೂಡುವುದಿಲ್ಲವೆಂದು ಈಗಾಗಲೇ ದೂಷಣೆ ಮಾಡಿದ್ದೇವಲ್ಲವೆ?

ಹೀಗೆ ಪ್ರಶ್ನಿಸಬಾರದು. ಕೇವಲ ಪ್ರಕೃತಿಗೆ ಕಾರಣತ್ವವು ಅನುಪಪನ್ನವಾದರೂ ಪುರುಷನಿಂದ ಗೌಣವಾಗಿ ಅನುಗ್ರಹಿತವಾದ್ದರಿಂದ ಕೇವಲ ಪ್ರಕೃತಿಗೆ ಕಾರಣತ್ವವು ಯುಕ್ತವಾಗುತ್ತದೆ. ಆದ್ದರಿಂದ ಇಲ್ಲಿ ಹೀಗೆ ಅನುಮಾನವನ್ನು ಪ್ರಯೋಗ ಮಾಡುತ್ತೇವೆ - 'ವಿಪ್ರತಿಪನ್ನಾ ಪ್ರವೃತ್ತಿಃ, ಪುರುಷೋಪಸರ್ಜನಾಚೇತನನಿಮಿತ್ತಾ, ಪ್ರವೃತ್ತಿತ್ವಾತ್ ಅಶ್ಮಾನಯನಾದಿಪ್ರವೃತ್ತಿವತ್' ಕಲ್ಲು ಮೊದಲಾದವುಗಳ ತರುವಿಕೆಯೆಂಬ ಪ್ರವೃತ್ತಿಯು ಪ್ರವೃತ್ತಿಯಾಗಿದೆ. ಅಚೇತನನಿಮಿತ್ತವೂ ಆಗಿದೆ. ಅದರಂತೆ ವಿಪ್ರತಿಪನ್ನವಾದ ಪ್ರವೃತ್ತಿಯೂ ಕೂಡ ಪ್ರವೃತ್ತಿಯಾಗಿರುವುದರಿಂದ ಅಚೇತನನಿಮಿತ್ತವೇ ಆಗಿರಬೇಕೆಂದು ಅನುಮಾನ ಮಾಡುತ್ತೇವೆ.

**भावदीपः** – एवं पुरुषसम्बन्धादिति भाष्यमधिकाशङ्कोक्तिपरत्वेन व्याचष्टे – **अचेतनस्येत्यादिना ।।**

'ಪುರುಷಸಂಬಂಧಾತ್' ಎಂಬ ಭಾಷ್ಯವು ಅಧಿಕಾಶಂಕೆಯನ್ನು ಹೇಳಲು ಹೊರಟಿದೆ. ಇದನ್ನು ವ್ಯಾಖ್ಯಾನ ಮಾಡಲು 'ಅಚೇತನಸ್ಯ' ಇತ್ಯಾದಿ ಟೀಕಾಪಂಕ್ತಿಯು ಹೊರಟಿದೆ.

ಚೇತನ ಸಂಪರ್ಕವುಳ್ಳ ಜಡಶರೀರವು ಕಲ್ಲುತರುವಂತೆ ಜಗತ್ತಿನ ಸೃಷ್ಟಿ

**तत्वप्रकाशिका – न च दृष्टान्ते विवदितव्यम् । पुरुषसम्बन्धेनाचेतनस्यैव शरीरस्याश्मायादानादिप्रवृत्तिदर्शनात् । अतो जगजन्मादिकारणत्वलक्षणमीश्वरस्यैवेत्येतद्दूरोत्सारितमिति भावः । सिद्धान्तांशं व्याचष्टे – नेति।।**

ದೃಷ್ಟಾಂತದಲ್ಲಿ ವಿವಾದವಿಲ್ಲ. ಪುರುಷಸಂಬಂಧದಿಂದ ಅಚೇತನವಾದ ಶರೀರದಲ್ಲಿ ಕಲ್ಲು ತರುವಿಕೆ ಮೊದಲಾದ ಪ್ರವೃತ್ತಿಯು ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಜಗಜ್ಜನ್ಮಾದಿಕಾರಣತ್ವರೂಪವಾದ ಲಕ್ಷಣವು ಪರಮಾತ್ಮನದ್ದೇ ಎಂಬುದು ದೂರತೋಪಾಸ್ತವಾಗಿದೆ. ಇಷ್ಟು ಪೂರ್ವಪಕ್ಷಿಗಳ ಅಭಿಪ್ರಾಯ.

ಸೂತ್ರದಲ್ಲಿರುವ ಸಿದ್ಧಾಂತಭಾಗವನ್ನು 'ನ ಋತೇ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – यथेत्यादिभाष्यमवतार्य व्याचष्टे॥ **न चेत्यादिना ।। अत इति ।।** पुरुषोपसर्जनप्रकृतेरेव स्वतः प्रवृत्त्युपपत्त्या ईश्वरवैयर्थ्यादित्यर्थः। युक्तिप्राबल्यादेव च प्रागुक्तश्रुत्यादिगुणभूतपुरुषविषयमिति भावः॥

'ಯಥಾ' ಇತ್ಯಾದಿ ಭಾಷ್ಯಕ್ಕೆ ಅವತಾರಿಕೆ ನೀಡಿ, ವ್ಯಾಖ್ಯಾನ ಮಾಡಲು 'ನ ಚ' ಇತ್ಯಾದಿ ವಾಕ್ಯವು ಹೊರಟಿದೆ. 'ಅತಃ' ಎಂಬ ಪದಕ್ಕೆ ಪುರುಷವು ಗೌಣವಾಗಿ ಪ್ರಕೃತಿಯೇ ಪ್ರಧಾನವಾಗಿ ಸ್ವತಃ ಪ್ರವೃತ್ತಿಯು ಮಾಡುತ್ತದೆ. ಹೀಗೆ ಹೇಳಿದರೆ ಈಶ್ವರನನ್ನು ಒಪ್ಪುವುದೇ ವ್ಯರ್ಥವಾಗುತ್ತದೆ. ಆ ಕಾರಣದಿಂದ ಎಂದರ್ಥ. ಈ ಪಕ್ಷದಲ್ಲಿ ಯುಕ್ತಿಯೇ ಪ್ರಬಲವಾಗುವುದರಿಂದ ಹಿಂದೆ ಹೇಳಿದ ಶ್ರುತಿಯು ಗೌಣವಾದ ಪುರುಷವಿಷಯಕವಾಗಿದೆ ಎಂದು ವ್ಯಾಖ್ಯಾನ ಮಾಡಬಹುದು.

## ಪರಮಾತ್ಮನೊಬ್ಬನೇ ಜಗತ್ಕಾರಣನು

**तत्वप्रकाशिका –युक्तमेव विष्णोः सर्वकर्तृत्वम् । पुरुषोपसर्जनप्रधानस्य जगत्कारणत्त्वे प्रमाणाभावात् । न चोक्तमनुमानम् । 'न ऋते त्वत्क्रियते किञ्चनारे' इति श्रुतेः । तत्र शरीरप्रवृत्तावपि परमात्माधीनत्वे सिद्धे सति विप्रतिपन्नप्रवृत्तेः पुरुषोपसर्जनप्रधानाधीनत्वसाधने दृष्टान्ताभावादिति भावः ।।**

ವಿಷ್ಣುವಿನ ಸರ್ವಕರ್ತೃತ್ವವು ಯುಕ್ತವಾಗಿದೆ.ಪುರುಷನು ಅಪ್ರಧಾನವಾಗಿದ್ದು ಪ್ರಧಾನವಾಗಿ ಪ್ರಕೃತಿಗೆ ಜಗತ್ಕಾರಣತ್ವ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲ. ಪೂರ್ವಪಕ್ಷಕಾರರು ಹೇಳಿದ ಯುಕ್ತಿಯೂ ಕೂಡ ಪ್ರಮಾಣವಲ್ಲ. ಏಕೆಂದರೆ 'ನ ಋತೇ ತ್ವತ್‌ಕ್ರಿಯತೇ ಕಿಂಚನಾರೇ' ಎಂಬ ಶ್ರುತಿಯು ಭಗವಂತನ ಹೊರತಾಗಿ ಬೇರೆ ಯಾವುದಕ್ಕೂ ಕರ್ತೃತ್ವಶಕ್ತಿ ಇಲ್ಲವೆಂದು ಸ್ಪಷ್ಟವಾಗಿ ಹೇಳುತ್ತಿದೆ.

ಶರೀರದ ಪ್ರವೃತ್ತಿಯಲ್ಲೂ ಕೂಡ ಪರಮಾತ್ಮನ ಅಧೀನತ್ವವೇ ಸಿದ್ಧವಾಗಿದೆ. ಆದ್ದರಿಂದ ವಿಪ್ರತಿಪನ್ನವಾದ ಜಗತ್ತಿನ ಸೃಷ್ಟಿ ಎಂಬ ಪ್ರವೃತ್ತಿಯಲ್ಲೂ ಕೂಡ ಪುರುಷನು ಅಪ್ರಧಾನವಾಗಿವುಳ್ಳ ಪ್ರಧಾನವೇ ಕಾರಣ ಎಂದು ಸಾಧಿಸುವ ಹೇತುವಿಗೆ ದೃಷ್ಟಾಂತವೇ ಇರುವುದಿಲ್ಲ ಎಂಬುದು ಸಿದ್ಧಾಂತದ ಅಭಿಪ್ರಾಯ.

ವಿವರಣೆ - ಸೂತ್ರದಲ್ಲಿರುವ ಪುರುಷಶಬ್ದಕ್ಕೆ ಜೀವನ ಸಂಬಂಧವುಳ್ಳ ಶರೀರ ಎಂಬ ಅರ್ಥವನ್ನು ವಿವಕ್ಷಿಸಬೇಕು. ಅಶ್ಮಪದವು ಲಕ್ಷಣಾವೃತ್ತಿಯಿಂದ ಕಲ್ಲು ಮೊದಲಾದವುಗಳ ತರುವಿಕೆಯ ಪ್ರವೃತ್ತಿಯನ್ನು ಹೇಳುತ್ತಿದೆ. ಆದ್ದರಿಂದ ಜೀವಸಮ್ಮಿಲಿತವಾದ ಶರೀರಕ್ಕೆ ಅಶ್ಮಾನಯನದ ಪ್ರವೃತ್ತಿಯಂತೆ ಪ್ರಕೃತಿಯೂ ಕೂಡ ಅಪ್ರಧಾನನಾದ ಜೀವನ ಸಂಪರ್ಕದಿಂದ ಪ್ರವೃತ್ತಿವುಳ್ಳದ್ದಾಗುತ್ತದೆಂಬುದು ಸೂತ್ರಖಂಡದ ಅಭಿಪ್ರಾಯ. ಅವ್ಯಯಗಳಿಗೆ ಅನೇಕಾರ್ಥ ಇರುವುದರಿಂದ ಆವೃತ್ತವಾದ ತಥಾ ಶಬ್ದಕ್ಕೆ ಅಲ್ಲಿ ಎಂದರ್ಥ. ಎರಡನೆಯ ತಥಾಶಬ್ದಕ್ಕೆ 'ವ್ಯತಿರೇಕಾನವಸ್ಥಿತೇಃ' ಎಂಬ ಸೂತ್ರದಲ್ಲಿ ಹೇಳಿರುವಂತೆ ಎಂದರ್ಥ. (ವಾಕ್ಯಾರ್ಥಮುಕ್ತಾವಳಿ)

### ಭಾಷ್ಯದಲ್ಲಿರುವ ದೃಷ್ಟಾಂತ ಪದಕ್ಕೆ ಪ್ರಮಾಣ ಎಂದರ್ಥ

**भावदीप**: – तथात्वे दृष्टान्ताभावादिति भाष्यांशं दृष्टान्तपदं प्रमाणपरं मत्वा व्याचष्टे॥ **पुरुषेति**।। तदंशस्यार्थान्तरमुपेत्य समग्रभाष्यं व्याचष्टे॥ **न ऋत इति**।। सिद्धे सतीति शेषोक्तिः। तथात्वे इत्यस्यार्थान्तरं चाह – **पुरुषेत्यादि**॥ ७ ॥

'ತಥಾತ್ವೇ ದೃಷ್ಟಾಂತಾಭಾವಾತ್' ಎಂಬ ಭಾಷ್ಯದಲ್ಲಿರುವ ದೃಷ್ಟಾಂತಪದವು ಪ್ರಮಾಣ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಇದನ್ನು 'ಪುರುಷೋಪಸರ್ಜನ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. 'ದೃಷ್ಟಾಂತಾಭಾವಾತ್' ಎಂಬ ಅಂಶಕ್ಕೆ ಮತ್ತೊಂದು ಅರ್ಥವನ್ನು ಅಂಗೀಕಾರ ಮಾಡಿ ಸಮಗ್ರ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಋತೇ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಸಿದ್ಧೇ ಸತಿ' ಎಂಬುದನ್ನು ಇಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು. ಭಾಷ್ಯದಲ್ಲಿರುವ ತಥಾತ್ವೇ ಎಂಬ ಪದಕ್ಕೆ ಮತ್ತೊಂದು ಅರ್ಥವನ್ನು 'ಪುರುಷೋಪಸರ್ಜನ' ಎಂಬ ವಾಕ್ಯದಿಂದ ಹೇಳಿದ್ದಾರೆ.

## ಬ್ರಹ್ಮಸೂತ್ರ

**ब्रह्मसूत्रम् – अङ्गित्वानुपपत्तेः ।।**

ಶಾರೀರಿಕ ಕ್ರಿಯೆಯಲ್ಲಿ ಜೀವನು ಗೌಣನಾಗಿದ್ದಾನೆ. ಶರೀರವೇ ಪ್ರಧಾನವಾಗಿದೆ ಎಂದು ಪ್ರಶ್ನಿಸಬಾರದು. ಏಕೆಂದರೆ ನಮ್ಮೆಲ್ಲರ ಅನುಭವದಿಂದ ಜೀವನೇ ಅಂಗಿಯೆಂದು ಸಿದ್ಧವಾಗಿದ್ದಾನೆ. ಆದ್ದರಿಂದ ಜೀವನೇ ಪ್ರಧಾನನು ಹೊರತು, ಶರೀರವಲ್ಲ. ಈ ಕಾರಣದಿಂದ ಸಾಂಖ್ಯರು ನೀಡಿದ ದೃಷ್ಟಾಂತವು ಅನುಪಪನ್ನವಾಗಿದೆ.

ಶಾರೀರಿಕ ಕ್ರಿಯೆಯಲ್ಲಿ ಜೀವನು ಗೌಣನಾಗಿ 'ಅಂಗ' ಎನಿಸಿದ್ದಾನೆ. ಶರೀರವು ಪ್ರಧಾನವಾದ್ದರಿಂದ ಅಂಗಿಯಾಗಿದೆ ಎಂಬ ಆಕ್ಷೇಪವು ತಪ್ಪು. ಏಕೆಂದರೆ 'ಅಂಗಮಂಗೀ' ಎಂಬ ವಾಕ್ಯದಲ್ಲಿ ಯಾರು ಅಂಗಿಯೋ, ಅವನೇ ಪ್ರಧಾನ ಎಂದು ಹೇಳಿರುವುದರಿಂದ ನಮ್ಮೆಲ್ಲರ ಅನುಭವದಂತೆ ಜೀವನು ಪ್ರಧಾನನಾದ್ದರಿಂದ ಅವನೇ ಅಂಗಿ ಆಗುತ್ತಾನೆ. ಆದ್ದರಿಂದ ಪುರುಷನು ಗೌಣವಾಗಿ ಪ್ರಕೃತಿಯೇ ಪ್ರಧಾನವಾದ ಜಗತ್‌ಕಾರಣವಾಗಿದೆ ಎಂಬ ಸೇಶ್ವರಸಾಂಖ್ಯರು ನೀಡಿದ ದೃಷ್ಟಾಂತವೇ ಯುಕ್ತವಲ್ಲ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಪುರುಷಾಶ್ಮಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

## ಅಂಗ-ಅಂಗಿಭಾವ ಯಾರಲ್ಲಿ ಇದೆ ?

**ब्रह्मसूत्रभाष्यम् – ।। अङ्गित्वानुपपत्तेः ।।२।।**

**शरीरप्रवृत्तौ पुरुषस्याङ्गित्वात्, 'अङ्गमङ्गी समादाय यथा कार्यं करोत्यसौ' इत्यङ्गित्वव्यवहारोऽनुपपन्नः ।।२।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये पुरुषाश्माधिकरणम् ।। ४ ।।**

ಅನುವಾದ - ಶರೀರದಿಂದ ನಡೆಯುವ ಪ್ರವೃತ್ತಿಯಲ್ಲಿ ಪುರುಷನು ಪ್ರಧಾನ. ಹಾಗೂ ಶರೀರವು ಅಪ್ರಧಾನ. ಪ್ರಧಾನವಾದ ಜೀವನು ಅಪ್ರಧಾನವಾದ ತನ್ನ ಶರೀರವನ್ನು ಪಡೆದು ಹೇಗೆ ಕೆಲಸವನ್ನು ಮಾಡುತ್ತಾನೋ ಅದರಂತೆ ಪರಮಾತ್ಮನು ಪ್ರಕೃತಿಯ ಸಹಕಾರದಿಂದ ತಾನೇ ಸೃಷ್ಟಿಯನ್ನು ಮಾಡುತ್ತಾನೆ. ಆದ್ದರಿಂದ ಪುರುಷನೇ ಪ್ರಧಾನನಾದ್ದರಿಂದ ಪುರುಷನು ಗೌಣವೆಂದು ಹೇಳುವುದು ತಪ್ಪು.

ಪ್ರತಿಪದಾರ್ಥ -- ಶರೀರಪ್ರವೃತ್ತೌ = ಶರೀರದ ಪ್ರವೃತ್ತಿಯಲ್ಲಿ, ಪುರುಷಸ್ಯ = ಜೀವನಿಗೆ, ಅಂಗಿತ್ವಾತ್ = ಪ್ರಧಾನ್ಯವಿರುವುದರಿಂದ ದೋಷವಿಲ್ಲ. ಆದ್ದರಿಂದ ಅಂಗೀ = ಪ್ರಧಾನನಾದ ಚೇತನನು, ಅಂಗಂ = ಅಪ್ರಧಾನವಾದ ಶರೀರವನ್ನು, ಸಮಾದಾಯ = ಹೊಂದಿ, ಯಥಾ =

ಹೇಗೆ, ಕಾರ್ಯಂ = ಕಾರ್ಯವನ್ನು, ಕರೋತಿ = ಮಾಡುತ್ತಾನೋ, ಅದೇ ರೀತಿಯಾಗಿ, ಅಸೌ = ಭಗವಂತನು ಪ್ರಕೃತಿಯ ಸಹಾಯದಿಂದ ಸೃಷ್ಟಿಯನ್ನು ಮಾಡುತ್ತಾನೆ. ಇತಿ = ಹೀಗೆ ಅಂಗಿತ್ವವ್ಯವಹಾರಃ = ಪುರುಷನು ಗೌಣ, ಪ್ರಕೃತಿಯು ಪ್ರಧಾನ ಎಂಬ ವ್ಯವಹಾರವು, ಅನುಪಪನ್ನಃ = ಅಸಾಧುವಾಗಿದೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಪುರುಷಾಶ್ಮಾಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

### ಕೇವಲ ಸಾನ್ನಿಧ್ಯದಿಂದ ಏನೂ ಆಗದು

**सत्तर्कदीपावळिः – शरीरादेर्हि तावत्पुरुषाङ्गमिति व्यवहारविरोधाच्च न तस्य सन्निधिमात्रेण स्वकार्यप्रवृत्तिशरीराङ्गत्वमित्यर्थः ॥**

ಶರೀರಾದಿಗಳು ಪುರುಷನ ಅಂಗವೆಂದು ಲೋಕವ್ಯವಹಾರದಿಂದ ಸಿದ್ಧವಾಗಿದೆ. ಅದಕ್ಕೆ ವಿರೋಧ ಬರುತ್ತದೆ. ಕೇವಲ ಸನ್ನಿಧಾನದಿಂದ ಶರೀರವು ತನ್ನ ಕಾರ್ಯದಲ್ಲೇ ಪ್ರವೃತ್ತಿವಾಗುತ್ತದೆಂದು ಹೇಳಲು ಸಾಧ್ಯವಿಲ್ಲ. ಅದರಂತೆ ಕೇವಲ ಈಶ್ವರನ ಸನ್ನಿಧಾನದಿಂದ ಪ್ರಕೃತಿಯು ಜಗತ್ ಸೃಷ್ಟ್ಯಾದಿಗಳಲ್ಲಿ ತೊಡಗಲು ಸಾಧ್ಯವಿಲ್ಲ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ ಪುರುಷಾಶ್ಮಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

## ತತ್ವಪ್ರದೀಪ

**तत्वप्रदीपः – अङ्गित्वानुपपत्तेः । शरीरप्रवृत्तौ पुरुषस्याङ्गत्वादस्मिन्पक्षे तस्याङ्गित्वव्यवहारोऽनुपपन्नः । अतः प्रमाणतः शरीरस्याङ्गित्वानुपपत्तेर्यत्किञ्चिदेतत् ।**

**॥ इति पुरुषाश्माधिकरणम् ॥**

ಶರೀರದ ಪ್ರವೃತ್ತಿಗೆ ಪುರುಷನು ಅಂಗವಾಗಿದ್ದಾನೆ ಎಂಬ ಪಕ್ಷದಲ್ಲಿ ಪುರುಷನು ಅಂಗಿಯಾಗಿದ್ದಾನೆಂಬ ವ್ಯವಹಾರವು ಅನುಪಪನ್ನ ಆಗಬೇಕಾದೀತು. ಆದ್ದರಿಂದ ಪ್ರಮಾಣದಿಂದ ಶರೀರವು ಅಂಗಿಯಾಗಿದೆ ಎಂದು ಹೇಳುವುದು ಅನುಪಪನ್ನವಾಗಿದೆ. ಆದ್ದರಿಂದ ಇವರ ಮತವು ಅರ್ಥವಿಲ್ಲದ್ದು.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ ಪುರುಷಾಶ್ಮಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

### ಶ್ರುತಿವಿರೋಧಕ್ಕಿಂತ ಭಿನ್ನವಾದ ಮತ್ತೊಂದು ಹೇತು

**तत्वप्रकाशिका – हैतुकमन्यश्चायं श्रुत्यवष्टम्भेनोक्तं दृष्टान्तदोषं न गणयतीत्यतो हेत्वन्तरेण दृष्टान्ते साध्यविकलतां साधयत्सूत्रमुपन्यस्य व्याचष्टे ॥ अङ्गित्वेति ॥**

ಅನುಮಾನವನ್ನಷ್ಟೇ ಪ್ರಮಾಣವನ್ನಾಗಿ ಒಪ್ಪುವ ತನ್ನನ್ನು ಮಾತ್ರ ಹೈತುಕ ಎಂದೊಪ್ಪುವವನು (ನಿರೀಶ್ವರಸಾಂಖ್ಯನು) ಶ್ರುತಿಯ ಆಧಾರದಿಂದ ಹೇಳಲ್ಪಟ್ಟ ದೃಷ್ಟಾಂತದೋಷವನ್ನು ಪರಿಗಣಿಸುವುದಿಲ್ಲ. ಆದ್ದರಿಂದ ಮತ್ತೊಂದು ಹೇತುವಿನಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಸಾಧಿಸುವ ಸೂತ್ರವನ್ನು ಪಠಿಸಿ ಅಂಗಿತ್ವ ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾನೆ.

## ಭಾವದೀಪ

**भावदीपः – ॥ अङ्गित्वानुपपत्तेः ॥ ८ ॥** उत्तरसूत्रे समुच्चायकचशब्दाभावात्प्रागुक्तदोषस्यादृढतामाह **– हैतुकंमन्यश्चेति ॥**

ಮುಂದಿನ 'ಅಂಗಿತ್ವಾನುಪಪತ್ತೇಃ' ಎಂಬ ಸೂತ್ರದಲ್ಲಿ ಸಮುಚ್ಚಾಯಕವಾದ ಚ ಶಬ್ದವೇ ಇಲ್ಲದ್ದರಿಂದ 'ಹೈತುಕಮನ್ಯಶ್ಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - 'ಹೇತ್ವಂತರೇಣ' ಎಂಬುದಕ್ಕೆ ಶ್ರುತಿವಿರೋಧಕ್ಕಿಂತ ಭಿನ್ನವಾದ ಮತ್ತೊಂದು ಹೇತುವಿನಿಂದ ಎಂದರ್ಥ. ಸೂತ್ರದಲ್ಲಿ 'ಪುರುಷಾಶ್ಮವತ್' ಎಂಬುದನ್ನು

ಅನುವೃತ್ತಿ ಮಾಡಿಕೊಳ್ಳಬೇಕು. ಪುರುಷಸ್ಯ ಎಂಬುದನ್ನು ಕೂಡ ಅನುವೃತ್ತಿ ಮಾಡಿಕೊಳ್ಳಬೇಕು.

ಶರೀರವು ಅಂಗವೇ ಹೊರತು ಅಂಗಿಯಲ್ಲ

**तत्वप्रकाशिका – यदि शरीरमेव पुरुषोपसर्जनं प्रवर्तेत तदा शरीरमङ्गि पुरुषोऽङ्गमित्युक्तं स्यात्। तथा च पुरुषस्याङ्गित्वेन शरीरस्याङ्गत्वेन च लौकिकपरीक्षकव्यवहारो न स्यात् । विद्यते चासावतो न पुरुषोपसर्जनशरीरस्य च प्रवृत्तिरिति दृष्टान्तो न युज्यत इति भावः । अतो मतान्तविरोधाभावाद्युक्तं जगत्कारणत्वलक्षणं विष्णोरिति सिद्धम् ।**

।। इति श्रीमज्जयतीर्थभिक्षुविरचितायां तत्वप्रकाशिकायाम्
पुरुषाश्माधिकरणम्।।

ಒಂದುವೇಳೆ ಶರೀರವೇ ಪ್ರಧಾನವಾಗಿ ಪುರುಷನು ಅಪ್ರಧಾನವಾದರೆ ಆಗ ಯಾವ ಪ್ರವೃತ್ತಿ ಉಂಟಾಗುತ್ತದೋ ಅಲ್ಲಿ ಶರೀರವು ಅಂಗಿಯು ಪುರುಷನು ಅಂಗನು ಎಂದು ಹೇಳಿದಂತಾಗುತ್ತದೆ. ಆದ್ದರಿಂದ ಪುರುಷನು ಅಂಗೀ ಶರೀರವು ಅಂಗ ಎಂದು ಹೇಳುವ ಲೌಕಿಕಪರೀಕ್ಷಕರು ಮಾಡುವ ವ್ಯವಹಾರವೇ ಕೂಡದೇ ಇರಬೇಕಾದೀತು. ಆದರೆ ಲೌಕಿಕರು ಪುರುಷನನ್ನು 'ಅಂಗೀ' ಎಂದೇ ವ್ಯವಹರಿಸುತ್ತಾರೆ. ಶರೀರವನ್ನು ಅಂಗ ಎಂದೇ ವ್ಯವಹರಿಸುತ್ತಾರೆ

ಪುರುಷರನ್ನು ಗೌಣವೆಂದು ವಿವಕ್ಷಿಸಿ ಪ್ರಕೃತಿಯಿಂದಲೇ ಪ್ರವೃತ್ತಿಯನ್ನು ಹೇಳಲು ದೃಷ್ಟಾಂತವು ಅಯುಕ್ತವಾಗಿದೆ. ಆದ್ದರಿಂದ ನಿರೀಶ್ವರಸಾಂಖ್ಯಮತದ ವಿರೋಧವು ಇಲ್ಲದಿರುವುದರಿಂದ ವಿಷ್ಣುವಿನ ಜಗತ್ಕಾರಣತ್ವಲಕ್ಷಣವು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ
ಪುರುಷಾಶ್ಮಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

**भावदीपः** – एवं परिष्कृत्य भाष्यं व्याचष्टे ॥ **तथा चेति**।। **अत इति**।। अप्रामाणिकत्वात् । प्रमाणविरुद्धत्वाच्चेत्यर्थः ॥८॥

**।। इति राघवेन्द्रयतिकृते भावदीपे पुरुषाश्माधिकरणम् ।।**

ಹೀಗೆ ಪರಿಷ್ಕರಿಸಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ತಥಾ ಚ' ಇತ್ಯಾದಿ ವಾಕ್ಯವು ಹೊರಟಿದೆ. 'ಅತ' ಎಂಬ ಪದಕ್ಕೆ ಅಪ್ರಾಮಾಣಿಕವಾದ್ದರಿಂದ, ಮತ್ತು ಪ್ರಮಾಣವಿರುದ್ಧವಾದ್ದರಿಂದ ಎಂದರ್ಥ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ ಪುರುಷಾಶ್ಮಾಧಿಕರಣದ ಕನ್ನಡ ಅನುವಾದವು ಮುಗಿಯಿತು ॥

**।। श्रीजानकीवदनाम्भोजराजहंसाय रामचन्द्राय नमः ।।**

**।। श्री गुरुभ्यो नमः ।।**

**श्री राघवेन्द्रतीर्थविरचिता**

# तन्त्रदीपिका

**पुरुषाश्माधिकरणम् - ४**

।। पुरुषाश्मवदिति चेत्तथापि ।।२-२-७।।

अत्र न प्रागुक्तदोषोऽत्रास्तीति प्राप्तं जीवगुणकप्रधानकर्तृवादं निराचष्टे। नेत्यस्ति । यथा पुरुषस्य चेतनस्य सम्बन्धेन शरीरमश्मानयनादिकर्तृ

**तद्वत्प्रधानं जीवसम्बन्धात् महदादिकार्यकर्त्रस्त्विति चेत्, तथापि एवमधिकाशङ्कासद्भावेऽपि नोक्तदोषनिस्तारः । ''न ऋते'' इत्यादिश्रुत्या शरीरप्रवृत्तेरपीशायत्तत्वेन तव दृष्टान्तः साध्यहीन इति भावः ॥**

ಹಿಂದಿನ ಅಧಿಕರಣದಲ್ಲಿ ಹೇಳಿದ ದೋಷವು ಬರುವುದಿಲ್ಲವೆಂದು ಸಾಂಖ್ಯೈಕದೇಶಿಗಳು ಹೇಳುತ್ತಾರೆ. ಇವರು ಜೀವನು ಅಪ್ರಧಾನಕಾರಣನಾಗಿದ್ದಾನೆ. ಪ್ರಕೃತಿಯು ಜಗತ್ತಿಗೆ ಮುಖ್ಯಕಾರಣವಾಗಿದೆ ಎಂದು ಹೇಳುತ್ತಾರೆ. ಇವರ ಮತದ ನಿರಾಕರಣೆಗಾಗಿ ಪುರುಷಾಶ್ಮಾಧಿಕರಣವು ಹೊರಟಿದೆ.

ಸೂತ್ರದಲ್ಲಿ 'ನ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಪುರುಷಾಶ್ಮವತ್ = ಯಾವರೀತಿಯಾಗಿ ಚೇತನನಾದ ಪುರುಷನಿಗೆ ಸಂಬಂಧಪಟ್ಟ ಶರೀರವು ಕಲ್ಲುತರುವಿಕೆ ಮೊದಲಾದ ಕ್ರಿಯೆಗಳಲ್ಲಿ ಕರ್ತೃವಾಗಿರುತ್ತದೋ, ಅದರಂತೆ ಪ್ರಕೃತಿಯು ಚೇತನನಾದ ಜೀವನ ಸಂಬಂಧವನ್ನು ಹೊಂದಿ, ಮಹತ್ತತ್ತ್ವಾದಿಗಳ ಕಾರ್ಯಗಳಿಗೆ ಕರ್ತೃವಾಗುತ್ತದೆ, ಇತಿಚೇತ್ = ಇಷ್ಟು ಆಕ್ಷೇಪ. ನ = ಇದು ತಪ್ಪು. ತಥಾಪಿ = ಹೀಗೆ ಸಾಂಖ್ಯೈಕದೇಶಿಗಳು ಅಧಿಕಾಕ್ಷೇಪವನ್ನು ಮಾಡಿದರೂ ಕೂಡ ಹಿಂದೆ ಹೇಳಿದ ದೋಷಗಳು ಬಂದೇ ಬರುತ್ತವೆ. 'ನ ಋತೇ ತ್ವತ್‌ಕ್ರಿಯತೇ' ಇದೇ ಮೊದಲಾದ ಶ್ರುತಿಗಳ ಆಧಾರದಿಂದ ಶರೀರಪ್ರವೃತ್ತಿಯೂ ಕೂಡ ಈಶ್ವರಾಧೀನನವೇ ಆಗಿರುತ್ತದೆ. ಆದ್ದರಿಂದ ನೀನು ಹೇಳಿದ ದೃಷ್ಟಾಂತವು ಸಾಧ್ಯವಿಕಲವಾಗಿದೆ. ಇಷ್ಟು ಸೂತ್ರದ ಅಭಿಪ್ರಾಯ.

ವಿವರಣೆ - ಕಲ್ಲನ್ನು ತರುವುದು ಜಡವಾದ ಶರೀರವೇ ಆಗಿದೆ. ಇದು ಚೇತನನಾದ ಜೀವನ ಸಂಬಂಧವನ್ನು ಹೊಂದಿದೆ. ಅದರಂತೆ ಪ್ರಕೃತಿಯೇ ಜಗತ್ತನ್ನು ಸೃಷ್ಟಿ ಮಾಡುತ್ತದೆ. ಇದಕ್ಕೆ ಚೇತನನಾದ ಜೀವನ ಸಂಬಂಧವಿದೆ ಎಂಬುದಾಗಿ ಸಾಂಖ್ಯೈಕದೇಶಿಗಳು ಹೇಳಿದರೆ ಹಿಂದಿನ ಅಧಿಕರಣಗಳಲ್ಲಿ ಹೇಳಿದ ದೋಷ ಬಂದೇ ಬರುತ್ತದೆ. 'ನ ಋತೇ ತ್ವತ್‌ಕ್ರಿಯತೇ' ಇತ್ಯಾದಿ ಶ್ರುತಿಗಳ ಪ್ರಕಾರ ಪ್ರತಿಯೊಂದು ಕಾರ್ಯಗಳಿಗೂ ಈಶ್ವರನೇ ಪ್ರೇರಕನಾಗಿರುತ್ತಾನೆ. ಅದರ ವಿರೋಧವು ಬರುತ್ತದೆಂಬುದು ಸೂತ್ರದ ಅಭಿಪ್ರಾಯ.

'ಪ್ರಕೃತಿಃ ಸ್ವತಂತ್ರಕರ್ತ್ರೀ' ಎಂಬ ಅನುಮಾನದಲ್ಲಿ ಶರೀರವು ದೃಷ್ಟಾಂತವಾಗಿದೆ. ಸ್ವತಂತ್ರಕರ್ತೃತ್ವವೆಂಬ ಸಾಧ್ಯವು ಈ ದೃಷ್ಟಾಂತದಲ್ಲಿ ಇಲ್ಲದ ಕಾರಣ ಸಾಧ್ಯವೈಕಲ್ಯದೋಷವು ಬರುತ್ತದೆಂದು ತಿಳಿಯಬೇಕು.

**इतश्च साध्यहीन इत्याह -**

।। अङ्गित्वानुपपत्तेः ।।२-२-८।।

**जीवस्य गुणत्वे त्वयोच्यमाने सार्वजनीनस्य शरीरं प्रत्यङ्गित्वस्यानुपपत्तेर्न पुरुषाश्मदृष्टान्तो युक्त इत्यर्थः । प्रागुक्तश्रुतावस्य हैतुकत्वेनानादरादत्र चशब्दाप्रयोगः ।।४।।**

ಮತ್ತೊಂದು ಕಾರಣದಿಂದಲೂ ಕೂಡ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವು ಬರುತ್ತದೆಂದು ಹೇಳುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ - 'ಅಂಗಿತ್ವಾನುಪಪತ್ತೇಃ'.

ಜೀವನು ಅಪ್ರಧಾನನಾಗಿದ್ದಾನೆಂದು ಹೇಳಿದರೆ ಸಕಲರ ಅನುಭವದಿಂದ ಸಿದ್ಧವಾದ ಶರೀರದ ದೃಷ್ಟಿಯಿಂದ ಜೀವನಿಗಿರುವ ಪ್ರಾಧಾನ್ಯವು ಅನುಪಪನ್ನವಾಗಿದೆ. ಆದ್ದರಿಂದ ಪುರುಷಾಶ್ಮದೃಷ್ಟಾಂತವು ಯುಕ್ತವಲ್ಲ ಎಂದು ತಿಳಿಯಬೇಕು. ಹಿಂದಿನ ಸೂತ್ರದಲ್ಲಿ ಯಾವ 'ನ ಋತೇ ತ್ವತ್‌ಕ್ರಿಯತೇ' ಎಂಬ ಶ್ರುತಿಯನ್ನು ಸಿದ್ಧಾಂತಿಗಳು ಉಲ್ಲೇಖ ಮಾಡುವ ಮೂಲಕ ಹೈತುಕನಿಗೆ ಶ್ರುತಿವಿರೋಧವನ್ನು ಹೇಳಿದರೂ ಆ ಶ್ರುತಿಯನ್ನು ಪೂರ್ವಪಕ್ಷಿಯು ತಿರಸ್ಕರಿಸುತ್ತಾನೆ. ಆದ್ದರಿಂದ ಈ ಸೂತ್ರದಲ್ಲಿ ಚಶಬ್ದವನ್ನು ಪ್ರಯೋಗ ಮಾಡಿರುವುದಿಲ್ಲ.

ವಿವರಣೆ - ಹಿಂದಿನ ಸೂತ್ರದಲ್ಲಿ ಹೇಳಿದ ಯುಕ್ತಿಯ ಸಮುಚ್ಚಯವನ್ನೇ ಈ ಸೂತ್ರವು ಮಾಡುತ್ತಿರುವುದರಿಂದ ಚಶಬ್ದವನ್ನು ಪ್ರಯೋಗಿಸಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ 'ಪ್ರಾಗುಕ್ತ ಶ್ರುತೌ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಯುಕ್ತಿಯು ಶ್ರುತಿರೂಪವಾಗಿದೆ. ಆದ್ದರಿಂದ ಹೈತುಕನಾದ ಪೂರ್ವಪಕ್ಷಿಗೆ ಶ್ರುತಿಯಲ್ಲಿ ಆದರವಿರುವುದಿಲ್ಲ. ಆದ್ದರಿಂದ ಈ ಸೂತ್ರದಲ್ಲಿ ಹೇಳಲ್ಪಟ್ಟ ಯುಕ್ತಿಯು ಕೇವಲ ಯುಕ್ತಿರೂಪವಾಗಿದೆ. ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಯುಕ್ತಿಯು ಶ್ರುತಿರೂಪವಾಗಿದೆ. ಆದ್ದರಿಂದ ಚಶಬ್ದದ ಆವಶ್ಯಕತೆಯು ಇರುವುದಿಲ್ಲವೆಂದು ತಿಳಿಯಬೇಕು.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಪುರುಷಶ್ಮಾಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಅನ್ಯಥಾಽನುಮಿತ್ಯಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ,
## ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಅನ್ಯಥಾಽನುಮಿತ್ಯಧಿಕರಣ

## ಬ್ರಹ್ಮಸೂತ್ರ

**ब्रह्मसूत्रम् – अन्यथाऽनुमितौ च ज्ञशक्तिवियोगात् ।।**

**ಹಿಂದೆ ಹೇಳಿದ್ದಕ್ಕಿಂತ ವಿಭಿನ್ನವಾಗಿ ಜೀವನೇ ಪ್ರಧಾನನು, ಪ್ರಕೃತಿಯು ಅಪ್ರಧಾನವೆಂದು ಅನುಮಾನ ಮಾಡಿದರೂ ಕೂಡ ಜೀವನಿಗೆ ಅಂಗಿತ್ವವು ಉಪಪನ್ನವಾಗುವುದಿಲ್ಲ. ಏಕೆಂದರೆ ಶರೀರದೊಂದಿಗೆ ಜೀವನು ಸಂಬಂಧವನ್ನು ಹೊಂದಲು ಸ್ವತಂತ್ರಶಕ್ತಿ ಇರುವುದಿಲ್ಲ. ಈ ವಿಷಯದಲ್ಲಿ ಯಾವುದೇ ದೃಷ್ಟಾಂತವಿಲ್ಲ.**

ಅರ್ಥ -- 'ಚ' ಶಬ್ದದಿಂದ 'ಅನ್ಯಥಾಽನುಪಪತ್ತೇಃ' ಎಂಬುದನ್ನು ಸಮಾಕರ್ಷ ಮಾಡಿಕೊಳ್ಳಬೇಕು. ಅನ್ಯಥಾ = ಯಾವ ರೀತಿಯಾಗಿ ಹಿಂದೆ ಹೇಳಿದ್ದಕ್ಕಿಂತ ವಿಲಕ್ಷಣವಾಗಿ ಪ್ರಕೃತಿಯು ಅಪ್ರಧಾನವಾಗಿದೆ. ಜೀವನು ಪ್ರಧಾನನಾಗಿದ್ದಾನೆ ಎಂದು, ಅನುಮಿತೌ = ಸಾಧಿಸಿದರೂ, ಜ್ಞಶಕ್ತಿವಿಯೋಗಾತ್ = ಜೀವನು ಶರೀರದ ಸಂಬಂಧವನ್ನು ಹೊಂದಲು ಸ್ವತಃ ಶಕ್ತಿ ಇಲ್ಲದ ಕಾರಣ ಅಂಗಿತ್ವವು ಅನುಪಪನ್ನವಾಗುತ್ತದೆ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ಸೃಷ್ಟಿಯಲ್ಲಿ ಪ್ರಕೃತಿಯು ಅಪ್ರಧಾನವೇ?

**ब्रह्मसूत्रभाष्यम् – प्रकृत्युपसर्जनपुरुषकर्तृत्ववादमपाकरोति –**

**।। अन्यथाऽनुमितौ च ज्ञशक्तिवियोगात् ।।१।।**

ಅನುವಾದ - ಜಗತ್ತಿನ ಸೃಷ್ಟಿಯಲ್ಲಿ ಪ್ರಕೃತಿಯು ಗೌಣ ಪುರುಷನು ಪ್ರಧಾನ ಎಂಬ ಸಾಂಖ್ಯರ ಮತವನ್ನು ಇಲ್ಲಿ ನಿರಾಕರಣೆ ಮಾಡುತ್ತಿದ್ದಾರೆ.

ಪ್ರತಿಪದಾರ್ಥ -- ಅಧಿಕರಣದ ಪ್ರಮೇಯವನ್ನು ಹೇಳುತ್ತಿದ್ದಾರೆ. ಪ್ರಕೃತ್ಯುಪಸರ್ಜನಪುರುಷಕರ್ತೃತ್ವವಾದಮ್ = ಪ್ರಕೃತಿಯು ಅಪ್ರಧಾನವಾಗಿದೆ ಚೇತನನು ಪ್ರಧಾನನಾಗಿದ್ದಾನೆ. ಅಂಥ ಚೇತನನೇ ಸೃಷ್ಟಿಗೆ ಕರ್ತೃವಾಗಿದ್ದಾನೆ ಎಂದು ಹೇಳುವ ನಿರೀಶ್ವರಸಾಂಖ್ಯರ ಏಕದೇಶಮತವನ್ನು, ಅಪಾಕರೋತಿ = ನಿರಾಕರಣೆ ಮಾಡುತ್ತಿದ್ದಾರೆ.

## ಪುರುಷನ ಪ್ರವೃತ್ತಿಗೆ ಯಾವುದು ಕಾರಣ?

**ब्रह्मसूत्रभाष्यम् – शरीरसम्बन्धात् पुरुषः प्रवर्तत इत्यङ्गिकारेऽपि स्वतस्तस्यासामर्थ्याच्छरीरसम्बन्ध एवायुक्तः ।।१।।**

ಅನುವಾದ - ಶರೀರದ ಸಂಬಂಧವಿರುವ ಪ್ರಯುಕ್ತ ಪುರುಷನು ವ್ಯಾಪಾರದಲ್ಲಿ ತೊಡಗುತ್ತಾನೆ. ಹೀಗೆ ಅಂಗೀಕಾರ ಮಾಡಿದರೂ ಪುರುಷನಿಗೆ ಸ್ವತಃ ಸಾಮರ್ಥ್ಯವಿಲ್ಲದ ಕಾರಣ ಶರೀರದೊಂದಿಗೆ ಸಂಪರ್ಕವಾಗಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಶರೀರಸಂಬಂಧಾತ್ = ಶರೀರದ ಸಂಬಂಧದಿಂದ, ಪುರುಷಃ = ಚೇತನನು, ಪ್ರವರ್ತತೇ = ಪ್ರವೃತ್ತಿವುಳ್ಳವನಾಗುತ್ತಾನೆ, ಇತಿ = ಹೀಗೆ, ಅಂಗೀಕಾರೇऽಪಿ = ಒಪ್ಪಿದರೂ, ಸ್ವತಃ = ಸ್ವಾಭಾವಿಕವಾಗಿ, ಅಸಾಮರ್ಥ್ಯಾತ್ = ಸಾಮರ್ಥ್ಯವಿಲ್ಲದ್ದರಿಂದ, ಶರೀರಸಂಬಂಧಃ =

ಜೀವನಿಗೆ ಶರೀರದ ಸಂಬಂಧವನ್ನು ಹೇಳುವುದು, ಅಯುಕ್ತಃ = ಅಸಂಭಾವಿತವಾಗುತ್ತದೆ.

### ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

### ಮತ್ತೋರ್ವ ನಿರೀಶ್ವರನ ನಿರಾಕರಣೆ

**सत्तर्कदीपावळिः – निरीश्वरसाङ्ख्यैकदेशपक्षयोरेकस्मिन्पक्षे दूषिते पक्षान्तरमनूद्य परिहरति । प्रकृत्युपसर्जनेत्यादिना । स्वशरीरप्रेरणे शरीरान्तराभावाच्छरीरवत एव पुरुषस्य कर्तृत्वमित्येतदप्ययुक्तमित्यर्थः ।।**

ಇಬ್ಬರು ನಿರೀಶ್ವರಸಾಂಖ್ಯರಿದ್ದಾರೆ. ಒಬ್ಬರನ್ನು ದೂಷಿಸಿದ್ದಾಯಿತು. ಈಗ ಮತ್ತೊಬ್ಬರನ್ನು ದೂಷಿಸಲು 'ಪ್ರಕೃತ್ಯುಪಸರ್ಜನ' ಇತ್ಯಾದಿ ಭಾಷ್ಯ ಹೊರಟಿದೆ. ತನ್ನ ಶರೀರವನ್ನು ಪ್ರೇರಣೆ ಮಾಡಲು ತನಗೆ ಇನ್ನೊಂದು ಶರೀರ ಇರುವುದಿಲ್ಲ. ಹಾಗಾಗಿ ಶರೀರವುಳ್ಳ ಪುರುಷನಿಗೆ ಮುಖ್ಯಕರ್ತೃತ್ವವಿದೆ ಎಂಬ ಇವರ ಮತ ತಪ್ಪಾಯಿತು.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಅನ್ಯಥಾऽನುಮಿತ್ಯಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

ಅಸಮರ್ಥನಾದ ಪುರುಷನಿಗೆ ಶರೀರಸಂಬಂಧ ಸಾಧ್ಯವಿಲ್ಲ

**तत्वप्रदीपः – साङ्ख्यैकदेशीयस्तु स्वयूथ्यदोषपरिजिहीर्षया विपर्यस्तं मतमपरोऽनुमिमीतेऽत आह – अन्यथाऽनुमितौ च ज्ञशक्तिवियोगात् । यथा शरीरसम्बन्धात्पुरुषः प्रवर्तते, एवं प्रकृतिसम्बन्धात्पुरुषः प्रवर्तत इत्यङ्गीकारे स्वस्तस्य ज्ञस्य शरीरसम्बन्धेऽप्यसामर्थ्यात्स एवायुक्तः । कुतः पुनस्तदायत्ता प्रवृत्तिः ? एवमेव प्रकृतिसम्बन्धोऽपीति नैतदपि साधिष्ठम् । इत्यन्यथानुमित्यधिकरणम् ।**

ಮತ್ತೊಬ್ಬ ಸಾಂಖ್ಯನಿಗೆ ಬಂದ ದೋಷವನ್ನು ಪರಿಹರಿಸಿಕೊಳ್ಳಲು ಇನ್ನೊಬ್ಬ ಸಾಂಖ್ಯನು ಅಪೇಕ್ಷಿಸುತ್ತಿದ್ದಾನೆ. ಅವನ ಮತಕ್ಕೆ ವಿರುದ್ಧವಾಗಿ ವಿಷಯ ಪ್ರಸ್ತಾಪನೆ ಮಾಡುತ್ತಿದ್ದಾನೆ. ಜೀವನೇ ಪ್ರಧಾನನು. ಪ್ರಕೃತಿ ಅಪ್ರಧಾನವೆಂದು ಅನುಮಾನದಿಂದ ಸಮರ್ಥಿಸುತ್ತಾನೆ. ಇದರ ಪರಿಹಾರಕ್ಕಾಗಿ 'ಅನ್ಯಥಾಽನುಮಿತೌ ಚ ಜ್ಞಶಕ್ತಿವಿಯೋಗಾತ್' ಎಂಬ ಸೂತ್ರ ಹೊರಟಿದೆ. ಪುರುಷನು ಶರೀರಸಂಬಂಧದಿಂದಷ್ಟೇ ಪ್ರವೃತ್ತಿ ಮಾಡುತ್ತಾನೆ. ಇದರಂತೆ ಪ್ರಕೃತಿಸಂಬಂಧದಿಂದ ಪುರುಷನು ಪ್ರವೃತ್ತಿ ಮಾಡುತ್ತಾನೆ ಎಂಬುದು ಇವರ ವಾದ. ಇದೂ ಕೂಡ ತಪ್ಪು. ಈ ಪುರುಷನಿಗೆ ಶರೀರಸಂಬಂಧವನ್ನು ಪಡೆದುಕೊಳ್ಳುವ ಸಾಮರ್ಥ್ಯವೇ ಇರುವುದಿಲ್ಲ. ಆದ್ದರಿಂದ ಇವರ ಮತ ಹೇಗೆ ಯುಕ್ತವಾಗುತ್ತದೆ ? ಇಂಥ ಪುರುಷನ ಅಧೀನವಾಗಿ ಪ್ರಕೃತಿಯು ಪ್ರವೃತ್ತಿ ಮಾಡುವುದಾದರೂ ಕೂಡ ಹೇಗೆ ಸಾಧ್ಯ ? ಇದರಂತೆ ಪ್ರಕೃತಿ ಸಂಬಂಧವೂ ಕೂಡ ಪುರುಷನಿಗೆ ಆಗಲು ಸಾಧ್ಯವಿಲ್ಲ. ಏಕೆಂದರೆ ಪ್ರಕೃತಿ ಸಂಬಂಧವನ್ನು ಹೊಂದಲು ಪುರುಷನಿಗೆ ಸಾಮರ್ಥ್ಯ ಇರುವುದಿಲ್ಲ. ಇವನ ಮತವೂ ಕೂಡ ಹೀಗೆ ಅರ್ಥವಿಲ್ಲದ್ದೆಂದು ನಿರ್ಣಯವಾಯಿತು.

**॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ ಅನ್ಯಥಾಽನುಮಿತ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥**

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

ನಿರೀಶ್ವರಸಾಂಖ್ಯೈಕದೇಶಿಗಳ ಮತವಿರೋಧ ಪರಿಹಾರಕ್ಕಾಗಿ ಈ ಅಧಿಕರಣ

**तत्वप्रकाशिका – अधिकरणार्थं दर्शयति – प्रकृतीति ।। अत्र विष्णोर्जगत्कारणत्वे निरीश्वरसाङ्ख्यैकदेशविरोधपरिहारादस्ति शास्त्रादिसङ्गतिः। ईश्वरस्य जगत्कारणत्वमुक्तम् । तस्य च समयविरुद्धत्वे लक्षणायुक्तेरसौ परिहरणीय एव । तदीश्वरस्याखिलकारणत्वं विषयः । युक्तमयुक्तं वेति संशयः । मतविगानं सन्देहबीजम् ।**

ಅಧಿಕರಣದ ಪ್ರಮೇಯವನ್ನು ಪ್ರಕೃತಿ ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವವಿಷಯಕ್ಕೆ ನಿರೀಶ್ವರಸಾಂಖ್ಯೈಕದೇಶಿಗಳ ಮತದ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ಈಶ್ವರನಿಗೆ ಲಕ್ಷಣವಾಗಿ ಜಗತ್ಕಾರಣತ್ವವನ್ನು ಹೇಳಲಾಯಿತು. ಇದಕ್ಕೆ ಸಮಯವಿರೋಧವು ಪ್ರಾಪ್ತವಾದಾಗ ಜಗತ್ಕಾರಣತ್ವವು ಈಶ್ವರನ ಲಕ್ಷಣವೆಂಬುದು ಯುಕ್ತವಾಗುವುದಿಲ್ಲ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು.

ಈಶ್ವರನ ಲಕ್ಷಣವಾದ ಸಮಸ್ತ ಜಗತ್ಕಾರಣತ್ವವೇ ಅಧಿಕರಣದ ವಿಷಯ. ಈ ಲಕ್ಷಣವು ಈಶ್ವರನಿಗೆ ಯುಕ್ತವೋ ಅಯುಕ್ತವೋ ? ಎಂಬುದು ಸಂಶಯ. ಸಾಂಖ್ಯಮತದಲ್ಲಿರುವ ವಿಪ್ರತಿಪತ್ತಿಯು ಸಂದೇಹಬೀಜ.

ಅಪ್ರಧಾನವಾದ ಪ್ರಕೃತಿಯುಳ್ಳ ಪುರುಷನಿಂದ ಜಗದುತ್ಪತ್ತಿಯೆಂದು ಪೂರ್ವಪಕ್ಷ

**तत्वप्रकाशिका – न युक्तमिति पूर्वः पक्षः । प्रधानादेव जगदुत्पत्तिसम्भवेनेश्वरानुपयोगात् । न चाचेतनस्य तदनुपपत्तिदोषः । पुरुषयुक्तस्योपपत्तेः।**

ವಿಷ್ಣುವಿನ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು ಈ ಅಧಿಕರಣದ ಪೂರ್ವಪಕ್ಷ. ಪ್ರಕೃತಿಯಿಂದಲೇ ಜಗತ್ತಿನ ಸೃಷ್ಟಿ ಮೊದಲಾದವುಗಳು ಉಂಟಾಗುವುದರಿಂದ ಈಶ್ವರನ ಅವಶ್ಯಕತೆ ಇರುವುದಿಲ್ಲ. ಜಡವಾದ ಪ್ರಕೃತಿಗೆ ಜಗತ್ಕಾರಣತ್ವವು ಅನುಪಪನ್ನವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ಆ ಜಡವು ಪುರುಷನಿಂದ ಸಹಿತವಾಗಿರುವ ಕಾರಣ ಜಗತ್ಕಾರಣತ್ವವು ಯುಕ್ತವಾಗುತ್ತದೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
## ಭಾವದೀಪ

**भावदीपः – ।। अन्यथानुमितौ च ज्ञशक्तिवियोगात् ।।९।।**

केवलाचेतनमतात् पुरुषोपसर्जनाचेतनमताच्चाधिका शङ्कोक्तिपरत्वेन शरीरेत्यादिभाष्यमवतार्य व्याचष्टे ।। **न चाचेतनस्येति** ।।

ಕೇವಲ ಅಚೇತನವೇ ಜಗತ್ತಿಗೆ ಕಾರಣವಾಗಿದೆ ಎಂಬ ಮತಕ್ಕಿಂತ ಪುರುಷನು ಗೌಣವಾಗಿ ಅಚೇತನವೇ ಪ್ರಧಾನವಾಗಿ ಜಗತ್ತನ್ನು ಸೃಷ್ಟಿ ಮಾಡುತ್ತದೆ ಎಂಬ ಮತಕ್ಕಿಂತಲೂ ಈ ಮತವು ಬಲಿಷ್ಠವಾಗಿದೆ. ಈ ದೃಷ್ಟಿಯಿಂದ 'ಶರೀರೇ' ಇತ್ಯಾದಿ ಭಾಷ್ಯಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡಲು 'ನ ಚಾಚೇತನಸ್ಯ' ಇತ್ಯಾದಿ ಗ್ರಂಥವು ಹೊರಟಿದೆ.

ಪುರುಷನೇ 'ಅಂಗೀ' 'ಕರ್ತೃ' ಎಂಬಲ್ಲಿ ಪ್ರಮಾಣವೇನು ?

**तत्वप्रकाशिका – न चाङ्गित्वानुपपत्तिः । प्रकृत्युपसर्जनपुरुषस्य कर्तृत्वाङ्गीकारात् । तथा च प्रयोगः । विमता प्रवृत्तिरचेतनोपसर्जनपुरुषाधीना प्रवृत्तित्वादश्मानयनादिप्रवृत्तिवदिति । नच दृष्टान्तदोषः शरीररोपसर्जनपुरुषस्य प्रवृत्तिदर्शनात् ।**

ಪ್ರಕೃತಿಯು ಅಪ್ರಧಾನವಾಗಿರುವುದರಿಂದ ಅಂಗಿತ್ವವ್ಯವಹಾರವು ಉಪಪನ್ನವಾಗುವುದಿಲ್ಲ ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಅಪ್ರಧಾನವಾದ ಪ್ರಕೃತಿಯಿಂದ ಕೂಡಿದ ಪುರುಷನಿಗೆ

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

ನಿರೀಶ್ವರಸಾಂಖ್ಯೈಕದೇಶಿಗಳ ಮತವಿರೋಧ ಪರಿಹಾರಕ್ಕಾಗಿ ಈ ಅಧಿಕರಣ

**तत्वप्रकाशिका – अधिकरणार्थं दर्शयति – प्रकृतीति ।। अत्र विष्णोर्जगत्कारणत्वे निरीश्वरसाङ्ख्यैकदेशविरोधपरिहारादस्ति शास्त्रादिसङ्गतिः। ईश्वरस्य जगत्कारणत्वमुक्तम् । तस्य च समयविरुद्धत्वे लक्षणायुक्तेरसौ परिहरणीय एव । तदीश्वरस्याखिलकारणत्वं विषयः । युक्तमयुक्तं वेति संशयः । मतविगानं सन्देहबीजम् ।**

ಅಧಿಕರಣದ ಪ್ರಮೇಯವನ್ನು ಪ್ರಕೃತಿ ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ಈ ಆಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವವಿಷಯಕ್ಕೆ ನಿರೀಶ್ವರಸಾಂಖ್ಯೈಕದೇಶಿಗಳ ಮತದ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ಈಶ್ವರನಿಗೆ ಲಕ್ಷಣವಾಗಿ ಜಗತ್ಕಾರಣತ್ವವನ್ನು ಹೇಳಲಾಯಿತು. ಇದಕ್ಕೆ ಸಮಯವಿರೋಧವು ಪ್ರಾಪ್ತವಾದಾಗ ಜಗತ್ಕಾರಣತ್ವವು ಈಶ್ವರನ ಲಕ್ಷಣವೆಂಬುದು ಯುಕ್ತವಾಗುವುದಿಲ್ಲ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು.

ಈಶ್ವರನ ಲಕ್ಷಣವಾದ ಸಮಸ್ತ ಜಗತ್ಕಾರಣತ್ವವೇ ಅಧಿಕರಣದ ವಿಷಯ. ಈ ಲಕ್ಷಣವು ಈಶ್ವರನಿಗೆ ಯುಕ್ತವೋ ಅಯುಕ್ತವೋ ? ಎಂಬುದು ಸಂಶಯ. ಸಾಂಖ್ಯಮತದಲ್ಲಿರುವ ವಿಪ್ರತಿಪತ್ತಿಯು ಸಂದೇಹಬೀಜ.

ಅಪ್ರಧಾನವಾದ ಪ್ರಕೃತಿಯುಳ್ಳ ಪುರುಷನಿಂದ ಜಗದುತ್ಪತ್ತಿಯೆಂದು ಪೂರ್ವಪಕ್ಷ

**तत्वप्रकाशिका – न युक्तमिति पूर्वः पक्षः । प्रधानादेव जगदुत्पत्तिसम्भवेनेश्वरानुपयोगात् । न चाचेतनस्य तदनुपपत्तिदोषः । पुरुषयुक्तस्योपपत्तेः।**

ವಿಷ್ಣುವಿನ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು ಈ ಅಧಿಕರಣದ ಪೂರ್ವಪಕ್ಷ. ಪ್ರಕೃತಿಯಿಂದಲೇ ಜಗತ್ತಿನ ಸೃಷ್ಟಿ ಮೊದಲಾದವುಗಳು ಉಂಟಾಗುವುದರಿಂದ ಈಶ್ವರನ ಅವಶ್ಯಕತೆ ಇರುವುದಿಲ್ಲ. ಜಡವಾದ ಪ್ರಕೃತಿಗೆ ಜಗತ್ಕಾರಣತ್ವವು ಅನುಪಪನ್ನವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ಆ ಜಡವು ಪುರುಷನಿಂದ ಸಹಿತವಾಗಿರುವ ಕಾರಣ ಜಗತ್ಕಾರಣತ್ವವು ಯುಕ್ತವಾಗುತ್ತದೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಭಾವದೀಪ

**भावदीपः – ।। अन्यथानुमितौ च ज्ञशक्तिवियोगात् ।।९।।**

केवलाचेतनमतात् पुरुषोपसर्जनाचेतनमताच्चाधिका शङ्कोक्तिपरत्वेन शरीरेत्यादिभाष्यमवतार्य व्याचष्टे ।। **न चाचेतनस्येति ।।**

ಕೇವಲ ಅಚೇತನವೇ ಜಗತ್ತಿಗೆ ಕಾರಣವಾಗಿದೆ ಎಂಬ ಮತಕ್ಕಿಂತ ಪುರುಷನು ಗೌಣವಾಗಿ ಅಚೇತನವೇ ಪ್ರಧಾನವಾಗಿ ಜಗತ್ತನ್ನು ಸೃಷ್ಟಿ ಮಾಡುತ್ತದೆ ಎಂಬ ಮತಕ್ಕಿಂತಲೂ ಈ ಮತವು ಬಲಿಷ್ಠವಾಗಿದೆ. ಈ ದೃಷ್ಟಿಯಿಂದ 'ಶರೀರೇ' ಇತ್ಯಾದಿ ಭಾಷ್ಯಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡಲು 'ನ ಚಾಚೇತನಸ್ಯ' ಇತ್ಯಾದಿ ಗ್ರಂಥವು ಹೊರಟಿದೆ.

ಪುರುಷನೇ 'ಅಂಗೀ' 'ಕರ್ತೃ' ಎಂಬಲ್ಲಿ ಪ್ರಮಾಣವೇನು ?

**तत्वप्रकाशिका – न चाङ्गित्वानुपपत्तिः । प्रकृत्युपसर्जनपुरुषस्य कर्तृत्वाङ्गीकारात् । तथा च प्रयोगः । विमता प्रवृत्तिरचेतनोपसर्जनपुरुषाधीना प्रवृत्तित्वादश्मानयनादिप्रवृत्तिवदिति । नच दृष्टान्तदोषः शरीररोपसर्जनपुरुषस्य प्रवृत्तिदर्शनात् ।**

ಪ್ರಕೃತಿಯು ಅಪ್ರಧಾನವಾಗಿರುವುದರಿಂದ ಅಂಗಿತ್ವವ್ಯವಹಾರವು ಉಪಪನ್ನವಾಗುವುದಿಲ್ಲ ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಅಪ್ರಧಾನವಾದ ಪ್ರಕೃತಿಯಿಂದ ಕೂಡಿದ ಪುರುಷನಿಗೆ

ಕರ್ತೃತ್ವವನ್ನು ಅಂಗೀಕರಿಸುತ್ತೇವೆ. ಇಲ್ಲಿ ತಿಳಿಯಬೇಕಾದ ಅನುಮಾನಪ್ರಯೋಗ ಹೀಗಿದೆ - 'ವಿಮತಾ ಪ್ರವೃತ್ತಿಃ ಅಚೇತನೋಪಸರ್ಜನಪುರುಷಾಧೀನಾ ಪ್ರವೃತ್ತಿತ್ವಾತ್ ಅಶ್ಮಾನಯನಪ್ರವೃತ್ತಿವತ್' ಕಲ್ಲು ತರುವಿಕೆ ಮೊದಲಾದ ಪ್ರವೃತ್ತಿಯು ಪ್ರವೃತ್ತಿಯಾಗಿದೆ. ಅಚೇತನಶರೀರವು ಅಪ್ರಧಾನವಾಗಿವುಳ್ಳ ಪುರುಷಾಧೀನವಾಗಿದೆ. ಅದರಂತೆ ಜಗತ್ತಿನ ಸೃಷ್ಟಿ ಮುಂತಾದ ಪ್ರವೃತ್ತಿಯೂ ಕೂಡ ಪ್ರವೃತ್ತಿ ಆಗಿರುವುದರಿಂದ ಪ್ರಕೃತಿಯೇ ಅಪ್ರಧಾನವಾಗಿಯುಳ್ಳ ಪುರುಷನ ಅಧೀನವಾಗಿದೆ ಎಂದು ತಿಳಿಯಬೇಕು.

'ನ ಋತೇ ತ್ವತ್‌ಕ್ರಿಯತೇ' ಎಂಬ ಶ್ರುತಿಯನ್ನು ಒಪ್ಪುವುದಿಲ್ಲ.

**तत्वप्रकाशिका – श्रुतेश्चावज्ञानात् । अतो न जगत्कारणत्वलक्षणं ब्रह्मणो युक्तमिति प्राप्ते सिद्धान्तयत्सूत्रमुपन्यस्य व्याचष्टे – अन्यथेति ।।**

ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವನ್ನು ಆಕ್ಷೇಪಿಸಬಾರದು. ಶರೀರವೇ ಅಪ್ರಧಾನವಾಗಿಯುಳ್ಳ ಪುರುಷನ ಪ್ರವೃತ್ತಿಯು ಸ್ಪಷ್ಟವಾಗಿ ಕಾಣಸುತ್ತದೆ. 'ನ ಋತೇ ತ್ವತ್‌ಕ್ರಿಯತೇ' ಎಂಬ ಶ್ರುತಿಯನ್ನು ನಾವು ಒಪ್ಪುವುದಿಲ್ಲ. ಆದ್ದರಿಂದ ಜಗತ್ಕಾರಣತ್ವಲಕ್ಷಣವು ಬ್ರಹ್ಮನಲ್ಲಿ ಅಯುಕ್ತವಾಗುತ್ತದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ 'ಅನ್ಯಥಾ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಈಶ್ವರನನ್ನೇ ಇವರು ಒಪ್ಪುವುದಿಲ್ಲ

**भावदीपः** – न ऋत इति प्रागुक्तश्रुतिविरोध इत्यत आह –**श्रुतेश्चेति ।।** हैतुकंमन्यत्वादिति भावः ।। **अत इति ।।** अनुपयुक्ततया ईश्वरस्यैवाभावादित्यर्थः ।।

ಹಿಂದೆ ಹೇಳಿದ 'ನ ಋತೇ' ಎಂಬ ಶ್ರುತಿ ವಿರೋಧ ಬರುತ್ತದೆ ಅಲ್ಲವೇ? ಎಂಬ ಪ್ರಶ್ನೆಗೆ 'ಶ್ರುತೇಶ್ಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಏಕೆಂದರೆ ಈ ಹೈತುಕನು ಬೇರೆಯವನೇ ಆಗಿದ್ದಾನೆಂದು ತಿಳಿಯಬೇಕು. 'ಅತಃ' ಎಂಬ ಪದಕ್ಕೆ ಅನುಪಯುಕ್ತನಾದ್ದರಿಂದ ಈಶ್ವರನೇ ಇಲ್ಲದ ಕಾರಣ ಎಂದರ್ಥ.

### ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿದೆ

**तत्वप्रकाशिका – चशब्देनाङ्गित्वानुपपत्तेः समाकर्षः । युक्तमीश्वरस्य जगत्कारणत्वम् । प्रकृत्युपसर्जनपुरुस्य कर्तृत्वे मानाभावात् । प्राचीनपक्षादन्यथानुमितमिति चेन्न । दृष्टान्ते सध्याभावात् । तथाहि – शरीरोपसर्जनः पुरुषः प्रवर्तत इति पक्षे किं पुरुषस्य प्रवृत्तिशक्तिरस्ति न वा ।**

ಸೂತ್ರದಲ್ಲಿರುವ ಚ ಶಬ್ದದಿಂದ 'ಅಂಗಿತ್ವಾನುಪಪತ್ತೇಃ' ಎಂಬುದನ್ನು ಸಮಾಕರ್ಷ ಮಾಡಿಕೊಳ್ಳಬೇಕೆಂದು ತಿಳಿಯುತ್ತದೆ. ಈಶ್ವರನಿಗೆ ಜಗತ್ಕಾರಣತ್ವವು ಯುಕ್ತವೇ ಆಗುತ್ತದೆ. ಪ್ರಕೃತಿಯು ಅಪ್ರಧಾನವಾಗಿಯುಳ್ಳ ಪುರುಷನಿಂದ ಜಗತ್ತು ಉತ್ಪನ್ನವಾಗುತ್ತದೆಂಬ ವಿಷಯದಲ್ಲಿ ಯಾವುದೇ ಪ್ರಮಾಣ ಇರುವುದಿಲ್ಲ. ಮತ್ತು ಹಿಂದಿನ ಮತಕ್ಕಿಂತ ವಿಲಕ್ಷಣವಾಗಿ ಜೀವನಿಗೆ ಅಂಗಿತ್ವವನ್ನು ಒಪ್ಪಿರುವುದರಿಂದ ಯಾವುದೇ ದೋಷ ಬರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ದೃಷ್ಟಾಂತದಲ್ಲಿ ಸಾಧ್ಯವೇ ಇರುವುದಿಲ್ಲ. ಏಕೆಂದರೆ ಶರೀರವು ಅಪ್ರಧಾನವಾಗಿಯುಳ್ಳ ಪುರುಷನಿಂದ ಪ್ರವೃತ್ತಿಯು ಆಗುತ್ತದೆ ಎಂಬ ಪಕ್ಷದಲ್ಲಿ ಪುರುಷನಿಗೆ ಪ್ರವೃತ್ತಿ ಮಾಡುವ ಶಕ್ತಿ ಇದೆಯೋ ಇಲ್ಲವೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು,

**भावदीपः** – शरीरसम्बन्ध एवायुक्त इति भाष्यं सौत्रचशब्दादाकृष्टस्याङ्गित्वानुपपत्ते-रित्यस्य व्याख्यानमिति भावेनाह – **चशब्देनेति** ।। शरीरेत्यादिभाष्यस्य व्याख्येयं दर्शयितुं अन्यथानुमिताविति सूत्रांशं विवृणोति – **प्राचीनेति** ।। विमतेत्यादिनोक्तरीत्यानु-मितमित्यर्थः। ज्ञशक्तीत्याद्यंशस्य विवृतिपरं स्वतस्तस्यासामर्थ्यादिति भाष्यं दृष्टान्ते साध्यवैकल्यसाधकत्वेन योजयितुमन्यथानुमितावित्यंशार्थोक्तिपरभाष्यमनुवदति – **शरीरोपसर्जन इति** ।। पक्षभेदेन भाष्यं योजयितुं विकल्पयति – **किमिति** ।।

'ಶರೀರಸಂಬಂಧ ಏವಾಯುಕ್ತಃ' ಎಂಬ ಭಾಷ್ಯವು ಸೂತ್ರದಲ್ಲಿರುವ ಚಶಬ್ದದಿಂದ ಅನುವೃತ್ತಿ ಮಾಡಲ್ಪಟ್ಟ 'ಅಂಗಿತ್ವಾನುಪಪತ್ತೇಃ' ಎಂಬುದರ ವ್ಯಾಖ್ಯಾನವಾಗಿದೆ ಎಂದು ತಿಳಿಯಬೇಕು. ಈ ಅಭಿಪ್ರಾಯದಿಂದ 'ಚ ಶಬ್ದೇನ' ಇತ್ಯಾದಿ ಟೀಕಾವಾಕ್ಯವು ಈ ಅಭಿಪ್ರಾಯವನ್ನು ವ್ಯಾಖ್ಯಾನ ಮಾಡುತ್ತಿದೆ. ಶರೀರ ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯೇಯವನ್ನು ತೋರಿಸುವುದಕ್ಕಾಗಿ 'ಅನ್ಯಥಾನುಮಿತೌ' ಎಂಬ

ಸೂತ್ರಾಂಶವನ್ನು ವಿವರಿಸಲು 'ಪ್ರಾಚೀನಪಕ್ಷಾತ್' ಎಂಬ ವಾಕ್ಯವು ಹೊರಟಿದೆ. 'ಪ್ರಾಚೀನಪಕ್ಷಾತ್' ಎಂದರೆ 'ವಿಮತಃ' ಇತ್ಯಾದಿ ಅನುಮಾನ ಪಕ್ಷಕ್ಕಿಂತ ಎಂದರ್ಥ. ಸೂತ್ರದಲ್ಲಿರುವ 'ಜ್ಞಶಕ್ತಿವಿಯೋಗಾತ್' ಎಂಬ ಅಂಶವನ್ನು ಭಾಷ್ಯದಲ್ಲಿ 'ಸ್ವತಸ್ತಸ್ಯಾಸಾಮರ್ಥ್ಯಾತ್' ಇತ್ಯಾದಿ ವಾಕ್ಯವು ವಿವರಣೆ ಮಾಡುತ್ತಿದೆ. ಇದು ದೃಷ್ಟಾಂತದಲ್ಲಿ ಸಾಧ್ಯವೈಕಲ್ಯಸಾಧಕವಾಗಿದೆ ಎಂಬುದಾಗಿ ಯೋಜನೆ ಮಾಡುವುದಕ್ಕಾಗಿ 'ಅನ್ಯಥಾನುಮಿತೌ' ಎಂಬ ಸೂತ್ರದಲ್ಲಿರುವ ಅಂಶವನ್ನು ವ್ಯಾಖ್ಯಾನ ಮಾಡುವ ಭಾಷ್ಯವನ್ನು 'ಶರೀರೋಪಸರ್ಜನಃ' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ. ಪಕ್ಷಭೇದದಿಂದ ಭಾಷ್ಯವನ್ನು ಯೋಜನೆ ಮಾಡಲು ವಿಕಲ್ಪ ಮಾಡುವುದಕ್ಕಾಗಿ 'ಕಿಂ' ಇತ್ಯಾದಿ ವಾಕ್ಯವು ಹೊರಟಿದೆ.

### ಪುರುಷನಿಗೆ ಅಂಗಿತ್ವವು ಅನುಪಪನ್ನ

**तत्वप्रकाशिका – यद्यस्ति तर्हि शरीरवैयर्थ्यम् । यदि न शक्तिस्तर्हि पुरुषाङ्गित्वमनुपपन्नं स्यात्। शरीरसम्बन्धार्थं केवलस्य पुरुषस्य शक्त्यभावात्। यदि तत्रास्ति शक्तिस्तर्ह्यन्यत्रापि स्यादित्यन्यतरवैयर्थ्यम् ।**

ಒಂದುವೇಳೆ ಪುರುಷನಿಗೆ ಪ್ರವೃತ್ತಿಶಕ್ತಿಯು ಸ್ವತಂತ್ರವಾಗಿ ಇದೆ ಎಂದು ಹೇಳುವುದಾದರೆ ಶರೀರವೇ ವ್ಯರ್ಥವಾಗುತ್ತದೆ. ಒಂದುವೇಳೆ ಸ್ವತಂತ್ರಶಕ್ತಿಯು ಇಲ್ಲವೆಂದು ಹೇಳುವುದಾದರೆ ಆಗ ಪುರುಷನು ಅಂಗಿಯಾಗಿದ್ದಾನೆಂಬುದು ಅನುಪಪನ್ನವಾಗುತ್ತದೆ. ಏಕೆಂದರೆ ಶರೀರಸಂಬಂಧವನ್ನು ಹೊಂದಲು ಕೇವಲ ಪುರುಷನಿಗೆ ಶಕ್ತಿಯು ಇರುವುದಿಲ್ಲ ಶರೀರಸಂಬಂಧವನ್ನು ಪಡೆಯುವುದರಲ್ಲಿ ಪುರುಷನಿಗೆ ಶಕ್ತಿ ಇರುವುದಾದರೆ ಕಲ್ಲು ಮೊದಲಾದವುಗಳನ್ನು ಎತ್ತಲೂ ಕೂಡ ಪುರುಷನಿಗೆ ಶಕ್ತಿ ಇರುತ್ತದೆಂದು ಹೇಳಿದಂತಾಯಿತು. ಆಗ ಶರೀರವು ವ್ಯರ್ಥವಾಗುತ್ತದೆ.

**भावदीपः** – आद्यपक्ष बहिरेव निरस्यान्ते स्वत इत्यादिभाष्यं योजयति – **यदि न शक्तिस्तर्हीति**।। शक्त्यभावं द्रढयितुमाह – **यदि तत्रास्ति शक्तिरिति**।। अन्यत्रापि। अश्मानयनादावित्यर्थः।।

### ಅನವಸ್ಥಾದೋಷವು ನಿರೀಶ್ವರಸಾಂಖ್ಯರಿಗೆ ಇದೆ

**तत्वप्रकाशिका – शरीरसम्बन्धात् पूर्वमपि प्रकृतिसम्बद्धस्यास्ति शक्तिरिति चेत् तत्पूर्वमप्येवमित्यनवस्थापातात् ।**

ಶರೀರಸಂಬಂಧ ಆಗುವುದಕ್ಕಿಂತ ಮೊದಲೂ ಕೂಡ ಪ್ರಕೃತಿಯ ಸಂಬಂಧವು ಪುರುಷನಿಗಿದೆ ಎಂದು ಹೇಳಿದರೆ ಆಗ ಆ ಪ್ರಕೃತಿಸಂಬಂಧವಾಗುವ ಮೊದಲು ಮತ್ತೊಂದು ಪ್ರಕೃತಿಯ ಸಂಬಂಧ ಇದೆ ಎಂದಾಯಿತು. ಅದಕ್ಕಾಗಿ ಮತ್ತೊಂದು ಪ್ರಕೃತಿಯ ಸಂಬಂಧವನ್ನು ಒಪ್ಪಬೇಕಾಗುತ್ತದೆ. ಹೀಗೆ ಪರಂಪರೆಯನ್ನು ಹೇಳಿದರೆ ಅನವಸ್ಥಾದೋಷವನ್ನು ಇವರು ಎದುರಿಸಬೇಕು.

ಮುಕ್ತಪ್ರವೃತ್ತಿಯೂ ಸಹ ದೃಷ್ಟಾಂತವಾಗುವುದಿಲ್ಲ

**तत्वप्रकाशिका – अनादिताश्रयणे निष्प्रकृतीनां मुक्तानां प्रवृत्तिरुदाहर्तव्या। अतो यथा पुरुषस्य शरीरसम्बन्धक्रियायां न शरीरोपकृतस्य प्रवृत्तिर्नापि केवलस्येतीश्वरोऽङ्गीकार्यः।**

ಪ್ರಕೃತಿಯು ಅನಾದಿಯಾದ್ದರಿಂದ ಅನವಸ್ಥಾದೋಷವು ಬರುವುದಿಲ್ಲವೆಂದರೆ ಪ್ರಕೃತಿಯ ಸಂಬಂಧವಿಲ್ಲದ ಮುಕ್ತಜೀವರ ಪ್ರವೃತ್ತಿಯು ಕೂಡ ಪ್ರವೃತ್ತಿತ್ವ ಎಂಬ ಹೇತುವಿಗೆ ಅಲ್ಲಿ ಅಚೇತನವೇ ಪ್ರಧಾನವಾಗಿಯುಳ್ಳ ಪುರುಷನ ಪ್ರವೃತ್ತಿತ್ವವು ಇಲ್ಲವಾದ್ದರಿಂದ ಸಾಧ್ಯವು ಬರುವುದಿಲ್ಲ. ಹೀಗೆ ವ್ಯಭಿಚಾರದೋಷವು ಮುಕ್ತಜೀವರಲ್ಲಿ ಬರುತ್ತದೆ. ಆದ್ದರಿಂದ ಪುರುಷನಿಗೆ ಹೇಗೆ ಶರೀರಸಂಬಂಧ ಎಂಬ ಕ್ರಿಯೆಯಲ್ಲಿ ಶರೀರ ಉಪಕೃತವಾದ ಪ್ರವೃತ್ತಿಯು ಇರುವುದಿಲ್ಲವೋ ಅದರಂತೆ. ಶರೀರ ಸಂಬಂಧ ಇಲ್ಲದ ಸ್ಥಳದಲ್ಲಿಯೂ ಕೂಡ ಪ್ರವೃತ್ತಿಯು ಉಂಟಾಗುವುದಿಲ್ಲ. ಆದ್ದರಿಂದ ಪುರುಷನ ಪ್ರವೃತ್ತಿಗಾಗಿ ಈಶ್ವರನನ್ನು ಅಂಗೀಕಾರ ಮಾಡಲೇ ಬೇಕು.

**भावदीपः – उदाहर्तव्येति ।।** अयुक्तत्वेनोदाहर्तव्येत्यर्थः ।। **अत इति ।।** शक्त्यभावे भावे चोभयथापि दोषादित्यर्थः ।। ९ ।।

ಮೊದಲನೆಯ ಪಕ್ಷವನ್ನು ಬಹಿರೇವ ನಿರಾಕರಣೆ ಮಾಡಿ, ಸ್ವತಃ ಇತ್ಯಾದಿ ಭಾಷ್ಯವನ್ನು ಯೋಜನೆ ಮಾಡಲು 'ಯದಿ ನ ಶಕ್ತಿಃ' ಇತ್ಯಾದಿ ಗ್ರಂಥವು ಹೊರಟಿದೆ. ಶಕ್ತಿಯ ಇಲ್ಲದಿರುವಿಕೆಯನ್ನು ಸಮರ್ಥಿಸಲು 'ಯದಿ ತತ್ರಾಸ್ತಿ ಶಕ್ತಿಃ' ಇತ್ಯಾದಿ ಟೀಕಾ ವಾಕ್ಯವು ಹೊರಟಿದೆ. 'ಅನ್ಯತ್ರಾಪಿ' ಎಂದರೆ ಕಲ್ಲು ತರುವಿಕೆ ಮೊದಲಾದವುಗಳ ಕಡೆ ಎಂದರ್ಥ. 'ಉದಾಹರ್ತವ್ಯಃ' ಎಂದರೆ ಅಯುಕ್ತವಾಗಿದೆ ಎಂದು

ಉದಾಹರಿಸಬೇಕು. 'ಅತಃ' ಎಂಬ ಪದಕ್ಕೆ ಶಕ್ತಿ ಇಲ್ಲದಿದ್ದರೂ ಶಕ್ತಿಯಿದ್ದರೂ ಎರಡೂ ಪಕ್ಷಗಳಲ್ಲಿ ದೋಷವಿರುವುದರಿಂದ ಎಂದರ್ಥ.

## ಅನುಮಾನದಲ್ಲಿ ದೃಷ್ಟಾಂತ ವೈಕಲ್ಯವಿದೆ

**तत्वप्रकाशिका – तथाश्मानयनप्रवृत्तावपीति दृष्टान्ताभाव इति भावः ।।**

ಇದೇ ರೀತಿಯಾಗಿ ಕಲ್ಲು ತರುವಿಕೆ ಮೊದಲಾದ ಪ್ರವೃತ್ತಿಗಳಲ್ಲಿಯೂ ಕೂಡ ಈಶ್ವರನನ್ನು ಒಪ್ಪಲೇ ಬೇಕಾಗುತ್ತದೆ. ಕೇವಲ ಪ್ರಕೃತಿ ಅಥವಾ ಪುರುಷರ ವ್ಯಾಪಾರದಿಂದ ಈ ಪ್ರವೃತ್ತಿಯು ನಡೆಯುವುದಿಲ್ಲ. ಹಾಗಾಗಿ ದೃಷ್ಟಾಂತದಲ್ಲಿ ಪ್ರಕೃತಿಯೇ ಅಪ್ರಧಾನವಾಗಿವುಳ್ಳ ಪುರುಷಪ್ರಧಾನವಾಗಿರುವಿಕೆಯು ಇರುವುದಿಲ್ಲ. ಏಕೆಂದರೆ ಪೂರ್ವಪಕ್ಷಿಗಳು ಈಶ್ವರನನ್ನು ಒಪ್ಪಿರುವುದಿಲ್ಲ. ಆದ್ದರಿಂದ ಅನುಮಾನಕ್ಕೆ ದೃಷ್ಟಾಂತವೇ ಇರುವುದಿಲ್ಲವೆಂಬುದು ಸೂತ್ರದ ಅಭಿಪ್ರಾಯ.

## ಬ್ರಹ್ಮಸೂತ್ರ

**ब्रह्मसूत्रम् – विप्रतिषेधाच्चासमञ्जसम् ।।**

ಹೀಗೆ ಸಕಲ ಶ್ರುತಿ-ಸ್ಮೃತಿ ಯುಕ್ತಿಗಳಿಗೆ ವಿರುದ್ಧವಾದ್ದರಿಂದ ಈಶ್ವರನೇ ಇಲ್ಲವೆಂಬ ಸಾಂಖ್ಯಮತವು ಅಯುಕ್ತವಾಗಿದೆ. ವಿಪ್ರತಿಷೇಧಾಚ್ಚ = ಸಕಲಶ್ರುತಿಸ್ಮೃತಿ ಯುಕ್ತಿವಿರುದ್ಧವಾದ್ದರಿಂದ, ಅಸಮಂಜಸಮ್ = ಈಶ್ವರನನ್ನು ಒಪ್ಪದ ಸಾಂಖ್ಯಮತವು ಅಯುಕ್ತವಾಗಿದೆ.

ವಿಪ್ರತಿಷೇಧಾಚ್ಚ = ಸಕಲಶ್ರುತಿಸ್ಮೃತಿ ಯುಕ್ತಿವಿರುದ್ಧವಾದ್ದರಿಂದ ಅಸಮಂಜಸಮ್ = ಈಶ್ವರನನ್ನು ಒಪ್ಪದ ಸಾಂಖ್ಯಮತವು ಅಯುಕ್ತವಾಗಿದೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಅನ್ಯಥಾऽನುಮಿತ್ಯಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಅನೀಶ್ವರಮತವು ಅಸಮಂಜಸ

**ब्रह्मसूत्रभाष्यम् – ।। विप्रतिषेधाच्चासमञ्जसम् ।।२।।**

**सकलश्रुतिस्मृतियुक्तिविरुद्धत्वाच्च अनीश्वरमतमसमञ्जसम् ।**

**'श्रुतयः स्मृतयश्चैव युक्तयश्चेश्वरं परम् ।**

**वदन्ति तद्विरुद्धं यो वदेत् तस्मान्न चाधमः ।।' इति पाद्मे ।।२।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये अन्यथाऽनुमित्यधिकरणम् ।।५।।**

ಅನುವಾದ - ಎಲ್ಲಾ ವಿಧವಾದ ಶ್ರುತಿ ಸ್ಮೃತಿ ಯುಕ್ತಿಗಳಿಗೆ ವಿರುದ್ಧವಾದ್ದರಿಂದ ನಿರೀಶ್ವರ ಸಾಂಖ್ಯಮತವು ಅಸಾಧುವಾಗಿದೆ.

ಶ್ರುತಿಗಳು ಸ್ಮೃತಿಗಳು ಮತ್ತು ಯುಕ್ತಿಗಳು ಪರಮಾತ್ಮನನ್ನು ಸರ್ವೇಶ್ವರ ಎಂದು ಹೇಳುತ್ತಿವೆ ಅದಕ್ಕೆ ವಿರುದ್ಧವಾಗಿ ಹೇಳಿದರೆ ಆ ವ್ಯಕ್ತಿಗಳಿಗಿಂತ ನೀಚರಾದವರು ಮತ್ತೊಬ್ಬರಿಲ್ಲ. ಹೀಗೆ ಪದ್ಮಪುರಾಣವು ಹೇಳಿದೆ.

ಪ್ರತಿಪದಾರ್ಥ -- ಇಲ್ಲಿಯತನಕ ಪ್ರತ್ಯೇಕವಾಗಿ ದೂಷಣೆ ಮಾಡಿದ ನಿರೀಶ್ವರ ಮತಗಳನ್ನು ಸಾಮಾನ್ಯದೋಷದಿಂದ ನಿರಾಕರಿಸುತ್ತಿದ್ದಾರೆ. ಸಕಲಶ್ರುತಿಸ್ಮೃತಿಯುಕ್ತಿವಿರುದ್ಧತ್ವಾತ್ = ಎಲ್ಲ ವಿಧವಾದ ಶ್ರುತಿಸ್ಮೃತಿ ಹಾಗೂ ಯುಕ್ತಿಗಳಿಗೆ ವಿರುದ್ಧವಾದ್ದರಿಂದ, ಅನೀಶ್ವರಮತಮ್ = ಈಶ್ವರನನ್ನು ಒಪ್ಪದೆ ಇರುವ ದರ್ಶನಗಳು, ಅಸಮಂಜಸಮ್ = ಅಯುಕ್ತವಾಗಿವೆ.

ಶ್ರುತಯಃ = ಶ್ರುತಿಗಳು, ಸ್ಮೃತಯಶ್ಚೈವಃ = ಸ್ಮೃತಿಗಳೂ ಕೂಡ, ಯುಕ್ತಯಶ್ಚ = ಯುಕ್ತಿಗಳೂ ಕೂಡ, ಈಶ್ವರಂ = ಪರಮಾತ್ಮನನ್ನು, ಪರಂ = ಸರ್ವೋತ್ತಮನೆಂದು, ವದಂತಿ = ಹೇಳುತ್ತಿವೆ. ತದ್ವಿರುದ್ಧಂ = ಇದಕ್ಕೆ ವಿರುದ್ಧವಾಗಿ, ಯಃ = ಯಾರು ವದೇತ್ ಹೇಳುತ್ತಾನೋ,

ತಸ್ಮಾತ್ = ಅವನಿಗಿಂತ, ಅಧಮಃ = ನೀಚವಾದವನು, ನಚ = ಇರುವುದಿಲ್ಲ. ಇತಿ = ಹೀಗೆ, ಪಾದ್ಮೇ = ಪದ್ಮಪುರಾಣದಲ್ಲಿ ಹೇಳಲಾಗಿದೆ.

. ॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಅನ್ಯಥಾऽನುಮಿತ್ಯಧಿಕರಣವು ಸಮಾಪ್ತವಾಯಿತು ॥

## ತತ್ವಪ್ರಕಾಶಿಕಾ

**तत्वप्रकाशिका – एवं प्रत्येकं दूषितान्यनीश्वरमतानि सामान्यदूषणेन निराकुर्वत् सूत्रमुपन्यस्य व्याचष्टे – विप्रतिषेधादिति ।।**

ಪ್ರತ್ಯೇಕವಾಗಿ ದೋಷಿಸಲ್ಪಟ್ಟ ಈಶ್ವರನನ್ನು ಒಪ್ಪದ ಮತಗಳಿಗೆ ಪ್ರಕೃತ ಸಾಮಾನ್ಯದೋಷದಿಂದ ನಿರಾಕರಣೆ ಮಾಡುವ ಸೂತ್ರವನ್ನು 'ವಿಪ್ರತಿಷೇಧಾತ್' ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಈ ಅಧಿಕರಣದ ಪ್ರಥಮಸೂತ್ರದಲ್ಲಿ ಸಾಂಖ್ಯರು ಹೇಳಿದ ಅನುಮಾನಕ್ಕೆ ಸಾಧ್ಯವೈಕಲ್ಯದೋಷವನ್ನು ಹೇಳಲಾಯಿತು. ಎರಡನೆಯ ಸೂತ್ರದಲ್ಲಿ ಹಿಂದಿನ ಮತಗಳಂತೆ ಈ ಮತಕ್ಕೂ ಶ್ರುತಿಸ್ಮೃತಿಗಳ ವಿರೋಧ ಇದೆ ಎಂದು ಹೇಳುತ್ತಿದ್ದಾರೆ.

**तत्वप्रकाशिका – कुतोऽनीश्वरमतानां श्रुत्यादिविरुद्धत्वमित्यत आह – श्रुतय इति ।। नात्र सेश्वरसाङ्ख्येन सन्तोष्टव्यम् । स्वातन्त्र्यानभ्युपगमात् । 'ईश्वरं परं वदन्ति' इति हि स्मृतिः । अतो न साङ्ख्यादिमतविरोधेन लक्षणासम्भव इति सिद्धम्।।**

**।। इति श्रीमज्जयतीर्थभिक्षुविरचितायां तत्वप्रकाशिकायाम् अन्यथाऽनुममित्यधिकरणम्।।**

ಈಶ್ವರನನ್ನು ಒಪ್ಪದ ಮತಗಳಿಗೆ ಶ್ರುತಿಸ್ಮೃತಿಗಳ ವಿರೋಧವು ಏಕೆ ಬರುತ್ತದೆ ? ಎಂಬ ಪ್ರಶ್ನೆಗೆ 'ಶ್ರುತಯಃ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ನಿರೀಶ್ವರಸಾಂಖ್ಯರನ್ನು ನೋಡಿ ಸಂತೋಷ ಪಡಲು ಸಾಧ್ಯವಿಲ್ಲ. ಈಶ್ವರನನ್ನು ಅವರು ಒಪ್ಪಿದರೂ ಕೂಡ ಸ್ವಾತಂತ್ರ್ಯವನ್ನು ಒಪ್ಪಿರುವುದಿಲ್ಲ. ಏಕೆಂದರೆ ಈಶ್ವರನನ್ನು ಶ್ರುತಿಗಳು ಸರ್ವೋತ್ತಮ ಎಂದು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಸಾಂಖ್ಯ ಮೊದಲಾದ ಸಮಯಗಳ ವಿರೋಧ ಬರುವುದರಿಂದ ಬ್ರಹ್ಮನ ಲಕ್ಷಣವು ಅಸಂಭಾವಿತವಾಗಿದೆ ಎಂದು ಸಿದ್ಧವಾಯಿತು.

ವಿವರಣೆ - ಯಾರು ಈಶ್ವರನನ್ನು ಒಪ್ಪುವುದಿಲ್ಲವೋ ಅವರಿಗೆ ಶ್ರುತಿಸ್ಮೃತಿಗಳ ವಿರೋಧವು ಬರುತ್ತದೆಂದು ಹೇಳಿದಾಗ ಈಶ್ವರನನ್ನು ಒಪ್ಪುವ ಸಾಂಖ್ಯನು ಸಂತೋಷ ಪಡಬಹುದು. 'ನಾನು ಈಶ್ವರನನ್ನು ಒಪ್ಪುವುದರಿಂದ ನನಗೆ ಶ್ರುತಿಸ್ಮೃತಿಗಳ ವಿರೋಧ ಬರುವುದಿಲ್ಲ' ಎಂದು. ಆದರೆ ಯಾವ ಶ್ರುತಿಸ್ಮೃತಿಗಳು ಈಶ್ವರನನ್ನು ಪ್ರತಿಪಾದನೆ ಮಾಡುತ್ತಿವೆಯೋ ಅದೇ ಶ್ರುತಿಸ್ಮೃತಿಗಳು ಈಶ್ವರನಿಗೆ ಸರ್ವೋತ್ತಮತ್ವವನ್ನು ಕೂಡ ಪ್ರತಿಪಾದನೆ ಮಾಡುತ್ತಿವೆ. ಸೇಶ್ವರಸಾಂಖ್ಯನು ಈಶ್ವರನನ್ನು ಒಪ್ಪಿದರೂ ಕೂಡ ಅವನಲ್ಲಿ ಸರ್ವೋತ್ತಮತ್ವವನ್ನು ಒಪ್ಪುವುದಿಲ್ಲ. ಪ್ರಕೃತಿಗೆ ಅನುಗ್ರಹ ಮಾಡುವವನು ಎಂದಷ್ಟೇ ಒಪ್ಪುತ್ತಾನೆ. ಆದ್ದರಿಂದ ಸೇಶ್ವರಸಾಂಖ್ಯವಾದಿಗಳಿಗೂ ಕೂಡ ಶ್ರುತಿಸ್ಮೃತಿಗಳ ವಿರೋಧವು ಬಂದೇ ಬರುತ್ತದೆ. ಹೀಗೆ ಸಕಲ ಅನೀಶ್ವರವಾದಿಗಳಿಗೆ ಶ್ರುತಿಸ್ಮೃತಿಗಳ ವಿರೋಧವು ತಪ್ಪಿದ್ದಲ್ಲ. ಇಲ್ಲಿಗೆ ಈಶ್ವರನನ್ನು ಒಪ್ಪದ ಮತದವರ ನಿರಾಕರಣೆಯು ಮುಗಿಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ತ್ವಪ್ರಕಾಶಿಕಾಟೀಕೆಯಲ್ಲಿ ಅನ್ಯಥಾಽನುಮಿತ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಭಾವದೀಪ

**भावदीपः –** **।। विप्रतिषेधाच्चासमञ्जसम् ।।१०।।** भाष्ये निरीश्वरमतम ञ्जसमिति सामान्योक्त्यनुरोधेनाह – **एवं प्रत्येकं दूषितानीति।' अत इति।।** साङ्ख्यादिमतानामसमञ्जसत्वादित्यर्थः।। १० ।।

**।। इति राघवेन्द्रयतिकृते भावदीपे अन्यथाऽनुमित्यधिकरणम् ।।**

ಭಾಷ್ಯದಲ್ಲಿ ನಿರೀಶ್ವರಮತವು ಅಸಮಂಜಸವಾಗಿದೆ ಎಂದು ಸಾಮಾನ್ಯವಾಗಿ ಹೇಳಿದ್ದಾರೆ. ಅದಕ್ಕನುಗುಣವಾಗಿ 'ಏವಂ ಪ್ರತ್ಯೇಕಂ ದೂಷಿತಾನಿ' ಇತ್ಯಾದಿ ವಾಕ್ಯವು ಹೊರಟಿದೆ. 'ಅತಃ' ಎಂಬ ಪದಕ್ಕೆ ಸಂಖ್ಯಾದಿಮತಗಳು ಅಸಮಂಜಸವಾಗಿರುವುದರಿಂದ ಎಂದರ್ಥ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಅನ್ಯಥಾऽನುಮಿತ್ಯಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

**।। श्रीजानकीवदनाम्भोजराजहंसाय रामचन्द्राय नमः ।।**
**।। श्री गुरुभ्यो नमः ।।**
**श्री राघवेन्द्रतीर्थविरचिता**

# तन्त्रदीपिका

**अन्यथानुमित्यधिकरणम् - ५**

अन्यथाऽनुमितौ च ज्ञशक्तिवियोगात् ।।२-२-९।।

अत्र प्रागुक्ताज्ञित्वानुपपत्त्युद्धारेण प्राप्तं जीवप्रधानकर्तृवादं प्रत्याचष्टे । चशब्देनाज्ञित्वानुपपत्तेराकर्षः । अन्यथा प्रागुक्तादन्यथा जीवस्य प्राधान्येन

**प्रकृतेर्गुणत्वेन पुरुषाश्मदृष्टान्तेनैवानुमितौ चाङ्गित्वानुपपत्तिः । कुतः? ज्ञशक्तिवियोगात् । जानातीति ज्ञः । इगुपधज्ञाप्रीकिरः कः । ज्ञस्य पुरुषस्य शरीरसम्बन्धे शक्त्यभावात्तदुपसर्जनकपुरुषकर्तृत्वपक्षे तेन विना तत्सम्बन्धे सामार्थ्याभावाद् दृष्टान्ताभावादिति भावः । इतरेत्यत्र श्रुत्यादिप्राप्तं जीवकर्तृत्वम् अत्र तु समयप्राप्तं निरस्यत इति भेदः ।।**

ಹಿಂದಿನ ಸೂತ್ರದಲ್ಲಿ ಯಾವ 'ಅಂಗಿತ್ವಾನುಪಪತ್ತಿಃ' ಎಂಬ ದೋಷವನ್ನು ಹೇಳಿದರೋ, ಅದನ್ನು ಪರಿಹಾರ ಮಾಡುವ ಮೂಲಕ ಜೀವನೇ ಮುಕ್ತಿಕರ್ತೃವಾಗಿದ್ದಾನೆ ಎಂಬ ವಾದವನ್ನು ಯಾರು ಹೇಳುತ್ತಾರೋ, ಅವರ ವಾದವನ್ನು ನಿರಾಕರಣೆ ಮಾಡುವುದಕ್ಕಾಗಿ ಈ ಅಧಿಕರಣವು ಪ್ರವೃತ್ತವಾಗಿದೆ.

ಸೂತ್ರದಲ್ಲಿ ಚಶಬ್ದವಿದೆ. ಅಂಗಿತ್ವಾನುಪಪತ್ತಿ ಎಂಬ ದೋಷವನ್ನು ಇವರ ಪಕ್ಷದಲ್ಲೂ ಕೂಡ ಯೋಜನೆ ಮಾಡಿಕೊಳ್ಳಬೇಕೆಂದು ಇದು ಸೂಚಿಸುತ್ತಿದೆ.

ಅನ್ಯಥಾ = ಹಿಂದೆ ಹೇಳಿದ್ದಕ್ಕಿಂತ ವಿಭಿನ್ನವಾಗಿ ಜೀವನೇ ಮುಖ್ಯಕರ್ತೃವಾಗಿದ್ದಾನೆ ಪ್ರಕೃತಿಯು ಅಮುಖ್ಯಕರ್ತೃವಾಗಿದೆ ಎಂದು ಕೆಲವರು ಹೇಳುತ್ತಾರೆ. ಇವರೂ ಕೂಡ ಪುರುಷಾಶ್ಮದೃಷ್ಟಾಂತದಿಂದಲೇ ಇದನ್ನು ಸಮರ್ಥಿಸುತ್ತಾರೆ. ಅನುಮಿತೌ ಚ = ಪುರುಷಾಶ್ಮದೃಷ್ಟಾಂತದಿಂದ ಅನುಮಾನ ಮಾಡಿದರೂ ಕೂಡ ಅಂಗಿತ್ವಾನುಪಪತ್ತಿ ಎಂಬ ದೋಷವು ಪ್ರಾಪ್ತವಾಗುತ್ತದೆ. ಕಾರಣವೇನೆಂದರೆ, ಜ್ಞಶಕ್ತಿವಿಯೋಗಾತ್ = ಇಗುಪಧಜ್ಞಾಪ್ರೀಕಿರಃ ಎಂಬ ಸೂತ್ರದ ಪ್ರಕಾರ 'ಜ್ಞಾ' ಧಾತುವಿಗೆ 'ಕ' ಪ್ರತ್ಯಯವು ಬಂದರೆ 'ಜಾನಾತೀತಿ ಜ್ಞಃ' ಎಂಬ ವ್ಯುತ್ಪತ್ತಿಯಂತೆ 'ಜ್ಞ' ಶಬ್ದಕ್ಕೆ ಜೀವ ಎಂಬರ್ಥವು ತಿಳಿಯುತ್ತದೆ. ಪ್ರಕೃತಿಯು ಅಪ್ರಧಾನವಾಗಿದೆ. ಜೀವನೇ ಪ್ರಧಾನವಾಗಿದ್ದಾನೆ ಎಂಬ ವಾದವನ್ನು 'ಜ್ಞ' ಎನಿಸಿದ ಪುರುಷನಿಗೆ ಶರೀರಸಂಬಂಧವನ್ನು ಪಡೆಯಲು ಸ್ವತಂತ್ರವಾದ ಸಾಮರ್ಥ್ಯವು ಇರುವುದಿಲ್ಲ. ಅದಕ್ಕಾಗಿ ಈಶ್ವರನನ್ನು ಅವನು ಅಪೇಕ್ಷೆ ಪಡಲೇ ಬೇಕು. ಆದ್ದರಿಂದ ದೃಷ್ಟಾಂತವೇ ಇರುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

'ಇತರವ್ಯಪದೇಶಾತ್' ಎಂಬ ಸೂತ್ರದಲ್ಲಿ ಶ್ರುತ್ಯಾದಿಗಳಿಂದ ಪ್ರಾಪ್ತವಾದ ಜೀವಕರ್ತೃತ್ವವನ್ನು ನಿರಾಕರಣೆ ಮಾಡಲಾಯಿತು. ಈ ಅಧಿಕರಣದಲ್ಲಿ ಸಮಯಪ್ರಾಪ್ತವಾದ ಜೀವಕರ್ತೃತ್ವವನ್ನು ನಿರಾಕರಣೆ ಮಾಡಲಾಗಿದೆ. ಆದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲ.

**ವಿವರಣೆ** - ಜೀವನಿಗೆ ಮುಖ್ಯಕರ್ತೃತ್ವವಿದೆ ಎಂಬ ವಿಷಯದಲ್ಲಿ ಅನುಮಾನವನ್ನು ಸಾಂಖ್ಯರು ಹೇಳುತ್ತಾರೆ. ಆದರೆ ಜೀವನಿಗೆ ಜಡವಾದ ಶರೀರವನ್ನು ಹೊಂದಲು ಸಾಮರ್ಥ್ಯವೇ ಇರುವುದಿಲ್ಲ. ಅದಕ್ಕಾಗಿ ಈಶ್ವರನನ್ನು ಅವನು ಅಪೇಕ್ಷೆ ಪಡಲೇ ಬೇಕು. ಜೀವನೇ ಮುಖ್ಯಕರ್ತೃವಾಗಿದ್ದಾನೆಂದು ಅನುಮಾನವನ್ನು ಹೇಳಲು ಸಾಧ್ಯವಿಲ್ಲ.

ಈ ಅಧಿಕರಣದಲ್ಲಿ ಜೀವಕರ್ತೃತ್ವವನ್ನೇ ನಿರಾಕರಣೆ ಮಾಡಲಾಗಿದೆ. ಆದರೆ ಇತರವ್ಯಪದೇಶಾಧಿಕರಣದಿಂದಲೇ ಈ ಪ್ರಮೇಯವು ಸಿದ್ಧವಾಗುವುದರಿಂದ ಈ ಅಧಿಕರಣವು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. ಶ್ರುತಿಪ್ರಾಪ್ತವಾದ ಜೀವಕರ್ತೃತ್ವವಾದವನ್ನು ಇತರವ್ಯಪದೇಶಾಧಿಕರಣದಲ್ಲಿ ನಿರಾಕರಣೆ ಮಾಡಿದ್ದಾರೆ. ಸಮಯಪ್ರಾಪ್ತವಾದ ಜೀವಕರ್ತೃತ್ವ-ವಾದವನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಹೀಗೆ ಪ್ರತಿಪಾದ್ಯವಾದ ವಿಷಯದಲ್ಲಿ ಭೇದವಿರುವುದರಿಂದ ಅಧಿಕರಣದ್ವೈವಿಧ್ಯವು ಯುಕ್ತವಾಗುತ್ತದೆ.

**सामान्यदोषेणापि प्राक्तनसर्वपक्षान्निराह -**

**विप्रतिषेधाच्चासमञ्जसम् ।।२-२-१०।।**

**सर्वश्रुतिस्मृतियुक्तिविरुद्धत्वाच्चानीश्वरमतमसमञ्जसमित्यर्थः ।।५।।**

ಐದು ಅಧಿಕರಣಗಳಲ್ಲಿ ಪ್ರಸಕ್ತರಾದ ಐದು ಮಂದಿ ಸಮಯಿಗಳಿಗೆ ಸಾಮಾನ್ಯದೋಷವನ್ನು ಹೇಳುವ ಮೂಲಕ ಎಲ್ಲವನ್ನು ನಿರಾಕರಣೆ ಮಾಡುತ್ತಿದ್ದಾರೆ - 'ವಿಪ್ರತಿಷೇಧಾಚ್ಚಾಸಮಂಜಸಮ್'.

ವಿಪ್ರತಿಷೇಧಾತ್ = ಸಕಲ ಶ್ರುತಿ-ಸ್ಮೃತಿ, ಯುಕ್ತಿಗಳಿಂದ ವಿರುದ್ಧವಾಗಿರುವ ಕಾರಣದಿಂದ ಅನೀಶ್ವರಮತವು, ಅಸಮಂಜಸಮ್ = ಅಯುಕ್ತವಾಗಿದೆ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಅನ್ಯಥಾऽನುಮಿತ್ಯಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ವೈಶೇಷಿಕಾಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥
॥ ಶ್ರೀವೇದವ್ಯಾಸಾಯ ನಮಃ ॥
॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥
॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥
॥ ಶ್ರೀಗುರುಭ್ಯೋ ನಮಃ ॥

# ವೈಶೇಷಿಕಾಧಿಕರಣ

## ಬ್ರಹ್ಮಸೂತ್ರ

### 'ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಮ್' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – महद्दीर्घवद्वा ह्रस्वपरिमण्डलाभ्याम् ॥**

ವೈಶೇಷಿಕರು ತ್ರ್ಯಣುಕಾದಿಗಳಲ್ಲಿರುವ ಮಹತ್ವದೀರ್ಘತ್ವಗಳಿಂದ ಚತುರಣುಕಾದಿಗಳ ಮಹತ್ವದೀರ್ಘತ್ವ ಪರಿಮಾಣಗಳು ಹುಟ್ಟುತ್ತವೆನ್ನುತ್ತಾರೆ. ಹಾಗಾದರೆ ಪರಮಾಣುವಿನಲ್ಲಿರುವ ಅಣುತ್ವಹ್ರಸ್ವತ್ವಗಳ ಪರಿಮಾಣಗಳಿಂದ ದ್ವ್ಯಣುಕದಲ್ಲಿ ಪರಿಮಾಣವು ಹುಟ್ಟಬೇಕಾದೀತು.

ಅರ್ಥ -- ಮಹದ್ದೀರ್ಘವತ್ = ವೈಶೇಷಿಕರ ಮತದಲ್ಲಿ ತ್ರ್ಯಣುಕಾದಿಗಳಲ್ಲಿರುವ ಮಹತ್ವದೀರ್ಘತ್ವಗಳಿಂದ ಚತುರಣುಕಾದಿಗಳಲ್ಲಿ ಪರಿಮಾಣುಗಳು ಹುಟ್ಟುತ್ತವೆ ಎಂದು ಹೇಳುವಂತೆ ಹ್ರಸ್ವಪರಿಮಂಡಲಾಭ್ಯಾಮ್ = ದ್ವ್ಯಣುಕ ಹಾಗೂ ಪರಿಮಾಣುಗಳಲ್ಲಿರುವ ಹ್ರಸ್ವತ್ವ, ಅಣುತ್ವ ಎಂಬ ಪರಿಮಾಣಗಳಿಂದ ತ್ರ್ಯಣುಕ ಹಾಗೂ ದ್ವ್ಯಣುಕಗಳಲ್ಲಿಯೂ ಪರಿಮಾಣವು ಉತ್ಪತ್ತಿಯಾಗಲಿ. ಹೀಗೊಪ್ಪದಿದ್ದರೆ ಮಹತ್ವ ದೀರ್ಘತ್ವಗಳಿಂದಲೂ ಕಾರ್ಯದ ಉತ್ಪತ್ತಿಯು ಆಗದಿರಬೇಕಾದೀತು. ಆದ್ದರಿಂದ ವೈಶೇಷಿಕರ ಮತವು ಅನುಪಪನ್ನವಾಗಿದೆ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ವೈಶೇಷಿಕಮತದ ನಿರಾಕರಣೆ

**ब्रह्मसूत्रभाष्यम् — परमाण्वारम्भवादमपाकरोति ।**

ಅನುವಾದ - ಪರಮಾಣುಗಳಿಂದಲೇ ಜಗತ್ತು ಹುಟ್ಟುತ್ತದೆ ಎಂದು ಹೇಳುವ ವೈಶೇಷಿಕರ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ.

> ಪ್ರತಿಪದಾರ್ಥ -- ಈ ಅಧಿಕರಣದ ಪ್ರಮೇಯವು ಹೀಗಿದೆ - ಪರಮಾಣ್ವಾರಂಭವಾದಮ್ - ಪರಮಾಣುಗಳಿಂದಲೇ ಜಗತ್ತು ಉತ್ಪನ್ನವಾಗುತ್ತದೆಂದು ಹೇಳುವ ವೈಶೇಷಿಕರ ವಾದವನ್ನು ಅಪಾಕರೋತಿ = ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ.

**भाष्यम् — ।। महद्दीर्घवद् वा ह्रस्वपरिमण्डलाभ्याम् ।।१।।**

> **महत्त्वाद् दीर्घत्वाच्च यथा कार्यमुत्पद्यते, एवं ह्रस्वत्वात् पारिमाण्डल्याच्चोत्पद्येत ।**

ಅನುವಾದ - ತ್ರ್ಯಣುಕಾದಿಗಳಲ್ಲಿರುವ ಮಹತ್ತ್ವ ದೀರ್ಘತ್ವ ಮೊದಲಾವುಗಳಿಂದ ಕಾರ್ಯವು ಹುಟ್ಟುವುದು ಹೇಗೆ ಕಂಡಿದೆಯೋ ಅದರಂತೆ ಪರಮಾಣುವಿನಲ್ಲಿರುವ ಹ್ರಸ್ವತ್ವಪರಿಮಂಡಲತ್ವ ಮೊದಲಾದ ಧರ್ಮಗಳಿಂದಲೂ ಕಾರ್ಯವು ಹುಟ್ಟಬೇಕಾದೀತು.

> ಪ್ರತಿಪದಾರ್ಥ:-ಮಹತ್ತ್ವಾತ್ = ಮಹತ್ತ್ವದಿಂದ, ಚ = ಮತ್ತು, ದೀರ್ಘತ್ವಾತ್ = ದೀರ್ಘತ್ವದಿಂದ, ಕಾರ್ಯಂ = ಕಾರ್ಯವು, ಯಥಾ = ಹೇಗೆ, ಉತ್ಪದ್ಯತೇ = ಹುಟ್ಟುತ್ತದೋ, ಏವಂ = ಅದರಂತೆ, ಹ್ರಸ್ವತ್ವಾತ್ = ಹ್ರಸ್ವತ್ವದಿಂದ, ಪಾರಿಮಾಂಡಲ್ಯಾತ್ = ಅಣುಪರಿಮಾಣದಿಂದ, ಉತ್ಪದ್ಯೇತ = ಕಾರ್ಯವು ಹುಟ್ಟಬೇಕಾದೀತು.

## ಸೂತ್ರದಲ್ಲಿರುವ ವಾ ಶಬ್ದದ ಅಭಿಪ್ರಾಯ

**ब्रह्मसूत्रभाष्यम् – वाशब्दादन्यथैतयोरपि न स्याद् विशेषकारणाभावात् ॥१॥**

ಅನುವಾದ - ಸೂತ್ರದಲ್ಲಿರುವ ವಾ ಶಬ್ದವು ಹ್ರಸ್ವತ್ವ ಮತ್ತು ಅಣುತ್ವಗಳಿಂದ ಕಾರ್ಯವು ಹುಟ್ಟದಿದ್ದರೆ ಮಹತ್ವ ಮತ್ತು ದೀರ್ಘತ್ವಗಳಿಂದಲೂ ಕಾರ್ಯವು ಹುಟ್ಟದೆ ಇರಬೇಕಾದೀತು ಎಂಬುದನ್ನು ತಿಳಿಸುತ್ತಿದೆ. ಏಕೆಂದರೆ ಮಹತ್ವ ಮತ್ತು ದೀರ್ಘತ್ವಗಳಿಂದ ಮಾತ್ರ ಕಾರ್ಯ ಹುಟ್ಟುತ್ತದೆ, ಅಣುತ್ವ ಮತ್ತು ಹ್ರಸ್ವತ್ವಗಳಿಂದ ಕಾರ್ಯವು ಹುಟ್ಟುವುದಿಲ್ಲವೆನ್ನಲು ವಿಶೇಷಕಾರಣವಿರುವುದಿಲ್ಲ.

> ಪ್ರತಿಪದಾರ್ಥ:-ವಾ ಶಬ್ದಾತ್ = ಸೂತ್ರದ 'ವಾ' ಶಬ್ದದಿಂದ ಇದನ್ನು ತಿಳಿಯಬೇಕು. ಅನ್ಯಥಾ = ಹ್ರಸ್ವತ್ವ ಅಣುತ್ವಗಳಿಂದ ಕಾರ್ಯ ಹುಟ್ಟದಿದ್ದರೆ, ಏತಯೋರಪಿ = ಮಹತ್ವ ದೀರ್ಘತ್ವಗಳಿಂದಲೂ, ನ ಸ್ಯಾತ್ = ಕಾರ್ಯ ಹುಟ್ಟದೆ ಇರಬೇಕಾದೀತು, ವಿಶೇಷಕಾರಣಾಭಾವಾತ್ = ಎರಡರಲ್ಲೂ ವ್ಯತ್ಯಾಸವೇನಿಲ್ಲ.

## ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ
# ಸತ್ತರ್ಕದೀಪಾವಳಿ

**सत्तर्कदीपावळिः – वैशेषिकाभ्युपगतपरमाण्वारम्भापाकरणत्वेन महद्दीर्घवदित्येतत् सूत्रं व्याचष्टे – महत्वादित्यादिना ।**

ವೈಶೇಷಿಕರು ಪರಮಾಣುವಿನಿಂದಲೇ ಸಕಲ ಸೃಷ್ಟಿಯನ್ನು ಅಂಗೀಕಾರ ಮಾಡಿದ್ದಾರೆ. ಇವರ ಮತವನ್ನು ನಿರಾಕರಣೆ ಮಾಡುವುದಕ್ಕಾಗಿ 'ಮಹದ್ದೀರ್ಘವದ್ವಾ' ಎಂಬ ಸೂತ್ರವು ಹೊರಟಿದೆ. ಅದನ್ನು ಭಾಷ್ಯದಲ್ಲಿ 'ಮಹತ್ವಾತ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**सत्तर्कदीपावळिः – परमाणुपरिमाणकारणकतया द्व्यणुकपरिमाणानुत्पत्तौ द्व्यणुकपरमाणुकरणकतया त्र्यणुकपरिमाणानिष्पत्तौ परमाणुकारकतया**

**ह्यणुकोत्पत्तिः ह्यणुककारणतया त्र्यणुकोत्पत्तिश्च न स्यात् । न हि द्रव्याणामेव कार्यकारणभावः न तु तत्परिणामानामित्येतद्दृष्टं क्वचित्त्र्यणुकादिष्वित्यभिप्रायः ।**

ದ್ವ್ಯಣುಕಪರಿಮಾಣವು ಪರಮಾಣು ಪರಿಮಾಣವೇ ಕಾರಣವಾಗಿ ಹುಟ್ಟದೇ ಇದ್ದರೆ ಮತ್ತು ತ್ರ್ಯಣುಕಪರಿಮಾಣಕ್ಕೆ ದ್ವ್ಯಣುಕಪರಿಮಾಣವು ಕಾರಣವಾಗದೇ ಹುಟ್ಟುವುದಾದರೆ, ದ್ವ್ಯಣುಕವೂ ಕೂಡ ಪರಮಾಣುವಿನಿಂದ ಹುಟ್ಟುವುದು ಬೇಡ. ತ್ರ್ಯಣುಕವೂ ಕೂಡ ದ್ವ್ಯಣುಕದಿಂದ ಹುಟ್ಟುವುದು ಬೇಡ. ದ್ರವ್ಯಗಳಲ್ಲಷ್ಟೇ ಕಾರ್ಯಕಾರಣಭಾವವಿರುತ್ತದೆ. ತತ್ ಪರಿಮಾಣಗಳಲ್ಲಿ ಕಾರ್ಯಕಾರಣಭಾವವಿರುವುದಿಲ್ಲ ಎಂದು ತ್ರ್ಯಣುಕಾದಿಗಳಲ್ಲಿ ಎಲ್ಲೂ ಕೂಡ ಕಂಡಿಲ್ಲ. ಆ ಪರಿಮಾಣಗಳಲ್ಲಿ ಕಾರ್ಯಕಾರಣಭಾವವನ್ನು ಒಪ್ಪಬಾರದು.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

ಪರಮಾಣ್ವಾರಂಭವಾದದ ನಿರೂಪಣೆ

**तत्वप्रदीपः – अत्र परमाण्वारम्भवादिनो वदन्ति इच्छाज्ञानप्रयत्नसङ्ख्या-परिमाणपृथक्त्वसंयोगविभागैर्गुणैस्समवेत ईश्वरोऽस्ति । तदिच्छाऽदृष्टकाल-निमित्तैः परमाणवः पार्थिवाद्याश्चतुर्विधाः सृष्टिकाले द्विश एव संयुज्यमाना ह्यणुकानि कार्याण्यारभन्ते ।**

ಪರಮಾಣ್ವಾರಂಭವಾದಿಗಳು ಈ ಸಂದರ್ಭದಲ್ಲಿ ಹೀಗೆ ಹೇಳುತ್ತಾರೆ - ಇಚ್ಛೆ, ಜ್ಞಾನ, ಪ್ರಯತ್ನ, ಸಂಖ್ಯೆ, ಪೃಥಕ್ತ್ವ, ಸಂಯೋಗ, ವಿಭಾಗ ಎಂಬ ಎಂಟು ಗುಣಗಳಿಂದ ಮಾತ್ರ ಈಶ್ವರನು ಯುಕ್ತನಾಗಿದ್ದಾನೆ. ಇಂಥ ಈಶ್ವರನ ಇಚ್ಛೆಯಿಂದ ಅದೃಷ್ಟಕಾಲಗಳೆಂಬ ನಿಮಿತ್ತ ಕಾರಣಗಳಿಂದ ತಮ್ಮ ಕೆಲಸವನ್ನು ಪ್ರಾರಂಭಿಸುತ್ತವೆ. ಪಾರ್ಥಿವಪರಮಾಣು, ಆಪ್ಯಪರಮಾಣು, ತೈಜಸಪರಮಾಣು, ವಾಯುವೀಯ ಪರಮಾಣು ಎಂಬ ನಾಕುಬಗೆಯ ಪರಮಾಣುಗಳಿವೆ.

ಸೃಷ್ಟಿಯ ಪ್ರಾರಂಭದಲ್ಲಿ ಇವುಗಳು ಎರಡೆರಡಾಗಿ ಸೇರುತ್ತವೆ. ಎರಡು ಪಾರ್ಥಿವಪರಮಾಣುಗಳು ಸೇರಿ, ಒಂದು ಪಾರ್ಥಿವದ್ವ್ಯಣುಕವಾಗುತ್ತದೆ. ಇದರಂತೆ ಉಳಿದವುಗಳೂ ಕೂಡ ಕಾರ್ಯಗಳನ್ನು ಪ್ರಾರಂಭಿಸುತ್ತವೆ.

ವಿವರಣೆ - ತಾರ್ಕಿಕರಲ್ಲಿ ಎರಡು ಪಂಗಡವಿದೆ - ೧. ವೈಶೇಷಿಕರು, ೨. ನೈಯ್ಯಾಯಿಕರು ಎಂದು. ವೈಶೇಷಿಕರನ್ನು ಪ್ರಾಚೀನ ತಾರ್ಕಿಕರೆಂದು, ನೈಯ್ಯಾಯಿಕರನ್ನು ನವೀನ ತಾರ್ಕಿಕರೆಂದು ಕರೆಯುತ್ತಾರೆ. ಈ ಅಧಿಕರಣದಲ್ಲಿ ಪ್ರಾಚೀನ ತಾರ್ಕಿಕರೆನಿಸಿದ ವೈಶೇಷಿಕರನ್ನು ನಿರಾಕರಣೆ ಮಾಡುತ್ತಾರೆ. ಗೌತಮಋಷಿಯ ಅನುಯಾಯಿಗಳು ನೈಯ್ಯಾಯಿಕರು ಆಗಿದ್ದಾರೆ. ಕಣಾದಿಋಷಿಗಳ ಅನುಯಾಯಿಗಳು ವೈಶೇಷಿಕರಾಗಿದ್ದಾರೆ. ಜೀವ, ಈಶ್ವರ, ಜಡ ಎಂಬ ಮೂರು ತತ್ವಗಳಿವೆ. ಜೀವರು ಅನಂತರಾಗಿದ್ದಾರೆ. ಆದರೆ ಎಲ್ಲರೂ ಕೂಡ ಎಲ್ಲಡೆಯೂ ವ್ಯಾಪ್ತರಾಗಿರುತ್ತಾರೆ. ಈಶ್ವರನೂ ಕೂಡ ವ್ಯಾಪ್ತನಾಗಿದ್ದಾನೆ. ಈಶ್ವರನಲ್ಲಿ ಎಂಟು ಗುಣಗಳು ಮಾತ್ರ ಇವೆ. ಜೀವನಲ್ಲಿ ಹದಿನಾಕು ಗುಣಗಳಿವೆ. ಜ್ಞಾನ, ಬುದ್ಧಿ, ಇಚ್ಛಾ ಪ್ರಯತ್ನ ಎಂಬ ಮೂರು ಗುಣಗಳು ಜಡದಲ್ಲಿರುವುದಿಲ್ಲ. ಜೀವ ಹಾಗೂ ಈಶ್ವರನಲ್ಲಿ ಮಾತ್ರ ಇರುತ್ತವೆ. ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ ಹಾಗೂ ವಿಭಾಗ ಎಂಬ ಐದು ಗುಣಗಳು ಇವೆ. ಒಟ್ಟು ಎಂಟು ಗುಣಗಳು ಮಾತ್ರ ಈಶ್ವರನಲ್ಲಿವೆ. ಸುಖ-ದುಃಖಾದಿಗಳೂ ಕೂಡ ಇರುವುದಿಲ್ಲ.

ಯಾವುದು ಉಪಾದಾನಕಾರಣವೋ, ಅದನ್ನೇ ಸಮವಾಯಕಾರಣವೆಂದು ಇವರು ಕರೆಯುತ್ತಾರೆ. ದ್ರವ್ಯ ಮಾತ್ರ ಸಮವಾಯಕಾರಣವಾಗಲು ಸಾಧ್ಯ. ಗುಣಕರ್ಮಗಳು ಅಸಮವಾಯಕಾರಣಗಳಾಗುತ್ತವೆ. ಈಶ್ವರನಲ್ಲಿರುವ ಇಚ್ಛೆ, ಜೀವನಲ್ಲಿರುವ ಅದೃಷ್ಟ ಮತ್ತು ಕಾಲ ಈ ಮೂರನ್ನು ನಿಮಿತ್ತಕಾರಣ ಎಂದು ಕರೆಯುತ್ತಾರೆ.

### ತಾರ್ಕಿಕರ ಪ್ರಕಾರ ಸಕಲ ಕಾರ್ಯಗಳ ಉತ್ಪತ್ತಿ

**तत्वप्रदीपः – तानि च द्व्यणुकानि त्रिशस्त्रिश एव युक्तानि त्र्यणुकारम्भकानि । तानि चतुश्चतुर्योगेन चतुरणुकानां समवायिकारणानि । ततोऽनियत्यैव सर्वकार्यसम्भवः । कारणगता गुणाः कार्ये सदृशं गुणान्तरमारभन्ते ।**

ಆ ದ್ವ್ಯಣುಕಗಳು ಮೂರು ಮೂರಾಗಿ ಸೇರಿ ತ್ರ್ಯಣುಕಗಳಿಗೆ ಆರಂಭಕಗಳಾಗುತ್ತವೆ. ಮೂರು ಪಾರ್ಥಿವದ್ವ್ಯಣುಕಗಳು ಸೇರಿದಾಗ ಒಂದು ಪಾರ್ಥಿವತ್ರ್ಯಣುಕವಾಗುತ್ತದೆ. ಅದರಂತೆ ಮೂರು ಆಪ್ಯದ್ವ್ಯಣುಕಗಳು ಸೇರಿದಾಗ ಒಂದು ಆಪ್ಯತ್ರ್ಯಣುಕವಾಗುತ್ತದೆ. ಇದರಂತೆ ಉಳಿದವುಗಳೂ ಕೂಡ. ಅನಂತರ ಆ ತ್ರ್ಯಣುಕಗಳು ನಾಕುನಾಕಾಗಿ ಸೇರಿ ಒಂದು ಚತುರಣುಕಕ್ಕೆ ಸಮವಾಯಕಾರಣಗಳಾಗುತ್ತವೆ. ಹೀಗೆ ಕಾರ್ಯಾರಂಭಕವಾದವುಗಳು ಸಮವಾಯಿಕಾರಣ ಎನಿಸುತ್ತವೆ. ಚತುರಣುಕದ ಅನಂತರ ಇಷ್ಟೇ ಸೇರಬೇಕೆಂಬ ನಿಯಮವಿರುವುದಿಲ್ಲ. ಹೀಗೆ ಸಕಲ ಕಾರ್ಯಗಳ ಉತ್ಪತ್ತಿಯಾಗುತ್ತದೆ.

ವಿವರಣೆ - ಸೃಷ್ಟಿ ಪ್ರಕ್ರಿಯೆಯನ್ನು ತಾರ್ಕಿಕರು ಹೀಗೆ ಹೇಳುತ್ತಾರೆ - ಪೃಥಿವೀ, ಅಪ್, ತೈಜಸ, ವಾಯು ಈ ನಾಕು ಭೂತಗಳು ಪ್ರಳಯಕಾಲದಲ್ಲಿ ಪರಮಾಣುರೂಪದಲ್ಲಿರುತ್ತವೆ. ಸೃಷ್ಟಿಯು ಆರಂಭವಾಗುವ ಮೊದಲು ಈ ಎಲ್ಲಾ ಪರಮಾಣುಗಳಲ್ಲಿ ವಿಲಕ್ಷಣವಾದ ತೇಜಸ್ ಸಂಯೋಗವು ಉಂಟಾಗುತ್ತದೆ. ಆಗ ಪೃಥಿವೀಯ ಪರಮಾಣುಗಳು ಎರಡೆರಡಾಗಿ ಒಟ್ಟಾಗುತ್ತವೆ. ಈ ಪೃಥಿವೀಯ ಪರಮಾಣುಗಳಲ್ಲಿ ಗಂಧವೆಂಬ ಗುಣವಿದೆ. ಜಡಪರಮಾಣುವಿನಲ್ಲಿ ರಸವೆಂಬ ಗುಣವಿದೆ. ತೈಜಸಪರಮಾಣುವಿನಲ್ಲಿ ಉಷ್ಣಸ್ಪರ್ಶವೆಂಬ ಗುಣವಿದೆ. ವಾಯುಪರಮಾಣುವಿನಲ್ಲಿ ಸ್ಪರ್ಶವೆಂಬ ಗುಣವಿದೆ. ಒಂದರಲ್ಲಿರುವ ಗುಣ ಮತ್ತೊಂದರಲ್ಲಿ ಇರುವುದಿಲ್ಲ. ಸಜಾತೀಯವಾದ ಪರಮಾಣುದ್ವಯಗಳಿಗಷ್ಟೇ ಸಂಯೋಗವಾಗುತ್ತದೆ. ವಿಜಾತೀಯ ಪರಮಾಣುವಿನ ಜೊತೆ ಸಂಯೋಗ ಆಗುವುದಿಲ್ಲ. ಹಾಗಾಗಿ ಒಂದು ಪಾರ್ಥಿವ ಪರಮಾಣು, ಮತ್ತೊಂದು ಪಾರ್ಥಿವ ಪರಮಾಣುವಿನ ಜೊತೆ ಸೇರುತ್ತವೆ. ಆಪ್ಯಪರಮಾಣುವಿನ ಜೊತೆ ಅಥವಾ ತೈಜಸಾದಿ ಪರಮಾಣುಗಳ ಜೊತೆ ಸರ್ವಥಾ ಸೇರುವುದಿಲ್ಲ. ಹೀಗೆ ಎರಡೆರಡು ಪರಮಾಣುಗಳು ಸೇರಿ, ಒಂದು ದ್ವ್ಯಣುಕ ಹುಟ್ಟುತ್ತದೆ. ಪಾರ್ಥಿವ ಎರಡು ಪರಮಾಣುಗಳಿಂದ ಒಂದು ಪಾರ್ಥಿವ ದ್ವ್ಯಣುಕ ಹುಟ್ಟಿದರೆ, ಎರಡು ಆಪ್ಯಪರಮಾಣುವಿನಿಂದ ಒಂದು ಆಪ್ಯದ್ವ್ಯಣುಕ ಹುಟ್ಟುತ್ತದೆ. ಹೀಗೆ ಅನಂತ ದ್ವ್ಯಣುಕಗಳ ಉತ್ಪತ್ತಿಯಾಗುತ್ತದೆ. ಅನಂತರ ಮೂರು ದ್ವ್ಯಣುಕಗಳು ಸೇರಿ, ಒಂದು ತ್ರ್ಯಣುಕವಾಗುತ್ತದೆ. ಇಲ್ಲೂ ಕೂಡ ಸಜಾತೀಯವಾದ ದ್ವ್ಯಣುಕಗಳಲ್ಲಷ್ಟೇ ಪರಸ್ಪರ ಸಂಯೋಗ ಆಗುತ್ತದೆ. ವಿಜಾತೀಯ ದ್ವ್ಯಣುಕಗಳ ಜೊತೆ ಸಂಯೋಗವಾಗುವುದಿಲ್ಲ. ಅನಂತರ ನಾಕು ತ್ರ್ಯಣುಕಗಳು ಸೇರಿ ಒಂದು ಚತುರಣುಕವಾಗುತ್ತದೆ. ಚತುರಣುಕ ಉತ್ಪತ್ತಿ ಆದಮೇಲೆ ಐದು ಚತುರಣುಕಗಳು ಸೇರಿ ಒಂದು ಪಂಚಾಣುಕವಾಗುತ್ತದೆಂಬ

ನಿಯಮವಿಲ್ಲ. ಪಂಚಣುಕ, ಷಷ್ಠ್ಯಾಣುಕ ಇತ್ಯಾದಿಯಾದ ನಿಯಮವಿರುವುದಿಲ್ಲ. ಚತುರಣುಕದ ತನಕ ಮಾತ್ರ ನಿಯಮ. ಅನಂತರ ಯಥೇಚ್ಛವಾಗಿ ಕಾರ್ಯಗಳು ಉತ್ಪನ್ನವಾಗುತ್ತವೆ. ಪರಮಾಣುವಿನಲ್ಲಿರುವ ಪರಿಮಾಣಕ್ಕೆ ಪಾರಿಮಾಂಡಲ್ಯ ಎಂದು ಹೆಸರು. ದ್ವ್ಯಣುಕದಲ್ಲಿರುವ ಪರಿಮಾಣಕ್ಕೆ ಅಣುತ್ವ ಅಥವಾ ಹ್ರಸ್ವತ್ವ ಎಂದು ಹೆಸರು. ತ್ರ್ಯಣುಕಾದಿಗಳಲ್ಲಿರುವ ಪರಿಮಾಣಕ್ಕೆ ದೀರ್ಘತ್ವ ಅಥವಾ ಮಹತ್ವ ಎಂದು ಹೆಸರು. ತ್ರ್ಯಣುಕದಿಂದ ಪ್ರಾರಂಭಿಸಿಯೇ ಕಾರ್ಯಗಳು ಕಣ್ಣಿಗೆ ಕಾಣಿಸುತ್ತವೆ. ಪರಮಾಣುವಿನ ಪ್ರತ್ಯಕ್ಷ ದ್ವ್ಯಣುಕದ ಪ್ರತ್ಯಕ್ಷ ಯಾರಿಗೂ ಇರುವುದಿಲ್ಲ. ಪರಮಾಣು ಅನಾದಿನಿತ್ಯವಾಗಿದೆ. ಅದರಲ್ಲಿರುವ ಪಾರಿಮಾಂಡಿಲ್ಯವೂ ಕೂಡ ಅನಾದಿನಿತ್ಯವಾಗಿದೆ. ಪರಮಾಣುವಿಗೆ ಅವಯವವಿರುವುದಿಲ್ಲ. ಮತ್ತೊಂದರಿಂದ ಜನ್ಯವೂ ಆಗಿರುವುದಿಲ್ಲ. ದ್ವ್ಯಣುಕಾದಿ-ಗಳಿಂದಷ್ಟೇ ಅನಿತ್ಯತ್ವವನ್ನು ಹೇಳಬೇಕು. ದ್ವ್ಯಣುಕಕ್ಕೆ ಪರಮಾಣುವು ಸಮವಾಯಿಕಾರಣ ಎಂದು ಕರೆಸಿಕೊಳ್ಳುತ್ತದೆ. ದ್ವ್ಯಣುಕದಲ್ಲಿರುವ ಗುಣಕ್ಕೆ ಪರಮಾಣುವಿನಲ್ಲಿರುವ ಗುಣವು ಅಸಮವಾಯಿಕಾರಣ ಎಂದು ಕರೆಸಿಕೊಳ್ಳುತ್ತದೆ. ಹೀಗೆ ಕಾರ್ಯದಲ್ಲಿರುವ ಗುಣಗಳಿಗೆ ಕಾರಣದಲ್ಲಿರುವ ಗುಣಗಳನ್ನು ಅಸಮವಾಯಿಕಾರಣ ಎಂದು ಕರೆಯಬೇಕು. ಇದೇ ಕ್ರಮದಲ್ಲಿ ಸೃಷ್ಟಿಪ್ರಕ್ರಿಯೆಯನ್ನು ಉಪಪಾದನೆ ಮಾಡಬೇಕು. ಪಾರ್ಥಿವಪರಮಾಣುಗಳ ಅವಯವಉತ್ಪತ್ತಿಯ ಕ್ರಮದಲ್ಲಿ ಅವಯವಿಯ ಉತ್ಪತ್ತಿಯನ್ನು ಹೇಳುವ ಮುಖಾಂತರ ಘಟ-ಪಟಾದಿಕಾರ್ಯಗಳ ಉತ್ಪತ್ತಿಯನ್ನು ಉಪಪಾದನೆ ಮಾಡಬೇಕು. ಅದರಂತೆ ಸರೋವರ, ನದಿ, ಸಮುದ್ರದಲ್ಲಿರುವ ನೀರಿನ ಉತ್ಪತ್ತಿಯನ್ನೂ ಕೂಡ ಇದರಂತೆ ಕೂಡಿಸಬೇಕು. ತೇಜಸ್ಸು ಹಾಗೂ ವಾಯುಗಳ ಸೃಷ್ಟಿಯನ್ನೂ ಕೂಡ ಇದರಂತೆ ಹೇಳಬೇಕು. ಈ ಕ್ರಮದಲ್ಲಿ ಸಮಸ್ತ ಜಗತ್ತು ಉತ್ಪನ್ನವಾಗಿದೆ. ಇಷ್ಟು ತಾರ್ಕಿಕರ ಸೃಷ್ಟಿ ಪ್ರಕ್ರಿಯೆ.

### ಗುಣಗಳು ಸ್ವಸದೃಶಗುಣಾಂತರೋತ್ಪಾದಕಗಳು

**तत्वप्रदीपः – ततः शुक्लेभ्यस्तन्तुभ्यः शुक्लः पटो जायते, कृष्णायाश्च मृदः कृष्णो घटः, महद्भ्यो दीर्घेभ्यश्च त्र्यणुकेभ्यस्तादृशं चतुरणुकं, ततश्च तादृग्गुणः खण्डावयवीत्येवमेव कार्याणीति नियमः ।**

ಕಾರಣದಲ್ಲಿರುವ ಗುಣಗಳು ಕಾರ್ಯದಲ್ಲಿ ತಮಗೆ ಸದೃಶವಾದ ಮತ್ತೊಂದು ಗುಣವನ್ನೇ ಸೃಷ್ಟಿ ಮಾಡುತ್ತವೆ. ಆದ್ದರಿಂದ ಬಿಳಿಬಣ್ಣದಲ್ಲಿರುವ ತಂತುಗಳಿಂದ ಬಿಳಿಬಣ್ಣದ ಬಟ್ಟೆಯೇ

ಉತ್ಪನ್ನವಾಗುತ್ತದೆ. ಕಪ್ಪಾದ ಮಣ್ಣಿನಿಂದ ಕಪ್ಪಾದ ಮಡಿಕೆಯೇ ಹುಟ್ಟುತ್ತದೆ. ಮಹತ್ತಾದ ಮತ್ತು ದೀರ್ಘವಾದ ತ್ರ್ಯಣುಕಗಳಿಂದ ಅಂಥದ್ದೇ ಚತುರಣುಕವು ಹುಟ್ಟುತ್ತದೆ. ಆದ್ದರಿಂದ ಅಂಥ ಗುಣ ಖಂಡಾವಯವೀ ಎಂದು ಕರೆಯಲಾಗುತ್ತದೆ. ಹೀಗೆ ಕಾರ್ಯಗಳ ಉತ್ಪತ್ತಿಯಲ್ಲಿ ನಿಯಮವನ್ನು ತಿಳಿಯಬೇಕು.

### ನಿಯಮಕ್ಕೆ ಅಪವಾದ

**तत्वप्रदीपः – अस्य च नियमस्य क्वापि लोपमालपन्ति, यथा द्व्यणुकगतादणुत्वात् ह्रस्वत्वाच्च परिमाणाख्यगुणात् त्र्यणुकेऽणुत्वं ह्रस्वत्वं च नोत्पद्येते । विजातीयपरिमाणाक्रान्तेः । पारिमाण्डल्याच्च परमाणुसमवेतात्परि माणाद्व्यणुके ह्रस्वत्वपरिमाणवति पारिमाण्डल्यं नोत्पद्यत इति ।**

ಈ ಮೇಲೆ ಹೇಳಿದ ನಿಯಮಕ್ಕೆ ಕೆಲವೆಡೆ ಲೋಪವಿದೆ ಎಂದು ಹೇಳುತ್ತಾರೆ. ಉದಾಹರಣೆ- ದ್ವ್ಯಣುಕದಲ್ಲಿ ಅಣುತ್ವ ಹಾಗೂ ಹ್ರಸ್ವತ್ವಗಳಿವೆ. ಇಂಥ ಪರಿಮಾಣವೆಂಬ ಗುಣದಿಂದ ತ್ರ್ಯಣುಕದಲ್ಲಿ ಅಣುತ್ವ ಹಾಗೂ ಹ್ರಸ್ವತ್ವಗಳು ಉತ್ಪನ್ನವಾಗುವುದಿಲ್ಲ. ವಿಜಾತೀಯವಾದ ಮಹತ್ತ್ವದೀರ್ಘತ್ವಗಳೇ ಅಲ್ಲಿರುತ್ತವೆ. ಮತ್ತು ಪರಮಾಣುವಿನಲ್ಲಿರುವ ಪರಿಮಾಣಕ್ಕೆ ಪಾರಿಮಾಂಡಲ್ಯ ಎನ್ನುತ್ತಾರೆ. ಇಂಥ ಪಾರಿಮಾಂಡಲ್ಯದಿಂದ ದ್ವ್ಯಣುಕದಲ್ಲಿ ಪಾರಿಮಾಂಡಲ್ಯವು ಉತ್ಪನ್ನವಾಗುವುದಿಲ್ಲ. ದ್ವ್ಯಣುಕದಲ್ಲಿ ಹ್ರಸ್ವತ್ವವಿದೆ ಆದರೆ ಪಾರಿಮಾಂಡಲ್ಯವು ಇರುವುದಿಲ್ಲ.

### ವೈಶೇಷಿಕರ ನಿರಾಕರಣೆ

**तत्वप्रदीपः – अत्र सूत्रमवतारयति महद्दीर्घवद्वा ह्रस्वपरिमण्डलाभ्याम् । त्र्यणुकमहत्त्वाद्दीर्घत्वाच्च यथा चतुरणुकादौ महत्त्वं दीर्घत्वं च कार्यमुत्पद्यते, एवं द्व्यणुकगतात् ह्रस्वत्वात्त्र्यणुके ह्रस्वत्वं कार्यमुत्पद्येत । तथा परमाणुगतात्पारिमाण्डल्याच्च द्व्यणुके पारिमाण्डल्यान्तरमुत्पद्येत ।**

ಈ ತಾರ್ಕಿಕರ ಮತದ ನಿರಾಕರಣೆಗಾಗಿ 'ಮಹದ್ದೀರ್ಘವದ್ವಾ ಹ್ರಸ್ವಪರಿಮಾಂಡಲಾಭ್ಯಾಮ್' ಎಂಬ ಸೂತ್ರವು ಹೊರಟಿದೆ. ಆ ಸೂತ್ರಕ್ಕೆ ಭಾಷ್ಯದಲ್ಲಿ 'ಮಹತ್' ಇತ್ಯಾದಿಯಾಗಿ

ಅವತಾರಿಕೆಯನ್ನು ನೀಡಿದ್ದಾರೆ. ತ್ರ್ಯಣುಕದಲ್ಲಿರುವ ಮಹತ್ತ್ವ ಹಾಗೂ ದೀರ್ಘತ್ವಗಳಿಂದ ಚತುರಣುಕಾದಿಗಳಲ್ಲಿ ಮಹತ್ತ್ವ ಹಾಗೂ ದೀರ್ಘತ್ವಗಳೆಂಬ ಕಾರ್ಯವು ಹೇಗೆ ಉತ್ಪನ್ನವಾಗುತ್ತವೋ, ಅದರಂತೆ ದ್ವ್ಯಣುಕದಲ್ಲಿರುವ ಹ್ರಸ್ವತ್ವದಿಂದ ತ್ರ್ಯಣುಕದಲ್ಲಿ ಹ್ರಸ್ವತ್ವವು ಹುಟ್ಟಬೇಕು. ಅದರಂತೆ ಪರಮಾಣುವಿನಲ್ಲಿರುವ ಪಾರಿಮಾಂಡಲ್ಯದಿಂದ ದ್ವ್ಯಣುಕದಲ್ಲಿ ಮತ್ತೊಂದು ಪಾರಿಮಾಂಡಲ್ಯವು ಹುಟ್ಟಬೇಕು.

### ಕೇವಲ ತಾರ್ಕಿಕರ ಕಲ್ಪನೆ ಸಾಧಕವಾಗದು

**तत्वप्रदीपः – यदि ह्रस्वत्वात्पारिमाण्डल्याच्च तादृशं नोत्पद्यते तर्हि महत्त्वदीर्घत्वयोरपि सकाशात्तादृशं नोत्पद्येत विशेषकारणाभावात् । कल्पनामात्रस्यासाधकत्वात् । यथा च महत्त्वं दीर्घत्वं चतुरणुकगतं महत्त्वाद्दीर्घत्वाच्चोत्पद्यते एवं महत्त्वं दीर्घत्वं च त्र्यणुकगतं महत्त्वाद्दीर्घत्वाच्चैव स्यात् । अन्यथा चतुरणकगतमपि तद्द्वयमेतयोर्न स्यात् । विशेषकारणाभावात्।**

ಒಂದುವೇಳೆ ಹ್ರಸ್ವತ್ವದಿಂದ ಹಾಗೂ ಪಾರಿಮಾಂಡಲ್ಯದಿಂದ ಅಂಥದ್ದೇ ಮತ್ತೊಂದು ಕಾರ್ಯವು ಹುಟ್ಟುವುದಿಲ್ಲ ಎಂದು ಹೇಳುವುದಾದರೆ, ಆಗ ಮಹತ್ವ ಹಾಗೂ ದೀರ್ಘತ್ವ-ಗಳಿಂದಲೂ ಅಂಥದ್ದೇ ಮತ್ತೊಂದು ಕಾರ್ಯವು ಹುಟ್ಟದೇ ಇರಬೇಕಾದೀತು. ಹಾಗೇ ಹುಟ್ಟುತ್ತದೆನ್ನಲು ವಿಶೇಷಕಾರಣವಿರುವುದಿಲ್ಲ. ಕೇವಲ ನಿಮ್ಮ ಕಲ್ಪನೆಯು ಸಾಧಕವಾಗಲು ಸಾಧ್ಯವೂ ಇಲ್ಲ. ಆದ್ದರಿಂದ ಹೇಗೆ ಮಹತ್ವ ಹಾಗೂ ದೀರ್ಘತ್ವಗಳು ಚತುರಣುಕದಲ್ಲಿರುವ ಮಹತ್ವ ಹಾಗೂ ದೀರ್ಘತ್ವಗಳಿಂದ ಉತ್ಪನ್ನವಾಗುತ್ತವೋ, ಅದರಂತೆ ತ್ರ್ಯಣುಕದಲ್ಲಿರುವ ಮಹತ್ವ ಹಾಗೂ ದೀರ್ಘತ್ವಗಳೂ ಕೂಡ ಮಹತ್ವ ಹಾಗೂ ದೀರ್ಘತ್ವದಿಂದಲೇ ಹುಟ್ಟಬೇಕು. ಹೀಗೊಪ್ಪದಿದ್ದರೆ ಚತುರಣುಕದಲ್ಲಿರುವ ಮಹತ್ವ ಹಾಗೂ ದೀರ್ಘತ್ವದಿಂದಲೂ ಮತ್ತೊಂದು ಮಹತ್ವ ಹಾಗೂ ದೀರ್ಘತ್ವವು ಹುಟ್ಟದೇ ಇರಬೇಕಾದೀತು. ಒಂದೊಂದು ಕಡೆ ಒಂದೊಂದು ರೀತಿಯಾಗಿ ಹೇಳಲು ವಿಶೇಷಕಾರಣ ಇರುವುದಿಲ್ಲ.

ಪಾರಿಮಾಂಡಲ್ಯದಂತೆ ಉಳಿದ ಧರ್ಮಗಳೂ ಕೂಡ ಅನುತ್ಪನ್ನವಾಗಲಿ

**तत्वप्रदीपः – यथा वा महद्दीर्घं चतुरणुकं महतो दीर्घात्त्र्यणुकादुत्पद्यते, तथा ह्रस्वपरिमण्डलावप्यणुपरमाणू ह्रस्वपरिमण्डलाभ्यां एव स्वकारणाभ्यां उत्पद्येयाताम् । यदि तौ ह्रस्वपरिमण्डलाभ्यां नोत्पद्येते तर्हि चतुरणुकगतं महत्त्वं दीर्घत्वं च त्र्यणुकगतमहत्त्वदीर्घत्वयोरपि न स्यात् । अनुत्पत्तौ च परमाणूनां तद्वत्सर्वानुत्पत्तिं प्रसञ्जयिष्यति । धर्मधर्म्यभेदादुभयी चोक्तिर्न विरुध्यते ।**

ಹೇಗೆ ಮಹತ್‌ಪರಿಮಾಣ ಹಾಗೂ ದೀರ್ಘಪರಿಮಾಣವುಳ್ಳ ಚತುರಣುಕವು, ಮಹತ್ತಾದ ಮತ್ತು ದೀರ್ಘವಾದ ತ್ರ್ಯಣುಕದಿಂದ ಉತ್ಪನ್ನವಾಗುತ್ತದೋ, ಅದರಂತೆ ಹ್ರಸ್ವಪಾರಿಮಾಂಡಲ್ಯವುಳ್ಳ ಅಣುಪರಿಮಾಣಗಳೂ ಕೂಡ ಹ್ರಸ್ವಪರಿಮಂಡಲಗಳಿಂದಲೇ ಹುಟ್ಟಬೇಕು. ಒಂದು ವೇಳೆ ಎರಡು ಅಣುಗಳಲ್ಲಿರುವ ಹ್ರಸ್ವಪಾರಿಮಾಂಡಲ್ಯಗಳು ಹ್ರಸಪರಿಮಾಂಡಲ್ಯದಿಂದ ಹುಟ್ಟುವುದಿಲ್ಲ ಎನ್ನುವುದಾದರೆ ಚತುರಣುಕದಲ್ಲಿರುವ ಮಹತ್ವ ಹಾಗೂ ದೀರ್ಘತ್ವಗಳೂ ಕೂಡ ತ್ರ್ಯಣುಕದಲ್ಲಿರುವ ಮಹತ್ವ ಹಾಗೂ ದೀರ್ಘತ್ವಗಳಿಂದಲೂ ಕೂಡ ಜನ್ಯವಾಗದೇ ಇರಬೇಕಾದೀತು. ಪರಮಾಣುವಿನಲ್ಲಿರುವ ಪಾರಿಮಾಂಡಲ್ಯವು ಮತ್ತೊಂದು ಪಾರಿಮಾಂಡಲ್ಯದಿಂದ ಜನ್ಯವಲ್ಲ ಎಂದು ಹೇಳುವುದಾದರೆ ಎಲ್ಲೆಡೆಯೂ ಕೂಡ ಹೀಗೆಯೇ ಹೇಳಬಹುದು. ಧರ್ಮ ಹಾಗೂ ಧರ್ಮಿಗಳಿಗೆ ಅಭೇದವಿರುವುದರಿಂದ ಎರಡೂ ಬಗೆಯ ವಚನಗಳು ವಿರುದ್ಧವಾಗುವುದಿಲ್ಲ.

ವೈಶೇಷಿಕರ ಸಮಾಧಾನ

**तत्वप्रदीपः – अथ मतं द्व्यणुकत्र्यणुकयोः परिमाणान्तराक्रान्तेर्न पारिमाण्डल्याणुत्वे तत्र कार्यजनके, द्वित्वसङ्ख्या त्रित्वसङ्ख्या चाणुत्वमहत्त्वकारणं, परमाणुद्व्यणुकयोर्महत्त्वे प्रत्यक्षत्वप्रसङ्गः, त्र्यणुकादीनामणुत्वे चाप्रत्यक्षत्वप्रसङ्ग इति ।**

ದ್ವ್ಯಣುಕ ಹಾಗೂ ತ್ರ್ಯಣುಕಗಳಲ್ಲಿ ವಿಭಿನ್ನವಾದ ಪರಿಮಾಣಗಳಿವೆ. ಆದ್ದರಿಂದ ದ್ವ್ಯಣುಕದಲ್ಲಿರುವ ಪರಿಮಾಣಕ್ಕೆ ಪಾರಿಮಾಂಡಲ್ಯವು ಕಾರಣವಾಗುವುದಿಲ್ಲ. ತ್ರ್ಯಣುಕದಲ್ಲಿರುವ ಧರ್ಮಕ್ಕೆ ದ್ವ್ಯಣುಕದಲ್ಲಿರುವ ಅಣುತ್ವವೂ ಕೂಡ ಕಾರಣವಾಗುವುದಿಲ್ಲ. ದ್ವ್ಯಣುಕದಲ್ಲಿರುವ ಅಣುತ್ವಕ್ಕೆ ದ್ವಿತ್ವಸಂಖ್ಯೆಯು ಕಾರಣವಾಗುತ್ತದೆ. ತ್ರ್ಯಣುಕದಲ್ಲಿರುವ ಮಹತ್ವಕ್ಕೆ ದ್ವ್ಯಣುಕ-ದಲ್ಲಿರುವ ತ್ರಿತ್ವಸಂಖ್ಯೆಯು ಕಾರಣವಾಗುತ್ತದೆ. ಹೀಗೆ ಒಪ್ಪದೇ ಪರಮಾಣು ಹಾಗೂ ದ್ವ್ಯಣುಕಗಳಲ್ಲೂ ಕೂಡ ಮಹತ್ವವನ್ನು ಒಪ್ಪುವುದಾದರೆ ಅವುಗಳ ಪ್ರತ್ಯಕ್ಷವು ಬರಬೇಕಾಗುತ್ತದೆ. ತ್ರ್ಯಣುಕಾದಿಗಳನ್ನು ಅಣು ಎಂದು ಹೇಳಿದರೆ ತ್ರ್ಯಣುಕಾದಿಗಳು ಅಪ್ರತ್ಯಕ್ಷವಾಗಬೇಕಾಗುತ್ತದೆ.

### ಅಣುತ್ವ-ಮಹತ್ವಗಳ ವಿಭಾಗ ಅಸಾಧು

**तत्वप्रदीपः – चतुरणुकादाविव द्व्यणुकादावपि विजातीयपरिमाणाक्रान्तिर्न स्यात् । अन्यथा तत्रापि स्यात् । विशेषप्रमाणाभावात् । सङ्ख्यायाः परिमाणारम्भकत्वे पृथक्त्वादेरपि स्यात् । न चेन्न तस्यापि । परमाणोर्द्व्यणुकस्य न महत्त्वं, त्र्यणुकादीनां च मेर्वादिभ्यो नाणुत्वमिति लोकानुभवविरुद्धम् ।**

ಚತುರಣುಕಾದಿಗಳಲ್ಲಿ ಹೇಳುವಂತೆ ದ್ವ್ಯಣುಕಾದಿಗಳಲ್ಲೂ ಕೂಡ ವಿಜಾತೀಯ-ಪರಿಮಾಣಾಕ್ರಾಂತಿಯನ್ನು ಒಪ್ಪುವ ಅವಶ್ಯಕತೆಯಿರುವುದಿಲ್ಲ. ದ್ವ್ಯಣುಕ ಹಾಗೂ ತ್ರ್ಯಣುಕದಲ್ಲಿ ಮಾತ್ರ ವಿಜಾತೀಯವಾದ ಪರಿಮಾಣಾಕ್ರಾಂತಿಯನ್ನು ಒಪ್ಪುವುದಾದರೆ, ಚತುರಣುಕಾದಿಗಳಲ್ಲೂ ಕೂಡ ಒಪ್ಪಬೇಕಾದೀತು. ವ್ಯತ್ಯಾಸ ಮಾಡಲು ವಿಶೇಷ ಪ್ರಮಾಣವಿರುವುದಿಲ್ಲ.

ಮತ್ತೊಂದು ದೋಷ - ಸಂಖ್ಯೆಯು ಪರಿಮಾಣಕ್ಕೆ ಆರಂಭಕವಾಗುವುದಾದರೆ ಪೃಥಕ್ತ್ವಾದಿಗಳೂ ಕೂಡ ಪರಿಮಾಣಕ್ಕೆ ಆರಂಭಕವಾಗಬೇಕಾದೀತು. ಪೃಥಕ್ತ್ವಾದಿಗಳು ಪರಿಮಾಣಾರಂಭಕವಲ್ಲವೆಂದರೆ ಸಂಖ್ಯೆಯೂ ಕೂಡ ಪರಿಮಾಣಾರಂಭಕವಾಗುವುದಿಲ್ಲ.

ಮತ್ತೊಂದು ದೋಷ - ದ್ವ್ಯಣುಕದಲ್ಲಿ ಪರಮಾಣುವಿಗಿಂತ ಮಹತ್ವವಿದೆ. ತ್ರ್ಯಣಕುದಲ್ಲಿ ಮೇರುಪರ್ವತಕ್ಕಿಂತ ಅಣುತ್ವವಿದೆ. ಹೀಗಿರುವಾಗ ದ್ವ್ಯಣುಕದಲ್ಲಿ ಪರಮಾಣುವಿಗಿಂತ ಮಹತ್ವವಿಲ್ಲ. ತ್ರ್ಯಣುಕಾದಿಗಳಲ್ಲಿ ಮೇರುಪರ್ವತಾದಿಗಳ ದೆಸೆಯಿಂದ ಅಣುತ್ವವಿಲ್ಲ ಎಂಬ ಹೇಳಿಕೆ ಲೋಕಾನುಭವವಿರುದ್ಧವಾಗಿದೆ.

ಅಣುತ್ವ ಮಹತ್ವಗಳು ಸಾಪೇಕ್ಷಗಳು

**तत्वप्रदीपः – नचैवमनभ्युपगमे प्रत्यक्षाप्रत्यक्षविपर्ययप्रसङ्गः । उक्तं हि-**

**''प्रत्यक्षत्वतदन्यत्वे पुरुषापेक्षयाऽखिले ।**

**अणुत्वं च महत्त्वं च यतो वस्त्वपेक्षये'' त्यनुव्याख्याने ।**

**यस्मान्नयरत्नवराकारात्कतिचिदिह मणयः परिगृह्यन्ते । न च स्वस्मादनणोः स्वस्य महत्त्वं युक्तम्, अमहतो वाऽणुत्वम् ।**

ಹೀಗೊಪ್ಪದಿದ್ದರೆ ಪರಮಾಣು ಹಾಗೂ ದ್ವ್ಯಣುಕಗಳು ಪ್ರತ್ಯಕ್ಷವಾಗಿ ಕಾಣಿಸುತ್ತಿಲ್ಲ. ತ್ರ್ಯಣುಕಾದಿಗಳು ಕಣ್ಣಿಗೆ ಕಾಣಿಸುತ್ತಿವೆ. ಈ ವ್ಯತ್ಯಾಸವನ್ನೇ ಕೂಡಿಸಲು ಸಾಧ್ಯವಾಗುವುದಿಲ್ಲವಲ್ಲ?

ಈ ಪ್ರಶ್ನೆಯು ತಪ್ಪು. ಏಕೆಂದರೆ -

ಪ್ರತ್ಯಕ್ಷತ್ವತದನ್ಯತ್ವೇ ಪುರುಷಾಪೇಕ್ಷಯಾಽಖಿಲೇ ।
ಅಣುತ್ವಂ ಚ ಮಹತ್ವಂ ಚ ಯತೋ ವಸ್ತ್ವಪೇಕ್ಷಯಾ''

ಪ್ರತ್ಯಕ್ಷತ್ವ ಹಾಗೂ ಅಪ್ರತ್ಯಕ್ಷತ್ವಗಳು ಪ್ರತಿಯೊಂದು ಪದಾರ್ಥಗಳಲ್ಲಿ ಪುರುಷಾಪೇಕ್ಷಿತವಾಗಿ ನಿರ್ಣೀತವಾಗುತ್ತವೆ. ಅಣುತ್ವ ಹಾಗೂ ಮಹತ್ವಗಳು ವಸ್ತುವಿನ ಅಪೇಕ್ಷೆಯಿಂದ ಸಿದ್ಧವಾಗುತ್ತವೆ ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಹೀಗೆ ಅನುವ್ಯಾಖ್ಯಾನವು ಶ್ರೇಷ್ಠಯುಕ್ತಿಗಳೆಂಬ ರತ್ನಪೆಟ್ಟಿಗೆಯಂತಿವೆ. ಅದರಲ್ಲಿ ಕೆಲವು ಮಣಿಗಳನ್ನು ಸ್ವೀಕರಿಸುತ್ತೇವೆ.

ಯಾವ ವಸ್ತುವಿದೆಯೋ, ಅದು ತನಗಿಂತ ಅಣುವಾಗಿರುವುದಿಲ್ಲ. ಅಂದಮಾತ್ರಕ್ಕೆ ಅದರಲ್ಲಿ ಮಹತ್ವ ಹೇಳುವುದು ತಪ್ಪು. ಹಾಗೆಯೇ ಯಾವುದೇ ಒಂದು ವಸ್ತು ತನಗಿಂತ ಮಹತ್ತಾಗಿರುವುದಿಲ್ಲ. ಅಂದಮಾತ್ರಕ್ಕೆ ಅದರಲ್ಲಿ ಅಣುತ್ವವೂ ಕೂಡ ಬರುವುದಿಲ್ಲ.

ತಾರ್ಕಿಕರ ಸೃಷ್ಟಿಕಲ್ಪನೆ ಅಪ್ರಾಮಾಣಿಕ

**तत्वप्रदीपः – अपि च महत्वदीर्घत्वाच यथा यत्किञ्चित्कार्यमुत्पद्यत**

**एवं ह्रस्वत्वात्पारिमाण्डल्याच्चोत्पद्येत । यदि तयोः किमपि नोत्पद्यते तदैतयोरपि न स्यात् । विशेषहेतुर्वा वाच्यः ।**

ಮತ್ತು ಮಹತ್ವ ಹಾಗೂ ದೀರ್ಘತ್ವಗಳಿಂದ ಹೇಗೆ ಕಾರ್ಯವು ಉತ್ಪನ್ನವಾಗುತ್ತದೋ ? ಅದರಂತೆ ಹ್ರಸ್ವತ್ವದಿಂದ ಹಾಗೂ ಪಾರಿಮಾಂಡಲ್ಯದಿಂದಲೂ ಕಾರ್ಯವು ಉತ್ಪನ್ನವಾಗಬೇಕು. ಒಂದುವೇಳೆ ಹ್ರಸ್ವತ್ವ ಹಾಗೂ ಪಾರಿಮಾಂಡಲ್ಯಗಳಿಂದ ಏನೂ ಕೂಡ ಉತ್ಪನ್ನವಾಗುವುದಿಲ್ಲ ಎಂದು ಹೇಳಿದರೆ, ಆಗ ಮಹತ್ವದೀರ್ಘತ್ವದಿಂದಲೂ ಕೂಡ ಕಾರ್ಯವು ಉತ್ಪನ್ನವಾಗದೇ ಇರಬೇಕಾದೀತು. ಅಥವಾ ಈ ವ್ಯತ್ಯಾಸಕ್ಕೆ ವಿಶೇಷಕಾರಣವನ್ನಾದರೂ ಹೇಳಬೇಕು.

ವಿವರಣೆ - ತಾರ್ಕಿಕರ ಸೃಷ್ಟಿಪ್ರಕ್ರಿಯೆಯ ಕಲ್ಪನೆ ಅಪ್ರಾಮಾಣಿಕವಾಗಿದೆ. ತಾರ್ಕಿಕರು ತ್ರ್ಯಣುಕದ ಆರನೆಯ ಒಂದು ಭಾಗವೇ ಪರಮಾಣು ಎನ್ನುತ್ತಾರೆ. ಈ ವಿಷಯದಲ್ಲಿ ಯಾವುದೇ ಆಧಾರವಿಲ್ಲ. ಪರಮಾಣು ಅನಾದಿನಿತ್ಯವಾಗಿದೆ, ಹಾಗೂ ನಿರವಯವಾಗಿದೆ, ಅತೀಂದ್ರಿಯವಾಗಿದೆ. ಅದಕ್ಕಿಂತ ಸಣ್ಣ ಪರಿಮಾಣ ಮತ್ತೊಂದಿಲ್ಲ ಇತ್ಯಾದಿಯಾಗಿ ತಾರ್ಕಿಕರು ಹೇಳುತ್ತಾರೆ. ಆದರೆ ಪರಮಾಣು ಎಂಬ ಪದಾರ್ಥವು ಸಾಪೇಕ್ಷವಾದದ್ದು. ತಾರ್ಕಿಕರು ಹೇಳುವ ತ್ರ್ಯಣುಕದ ಆರನೆಯ ಒಂದು ಭಾಗಕ್ಕೂ ಕೂಡ ಅವಯವವಿದೆ. ಅದಕ್ಕೂ ಕೂಡ ಉತ್ಪತ್ತಿ ಇದೆ. ಹೀಗೆ ಧರ್ಮಿಯೇ ಸಿದ್ಧವಾಗದ ಕಾರಣ ಅದರಲ್ಲಿ ಪಾರಿಮಾಂಡಲ್ಯಾದಿ ಕಲ್ಪನೆಗಳೂ ಕೂಡ ನಿರಸ್ತವಾಗುತ್ತವೆ. ತ್ರ್ಯಣುಕವು ಮೇರು ಪರ್ವತವನ್ನು ಅಪೇಕ್ಷಿಸಿದಾಗ ಪರಮಾಣು ಎಂದೇ ಕರೆಸಿಕೊಳ್ಳುತ್ತದೆ. ದ್ವ್ಯಣುಕವೂ ಕೂಡ ಪರಮಾಣುವಿನ ಅಪೇಕ್ಷೆಯಿಂದ ಮಹತ್ ಎಂದು ಕರೆಸಿಕೊಳ್ಳುತ್ತವೆ. ಹೀಗೆ ಅಣುತ್ವ ಹಾಗೂ ಮಹತ್ವಗಳು ಸಾಪೇಕ್ಷಿತವಾಗಿವೆ. ಹಾಗಾಗಿ ತ್ರ್ಯಣುಕದ ಆರನೆಯ ಒಂದು ಭಾಗ ಪರಮಾಣುವಾಗಿದೆ. ಇದು ಸಮವಾಯಿಕಾರಣವಾಗಿದೆ. ಇದರಿಂದ ಜಗತ್ತಿನ ಸೃಷ್ಟಿಯಾಗುತ್ತದೆ ಎಂದೆಲ್ಲಾ ಹೇಳುವುದು ಅಯುಕ್ತವಾಯಿತು.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

## ಪರಮಾಣ್ವಾರಂಭವಾದ ನಿರಾಸಕ್ಕಾಗಿ ವೈಶೇಷಿಕಾಧಿಕರಣ

**तत्वप्रकाशिका – अधिकरणप्रतिपाद्यमाह – परमाण्विति ।। अत्र हरेः सर्वगुणपूर्णत्वे वैशेषिकादिमतविरोधपरिहारादस्ति शास्त्रादिसङ्गतिः ।**

ವೈಶೇಷಿಕಾಧಿಕರಣದ ಪ್ರತಿಪಾದ್ಯಪ್ರಮೇಯವನ್ನು 'ಪರಮಾಣು' ಇತ್ಯಾದಿಯಾಗಿ ಭಾಷ್ಯದಲ್ಲಿ ಹೇಳುತ್ತಿದ್ದಾರೆ.

ಈ ಅಧಿಕರಣದಲ್ಲಿ ಶ್ರೀಹರಿಯ ಪರಿಪೂರ್ಣಗುಣತ್ವದ ವಿಷಯದಲ್ಲಿ ವೈಶೇಷಿಕರೇ ಮೊದಲಾದವರ ಸಮಯಗಳ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ವಿವರಣೆ - ಪ್ರಧಾನವಾಗಿ ಈಶ್ವರನೇ ಜಗತ್ತಿಗೆ ಮುಖ್ಯ ಕರ್ತೃವಾಗಿದ್ದಾನೆ. ಆದ್ದರಿಂದ ನಿರೀಶ್ವರಮತಗಳಿಗೆ ಹೇಳಲ್ಪಟ್ಟ ದೋಷವು ನಮಗೆ ಪ್ರಾಪ್ತವಾಗುವುದಿಲ್ಲ ಎಂಬುದಾಗಿ ವೈಶೇಷಿಕರ ಪ್ರಕಾರ ಪೂರ್ವಪಕ್ಷವು ಹುಟ್ಟುತ್ತಿದೆ. ಆದ್ದರಿಂದ ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿಯು ಇರುತ್ತದೆ. (ವಾಕ್ಯಾರ್ಥಮುಕ್ತಾವಳಿ)

## ವೈಶೇಷಿಕಾಧಿಕರಣದ ವಿಷಯಾದಿಗಳು

**तत्वप्रकाशिका – विष्णुरनन्तगुणपूर्ण इत्युक्तम् । तस्य च परमाण्वारम्भवादविरुद्धत्वेनाभावशङ्का स्यात् । अतोऽसौ पराकरणीय एव । ईश्वरस्यानन्तगुणत्वं विषयः । युक्तमयुक्तं वेति सन्देहः । मतविवादः सन्देहबीजम् ।**

ಮಹಾವಿಷ್ಣು ಅನಂತಗುಣಪರಿಪೂರ್ಣನಾಗಿದ್ದಾನೆಂದು ಹೇಳಲಾಯಿತು. ಈ ಪ್ರಮೇಯವು ಪರಮಾಣ್ವಾರಂಭವಾದಕ್ಕೆ ವಿರುದ್ಧವಾಗಿದೆ. ಆದ್ದರಿಂದ 'ವಿಷ್ಣುವನ್ನು ಅನಂತಗುಣ-

ಪರಿಪೂರ್ಣನೆಂದು ಹೇಳಬಾರದು' ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಆದ್ದರಿಂದ ಈ ಪರಮಾಣ್ವಾರಂಭವಾದವನ್ನು ನಿರಾಕರಣೆ ಮಾಡಲೇಬೇಕು.

ಈಶ್ವರನ ಅನಂತಗುಣಪರಿಪೂರ್ಣತ್ವವು ಅಧಿಕರಣದ ವಿಷಯ. ಇದು ಈಶ್ವರನಲ್ಲಿ ಯುಕ್ತವೋ ಅಯುಕ್ತವೋ ? ಎಂಬುದು ಸಂದೇಹ. ಸಮಯಗಳಲ್ಲಿರುವ ವಿವಾದವು ಸಂದೇಹಬೀಜ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಭಾವದೀಪ

**भावदीपः – ।। महद्दीर्घवद्वा ह्रस्वपरिमण्डलाभ्याम् ।।११।। इत्युक्तमिति ।।** पूर्वाध्याये उक्तमित्यर्थः ।।

'ಇತ್ಯುಕ್ತಂ' ಎಂದರೆ ಹಿಂದಿನ ಅಧ್ಯಾಯದಲ್ಲಿ ಹೇಳಲಾಗಿದೆ. ವಿಷ್ಣುವೇ ಅನಂತಗುಣಪರಿಪೂರ್ಣ-ನಾಗಿದ್ದಾನೆಂಬುದು ಹಿಂದಿನ ಅಧ್ಯಾಯದಲ್ಲಿ ಸಮರ್ಥಿತವಾಗಿದೆ ಎಂದು ತಿಳಿಯಬೇಕು.

ವಿವರಣೆ - ಪರಮಾಣ್ವಾರಂಭವಾದ - ಪರಮಾಣುವು ತನ್ನಲ್ಲಿ ಸಮವಾಯ-ಸಂಬಂಧವನ್ನು ಹೊಂದಿ ದ್ವ್ಯಣುಕ ಮೊದಲಾದ ಕಾರ್ಯಗಳಿಗೆ ಆರಂಭಕವಾಗಿದೆ. ಈ ವಿಷಯದಲ್ಲಿ 'ಈಶ್ವರನು ಕರ್ತೃ ಆಗಿದ್ದಾನೆ. ಕರ್ತೃತ್ವಕ್ಕೆ ಉಪಯುಕ್ತವಾದ ಜ್ಞಾನ, ಇಚ್ಛಾ ಮತ್ತು ಪ್ರಯತ್ನ ಮೊದಲಾದ ಧರ್ಮಗಳು ಅವನಲ್ಲಿವೆ. ಇದಕ್ಕಿಂತ ಬೇರೆಯಾದ ಆನಂತ್ಯ ಮೊದಲಾದ ಗುಣಗಳು ಅವನಲ್ಲಿರುವುದಿಲ್ಲ ಎಂಬುದಾಗಿ ಯಾವ ವಾದ ಇದೆಯೋ ಅದನ್ನೇ 'ಪರಮಾಣ್ವಾರಂಭವಾದ' ಎಂದು ಕರೆಯುತ್ತಾರೆ. ಈ ಮತದ ವಿರೋಧವು ಪ್ರಾಪ್ತವಾದರೆ ಪರಮಾತ್ಮನಲ್ಲಿ ಆನಂದಾದಿಗುಣಗಳೇ ಸಿದ್ಧವಾಗುವುದಿಲ್ಲ ಎಂಬುದನ್ನು ಪರಮಾಣ್ವಾರಂಭವಾದವಿರುದ್ಧತ್ವೇನ ಎಂಬುದರಿಂದ ತಿಳಿಸಿದ್ದಾರೆ. (ವಾಕ್ಯಾರ್ಥಮುಕ್ತಾವಳಿ)

### ತಾರ್ಕಿಕರ ಪ್ರಕಾರ ದ್ರವ್ಯದ ವಿಭಾಗ

**तत्वप्रकाशिका – न युक्तमिति पूर्वः पक्षः पक्षः । षट् खल्विमे**

**भावपदार्था द्रव्यादयः । तत्र गुणाश्रयो द्रव्यं पृथिव्यप्तेजोवाय्वाकाशकालदिगात्ममनोभेदेन नवविधम् । तत्राऽकाशादिपञ्चकं नित्यमेव । भूतचतुष्टयं तु परमाणुरूपं नित्यमन्यदनित्यमेव ।**

ಪರಮಾತ್ಮನಲ್ಲಿ ಅನಂತಗುಣಪರಿಪೂರ್ಣತ್ವವು ಯುಕ್ತವಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ಏಕೆಂದರೆ ಜಗತ್ತಿನಲ್ಲಿ ಒಟ್ಟು ಭಾವಪದಾರ್ಥಗಳು ಆರು ಮಾತ್ರ. ಅದರಲ್ಲಿ ಗುಣಕ್ಕೆ ಆಶ್ರಯವಾದ ದ್ರವ್ಯವು; ಪೃಥಿವೀ, ಅಪ್, ತೇಜಸ್ಸು, ಆಕಾಶ, ಕಾಲ, ದಿಕ್ಕು, ಆತ್ಮಾ, ಮನಸ್ಸು ಎಂಬುದಾಗಿ ಒಂಬತ್ತು ವಿಧ. ಈ ಒಂಬತ್ತರಲ್ಲಿ ಆಕಾಶ ಮೊದಲಾದ ಐದು ದ್ರವ್ಯಗಳು ನಿತ್ಯವಾಗಿವೆ. ಹಾಗೂ ಪೃಥಿವೀ, ಅಪ್, ತೇಜಸ್ಸು, ವಾಯು ಎಂಬ ಭೂತಚತುಷ್ಟಯಗಳು ಪರಮಾಣು ರೂಪದಲ್ಲಿ ಮಾತ್ರ ನಿತ್ಯ. ಬೇರೆ ರೂಪದಲ್ಲಿ ಅನಿತ್ಯ.

ತಾರ್ಕಿಕರ ಈ ಪ್ರಕ್ರಿಯೆಗಳನ್ನು ಅನುವಾದ ಮಾಡಲು ಏನು ಕಾರಣ ?

**भावदीपः – न युक्तमितीति ।।** कुतो न युक्तमित्यतो द्रव्यत्वेन परिगणितात्मविशेषस्य तस्याष्टगुणमात्रयुक्तत्वादिति वक्तुं कानि द्रव्याणि के च गुणा इत्याकाङ्क्षायामनुव्याख्यानोक्तदिशा तदीयप्रक्रियामनुवदति – **षट् खल्विति ।।** एतदुक्तिः सर्वसूत्रोपयोगित्वेन । द्रव्यादय इत्यादिपदार्थो गुणकर्मसामान्यविशेषसमवाया इति लक्षणवाक्यैर्विवरिष्यत इति भावः।। **गुणाश्रय इति ।।** गुणात्यन्ताभावानधिकरण इत्यर्थः। तेनाद्यक्षणे नाव्याप्तिर्घटादाविति ध्येयम्। नित्यमेवेत्येवकारेण प्रवाहव्यवच्छेदेन स्वरूपस्यैव कूटस्थनित्यत्वमाह। एवमग्रेपि। अत्र नित्यानित्यविभागोक्तिः नित्यमेव च भावात् रूपादिमत्त्वाच्चेत्येतत्सूत्रोपयोगित्वेन महदिति सूत्रोपलक्षित–द्रव्यासमवायिकारणादि खण्डनाय चेति बोध्यम्।।

ಪರಮಾತ್ಮನು ಅನಂತಗುಣಪರಿಪೂರ್ಣನಾಗಿದ್ದಾನೆಂಬುದು ಯುಕ್ತವಾಗುವುದಿಲ್ಲ ಎಂಬುದು ಪೂರ್ವಪಕ್ಷ. ಏಕೆ ಯುಕ್ತವಾಗುವುದಿಲ್ಲ ? ಎಂದರೆ ಆ ಈಶ್ವರನು ಕೇವಲ ದ್ರವ್ಯನಾಗಿದ್ದಾನೆ. ಆತ್ಮವಿಶೇಷನಾಗಿದ್ದಾನೆ. ಅವನಲ್ಲಿ ಎಂಟು ಗುಣಗಳಷ್ಟೇ ಇವೆ ಎಂಬುದು ತಾರ್ಕಿಕರ ಅಭಿಪ್ರಾಯ. ಇದನ್ನು

ತಿಳಿಯುವ ಮೊದಲು ದ್ರವ್ಯಗಳೆಷ್ಟು? ಗುಣಗಳೆಷ್ಟು ? ಎಂಬ ಆಕಾಂಕ್ಷೆ ಹುಟ್ಟುತ್ತದೆ. ಅದರ ಪ್ರಕಾರ ಆ ತಾರ್ಕಿಕರ ದ್ರವ್ಯಾದಿ ವಿಭಾಗಗಳ ಪ್ರಕ್ರಿಯೆಯನ್ನು ಷಟ್ ಖಲು ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ. ಹಿಂದಿನ ಸೂತ್ರಕ್ಕೆ ಉಪಯೋಗಿಯಾಗಿ ಈ ವಾಕ್ಯವು ಹೊರಟಿದೆ. 'ದ್ರವ್ಯಾದಯಃ' ಎಂಬಲ್ಲಿ ಆದಿಪದದಿಂದ ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯಗಳನ್ನು ವಿವಕ್ಷಿಸಬೇಕು. ಇವುಗಳನ್ನು ಲಕ್ಷಣ ಹೇಳುವ ಮೂಲಕ ಮುಂದೆ ವಿವರಿಸುತ್ತಾರೆ. 'ಗುಣಾಶ್ರಯತ್ವಂ' ಎಂಬುದು ದ್ರವ್ಯದ ಲಕ್ಷಣ. ಗುಣಾತ್ಯಂತಾಭಾವಕ್ಕೆ ಅನಧಿಕರಣವಾದದ್ದು ಎಂಬುದು ಇದರರ್ಥ. ಆದ್ದರಿಂದ ಪ್ರಥಮ ಕ್ಷಣದ ಘಟಾದಿಗಳಲ್ಲಿ ಅವ್ಯಾಪ್ತಿದೋಷವು ಬರುವುದಿಲ್ಲ. 'ನಿತ್ಯಮೇವ' ಎಂಬಲ್ಲಿರುವ ಏವಕಾರದಿಂದ 'ಪ್ರವಾಹತಃ ನಿತ್ಯತ್ವವನ್ನು ವ್ಯವಚ್ಛೇದ ಮಾಡಿದ್ದಾರೆ. ಆಕಾಶಾದಿಗಳು ಸ್ವರೂಪತಃ ಕೂಟಸ್ಥನಿತ್ಯವಾಗಿವೆ. ಮುಂದೂ ಕೂಡ ಹೀಗೆ ತಿಳಿಯಬೇಕು. ಇಲ್ಲಿ ನಿತ್ಯ ಹಾಗೂ ಅನಿತ್ಯ ಪದಾರ್ಥಗಳ ವಿಭಾಗವನ್ನು ಹೇಳಿದ್ದಾರೆ. ಇದು 'ನಿತ್ಯಮೇವಚ ಭಾವಾತ್ ರೂಪಾದಿಮತ್ತ್ವಾಚ್ಚ' ಎಂಬ ಸೂತ್ರಕ್ಕೆ ಉಪಯೋಗಿಯಾಗಿ ಹೇಳಿದ್ದು. ಈ ಸೂತ್ರದಲ್ಲಿರುವ 'ಮಹತ್' ಎಂಬ ಪದದಿಂದ ಉಪಲಕ್ಷಿತವಾದ ದ್ರವ್ಯದ ಅಸಮವಾಯಾದಿ ಕಾರಣದ ಖಂಡನೆಗೋಸ್ಕರವೂ ಕೂಡ ಹೇಳಲಾಗಿದೆ.

ವಿವರಣೆ - 'ಗುಣಾಶ್ರಯತ್ವಂ ದ್ರವ್ಯಸ್ಯ ಲಕ್ಷಣಂ' ಎಂದು ಹೇಳಿದರೆ, ಆದ್ಯಕ್ಷಣಾವಚ್ಛಿನ್ನವಾದ ಘಟದಲ್ಲಿ ಯಾವುದೇ ಗುಣಗಳಿರುವುದಿಲ್ಲ. ಆದ್ದರಿಂದ ದ್ರವ್ಯವೇ ಆದ ಆದ್ಯಕ್ಷಣಾವಚ್ಛಿನ್ನ ಘಟದಲ್ಲಿ ಗುಣಾಶ್ರಯತ್ವವೆಂಬ ಲಕ್ಷಣವು ಬಾರದ ಕಾರಣ ಅವ್ಯಾಪ್ತಿದೋಷ ಬರುತ್ತದೆ. ಇದರ ಪರಿಹಾರವನ್ನು ಇಲ್ಲಿ 'ಗುಣಾತ್ಯಂತಾಭಾವಾನಧಿಕರಣತ್ವಮ್' ಎಂದು ವ್ಯಾಖ್ಯಾನ ಮಾಡುವ ಮೂಲಕ ತಿಳಿಸಿರುತ್ತಾರೆ. 'ಗುಣಾಶ್ರಯತ್ವಂ ನಾಮ ಗುಣಾಧಿಕರಣ ವೃತ್ತಿತ್ವಂ' ಎಂದರ್ಥವಲ್ಲ. 'ಗುಣಾತ್ಯಂತಾಭಾವಾನಧಿಕರಣತ್ವಮ್' ಎಂದರ್ಥ. ಹುಟ್ಟಿದಾರಭ್ಯ ಯಾವುದೇ ಕ್ಷಣದಲ್ಲಿ ಗುಣವಿಲ್ಲದಿದ್ದಾಗ ಮಾತ್ರ ಗುಣಾತ್ಯಂತಾಭಾವಕ್ಕೆ ಆ ವಸ್ತು ಅಧಿಕರಣವಾಗುತ್ತದೆ. ಪ್ರಥಮಕ್ಷಣಾವಚ್ಛಿನ್ನವಾದ ಆ ಘಟದಲ್ಲಿ ಆ ಕ್ಷಣದಲ್ಲಿ ಗುಣವಿಲ್ಲದಿದ್ದರೂ, ದ್ವಿತೀಯಾದಿ ಕ್ಷಣದಲ್ಲಿ ಗುಣವು ಬರುವುದರಿಂದ ಗುಣಾತ್ಯಂತಾಭಾವಕ್ಕೆ ಅಧಿಕರಣವಾಗುವುದಿಲ್ಲ. ಅರ್ಥಾತ್ ಆದ್ಯಕ್ಷಣಾವಚ್ಛಿನ್ನವಾದ ಘಟದಲ್ಲಿ ಗುಣಾತ್ಯಂತಾಭಾವಾನಧಿಕರಣತ್ವವೇ ಬರುತ್ತದಾದ್ದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

ಆಕಾಶಾದಿಗಳು ಕ್ಷಣಲವಾದಿಗಳಂತೆ ಪ್ರವಾಹತಃ ಅನಾದಿಯಾಗಿರುವುದಿಲ್ಲ. ಸ್ವರೂಪತಃ ಅನಾದಿಯಾಗಿವೆ.

ಪೃಥಿವೀ, ಅಪ್, ತೇಜಸ್ಸು, ವಾಯುಗಳು ಪರಮಾಣು ರೂಪದಲ್ಲಿ ನಿತ್ಯವಾಗಿವೆ. ದ್ವ್ಯಣುಕಾದಿರೂಪದಲ್ಲಿ ಅನಿತ್ಯವಾಗಿವೆ ಎಂದು ಹೇಳಲಾಗಿದೆ. ಈ ವಿಭಾಗಕ್ಕೆ ಏನು ಪ್ರಯೋಜನ ? ಎಂಬ ಪ್ರಶ್ನೆಗೂ ಇಲ್ಲಿ ಉತ್ತರಿಸಲಾಗಿದೆ. ಮುಂದೆ 'ನಿತ್ಯಮೇವಚ ಭಾವಾತ್' ಎಂಬ ಸೂತ್ರದಲ್ಲಿ ಸಮವಾಯಿಕಾರಣಗಳಾದ ಪರಮಾಣುಗಳು ಯಾವಾಗಲೂ ಇರುವುದರಿಂದ ನಿತ್ಯವಾಗಿ ಕಾರ್ಯವೇ ಆಗಬೇಕಾದೀತೆಂದು ಆಕ್ಷೇಪ ಮಾಡುತ್ತೇವೆ. ಹಾಗೂ 'ರೂಪಾದಿಮತ್ವಾಚ್ಚ ವಿಪರ್ಯಯೋ ದರ್ಶನಾತ್' ಎಂಬ ಸೂತ್ರದಲ್ಲಿ ಭೂತಚತುಷ್ಟಯದ ಪರಮಾಣುಗಳೂ ಕೂಡ ಅನಿತ್ಯವಾಗಬೇಕಾದೀತು ಎಂದು ದೋಷ ಹೇಳುತ್ತೇವೆ. ಅದಕ್ಕೆ ಉಪಯೋಗವಾಗುವಂತೆ ಇಲ್ಲಿ ತಾರ್ಕಿಕರ ಪ್ರಕಾರ ಪರಮಾಣುಗಳು ನಿತ್ಯವಾಗಿವೆ ಎಂದು ಅವರ ಸಿದ್ಧಾಂತವನ್ನು ಅನುವಾದ ಮಾಡಿದ್ದಾರೆ. ಅಷ್ಟೇ ಅಲ್ಲದೇ ಇದೇ ಸೂತ್ರದಲ್ಲಿರುವ 'ಮಹತ್' ಎಂಬ ಪದದಿಂದ ಉಪಲಕ್ಷಿತವಾಗಿ ದ್ರವ್ಯವು ಅಸಮವಾಯಿಕಾರಣವಾಗಿವೆ ಎಂಬ ತಾರ್ಕಿಕರ ಅಭಿಪ್ರಾಯವನ್ನು ನಿರಾಕರಣೆ ಮಾಡುತ್ತೇವೆ. ಅದಕ್ಕೂ ಕೂಡ ಈ ನಿತ್ಯಾನಿತ್ಯವಿಭಾಗವು ಉಪಯುಕ್ತವಾಗಿದೆ.

ವಿವರಣೆ - ತಾರ್ಕಿಕರು ಜಗತ್ತಿನಲ್ಲಿ ಏಳು ಪದಾರ್ಥಗಳನ್ನು ಮಾತ್ರ ಅಂಗೀಕರಿಸುತ್ತಾರೆ. ೧) ದ್ರವ್ಯ, ೨) ಗುಣ, ೩) ಕರ್ಮ, ೪) ಸಾಮಾನ್ಯ, ೫) ವಿಶೇಷ, ೬) ಸಮವಾಯ, ಎಂದು ಭಾವಪದಾರ್ಥಗಳು ಒಟ್ಟು ಆರು. ಈ ಆರು ಪದಾರ್ಥಗಳಲ್ಲಿ ಮೊದಲನೆಯದ್ದು ಗುಣಾಶ್ರಯವಾದ ದ್ರವ್ಯ ಎನಿಸುತ್ತದೆ. ಈ ದ್ರವ್ಯವು ಒಂಬತ್ತು ವಿಧ - ೧) ಪೃಥಿವೀ, ೨) ಅಪ್ ೩) ತೇಜಸ್ಸು, ೪) ವಾಯು, ೫) ಆಕಾಶ, ೬) ಕಾಲ, ೭) ದಿಕ್, ೮) ಆತ್ಮ, ೯) ಮನಸ್ಸು ಎಂದು. ಇವುಗಳಲ್ಲಿ ಆಕಾಶ, ಕಾಲ ದಿಕ್, ಆತ್ಮ, ಮನಸ್ಸು ಎಂಬ ಐದು ದ್ರವ್ಯಗಳು ನಿತ್ಯವಾಗಿವೆ. ಪೃಥಿವೀ, ಅಪ್, ತೇಜಸ್ಸು, ವಾಯು ಎಂಬ ನಾಕು ಭೂತಪದಾರ್ಥಗಳು ಪರಮಾಣು ರೂಪದಲ್ಲಿ ನಿತ್ಯವಾಗಿವೆ. ದ್ವ್ಯಣುಕಾದಿ ರೂಪದಲ್ಲಿ ಅನಿತ್ಯವಾಗಿವೆ.

### ಗುಣ ಇಪ್ಪತ್ನಾಕು ಕರ್ಮ ಐದು

**तत्वप्रकाशिका – कर्मान्यत्वे सति जातिमात्राश्रया गुणाः । रूपरसगन्धस्पर्शशब्दसङ्ख्यापरिमाणपृथक्त्वसंयोगविभागपरत्वापरत्वगुरुत्वद्रवत्वस्नेहसंस्कार-बुद्धिसुखदुःखेच्छाद्वेषप्रयत्नधर्माधर्माः । ते चानित्याश्रिता अनित्या एव ।**

**नित्यद्रव्ये द्विविधाश्च । संयोगविभागयोरसमवायिकारणं कर्म । उत्क्षेपणमपक्षेपणमाकुञ्चनं प्रसारणं गमनमिति पञ्चविधमनित्यमेव ।**

'ಕರ್ಮಾನ್ಯತ್ವೇ ಸತಿ ಜಾತಿಮಾತ್ರಾಶ್ರಯತ್ವ'ವು ಗುಣದ ಲಕ್ಷಣ. ಗುಣಗಳು ಒಟ್ಟು ೨೪ ವಿಧ. ೧) ರೂಪ, ೨) ರಸ, ೩) ಗಂಧ, ೪) ಸ್ಪರ್ಶ, ೫) ಶಬ್ದ, ೬) ಸಂಖ್ಯಾ, ೭) ಪರಿಮಾಣ, ೮) ಪೃಥಕ್ತ್ವ, ೯) ಸಂಯೋಗ, ೧೦) ವಿಭಾಗ, ೧೧) ಪರತ್ವ, ೧೨) ಅಪರತ್ವ, ೧೩) ಗುರುತ್ವ, ೧೪) ದ್ರವತ್ವ, ೧೫) ಸ್ನೇಹ, ೧೬) ಸಂಸ್ಕಾರ, ೧೭) ಬುದ್ಧಿ, ೧೮) ಸುಖ, ೧೯) ದುಃಖ, ೨೦) ಇಚ್ಛಾ, ೨೧) ದ್ವೇಷ, ೨೨) ಪ್ರಯತ್ನ, ೨೩) ಧರ್ಮ, ೨೪) ಅಧರ್ಮ, ಎಂದು. ಈ ಗುಣಗಳು ಅನಿತ್ಯದಲ್ಲಿ ಇದ್ದರೆ ಅನಿತ್ಯವೇ ಆಗುತ್ತವೆ. ನಿತ್ಯದ್ರವ್ಯದಲ್ಲಿ ಇದ್ದರೆ ಎರಡು ವಿಧವೂ ಆಗುತ್ತವೆ. ಕೆಲವು ನಿತ್ಯ ಹಾಗೂ ಕೆಲವು ಅನಿತ್ಯ. ಸಂಯೋಗ ವಿಭಾಗಗಳಿಗೆ ಅಸಮವಾಯಿಕಾರಣವಾದದ್ದು ಕರ್ಮ ಎನಿಸುತ್ತದೆ. ಇದು ಐದು ವಿಧ - ೧) ಉತ್ಕ್ಷೇಪಣ. ೨) ಅಪಕ್ಷೇಪಣ, ೩) ಆಕುಂಚನ, ೪) ಪ್ರಸಾರಣ ೫) ಗಮನ ಎಂದು.

### ಗುಣಗಳಲ್ಲಿ ನಿತ್ಯಾನಿತ್ಯವಿಭಾಗ ಹೇಳಲು ಏನು ಕಾರಣ ?

**भावदीपः – जातिमात्राश्रया इति ।।** समवायवृत्त्येति योज्यम्। एतेन रूपत्वादिसमवायाश्रयो रूपादिरिति नासंभवः। गुणस्वरूपाद्युक्तिरीश्वरस्याष्टगुणत्वाद्यव धारणार्था।। **अनित्या एवेति ।।** गुणेषु नित्यानित्यविभागोक्तिर्महदितिसूत्रोपयोगित्वेन। संयोगजनके संयोगे विभागजनके च विभागेऽतिव्याप्तिनिरासाय संयोगविभागयोरिति द्वयोरप्युक्तिः। कर्मस्वरूपाद्युक्तिरुभयथापि न कर्मेतिसूत्रोपयोगित्वेनेति ज्ञेयम्। संयोगेऽव्याप्तिनिरासाय सामान्यलक्षणे न कर्मेतिसूत्रोपयोगित्वेनेति ज्ञेयम्।

'ಜಾತಿಮಾತ್ರಾಶ್ರಯಾಃ' ಎಂದು ಹೇಳಿದ್ದಾರೆ. ಸಮವಾಯಸಂಬಂಧೇನ ಜಾತಿಗಷ್ಟೇ ಆಶ್ರಯವಾದವು ಎಂದು ಮೂಲದಲ್ಲಿ ಹೇಳಿದ್ದಾರೆ. ಇಲ್ಲಿ 'ಸಮವಾಯವೃತ್ತ್ಯಾ' ಎಂದು ಯೋಜನೆ ಮಾಡಿಕೊಳ್ಳಬೇಕು. ಹೀಗೆ ಹೇಳಿದ್ದರಿಂದ ರೂಪತ್ವಾದಿಸಮವಾಯಕ್ಕೆ ರೂಪಾದಿಗಳು ಆಶ್ರಯವಾಗಿವೆ ಎಂದು ತಿಳಿದಂತಾಗುತ್ತದೆ. ಹೀಗೆ ಹೇಳುವುದು ಅಸಂಭಾವಿತವಲ್ಲ. ಇಲ್ಲಿ ಗುಣಸ್ವರೂಪಾದಿಗಳನ್ನು ಹೇಳಿದ್ದು ಈಶ್ವರನಿಗೆ ಎಂಟೇ

ಗುಣಗಳಿವೆ ಎಂಬುದರ ಸಮರ್ಥನೆಗಾಗಿ. 'ಅನಿತ್ಯಾ ಏವ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಗುಣಗಳಲ್ಲಿ ನಿತ್ಯಾನಿತ್ಯವಿಭಾಗವನ್ನು ಹೇಳಿರುವುದು 'ಮಹತ್' ಇತ್ಯಾದಿ ಸೂತ್ರಕ್ಕೆ ಉಪಯೋಗವಾಗುವುದಕ್ಕಾಗಿ. ಸಂಯೋಗಜನಕವಾದ ಸಂಯೋಗದಲ್ಲಿ, ವಿಭಾಗಜನಕವಾದ ವಿಭಾಗದಲ್ಲಿ ಅತಿವ್ಯಾಪ್ತಿಯ ಪರಿಹಾರಕ್ಕಾಗಿ 'ಸಂಯೋಗವಿಭಾಗಯೋಃ' ಎಂಬುದಾಗಿ ಎರಡನ್ನೂ ಕೂಡ ಉಲ್ಲೇಖ ಮಾಡಿದ್ದಾರೆ. ಕರ್ಮಸ್ವರೂಪಾದಿಗಳನ್ನು ಹೇಳಿರುವುದು 'ಉಭಯಥಾಪಿ ನ ಕರ್ಮ' ಇತ್ಯಾದಿ ಸೂತ್ರಕ್ಕೆ ಅನುಕೂಲವಾಗುವುದಕ್ಕಾಗಿ ಎಂದು ತಿಳಿಯಬೇಕು.

ವಿವರಣೆ - 'ಜಾತಿಮಾತ್ರಾಶ್ರಯಾ' ಎಂದರೆ ಸಮವಾಯಸಂಬಂಧದಿಂದ ಕೇವಲ ಜಾತಿಗೆ ಆಶ್ರಯವಾದವು ಗುಣಗಳು ಎಂದಭಿಪ್ರಾಯ. ರೂಪತ್ವವು ಸಮವಾಯ-ಸಂಬಂಧದಿಂದ ರೂಪದಲ್ಲಿದೆ. 'ಸಮವಾಯೇನ ರೂಪತ್ವಾವಾನ್ ರೂಪಸ್ಯ ಲಕ್ಷಣಮ್' ಎಂದು ಹೇಳಿದಂತಾಗುತ್ತದೆ. ಆದ್ದರಿಂದ ಅಸಂಭವದೋಷಕ್ಕೆ ಅವಕಾಶವಿಲ್ಲ.

### ಸಾಮಾನ್ಯ, ವಿಶೇಷ, ಸಮವಾಯ ಇವುಗಳ ಲಕ್ಷಣ

**तत्वप्रकाशिका – नित्यमेकमनेकसमवेतं सामान्यमनेकविधम् । नित्यः सम्बन्धः समवाय एक एव । नित्यद्रव्यवृत्तयोऽन्त्या विशेषाः । एतत्त्रयं नित्यमेव। तत्रानित्यं कारणत्रितयजन्यम् । यत्समवेतं कार्यमुत्पद्यते तत्समवायिकारणं परमाण्वादिद्रव्यमेव ।**

ನಿತ್ಯವಾಗಿದ್ದು ಒಂದೇ ಅನೇಕ ಪದಾರ್ಥಗಳಲ್ಲಿ ಸಮವಾಯಸಂಬಂಧೇನ ಇರುವುದು ಸಾಮಾನ್ಯದ ಲಕ್ಷಣ. ನಿತ್ಯಸಂಬಂಧವಾದ ಸಮವಾಯವು ಒಂದೇ ಆಗಿದೆ. ನಿತ್ಯದ್ರವ್ಯವೆನಿಸಿದ ಪರಮಾಣುಗಳಲ್ಲಿ ಇರುವ ಪರಮಾಣುಗಳಲ್ಲೂ ತಮ್ಮಲ್ಲೂ ವ್ಯಾವೃತ್ತಿಗಳನ್ನು ಉಂಟುಮಾಡುವ ವಿಶೇಷಗಳು ಅನಂತವಾಗಿವೆ. ಸಾಮಾನ್ಯ, ಸಮವಾಯ, ವಿಶೇಷ ಈ ಮೂರು ನಿತ್ಯಪದಾರ್ಥಗಳು.

ಅನಿತ್ಯಪದಾರ್ಥಗಳು ಮೂರು ಕಾರಣಗಳಿಂದ ಹುಟ್ಟುತ್ತವೆ. ಎಲ್ಲಿ ಸಮವಾಯಸಂಬಂಧೇನ ಇದ್ದುಕೊಂಡು ಕಾರ್ಯವು ಹುಟ್ಟುತ್ತದೋ ಆ ಪದಾರ್ಥ ಸಮವಾಯಿಕಾರಣ ಎನಿಸುತ್ತದೆ. ಪರಮಾಣು ಮೊದಲಾದ ದ್ರವ್ಯಗಳೇ ಸಮವಾಯಿಕಾರಣಗಳಾಗಿವೆ.

## ಸಾಮಾನ್ಯ ದಲಕೃತ್ಯ ವಿಚಾರ

**भावदीपः** – संयोगेऽतिव्याप्तिनिरासाय सामान्यलक्षणे नित्यमिति विशेषणम्। समवाये दोषनिरासाय समवेतमित्युक्तिः। आत्मादिनित्यवस्तुगतैकत्वानां जातित्वनिवृत्यर्थमेकमिति ॥ **अनेकविधमिति ॥** परापरजातिभेदेनेति भावः। एतदुक्तिश्च नित्यमेव चेति सूत्रोपयोगित्वेन । समवायस्वरूपोक्तिरपि समवायसूत्रोपयोगाय। अन्त्याः व्यावर्त(कान्तर)कशून्याः। एतत्त्रयं सामान्यादित्रयम्। नित्यानित्यविभागोक्तेरुपयोगमाह– **तत्रानित्यमिति ॥ त्रितयेति ॥** समवाय्य-समवायिनिमित्तकारणरूपत्रितयेत्यर्थः।

ಸಂಯೋಗದಲ್ಲಿ ಅತಿವ್ಯಾಪ್ತಿಯನ್ನು ನಿರಾಕರಣೆ ಮಾಡುವುದಕ್ಕಾಗಿ ಸಾಮಾನ್ಯಲಕ್ಷಣದಲ್ಲಿ 'ನಿತ್ಯಂ' ಎಂಬ ವಿಶೇಷಣವನ್ನು ನೀಡಿದ್ದಾರೆ. ಸಮವಾಯದಲ್ಲಿ ಅತಿವ್ಯಾಪ್ತಿದೋಷವನ್ನು ನಿರಾಕರಣೆ ಮಾಡುವುದಕ್ಕಾಗಿ 'ಸಮವೇತಮ್' ಎಂದು ಹೇಳಿದ್ದಾರೆ. ಆತ್ಮಾದಿನಿತ್ಯ ಪದಾರ್ಥಗಳಲ್ಲಿರುವ ಏಕತ್ವಾದಿಗಳು ಜಾತಿ ಅಲ್ಲವೆಂದು ಹೇಳುವುದಕ್ಕಾಗಿ 'ಏಕಂ' ಎಂಬ ವಿಶೇಷಣವನ್ನು ನೀಡಿದ್ದಾರೆ. 'ಅನೇಕವಿಧಮ್' ಎಂದರೆ ಪರಜಾತಿ, ಅಪರಜಾತಿ ಎಂಬ ವೈವಿಧ್ಯದಿಂದ ಅನೇಕವೆಂದು ತಿಳಿಯಬೇಕು. 'ನಿತ್ಯಮೇವಚ' ಎಂಬ ಸೂತ್ರಕ್ಕೆ ಉಪಯೋಗಿಯಾಗುವುದಕ್ಕಾಗಿ ಈ ಸಾಮಾನ್ಯಲಕ್ಷಣವನ್ನು ಇಲ್ಲಿ ಹೇಳಿದ್ದಾರೆ. ಸಮವಾಯದ ಸ್ವರೂಪವನ್ನು ಹೇಳಿದ್ದೂ ಕೂಡ 'ಸಮವಾಯಾಭ್ಯುಗಮಾಚ್ಚ' ಎಂಬ ಸೂತ್ರಕ್ಕೆ ಉಪಯೋಗವಾಗುವುದಕ್ಕಾಗಿ ತಿಳಿಯಬೇಕು. 'ಅಂತ್ಯಾಃ' ಎಂಬ ಪದಕ್ಕೆ ವ್ಯಾವರ್ತಕವಿಲ್ಲದವುಗಳು ಎಂದರ್ಥ. 'ಏತತ್ ತ್ರಯಂ' ಎಂದರೆ ಸಾಮಾನ್ಯ ವಿಶೇಷ ಸಮವಾಯಗಳು ಎಂದರ್ಥ. ನಿತ್ಯಾನಿತ್ಯವಿಭಾಗಕ್ಕೆ ಉಪಯೋಗವನ್ನು ಹೇಳಲು 'ತತ್ರಾನಿತ್ಯಮ್' ಎಂಬ ವಾಕ್ಯವು ಹೊರಟಿದೆ. 'ಕಾರಣತೃತೀಯಾಜನ್ಯಮ್' ಎಂದರೆ ಸಮಯವಾಯಿಕಾರಣ, ಅಸಮವಾಯಿಕಾರಣ, ನಿಮಿತ್ತಕಾರಣ ಈ ಮೂರರಿಂದ ಹುಟ್ಟಿದ್ದು ಎಂದರ್ಥ.

ವಿವರಣೆ - ಸಾಮಾನ್ಯಲಕ್ಷಣದಲ್ಲಿ ನಿತ್ಯತ್ವವನ್ನು ವಿಶೇಷಣವನ್ನಾಗಿ ಹೇಳದೇ 'ಅನೇಕ ಸಮವೇತತ್ವಂ ಸಾಮಾನ್ಯಂ' ಎಂದಷ್ಟೇ ಹೇಳಿದರೆ ಸಂಯೋಗವೂ ಕೂಡ ಅನೇಕತ್ರ ಸಮಯವಾಯಸಂಬಂಧದಿಂದ ವೃತ್ತವಾಗಿದೆ. ಆದ್ದರಿಂದ ಅತಿವ್ಯಾಪ್ತಿ ಬರುತ್ತದೆ. ಇದರ ಪರಿಹಾರಕ್ಕಾಗಿ 'ನಿತ್ಯಂ' ಎನ್ನಬೇಕು. ಸಂಯೋಗವು ಅನಿತ್ಯವಾದ್ದರಿಂದ ಅತಿವ್ಯಾಪ್ತಿಯು

ಬರುವುದಿಲ್ಲ. ಸಮವೇತಂ ಎಂದು ಹೇಳದಿದ್ದರೆ ಸಮವಾಯದಲ್ಲಿ ಅತಿವ್ಯಾಪ್ತಿ ಬರುತ್ತದೆ. ಸಮವಾಯವು ನಿತ್ಯವಾಗಿದೆ ಮತ್ತು ಏಕವಾಗಿದೆ. ಅದಕ್ಕೋಸ್ಕರ ಸಮವೇತಂ ಎಂದು ಹೇಳಬೇಕು. ಸಮಯವಾವು ಸಮವಾಯಸಂಬಂಧದಿಂದ ಇಲ್ಲದ ಕಾರಣ ಅತಿವ್ಯಾಪ್ತಿಗೆ ಅವಕಾಶವಿಲ್ಲ. 'ನಿತ್ಯತ್ವೇ ಸತಿ ಅನೇಕಸಮವೇತತ್ವಂ' ಎಂದಷ್ಟೇ ಹೇಳಿದರೆ ಆತ್ಮಾದಿ ನಿತ್ಯವಸ್ತುಗಳಲ್ಲಿರುವ ಏಕತ್ವದಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದರ ಪರಿಹಾರಕ್ಕಾಗಿ 'ಏಕತ್ವಂ' ಎಂಬ ವಿಶೇಷಣವನ್ನು ನೀಡಬೇಕು.

### ಪ್ರತ್ಯಾಸತ್ತಿಯು ಎರಡು ವಿಧ

**तत्वप्रकाशिका – आदिसृष्टौ च परमाणवो द्व्यणुकादिक्रमेणावयविनमारभन्ते। समवायिकारणप्रत्यासन्नमवधृतसामर्थ्यमसमवायिकारणम् । प्रत्यासत्तिर्द्वेधा । कार्यैकार्थप्रत्यासत्तिः कारणैकार्थप्रत्यासत्तिश्चेति । तत्र कार्यद्रव्यस्यावयवसंयोग एव कार्यैकार्थप्रत्यासत्त्याऽसमवायिकारणं भवति ।**

ಸೃಷ್ಟಿಯ ಪ್ರಾರಂಭದಲ್ಲಿ ಪರಮಾಣುಗಳು ದ್ವ್ಯಣುಕ, ತ್ರ್ಯಣುಕ ಮೊದಲಾದ ಕ್ರಮದಿಂದ ಅವಯವಿಗಳನ್ನು ಹುಟ್ಟಿಸುತ್ತವೆ. ಸಮವಾಯಿಕಾರಣದಲ್ಲಿದ್ದು ಕಾರಣತ್ವಸಾಮರ್ಥ್ಯವುಳ್ಳ ಕಾರಣವನ್ನು ಅಸಮವಾಯಿಕಾರಣ ಎಂದು ಕರೆಯುತ್ತಾರೆ. 'ಕಾರ್ಯೈಕಪ್ರತ್ಯಾಸತ್ತಿ' 'ಕಾರಣೈಕಾರ್ಥಪ್ರತ್ಯಾಸತ್ತಿ' ಎಂಬುದಾಗಿ ಸಂಬಂಧವು ಎರಡುವಿಧ. ಇವೆರಡರಲ್ಲಿ ದ್ರವ್ಯರೂಪವಾದ ಕಾರ್ಯಕ್ಕೆ ಅವಯವಸಂಯೋಗವೇ ಕಾರ್ಯೈಕಾರ್ಥಪ್ರತ್ಯಾಸತ್ತಿ ರೂಪವಾಗಿ ಅಸಮವಾಯಿಕಾರಣವಾಗಿದೆ.

### ಅಸಮವಾಯಿಕಾರಣ ಲಕ್ಷಣದಲ್ಲಿ ದಲಕೃತ್ಯ ವಿಚಾರ

**भावदीपः** – परमाणव इति बहुवचनं भूतचतुष्टयापेक्षया। प्रत्येकं तु परमाणुद्वयं द्वयमेव द्व्यणुकादिकार्यारंभकमिति बोध्यम्। तन्तुरूपादौ पटासमवायित्वव्यावृत्त्यर्थम वधृतेत्यादि। निमित्तादावतिव्याप्तिनिरासाय पूर्वभागः। एवं सति तन्तुरूपादेः पटरूपादिं प्रत्यसमवायिकारणत्वं न स्यात् । पटरूपं प्रति समवायिकारणभूते पटे

तन्तुरूपस्याप्रत्यासन्नत्वादित्यत आह – **प्रत्यासत्तिर्द्वेधेति ।।** असमवायिकारणस्य समवायिकारणे प्रत्यासत्तिर्वर्तनं द्वेधा। स्वकार्येण सहैकस्मिन्नर्थे समवायेन वर्तनं वा स्वकार्ये यत्कारणं तेन सहैकस्मिन्नर्थे वर्तनं वेत्यर्थः ।।

'ಪರಮಾಣವಃ' ಎಂದು ಬಹುವಚನವು ಭೂತಚತುಷ್ಟಯದಿಂದ ಪ್ರಯುಕ್ತವಾಗಿದೆ. ಪ್ರತ್ಯೇಕವಾಗಿ ಎರಡು ಪರಮಾಣುಗಳು ಎರಡೇ ದ್ವ್ಯಣುಕಗಳಿಗೆ ಆರಂಭಕವಾಗುತ್ತದೆಂದು ತಿಳಿಯಬೇಕು. ತಂತುರೂಪಾದಿಗಳಲ್ಲಿ ಪಟಾಸಮವಾಯಿಕಾರಣತ್ವವನ್ನು ವ್ಯಾವೃತ್ತಿ ಮಾಡುವುದಕ್ಕಾಗಿ ಅವಧೃತ ಸಾರ್ಮರ್ಥ್ಯಂ ಎಂದು ಹೇಳಿದ್ದಾರೆ. ನಿಮಿತ್ತಕಾರಣದಲ್ಲಿ ಅತಿವ್ಯಾಪ್ತಿಯ ಪರಿಹಾರಕ್ಕಾಗಿ 'ಸಮವಾಯಿಕಾರಣ ಪ್ರತ್ಯಾಸನ್ನತ್ವಮ್' ಎಂದು ಹೇಳಿದ್ದಾರೆ. ಹೀಗೆ ಹೇಳಿದಾಗ ತಂತುರೂಪವು ಪಟರೂಪವನ್ನು ಕುರಿತು ಅಸಮವಾಯಿಕಾರಣ ಆಗದೇ ಇರಬೇಕಾದೀತು. ಏಕೆಂದರೆ ಪಟರೂಪವನ್ನು ಕುರಿತು ಸಮವಾಯಿಕಾರಣ-ವೆನಿಸಿದ ಪಟದಲ್ಲಿ ತಂತುರೂಪವು ಪ್ರತ್ಯಾಸನ್ನವಾಗಿರುವುದಿಲ್ಲ. ಈ ಪ್ರಶ್ನೆಗೆ 'ಪ್ರತ್ಯಾಸತ್ತಿರ್ದ್ವೇಧಾ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಅಸಮವಾಯಿಕಾರಣಕ್ಕೆ ಸಮವಾಯಿಕಾರಣದಲ್ಲಿ ಇರುವಿಕೆಯು ಎರಡು ರೀತಿಯಲ್ಲಿ ತಿಳಿಯಬೇಕು. ೧) ತನ್ನ ಕಾರ್ಯದ ಜೊತೆ ಒಂದೇ ಅರ್ಥದಲ್ಲಿ ಸಮವಾಯ ಸಂಬಂಧದಿಂದ ಇರುವಿಕೆ. ೨) ತನ್ನ ಕಾರ್ಯಕ್ಕೆ ಯಾವುದು ಕಾರಣವೋ, ಅದರ ಜೊತೆ ಒಂದೇ ಅರ್ಥದಲ್ಲಿ ಇರುವಿಕೆ ಎಂದು.

**ವಿವರಣೆ** - 'ಪರಮಾಣವಃ' ಎಂಬುದಾಗಿ ಬಹುವಚನವನ್ನು ಹೇಳಿದ್ದರಿಂದ ಪೃಥಿವೀ, ಅಪ್, ತೇಜಸ್ಸು, ವಾಯು ಈ ನಾಕು ಭೂತಗಳ ಪರಮಾಣುಗಳನ್ನು ವಿವಕ್ಷಿಸಬೇಕೆಂದು ತಿಳಿಸಿದ್ದಾರೆ. ಇವುಗಳು ಈ ಪರಮಾಣುಗಳು ಪ್ರತ್ಯೇಕವಾಗಿ ಎರಡೆರಡು ಸೇರಿ ದ್ವ್ಯಣುಕಗಳನ್ನು ಹುಟ್ಟಿಸುತ್ತವೆ ಎಂದಭಿಪ್ರಾಯ.

'ಸಮವಾಯಿಕಾರಣಪ್ರತ್ಯಾಸನ್ನತ್ವೇ ಸತಿ ಅವಧೃತಸಾಮರ್ಥ್ಯಂ ಅಸಮವಾಯಿ ಕಾರಣಸ್ಯ ಲಕ್ಷಣಂ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ತಂತುರೂಪವು ಪಟರೂಪಕ್ಕೆ ಅಸಮವಾಯಿಕಾರಣವಾಗಿದೆ ಹೊರತು, ಪಟಕ್ಕೆ ಅಸಮವಾಯಿಕಾರಣ ಆಗಿರುವುದಿಲ್ಲ. ಪಟವನ್ನು ಹುಟ್ಟಿಸುವ ಸಾಮರ್ಥ್ಯ ತಂತುರೂಪದಲ್ಲಿ ಸರ್ವಥಾ ಇರುವುದಿಲ್ಲ. ಆದ್ದರಿಂದ 'ಸಮವಾಯಿಕಾರಣತ್ವೇ ಪತ್ಯಾಸನ್ನತ್ವಂ' ಎಂದಷ್ಟೇ ಹೇಳಿದರೆ ತಂತುರೂಪದಲ್ಲೂ ಈ ಲಕ್ಷಣ ಬರುವುದರಿಂದ ಅತಿವ್ಯಾಪ್ತಿ ಬರುತ್ತಿತ್ತು. ಅದಕ್ಕೋಸ್ಕರ 'ಅವಧೃತಸಾಮರ್ಥ್ಯಂ' ಎಂಬ ವಿಶೇಷದಲವನ್ನು ನೀಡಿದ್ದಾರೆ. ತಂತುರೂಪದಲ್ಲಿ ಪಟವನ್ನು ಹುಟ್ಟಿಸುವ ಸಾಮರ್ಥ್ಯವು

ಇಲ್ಲದ ಕಾರಣ ಅತಿವ್ಯಾಪ್ತಿಗೆ ಅವಕಾಶವಿಲ್ಲ. 'ಅವಧೃತಸಾಮರ್ಥ್ಯಂ' ಎಂದಷ್ಟೇ ಹೇಳಿದರೆ ನಿಮಿತ್ತಕಾರಣವಾದ ಕುಲಲಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಅಶರಲ್ಲಿಯೂ ಪಟವನ್ನು ಹುಟ್ಟಿಸುವ ಸಾಮರ್ಥ್ಯವಿರುತ್ತದೆ. ಅದಕ್ಕಾಗಿ 'ಸಮವಾಯಿಕಾರಣಪ್ರತ್ಯಾಸನ್ನತ್ವಂ' ಎಂಬ ವಿಶೇಷಣವನ್ನು ನೀಡಬೇಕು. ಸಮವಾಯಿಕಾರಣದಲ್ಲಿದ್ದು ಹುಟ್ಟಿಸುವ ಸಾಮರ್ಥ್ಯವನ್ನು ಹೊಂದಿರಬೇಕೆಂಬುದು ಇದರ ಅಭಿಪ್ರಾಯ. ಕುಲಲಾದಿಗಳು ಸಮವಾಯಿಕಾರಣಗಳಿಲ್ಲದ ಕಾರಣ ಅತಿವ್ಯಾಪ್ತಿಗೆ ಅವಕಾಶವಿಲ್ಲ.

ಪ್ರತ್ಯಾಸತ್ತಿಯು ಎರಡು ವಿಧ - ಅಸಮವಾಯಿಕಾರಣಕ್ಕೆ ಸಮವಾಯಿಕಾರಣದಲ್ಲಿ ಇರುವಿಕೆಯು ಎರಡು ವಿಧ ಎಂಬುದು ಇದರ ಅಭಿಪ್ರಾಯ. ೧. ತನ್ನ ಕಾರ್ಯದ ಜೊತೆ ಒಂದೇ ಪದಾರ್ಥದಲ್ಲಿ ಸಮವಾಯಸಂಬಂಧೇನ ಇರುವಿಕೆ, ಅಥವಾ ತನ್ನ ಕಾರ್ಯಕ್ಕೆ ಯಾವುದು ಕಾರಣವೋ ಅದರ ಜೊತೆ ಒಂದೇ ಅರ್ಥದಲ್ಲಿ ಇರುವಿಕೆ ಎಂದು.

ಕಾರ್ಯದಲ್ಲಿರುವ ರೂಪ ಮೊದಲಾದ ಗುಣಗಳಿಗೆ ಕಾರಣದಲ್ಲಿರುವ ರೂಪ ಮೊದಲಾದ ಗುಣಗಳು ಕಾರಣೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣಗಳಾಗಿವೆ. ತನ್ನ ಕಾರ್ಯಕ್ಕೆ ಯಾವುದು ಕಾರಣವೋ ಅದರ ಜೊತೆ ಒಂದೇ ಅರ್ಥದಲ್ಲಿ ಇದ್ದು ಕಾರಣವಾಗಿದೆ ಎಂದಭಿಪ್ರಾಯ. ಟೀಕೆಯಲ್ಲಿರುವ 'ಕಾರಣೈಕಾರ್ಥಪ್ರತ್ಯಾಸತ್ತ್ಯಾದಿನಾ' ಎಂಬಲ್ಲಿ ಆದಿಪದದಿಂದ ಕರ್ಮವನ್ನು ವಿವಕ್ಷಿಸಬೇಕು. ಕಾರ್ಯೈಕಾರ್ಥಪ್ರತ್ಯಾಸತ್ತಿಯಿಂದ ಕರ್ಮವು ಅಸಮವಾಯಿಕಾರಣವಾಗಿದೆ ಎಂದು. ಸಂಯೋಗಾದಿಕಾರ್ಯವನ್ನು ಕುರಿತು ಕಾರಣವೆನಿಸಿದ ಘಟಾದಿಗಳಲ್ಲಿರುವ ಕರ್ಮವು ತನ್ನ ಕಾರ್ಯವಾದ ಸಂಯೋಗಾದಿಗಳ ಜೊತೆ ಒಂದೇ ಅರ್ಥವಾದ ಘಟದಲ್ಲಿ ಪ್ರತ್ಯಾಸನ್ನವಾಗಿದೆ ಎಂದಭಿಪ್ರಾಯ.

ಗುರುತ್ವ, ದ್ರವತ್ವ, ವೇಗ, ಸಂಯೋಗ ಮೊದಲಾದ ಗುಣಗಳ ವಿಷಯದಲ್ಲಿ ಹೀಗೆ ತಿಳಿಯಬೇಕು. ಮುಂದಿನ ಪತನ, ಹರಿಯುವಿಕೆ ಮುಂತಾದವುಕ್ಕೆ ಹಿಂದಿನ ಪತನ, ಹರಿಯುವಿಕೆ ಮೊದಲಾದ ಕರ್ಮಗಳು ಕಾರ್ಯೈಕಾರ್ಥಪ್ರತ್ಯಾಸತ್ತಿಯಿಂದ ಕಾರಣವಾಗುತ್ತವೆ. ಇದನ್ನು ಆದಿಪದಿಂದ ಸಂಗ್ರಹಿಸಿದ್ದಾರೆ.

ಕಾರ್ಯದಲ್ಲಿರುವ ಕರ್ಮಕ್ಕೆ (ಅವಯವಿಯಲ್ಲಿರುವ ಕರ್ಮಕ್ಕೆ) ಸಮವಾಯಿ-ಕಾರಣಗಳಾದ ಅವಯವದಲ್ಲಿರುವ ಗುರುತ್ವ ದ್ರವತ್ವ ಮೊದಲಾದವುಗಳು ಕಾರಣವಾಗುತ್ತವೆ. ಇದೂ ಕೂಡ ಕಾರಣೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣವೆಂದೇ ತಿಳಿಯಬೇಕು. ಇದರಂತೆ ಪರಿಮಾಣುವಿನಲ್ಲಿರುವ ಪರಿಮಾಣವು ದ್ವ್ಯಣುಕದಲ್ಲಿ ಇರುವ ಪರಿಮಾಣಕ್ಕೆ

ಅಸಮವಾಯಿಕಾರಣವಾಗಿದೆ. ದ್ವ್ಯಣುಕದಲ್ಲಿರುವ ಪರಿಮಾಣವು ತ್ರ್ಯಣುಕದಲ್ಲಿರುವ ಪರಿಮಾಣಕ್ಕೆ ಅಸಮವಾಯಿಕಾರಣವಾಗಿದೆ.

### ಕಾರ್ಯಕಾರಣಗಳಲ್ಲಿ ಅಸಮವಾಯಿಕಾರಣದ ವಿವರಣೆ

**तत्वप्रकाशिका – कार्यगतगुणानां च कारणगतगुणाः कर्म च कारणैकार्थप्रत्यासत्त्यादिनाऽसमवायिकारणम् । कार्यगतगुणकर्मणश्च कारणगतगुणकर्मणी कार्यैकार्थप्रत्यासत्त्यादिनाऽसमवायिकारणम् । तत्र परिमाणं कारणगतं कार्यगतपरिमाणस्यासमवायिकारणं भवति ।**

ಕಾರ್ಯಗತವಾದ ಗುಣಗಳಿಗೆ ಕಾರಣದ ಗುಣಗಳು ಮತ್ತು ಕಾರ್ಯದಲ್ಲಿರುವ ಕ್ರಿಯೆಗಳಿಗೆ ಕಾರಣದಲ್ಲಿರುವ ಕ್ರಿಯೆಗಳು ಕಾರಣೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣಗಳಾಗುತ್ತವೆ. ಕಾರಣದಲ್ಲಿರುವ ಪರಿಮಾಣವು ಕಾರ್ಯದಲ್ಲಿರುವ ಪರಿಮಾಣಕ್ಕೆ ಅಸಮವಾಯಿಕಾರಣವಾಗುತ್ತದೆಂದೂ ತಿಳಿಯಬೇಕು.

**भावदीपः – कारणैकार्थप्रत्यासत्त्यादिनेति ।।** कार्यगतरूपादिगुणानां कारणगतरूपादयो गुणाः कारणैकार्थप्रत्यासत्त्याऽसमवायिकारणानि । कर्म तु आदिपदोपात्तया कार्यैकार्थप्रत्यासत्त्याऽसमवायिकारणम् । संयोगादिकार्यं प्रति कारणभूतघटादिगतकर्मणः स्वकार्येण संयोगादिना एकार्थे घटादौ प्रत्यासन्नत्वादिति बोध्यम् ॥ **कार्यगतेति ।।** आम्रफलादिरूपकार्यगतकर्मणः कारणभूतं यदाम्रफलादिकं तद्गताः गुरूत्वद्रवत्त्ववेगसंयोगरूपा गुणाः तद्गतं पूर्वपूर्वपतनादिकर्म चादिपदोक्तया कार्यैकार्थप्रत्यासत्त्याऽसमवायिकारणमित्यर्थः। कार्यगतकर्मणः अवयविगतकर्मणः तत्कारणावयवगतकर्म च कारणैकार्थप्रत्यासत्त्याऽसमवायिकारणमित्यर्थः। यद्वा सुधारीत्या कार्यगतकर्मणः कर्मकारणद्रव्यगता गुणत्वादयो गुणाः कार्यैकार्थप्रत्यासत्त्या कर्मकारणैकार्थप्रत्यासत्त्याऽसमवायिकारणमित्यर्थः। कारणगतेत्यत्र कारणपदेन कर्मकारणस्य कर्मकारणकारणस्य च ग्रहः। गुणकर्मणी इत्यनयोः क्रमेणान्वयः।

कर्मणश्च समवायिकारणस्थगुणा एवासमवायिकारणमित्युक्तेः। महदिति सूत्रनिरस्यं दर्शयति – **तत्र परिमाणमिति ।।**

'ಕಾರಣೈಕಾರ್ಥಪ್ರತ್ಯಾಸತ್ತ್ಯಾದಿನಾ ಸಮವಾಯಿಕಾರಣಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಕಾರ್ಯದಲ್ಲಿರುವ ರೂಪಾದಿಗುಣಗಳಿಗೆ ಕಾರಣದಲ್ಲಿರುವ ರೂಪಾದಿಗುಣಗಳು ಕಾರಣೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣಗಳಾಗಿವೆ. ಆದಿಪದದಿಂದ ಕರ್ಮವು ಕಾರ್ಯೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣವಾಗಿದೆ ಎಂದು ತಿಳಿಯಬೇಕು. ಸಂಯೋಗಾದಿ ಕಾರ್ಯವನ್ನು ಕುರಿತು ಕಾರಣಭೂತವಾದ ಘಟಾದಿಗಳಲ್ಲಿರುವ ಕರ್ಮವು ಸ್ವಕಾರ್ಯವಾದ ಸಂಯೋಗಾದಿಗಳಿಂದ ಒಂದೇ ಅರ್ಥವೆನಿಸಿದ ಘಟಾದಿಗಳಲ್ಲಿ ಪ್ರತ್ಯಾಸನ್ನವಾಗಿರುವುದು ಇದಕ್ಕೆ ಕಾರಣ.

'ಕಾರ್ಯೈಕಗುಣಕರ್ಮಶ್ಚ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಮಾವಿನಹಣ್ಣು ಎಂಬ ಕಾರ್ಯದಲ್ಲಿರುವ ಕರ್ಮಕ್ಕೆ ಕಾರಣಭೂತವಾದ ಯಾವ ಮಾವಿನಹಣ್ಣು, ಅದರಲ್ಲಿರುವ ಗುಣತ್ವ, ದ್ರವತ್ವ, ವೇಗ, ಸಂಯೋಗ ಮೊದಲಾದ ಗುಣಗಳಿವೆಯೋ, ಅವುಗಳು ಅಸಮವಾಯಿಕಾರಣಗಳಾಗಿವೆ. ಆ ಹಣ್ಣಿನಲ್ಲಿರುವ ಹಿಂದಿನ ಪತನಾ ಎಂಬ ಕರ್ಮವು ಆದಿಪದದಿಂದ ಕಾರ್ಯೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣವಾಗಿದೆ ಎಂದು ತಿಳಿಯಬೇಕು. ಕಾರ್ಯದಲ್ಲಿರುವ ಕರ್ಮಕ್ಕೆ ಕಾರಣದಲ್ಲಿರುವ ಕರ್ಮವು, ಅವಯವಿಯಲ್ಲಿರುವ ಕರ್ಮಕ್ಕೆ ಅವಯವದಲ್ಲಿರುವ ಕರ್ಮವು, ಕಾರಣೈಕಾರ್ಥ-ಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣವಾಗಿದೆ ಎಂದು ತಿಳಿಯಬೇಕು.

ಅಥವಾ ನ್ಯಾಯಸುಧೆಯಲ್ಲಿ ಹೇಳಿದಂತೆ ಕಾರ್ಯದಲ್ಲಿರುವ ಕರ್ಮಗಳಿಗೆ ಕರ್ಮಕಾರಣ-ದ್ರವ್ಯದಲ್ಲಿರುವ ಗುಣತ್ವಾದಿಗುಣಗಳು ಕಾರ್ಯೈಕಾರ್ಥಪ್ರತ್ಯಾಸತ್ತಿಯಿಂದ ಕರ್ಮಕಾರಣೈಕಾರ್ಥ-ಪ್ರತ್ಯಾಸತ್ತಿಯ ಮೂಲಕ ಅಸಮವಾಯಿಕಾರಣಗಳಾಗಿವೆ. ಕಾರಣಗತ ಎಂಬಲ್ಲಿ ಕಾರಣಪದದಿಂದ ಕರ್ಮಕಾರಣವನ್ನು, ಕರ್ಮಕಾರಣದ ಕಾರಣವನ್ನು ವಿವಕ್ಷಿಸಬೇಕು.

'ಗುಣಕರ್ಮಣೀ' ಎಂಬುದನ್ನು ಪ್ರತ್ಯೇಕವಾಗಿ ಅನ್ವಯ ಮಾಡಿಕೊಳ್ಳಬೇಕು. ಕರ್ಮಗಳಿಗೆ ಸಮವಾಯಿಕಾರಣದಲ್ಲಿರುವ ಗುಣಗಳೇ ಅಸಮವಾಯಿಕಾರಣಗಳಾಗಿವೆ ಎಂದು ಹೇಳಿದ್ದು ಇದಕ್ಕೆ ಕಾರಣವಾಗಿದೆ. 'ಮಹತ್' ಇತ್ಯಾದಿ ಸೂತ್ರದಿಂದ ಪರಿಹಾರವಾಗುವ ಅಂಶವನ್ನು 'ತತ್ರ ಪರಿಮಾಣಮ್' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

## ನಿಮಿತ್ತಕಾರಣದ ವಿವರಣೆ

**ತತ್ವಪ್ರಕಾಶಿಕಾ – परमाणुद्व्यणुकगतं द्व्यणुकत्र्यणुकगतपरिमाणकारणं न भवति । किं तु सङ्ख्यादिनैव तज्जम् । एतदन्यत्कारणं निमित्तमीश्वरादृष्टकालादि। स चेश्वर आत्मविशेषः सङ्ख्यादिपञ्चगुणयुक्तः कर्तृत्वोपयोगिज्ञानेच्छाप्रयत्नशाली च। शिष्टषड्गुणायोग्य इति कथं तस्यानन्तगुणत्वं युक्तं स्यात् । अतो व्यर्थ एव पूर्वाध्याय इति प्राप्ते सिद्धान्तयत्सूत्रमुपन्यस्य व्याचष्टे – महदिति।।**

ಪರಮಾಣು ಹಾಗೂ ದ್ವ್ಯಣುಕದಲ್ಲಿರುವ ದ್ವಿತ್ವ ಹಾಗೂ ತ್ರಿತ್ವ ಎಂಬ ಸಂಖ್ಯೆಯೇ ದ್ವ್ಯಣುಕ ಹಾಗೂ ತ್ರ್ಯಣುಕದಲ್ಲಿರುವ ಪರಿಮಾಣಕ್ಕೆ ಕಾರಣವಾಗಿದೆ. ಸಮವಾಯಿಕಾರಣ ಮತ್ತು ಅಸಮವಾಯಿಕಾರಣಗಳಿಗಿಂತ ಭಿನ್ನವಾದ ಈಶ್ವರ, ಅದೃಷ್ಟ, ಕಾಲ ಇವುಗಳು ನಿಮಿತ್ತ-ಕಾರಣವಾಗಿವೆ.

ಆ ಈಶ್ವರನಾದರೋ ಆತ್ಮನ ವಿಶೇಷನಾಗಿದ್ದಾನೆ. ಇವನಲ್ಲಿ ಸಂಖ್ಯಾ, ಪರಿಮಾಣ ಪೃಥಕ್ತ್ವ, ಸಂಯೋಗ, ವಿಭಾಗ ಎಂಬ ಐದು ಗುಣಗಳಿವೆ. ಕರ್ತೃತ್ವಕ್ಕೆ ಉಪಯೋಗಿಯಾದ ಜ್ಞಾನ, ಇಚ್ಛಾ, ಪ್ರಯತ್ನಗಳು ಅವನಲ್ಲಿವೆ. ಇವುಗಳನ್ನು ಹೊರತಾಗಿ ಸಂಸ್ಕಾರ, ಸುಖ, ದುಃಖ, ದ್ವೇಷ, ಧರ್ಮ, ಅಧರ್ಮಗಳೆಂಬ ಆರು ಗುಣಗಳು ಈಶ್ವರನಲ್ಲಿ ಇರುವುದಿಲ್ಲ. ಆದ್ದರಿಂದ ಈಶ್ವರನನ್ನು ಅನಂತಗುಣಪರಿಪೂರ್ಣ ಎಂದು ಹೇಳುವುದು ಹೇಗೆ ಯುಕ್ತವಾಗುತ್ತದೆ? ಆದ್ದರಿಂದ ಪ್ರಥಮಾಧ್ಯಾಯ ಹೊರಟಿದ್ದೇ ವ್ಯರ್ಥವಾಗಿದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ಮಹತ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಈಶ್ವರನಲ್ಲಿರುವ ಎಂಟು ಗುಣಗಳು ಯಾವುದು ?

**भावदीपः – संख्येति।।** द्व्यणुकगतं परिमाणं परमाणुगतद्वित्वसङ्ख्यया त्र्यणुकगतं च द्व्यणुकगतबहुत्वसङ्ख्यया जायत इत्यर्थः। आदिपदेन प्रचयग्रहणम्। तूलपिण्डादिस्थपरिमाणं प्रशिथिलावयवसंयोगरूपप्रचयजन्यमित्यर्थः। उभयथापीति सूत्रनिरस्यं दर्शयति – **एतदन्यदिति।।** समवायिकारणासमवायि-

कारणाभ्यामन्यदित्यर्थः। ईश्वरश्चेदस्ति तर्हि द्रव्यं नवविधमिति भज्यते इत्यतो वाऽष्टगुणत्वं निर्धारयितुं वाऽऽह– **स चेति।। शिष्टेति।।** शिष्टेषु आत्मयोग्येषु चतुर्दशसु मध्ये सामान्यस्य संख्यादिपञ्चकस्य ज्ञानादिषु नवगुणेषु कर्तृत्वार्थं ज्ञानेच्छाप्रयत्नानामावश्यकत्वे संख्यादिसामान्यगुणपञ्चकातिरिक्तानां ज्ञानादि-गुणत्रयातिरिक्तानां संस्कारसुखदुःखद्वेषधर्माधर्मरूपषड्गुणानामयोग्य इत्यर्थः। नित्यज्ञानस्य स्मरणहेतुसंस्काराभावादत एव मोहाभावेन तत्कार्यद्वेषधर्माधर्माणां तत्कार्यसुखादेश्चाभावादिति भावः।

'ಸಂಖ್ಯಾದಿನೈವ ತಜ್ಜನ್ಯಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ದ್ವ್ಯಣುಕದಲ್ಲಿರುವ ಪರಿಮಾಣವು ಪರಮಾಣುವಿನಲ್ಲಿರುವ ದ್ವಿತ್ವಸಂಖ್ಯೆಯಿಂದ ಹುಟ್ಟುತ್ತದೆ. ತ್ರ್ಯಣುಕದಲ್ಲಿರುವ ಪರಿಮಾಣವು ದ್ವ್ಯಣುಕದಲ್ಲಿರುವ ಬಹುತ್ವಸಂಖ್ಯೆಯಿಂದ ಹುಟ್ಟುತ್ತದೆಂಬುದು ಇದರ ಅರ್ಥ. ಆದಿಪದದಿಂದ ಪ್ರಚಯವನ್ನು ಸ್ವೀಕರಿಸಬೇಕು. ಹತ್ತಿಯ ಪಿಂಡದಲ್ಲಿರುವ ಪರಿಮಾಣವು ಪ್ರಶಿಥಿಲವಾದ ಅವಯವಸಂಯೋಗವೆಂಬ ಪ್ರಚಯದಿಂದ ಹುಟ್ಟುತ್ತದೆ ಎಂದರ್ಥ.

'ಉಭಯಥಾಪಿ' ಇತ್ಯಾದಿ ಸೂತ್ರದಿಂದ ಪರಿಹಾರವಾಗುವ ಆಕ್ಷೇಪವನ್ನು 'ಏತದನ್ಯತ್' ಇತ್ಯಾದಿ ವಾಕ್ಯದಿಂದ ನಿರೂಪಣೆ ಮಾಡುತ್ತಿದ್ದಾರೆ. 'ಅನ್ಯತ್' ಎಂದರೆ ಸಮವಾಯಿಕಾರಣ ಹಾಗೂ ಅಸಮವಾಯಿಕಾರಣಗಳಿಂದ ಭಿನ್ನವಾದದ್ದು ಎಂದರ್ಥ. ಈಶ್ವರನನ್ನು ಒಪ್ಪಿದರೆ ದ್ರವ್ಯವು ಒಂಬತ್ತುವಿಧವಾಗಿ ವಿಂಗಡಣೆಯಾಗುತ್ತದೆ ಎಂಬುದು ಭಗ್ನವಾಗುತ್ತದೆಂದು ತೋರಿಸುವುದಕ್ಕಾಗಿ, ಅಥವಾ ಈಶ್ವರನಲ್ಲಿ ಎಂಟು ಗುಣಗಳಿವೆ ಎಂಬುದನ್ನು ನಿರ್ಧಾರ ಮಾಡುವುದಕ್ಕಾಗಿ, 'ಸ ಚ' ಇತ್ಯಾದಿ ವಾಕ್ಯವು ಹೊರಟಿದೆ.

'ಶಿಷ್ಟಷಡ್ಗುಣಾಯೋಗ್ಯಃ' ಎಂದು ಹೇಳಿದ್ದಾರೆ. ಆತ್ಮನಲ್ಲಿ ಇರಲು ಯೋಗ್ಯವಾದದ್ದು ಒಟ್ಟು ಹದಿನಾಕು ಗುಣಗಳು. ಅವುಗಳಲ್ಲಿ ಆರು ಗುಣಗಳು ಇವನಲ್ಲಿರಲು ಸಾಧ್ಯವಿಲ್ಲ. ಸಾಮಾನ್ಯಗುಣವೆನಿಸಿದ ಸಂಖ್ಯಾದಿ ಐದು ಗುಣಗಳು ಜ್ಞಾನಾದಿ ಒಂಬತ್ತು ಗುಣಗಳಲ್ಲಿ ಕರ್ತೃತ್ವಕ್ಕೋಸ್ಕರ ಜ್ಞಾನ, ಇಚ್ಛಾ, ಪ್ರಯತ್ನ ಎಂಬ ಮೂರು ಗುಣಗಳು ಈಶ್ವರನಲ್ಲಿ ಅಂಗೀಕಾರ ಮಾಡಿದರೆ ಸಾಕು. ಸಾಮಾನ್ಯಗುಣವೆನಿಸಿದ ಐದುಸಂಖ್ಯಾದಿ ಗುಣಗಳು, ಜ್ಞಾನ, ಇಚ್ಛೆ, ಪ್ರಯತ್ನ ಎಂಬ ಮೂರು ವಿಶೇಷಣ ಗುಣಗಳು ಇವುಗಳನ್ನು ಬಿಟ್ಟು, ಸಂಸ್ಕಾರ,

ಸುಖ, ದುಃಖ, ದ್ವೇಷ, ಧರ್ಮ, ಅಧರ್ಮ ಎಂಬ ಆರುಗುಣಗಳು ಇವನಲ್ಲಿರಲು ಅಯೋಗ್ಯವಾಗಿವೆ ಎಂಬುದು ಇದರರ್ಥ. ಈಶ್ವರನು ನಿತ್ಯವಾದ ಜ್ಞಾನಗುಣವುಳ್ಳವನಾಗಿದ್ದಾನೆ. ಆದ್ದರಿಂದ ಸ್ಮರಣೆಗೆ ಆವಶ್ಯಕವಾದ ಸಂಸ್ಕಾರವನ್ನು ಒಪ್ಪುವ ಆವಶ್ಯಕತೆಯಿಲ್ಲ. ಇವನಿಗೆ ಮೋಹವೂ ಇಲ್ಲದ ಕಾರಣ ಅದರ ಕಾರ್ಯವೆನಿಸಿದ ದ್ವೇಷ, ಧರ್ಮ, ಅಧರ್ಮಗಳನ್ನು ಅವುಗಳ ಕಾರ್ಯಗಳೆನಿಸಿದ ಸುಖ-ದುಃಖಾದಿಗಳನ್ನೂ ಕೂಡ ಈಶ್ವರನಲ್ಲಿ ಒಪ್ಪಬೇಕಾಗಿಲ್ಲ. ಹಾಗಾಗಿ ಈಶ್ವರನಲ್ಲಿರುವ ಗುಣಗಳು ಎಂಟು ಮಾತ್ರ.

ವಿವರಣೆ - ಈಶ್ವರನಲ್ಲಿ ತಾರ್ಕಿಕರು ಎಂಟು ಗುಣಗಳನ್ನು ಮಾತ್ರ ಒಪ್ಪುತ್ತಾರೆ. ಒಪ್ಪಿರುವ ಈ ಗುಣಗಳೂ ಕೂಡ ಈಶ್ವರನ ಸರ್ವೋತ್ತಮತ್ವಕ್ಕೆ ಉಪಪಾದಕವಲ್ಲ. ಮತ್ತು ತಾರ್ಕಿಕರ ಪ್ರಕಾರ ಹೇಳುವ ಗುಣಗಳು ಯಾವುದೂ ಕೂಡ ಶ್ರೇಷ್ಠತ್ವಕ್ಕೆ ಪೂರಕವಾಗಿರುವುದಿಲ್ಲ ಎಂಬುದನ್ನು ಗಮನಿಸಬೇಕು.

### ಅಸಮವಾಯಿಕಾರಣದ ನಿರಾಕರಣೆ

**ತತ್ವಪ್ರಕಾಶಿका – युक्तमेव हरेरनन्तगुणपूर्णत्वम् । वैशेषिकादीनामनुपपन्नभाषित्वेन तत्कल्पनाया अप्रामाणिकत्वात् । यथा हि – यदुच्यते परिमाणं त्र्यणुकादिगतमसमवायिकारणं भवति न परमाण्वादिगतमिति तदसत् । यथा महत्त्वाद्दीर्घत्वाच्च त्र्यणुकादिगतात् कार्ये परिमाणमुत्पद्यते तथा ह्रस्वत्वाद् द्व्यणुकगतात् त्र्यणुकगतपरिमाणोत्पत्त्युपपत्तेः। परमाणुपरिमाणाच्च पारिमाण्डल्याद् द्व्यणुकगतपरिमाणोत्पत्तिसम्भवादिति भावः ।**

ಪರಮಾತ್ಮನು ಅನಂತಗುಣಪರಿಪೂರ್ಣನಾಗಿದ್ದಾನೆಂದು ಹೇಳಿದ್ದು ಯುಕ್ತವೇ ಆಗಿದೆ. ವೈಶೇಷಿಕಾದಿಕಗಳು ಅನುಪಪನ್ನಭಾಷಿಗಳಾಗಿರುವುದರಿಂದ ಅವರ ಕಲ್ಪನೆಗಳು ಅಪ್ರಾಮಾಣಿಕವಾಗಿದೆ. ಅದು ಹೀಗೆ - ತ್ರ್ಯಣುಕ ಮೊದಲಾದವುಗಳಲ್ಲಿರುವ ಪರಿಮಾಣವು ಅಸಮವಾಯಿ-ಕಾರಣವಾಗುತ್ತದೆ. ಆದರೆ ಪರಮಾಣು ಹಾಗೂ ದ್ವ್ಯಣುಕದಲ್ಲಿರುವ ಪರಿಮಾಣವು ಅಸಮವಾಯಿಕಾರಣವಾಗುವುದಿಲ್ಲ ಎಂದು ಹೇಳಿದ್ದೇ ತಪ್ಪು. ಏಕೆಂದರೆ ತ್ರ್ಯಣುಕ ಮೊದಲಾದವುಗಳಲ್ಲಿರುವ ಮಹತ್ವ ಮತ್ತು ದೀರ್ಘತ್ವಗಳಿಂದಲೂ ಕಾರ್ಯದಲ್ಲಿ ಪರಿಮಾಣ ಹೇಗೆ ಹುಟ್ಟುತ್ತದೋ ಅದರಂತೆ ದ್ವ್ಯಣುಕದಲ್ಲಿರುವ ಹ್ರಸ್ವತ್ವದಿಂದ ತ್ರ್ಯಣುಕದಲ್ಲಿರುವ

ಪರಿಮಾಣವು ಹುಟ್ಟಬಹುದು. ಪರಮಾಣುಪರಿಮಾಣವು ಪಾರಿಮಾಂಡಿಲ್ಯ ಎಂದು ಕರೆಸಿಕೊಳ್ಳುತ್ತದೆ. ಇಂಥ ಪಾರಿಮಾಂಡಿಲ್ಯದಿಂದ ದ್ವ್ಯಣುಕದಲ್ಲಿರುವ ಪರಿಮಾಣವೂ ಕೂಡ ಹುಟ್ಟಬಹುದು ಎಂಬುದು ಸೂತ್ರದ ಅಭಿಪ್ರಾಯ.

**भावदीपः** – सूत्रभाष्ययोः क्रियमाणमापादनं उक्तशङ्काऽनिरासकत्वादसङ्गत-माशङ्क्य परिष्कृत्य व्याचष्टे – **युक्तमेवेति**।। महत्वादिति। प्रतियोगिनि पञ्चमीनिर्देशात् पञ्चम्यन्ततया विग्रहः प्रदर्शितः। पूर्ववत्सन इत्यादाविव पञ्चम्यंतादपि वतिप्रत्ययसिद्धेः पञ्चमस्याद्यपादे तत्र तस्येवेत्यत्र मञ्जर्यामुक्तत्वात्। कारणबहुत्वात्कारणमहत्त्वात्प्रचयविशेषाच्च महदिति काणादसूत्रानुसारेण सूत्रे महदित्यादिनिर्देश इति भावः।

ಸೂತ್ರ ಹಾಗೂ ಭಾಷ್ಯಗಳಲ್ಲಿ ಯಾವ ಆಪಾದನೆಯನ್ನು ಮಾಡಲಾಗಿದೆಯೋ, ಅದು ಹಿಂದಿನ ಆಕ್ಷೇಪಕ್ಕೆ ಪರಿಹಾರಕವಾಗಿಲ್ಲ. ಆದ್ದರಿಂದ ಅಸಂಗತವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ ಪರಿಷ್ಕರಿಸಿ ವ್ಯಾಖ್ಯಾನ ಮಾಡಲು 'ಯುಕ್ತಮೇವ' ಇತ್ಯಾದಿ ಎಂಬ ಗ್ರಂಥವು ಹೊರಟದೆ. 'ಮಹತ್ತ್ವಾತ್' ಇತ್ಯಾದಿಯಾಗಿ ಸೂತ್ರವನ್ನು ಪಂಚಮ್ಯಂತವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಪ್ರತಿಯೋಗಿಯನ್ನು ಪಂಚಮ್ಯಂತವಾಗಿ ನಿರ್ದೇಶ ಮಾಡಿದ್ದರಿಂದ ಇಲ್ಲಿಯೂ ಕೂಡ ಪಂಚಮ್ಯಂತವಾಗಿ ವಿಗ್ರಹವನ್ನು ತೋರಿಸಿದ್ದಾರೆ. 'ಪೂರ್ವವತ್ಸನಃ' ಎಂಬಲ್ಲಿ ಹೇಗೋ ಹಾಗೇ ಪಂಚಮ್ಯಂತಪದದ ಮುಂದೆ ವತಿಪ್ರತ್ಯಯವು ಪ್ರಾಪ್ತವಾಗುತ್ತದೆ. ಐದನೇ ಅಧ್ಯಾಯದ ಪ್ರಥಮಪಾದದಲ್ಲಿ 'ತತ್ರ ತಸ್ಯೇವ' ಎಂಬಲ್ಲಿ ಮಂಜರಿಯಲ್ಲಿ ಹೀಗೆ ತಿಳಿಸಲಾಗಿದೆ - 'ಕಾರಣಬಹುತ್ವಾತ್ ಕಾರಣಮಹತ್ತ್ವಾತ್ ಪ್ರಚಯವಿಶೇಷಾತ್' ಎಂಬ ಕಣಾದಸೂತ್ರಕ್ಕೆ ಅನುಸಾರಿಯಾಗಿ ಪ್ರಕೃತ ಸೂತ್ರದಲ್ಲಿ 'ಮಹತ್' ಇತ್ಯಾದಿಯಾಗಿ ನಿರ್ದೇಶ ಮಾಡಿದ್ದಾರೆ.

ವಿವರಣೆ - ಸೂತ್ರದಲ್ಲಿ 'ಮಹದ್ದೀರ್ಘವತ್ತ್ವಾತ್' ಎಂಬುದಾಗಿ ವತಿಪ್ರತ್ಯಯಾಂತವಾದ ಶಬ್ದವನ್ನು ಮಹತ್ ಹಾಗೂ ದೀರ್ಘಶಬ್ದಗಳನ್ನು ಪ್ರಯೋಗಿಸಲಾಗಿದೆ. ಇದಕ್ಕೆ ಮಹತ್ತ್ವಾತ್ ದೀರ್ಘತ್ವಾತ್ ಎಂದು ವ್ಯಾಖ್ಯಾನ ಮಾಡಬೇಕು. ವತಿಪ್ರತ್ಯಯಕ್ಕೆ ಪಂಚಮ್ಯಂತವನ್ನು ವಿವಕ್ಷಿಸಬೇಕು.

## ಅಸಮವಾಯಿಕಾರಣದ ಲಕ್ಷಣಕ್ಕೆ ಅತಿಪ್ರಸಂಗ

**तत्वप्रकाशिका – त्र्यणुकादिपरिमाणस्यारम्भकत्वेऽप्यस्य तन्मास्त्वित्यत आह – वाशब्दादिति ।। इति 'सूचितम्' इति शेषः । यदि ह्रस्वत्वादेर्नारम्भकत्वं तर्हि महत्वदीर्घत्वयोरपि तन्न स्यात् । कारणाविशेषाभावादित्यर्थः । न तावदसमवायिकारणलक्षणभावाभावाभ्यां विशेषः । ह्रस्वत्वादावपि तद्भावात्।**

ತ್ರ್ಯಣುಕಾದಿಗಳಲ್ಲಿರುವ ಪರಿಮಾಣವು ಮತ್ತೊಂದಕ್ಕೆ ಆರಂಭಕವಾಗಲಿ, ಆದರೆ ಪರಮಾಣುಪರಿಮಾಣವು ಹಾಗೂ ದ್ವ್ಯಣುಕದಲ್ಲಿರುವ ಪರಿಮಾಣವು ಮತ್ತೊಂದಕ್ಕೆ ಆರಂಭಕವಾಗುವುದು ಬೇಡ ಎಂಬ ಪ್ರಶ್ನೆಗೆ 'ವಾಶಬ್ದಾತ್' ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಭಾಷ್ಯದಲ್ಲಿ 'ಇತಿ ಸೂಚಿತಮ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಪರಿಮಾಣುವಿನಲ್ಲಿರುವ ಹ್ರಸ್ವತ್ವಾದಿಗಳು ಆರಂಭಕ ಆಗದಿದ್ದರೆ ಮಹತ್ವ, ದೀರ್ಘತ್ವಗಳೂ ಕೂಡ ಆರಂಭಕ ಆಗದಿರಬೇಕಾದೀತು. ಏಕೆಂದರೆ ಒಂದಕ್ಕೆ ಆರಂಭಕತ್ವ ಒಪ್ಪಿ ಮತ್ತೊಂದಕ್ಕೆ ಆರಂಭಕತ್ವವನ್ನು ಒಪ್ಪದಿರಲು ಯಾವುದೇ ಕಾರಣವಿಲ್ಲ. ದೀರ್ಘತ್ವಾದಿಗಳಲ್ಲಿ ಅಸಮವಾಯಿ-ಕಾರಣದ ಲಕ್ಷಣವಿದೆ. ಅಣುತ್ವ, ಹ್ರಸ್ವತ್ವಗಳಲ್ಲಿ ಅಸಮವಾಯಿಕಾರಣದ ಲಕ್ಷಣವಿಲ್ಲವೆಂಬ ವ್ಯತ್ಯಾಸವನ್ನು ಹೇಳಲು ಸಾಧ್ಯವಿಲ್ಲ. ಹ್ರಸ್ವತ್ವಾದಿಗಳಲ್ಲೂ ಕೂಡ ಅಸಮವಾಯಿಕಾರಣದ ಲಕ್ಷಣವು ಬಂದೇ ಬರುತ್ತದೆ.

**भावदीपः –** कारणविशेषाभावादिति। ननु तल्लक्षणभावाभावौ वा। सदृशस्य हि कार्यस्य नैव योगः कथञ्चन। अप्रत्यक्षत्वमेवस्याद्यतः कार्येष्वणुत्वत इत्यनुभाष्योक्त-दिशा तत्सदृशपरिमाणत्वापत्तिरूपबाधकभावाभावौ वा विशेषकारणमित्यत आद्यं निराह – **न तावदिति ।।**

'ಕಾರಣವಿಶೇಷಾಭಾವಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಅಣುತ್ವ ಮತ್ತು ಹ್ರಸ್ವತ್ವಗಳಲ್ಲಿ ಅಸಮವಾಯಿಕಾರಣದ ಲಕ್ಷಣವಿಲ್ಲ. ಮಹತ್ವ ದೀರ್ಘತ್ವಗಳಲ್ಲಿ ಅಸಮವಾಯಿಕಾರಣತ್ವದ ಲಕ್ಷಣವಿದೆ ಹೀಗೆ ಅಭಿಪ್ರಾಯವೋ, ಅಥವಾ

'ಸಾದೃಶ್ಯಸ್ಯ ಹಿ ಕಾರ್ಯಸ್ಯ ನೈವ ಯೋಗಃ ಕಥಂಚನ।
ಅಪ್ರತ್ಯಕ್ಷತ್ವಮೇವಸ್ಯಾದ್ಯತಃ ಕಾರ್ಯೇಷ್ವಣುತ್ವತಃ॥'

ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಸದೃಶಪರಿಮಾಣತ್ವವೆಂಬ ಬಾಧಕವಿರುವುದರಿಂದ ಹಾಗೂ ಇಲ್ಲದಿರುವುದರಿಂದ ಅಣುತ್ವ, ಹ್ರಸ್ವತ್ವಗಳಲ್ಲಿ ಅಸಮವಾಯಿಕಾರಣದ ಲಕ್ಷಣ ಬರುವುದಿಲ್ಲವೋ? ಮಹತ್ವ ದೀರ್ಘತ್ವಗಳಲ್ಲಿ ಅಸಮವಾಯಿಕಾರಣದ ಲಕ್ಷಣ ಬರುತ್ತದೋ ? ಮೊದಲನೆಯ ಪಕ್ಷವನ್ನು 'ನ ತಾವತ್' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡಿದ್ದಾರೆ.

## ತಾರ್ಕಿಕರ ಕಲ್ಪನೆಗಳು ಅಪ್ರಾಮಾಣಿಕ

**तत्वप्रकाशिका – अवर्जनीयप्रत्यासत्तिरेवेति चेन्न । महत्त्वेऽपि साम्यात्। पारिमाण्डल्यादेरारम्भकत्वे सर्वकार्याणामणुत्वप्रसङ्ग इति चेत् तत्किमिदमणुत्वं तच्छब्दवाच्यत्वं तदत्यन्तसदृशपरिमाणत्वं वा ? आद्ये नास्ति हानिः । द्वितीये महत्त्वस्याप्यनारम्भकत्वं स्यात् । न हि त्र्यणुकादिपरिमाणमत्यन्तसदृशं सङ्केतमात्रं त्वप्रामाणिकमिति ।**

ಅಸಮವಾಯಿಕಾರಣದ ಲಕ್ಷಣವು ಹ್ರಸ್ವತ್ವ, ಅಣುತ್ವಗಳಲ್ಲಿ ಇದ್ದರೂ ಕೂಡ ಅವರ್ಜನೀಯವಾಗಿದೆ ಎಂದು ಹೇಳಬಾರದು. ಇಂಥ ಅವರ್ಜನೀಯತ್ವವನ್ನು ಮಹತ್ವಾದಿಗಳಲ್ಲಿ ಸಮಾನವಾಗಿ ಹೇಳಬಹುದು.

ಪಾರಿಮಾಂಡಲ್ಯಾದಿಗಳಿಗೆ ಆರಂಭಕತ್ವವನ್ನು ಒಪ್ಪಿದರೆ ಸಕಲ ಕಾರ್ಯಗಳೂ ಅಣು ಆಗಬೇಕಲ್ಲವೆ? ಎಂದು ಪ್ರಶ್ನಿಸಿದರೆ ಅಣುತ್ವವೆಂದರೇನು? ಸಕಲಕಾರ್ಯಗಳು ಅಣು ಎಂಬ ಶಬ್ದದಿಂದ ವಾಚ್ಯವಾಗಬೇಕಾದೀತು ಎಂದೋ? ಅಥವಾ ಅಣುಪರಿಮಾಣಕ್ಕೆ ಅತ್ಯಂತ ಸದೃಶವಾದ ಪರಿಮಾಣವುಳ್ಳದ್ದಾಗಲಿ ಎಂದೋ?

ಮೊದಲನೆಯ ಪಕ್ಷದಲ್ಲಿ ಯಾವುದೇ ಹಾನಿಯಿಲ್ಲ. ಎರಡನೆಯ ಪಕ್ಷದಲ್ಲಿ ಮಹತ್ವಕ್ಕೂ ಕೂಡ ಆರಂಭಕತ್ವವು ಬಾರದಿರಬೇಕಾದೀತು. ಏಕೆಂದರೆ ತ್ರ್ಯಣುಕಾದಿ ಪರಿಮಾಣಗಳಲ್ಲಿಯೂ ಕೂಡ ಅತ್ಯಂತಸಾದೃಶ್ಯವು ಇರುವುದಿಲ್ಲ. ಹಾಗೇನಾದರೂ ಹೇಳಿದರೆ ಅದು ಕೇವಲ ಸಂಕೇತವಷ್ಟೇ, ಆ ವಿಷಯದಲ್ಲಿ ಯಾವುದೇ ಪ್ರಮಾಣ ಇರುವುದಿಲ್ಲ.

ಅಣುತ್ವವೆಂದರೇನು ?

**भावदीपः** – अवधृतसामर्थ्ये नेति शङ्कते॥ **अवर्जनीयेति ।।** द्वितीयमाशङ्क्य निराह – **पारिमाण्डल्यादेरिति ।। नास्ति हानिरिति ।।** सर्वपदार्थानामापेक्षिकाणुत्ववत्त्वेन तच्छब्दवाच्यत्वस्येष्टत्वात्। 'अणुत्वं च महत्त्वं च यतो वस्तुव्यपेक्षया' इत्यनुभाष्योक्तेरिति भावः। ननु परिमाणमणु महद्दीर्घं ह्रस्वं चेति चतुर्विधमित्यङ्गीकारात् त्र्यणुकादिसर्वकार्यगतं महत्। परमाणुद्व्यणुकगतं तु अणुपरिमाणमित्युपेतत्वेन कथं द्व्यणुकादिगतमत्यन्तसदृशं नेत्यत आह – **सङ्केतमात्रंत्विति ।।**

ಅವಧೃತಸಾಮರ್ಥ್ಯವು ಬರುವುದಿಲ್ಲವೆಂದು 'ಅವರ್ಜನೀಯಪ್ರತ್ಯಾಸತ್ತ್ಯಾರೇವ' ಎಂಬುದರಿಂದ ಆಶಂಕಿಸಲಾಗಿದೆ. ಎರಡನೆಯ ಪಕ್ಷವನ್ನು ಆಶಂಕಿಸಿ ನಿರಾಕರಿಸಲು 'ಪಾರಿಮಾಂಡಲ್ಯಾದೇಃ' ಇತ್ಯಾದಿ ವಾಕ್ಯವು ಹೊರಟಿದೆ.

'ನಾಸ್ತಿ ಹಾನಿಃ' - ಎಲ್ಲಾ ಪದಾರ್ಥಗಳು ಆಪೇಕ್ಷಿಕವಾದ ಅಣುತ್ವವುಳ್ಳವುಗಳಾಗಿವೆ. ಆದ್ದರಿಂದ ಅಣುಶಬ್ದದಿಂದ ವಾಚ್ಯವಾಗುತ್ತವೆಂಬುದೂ ಕೂಡ ನಮಗೆ ಇಷ್ಟವೇ ಆಗಿದೆ. 'ಅಣುತ್ವಂ ಚ ಮಹತ್ತ್ವಂ ಚ ಯತೋ ವಸ್ತುವ್ಯಪೇಕ್ಷಯಾ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಅಣುತ್ವ ಹಾಗೂ ಮಹತ್ವಗಳು ಆಪೇಕ್ಷಿಕವಾದ ಧರ್ಮಗಳೆಂದು.

ಅಣು, ಮಹತ್, ದೀರ್ಘ, ಹ್ರಸ್ವ ಎಂಬುದಾಗಿ ಪರಿಮಾಣವು ನಾಕುವಿಧವಾಗಿದೆ. ಹೀಗೆ ಅಂಗೀಕಾರ ಮಾಡಿರುವುದರಿಂದ ತ್ರ್ಯಣುಕಾದಿ ಎಲ್ಲಾ ಕಾರ್ಯಗಳಲ್ಲಿರುವ ಪರಿಮಾಣವು 'ಮಹತ್' ಎಂದು ಕರೆಸಿಕೊಳ್ಳುತ್ತದೆ. ಪರಮಾಣು ಹಾಗೂ ದ್ವ್ಯಣುಕದಲ್ಲಿರುವ ಪರಿಮಾಣವು 'ಅಣು' ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ದ್ವ್ಯಣುಕ ಪರಿಮಾಣದಿಂದ ಅತ್ಯಂತ ಸಾದೃಶ್ಯವಿಲ್ಲವೆಂದು ಹೇಗೆ ಹೇಳಿದಿರಿ ? ಈ ಪ್ರಶ್ನೆಗೆ 'ಸಂಕೇತಮಾತ್ರಂತು' ಎಂಬುದರಿಂದ ಉತ್ತರಿಸಿದ್ದಾರೆ.

ವಿವರಣೆ - ಪಾರಿಮಾಂಡಲ್ಯಕ್ಕೆ ಆರಂಭಕತ್ವವನ್ನು ತಾರ್ಕಿಕರು ಒಪ್ಪದೆ ಇರಲು ಕಾರಣವಿದೆ. ಸ್ವಸದೃಶಕಾರ್ಯೋತ್ಪಾದಕತ್ವವು ಕಾರಣದಲ್ಲಿರುವುದರಿಂದ ಅಣುಪರಿಮಾಣದಿಂದ ಹುಟ್ಟಿದ ಕಾರ್ಯವೂ ಕೂಡ ಅಣುಪರಿಮಾಣವುಳ್ಳದ್ದೇ

ಆಗಬೇಕಾಗುತ್ತದೆ. ಆಗ ಸಕಲ ಕಾರ್ಯಗಳೂ ಕೂಡ ಅಣುವಾಗಲಿ ಎಂಬ ಆಪತ್ತಿ ಬರುತ್ತದೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ. ಆದರೆ ಸಕಲ ಕಾರ್ಯಗಳು ಅಣುಪರಿಮಾಣವುಳ್ಳದ್ದಾಗಲಿ ಎಂಬುದಕ್ಕೆ ಅಣುಶಬ್ದದಿಂದ ವಾಚ್ಯವಾಗಲಿ ಎಂದು ಅಭಿಪ್ರಾಯವೋ ಅಥವಾ ತತ್‌ಸಮಾನಪರಿಮಾಣವುಳ್ಳದ್ದಾಗಲಿ ಎಂಬ ಅಭಿಪ್ರಾಯವೋ? ಎಂದು ಸಿದ್ಧಾಂತಿಗಳು ಪ್ರಶ್ನಿಸಿದರು. ಎರಡನೆಯ ಪಕ್ಷದಲ್ಲಿ ತ್ರ್ಯಣುಕಾದಿಪರಿಮಾಣಗಳಲ್ಲಿಯೂ ಕೂಡ ಈ ಆಪಾದನೆಯು ಸಮಾನವಾಗಿದೆ. "ಪರಮಾಣು ಹಾಗೂ ದ್ವ್ಯಣುಕದಲ್ಲಿರುವ ಪರಿಮಾಣವು ಅಣುಪರಿಮಾಣವುಳ್ಳದ್ದಾಗಿದೆ. ತ್ರ್ಯಣುಕಾದಿಗಳಲ್ಲಿರುವ ಪರಿಮಾಣವು ಮಹತ್‌ಪರಿಮಾಣವುಳ್ಳದ್ದಾಗಿದೆ". ಎಂದು ಒಪ್ಪಿರುವುದರಿಂದ ತ್ರ್ಯಣುಕಾದಿಗಳಲ್ಲಿರುವ ಪರಿಮಾಣವು ಅಣುಪರಿಮಾಣಕ್ಕೆ ಸದೃಶವೇ ಆಯಿತೆಂದು ತಾರ್ಕಿಕರು ಹೇಳಿದರೆ ಇದು ಕೇವಲ ಸಂಕೇತ ಮಾತ್ರ ಎಂಬುದು ಸಿದ್ಧಾಂತಿಗಳ ಅಭಿಪ್ರಾಯ.

### ಪಾರಿಮಾಂಡಲ್ಯದ ನಿರಾಕರಣೆ

**ತತ್ವಪ್रकाशिका – ग्र्यणुकादिपरिमाणे कारणान्तराभावाच्च सङ्ख्यादेर्महत्त्वारम्भकत्वप्रसङ्गात् । संयोगस्य च द्रव्यनिमित्तत्वमेव किं न स्यात् । भिन्नतया प्रतीत्यभावादिति चेन्न । भिन्नतया प्रतीत्यभावेऽप्यपेक्षाबुद्धेरात्मगतद्वित्वनिमित्तत्वात्।**

ಪಾರಿಮಾಂಡಲ್ಯವು ಕಾರಣವಲ್ಲದಿದ್ದರೆ ದ್ವ್ಯಣುಕಾದಿಪರಿಮಾಣಕ್ಕೆ ಬೇರೆ ಕಾರಣವೇ ಇಲ್ಲವೆಂದಾಗಬೇಕಾದೀತು ಎಂಬ ಆಪತ್ತಿಯು ಬರುತ್ತದೆ. ಮತ್ತು ಪರಮಾಣುಗಳ ಸಂಖ್ಯೆಯೇ ಕಾರಣವಾಗುವುದಾದರೆ ತ್ರ್ಯಣುಕಾದಿಗಳಲ್ಲಿರುವ ಬಹುತ್ವಸಂಖ್ಯೆಯೇ ಚತುರಣುಕದಲ್ಲಿರುವ ಮಹತ್ವಕ್ಕೆ ಆರಂಭಕವಾಗುವ ಪ್ರಸಂಗ ಬರುತ್ತದೆ.

ಪರಮಾಣುಗಳ ಸಂಯೋಗವು ದ್ವ್ಯಣುಕ ಮೊದಲಾದವುಗಳಿಗೆ ಅಸಮವಾಯಿ ಕಾರಣವೆಂದು ವೈಶೇಷಿಕರು ಹೇಳುತ್ತಾರೆ. ಇದೂ ಕೂಡ ತಪ್ಪು. ಹೀಗೆ ಹೇಳಿದರೆ ಪರಮಾಣುಸಂಯೋಗವು ದ್ವ್ಯಣುಕವೆಂಬ ದ್ರವ್ಯದ ಆರಂಭಕ್ಕೆ ನಿಮಿತ್ತಕಾರಣ ಏಕಾಗಬಾರದು? ಎಂಬ ಪ್ರಶ್ನೆ ಬರುತ್ತದೆ. ಹಾಗೂ ನಿಮಿತ್ತಕಾರಣವಲ್ಲ ಎನ್ನಲು ಯಾವುದೇ ಪ್ರಮಾಣವಿಲ್ಲ.

ಪರಮಾಣುಸಂಯೋಗವು ಪ್ರತ್ಯೇಕವಾಗಿ ಪ್ರತೀತವಾಗುತ್ತಿಲ್ಲ. ಆದ್ದರಿಂದ ಅದು ನಿಮಿತ್ತಕಾರಣವಾಗುವುದಿಲ್ಲ ಎಂದು ಉತ್ತರಿಸಿದರೆ ಇಂಥ ಭಿನ್ನತ್ವೇನ ಪ್ರತೀತಿ ಇಲ್ಲದಿದ್ದರೂ ಆತ್ಮನಲ್ಲಿರುವ ಅಪೇಕ್ಷಾಬುದ್ಧಿಯು ಆತ್ಮನಲ್ಲಿರುವ ದ್ವಿತ್ವ ಸಂಖ್ಯೆಗೆ ನಿಮಿತ್ತಕಾರಣವೆಂದು ಒಪ್ಪಿದ್ದನ್ನೂ ಕೂಡ ಅಲ್ಲಗಳೆಯಬೇಕಾಗುತ್ತದೆ.

### 'ಅನ್ಯಥಾ ಏತಯೋರಪಿ ನ ಸ್ಯಾತ್' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ

**भावदीपः** – पारिमाण्डल्यादेरारम्भकत्वे बाधकरूपकारणविशेषं परिहृत्यनारम्भकत्वे बाधकमाह – **द्व्यणुकादिति ।।** एतेनान्यथा पारिमाण्डल्यादिना परिमाणरूपकार्यानुत्पत्तौ एतयोद्व्यर्णुकत्र्यणुकयोरपि न स्यात् परिमाणमिति शेषः। पारिमाण्डल्यादितोऽन्यस्य कारणविशेषस्याभावादिति भाष्यस्यार्थान्तरं दर्शितम्। अत एवैताभ्यामिति वाच्ये एतयोरित्युक्तिः। नन्वस्तु परमाणुगतद्वित्वसंख्यैव कारणान्तरमित्यत आह – **सङ्ख्यादेरिति ।।** परमाण्वादिगतसङ्ख्यादेद्व्यर्णुकादि-परिमाणकारणत्वे चतुरणुकाद्यारंभकानेकत्र्यणुकगतबहुत्वसङ्ख्याप्रचययोश्चतुरणुक गतमहत्त्वारंभकत्वप्रसङ्गादित्यर्थः। एतेन भाष्येऽन्यथा सङ्ख्यादिनैव द्व्यणुकादिगत-परिमाणोत्पत्त्यङ्गीकारे एतयोर्महत्त्वदीर्घत्वयोरपि चतुरणुकादिस्थपरिमाणकारणत्वं न स्यात्। किं तु त्र्यणुकादिगतसंख्यादेरेव स्यात्। विशेषकारणाभावादित्यपि भाष्यार्थ उक्तो भवति। सूत्रोक्तं परिमाणाख्यगुणासमवायिकारणनिराकरणमुपलक्षणमिति भावेन द्रव्यासमवायिकारणमपि निराह – **संयोगस्य चेति ।।** यत्परमाण्वादि-संयोगो द्व्यणुकाद्यसमवायिकारणमिति वैशेषिकादीनां कल्पनं तन्न । तस्य द्रव्यनिमित्तत्वमेव किं न स्यात्। अनिमित्तत्वे मानाभावात्। निमित्तत्वे बाधकाभावाच्चेति भावः। निमित्तत्वाभावे मानमाशङ्कते – **भिन्नतयेति ।।** युतसिद्धतयेत्यर्थः ।।

ಪಾರಿಮಾಂಡಲ್ಯಕ್ಕೆ ಆರಂಭಕತ್ವವನ್ನು ಒಪ್ಪಿದರೆ ಬಾಧಕರೂಪವಾದ ಕಾರಣವಿಶೇಷವನ್ನು ಪರಿಹಾರ ಮಾಡಿದರು. ಈಗ ಪಾರಿಮಾಂಡಲ್ಯವು ಆರಂಭಕವಾಗದಿದ್ದರೆ ಬಾಧಕವನ್ನು ಹೇಳಲು 'ದ್ವ್ಯಣುಕಾದಿ' ಇತ್ಯಾದಿ ಮಾತು ಹೊರಟಿದೆ. ಇದರಿಂದ 'ಅನ್ಯಥಾ ಪಾರಿಮಾಂಡಲ್ಯಾದಿನಾ ಪರಿಮಾಣರೂಪ-

ಕಾರ್ಯಾನುತ್ಪತ್ತೌ ಏತಯೋ ದ್ವ್ಯಣುಕ ತ್ರ್ಯಣುಕಯೋರಪಿ ನ ಸ್ಯಾತ್ ಪರಿಮಾಣಮ್' ಪಾರಿಮಾಂಡಲ್ಯದಿಂದ ಕಾರ್ಯವು ಹುಟ್ಟದಿದ್ದರೆ, ದ್ವ್ಯಣುಕ, ತ್ರ್ಯಣುಕಗಳಲ್ಲೂ ಕೂಡ ಪರಿಮಾಣವು ನಿಲ್ಲದೇ ಇರಬೇಕಾದೀತು ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಪಾರಿಮಾಂಡಲ್ಯಕ್ಕಿಂತ ಭಿನ್ನವಾದ ಬೇರೆ ಕಾರಣವಿಶೇಷವು ಇರುವುದಿಲ್ಲ ಎಂಬುದಾಗಿ ಭಾಷ್ಯಕ್ಕೆ ಮತ್ತೊಂದು ವ್ಯಾಖ್ಯಾನವನ್ನು ತೋರಿಸಿದರು. ಆದ್ದರಿಂದ 'ಏತಾಭ್ಯಾಮ್' ಎಂದು ಹೇಳಬೇಕಾಗಿದ್ದರೂ ಕೂಡ 'ಏತಯೋಃ' ಎಂದು ಹೇಳಿರುತ್ತಾರೆ.

ಪಾರಿಮಾಂಡಲ್ಯಕ್ಕಿಂತ ಬೇರೆ ಕಾರಣವಿಶೇಷವು ಇಲ್ಲದಿರುವುದರಿಂದ ಎಂಬುದಾಗಿ 'ವಿಶೇಷಕಾರಣಾಭಾವಾತ್' ಎಂಬ ಭಾಷ್ಯಕ್ಕೆ ಮತ್ತೊಂದು ಅರ್ಥವನ್ನು ಹೇಳಿದಂತಾಯಿತು. ಆದ್ದರಿಂದಲೇ ಭಾಷ್ಯದಲ್ಲಿ 'ಏತಾಭ್ಯಾಂ' ಎಂದು ಹೇಳಬೇಕಾಗಿದ್ದರೂ ಕೂಡ, 'ಏತಯೋಃ' ಎಂಬುದಾಗಿ ಹೇಳಿರುತ್ತಾರೆ.

ಪರಮಾಣುವಿನಲ್ಲಿರುವ ದ್ವಿತ್ವಸಂಖ್ಯೆಯೇ ಮತ್ತೊಂದು ಕಾರಣವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಸಂಯೋಗಶ್ಚ' ಎಂಬ ವಾಕ್ಯವು ಉತ್ತರಿಸುತ್ತಿದೆ. ಪರಮಾಣುವಿನಲ್ಲಿರುವ ಸಂಖ್ಯೆಯು ದ್ವ್ಯಣುಕಾದಿ-ಗಳಲ್ಲಿರುವ ಪರಿಮಾಣಾದಿಗಳಿಗೆ ಕಾರಣವಾಗುವುದಾದರೆ ಚತುರಣುಕಕ್ಕೆ ಆರಂಭಕವಾದ ಅನೇಕ ತ್ರ್ಯಣುಕಗಳಲ್ಲಿರುವ ಬಹುತ್ವಸಂಖ್ಯಾ ಮತ್ತು ಪ್ರಚಯಗಳೇ ಚತುರಣುಕದಲ್ಲಿರುವ ಮಹತ್ವಕ್ಕೆ ಆರಂಭಕವಾಗಬೇಕಾದೀತು. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿ 'ಅನ್ಯಥಾ' = ಸಂಖ್ಯಾದಿಗಳಿಂದಲೇ ದ್ವ್ಯಣುಕಾದಿಗಳಲ್ಲಿರುವ ಪರಿಮಾಣದ ಉತ್ಪತ್ತಿಯನ್ನು ಅಂಗೀಕಾರ ಮಾಡಿದರೆ, 'ಏತಯೋಃ' = ಮಹತ್ವ, ದೀರ್ಘತ್ವಗಳಿಗೂ ಕೂಡ ಚತುರಣುಕಾದಿಗಳಲ್ಲಿರುವ ಪರಿಮಾಣಕಾರಣತ್ವವು ಬಾರದೇ ಇರಬೇಕಾದೀತು. ಕಿಂತು ತ್ರ್ಯಣುಕಾದಿಗಳಲ್ಲಿರುವ ಸಂಖ್ಯಾದಿಗಳಿಗೇನೇ ಪರಿಮಾಣಕಾರಣತ್ವವು ಬರಬೇಕಾದೀತು. ಎರಡೂ ಕಡೆ ವ್ಯತ್ಯಾಸ ಮಾಡಲು ಯಾವುದೇ ವಿಶೇಷಕಾರಣವಿರುವುದಿಲ್ಲ ಎಂಬುದಾಗಿಯೂ ಭಾಷ್ಯದ ಅರ್ಥವನ್ನು ಹೇಳಿದಂತಾಯಿತು. ಸೂತ್ರದಲ್ಲಿ ಪರಿಮಾಣ ಎಂಬ ಗುಣವು ಅಸಮವಾಯಿಕಾರಣವಾಗಿರುವುದಿಲ್ಲ ಎಂದು ನಿರಾಕರಣೆ ಮಾಡಿರುವುದು ಉಪಲಕ್ಷಣವಾಗಿದೆ. ಈ ಅಭಿಪ್ರಾಯದಿಂದ ದ್ರವ್ಯಕ್ಕೆ ಅಸಮವಾಯಿಕಾರಣತ್ವವನ್ನೂ ಕೂಡ ನಿರಾಕರಣೆ ಮಾಡಲು 'ಸಂಯೋಗಸ್ಯ ಚ' ಇತ್ಯಾದಿ ವಾಕ್ಯವು ಹೊರಟಿದೆ.

ಪರಮಾಣ್ವಾದಿಸಂಯೋಗವು ದ್ವ್ಯಣುಕಾದಿಗಳಿಗೆ ಅಸಮವಾಯಿಕಾರಣವಾಗಿದೆ ಎಂಬುದಾಗಿ ವೈಶೇಷಿಕರು ಕಲ್ಪನೆ ಮಾಡುತ್ತಾರೆ. ಇದೂ ಕೂಡ ತಪ್ಪು. ಏಕೆಂದರೆ ಅದಕ್ಕೂ ಕೂಡ ದ್ರವ್ಯವೇ ಏಕೆ

ನಿಮಿತ್ತವಾಗಬಾರದು? ನಿಮಿತ್ತವಾಗುವುದಿಲ್ಲವೆನ್ನಲು ಯಾವುದೇ ಪ್ರಮಾಣವಿಲ್ಲ. ನಿಮಿತ್ತವಾಗುತ್ತದೆನ್ನಲು ಬಾಧಕವೂ ಇರುವುದಿಲ್ಲ.

ದ್ವ್ಯಣುಕಾದಿಗಳಿಗೆ ದ್ರವ್ಯವು ನಿಮಿತ್ತವಾಗುವುದಿಲ್ಲವೆನ್ನಲು ಪ್ರಮಾಣವನ್ನು 'ಭಿನ್ನತಯಾ' ಇತ್ಯಾದಿ ವಾಕ್ಯದಿಂದ ಆಕ್ಷೇಪ ಮಾಡುತ್ತಿದ್ದಾರೆ. 'ಭಿನ್ನತಯಾ' ಎಂಬ ಪದಕ್ಕೆ ಒಟ್ಟಿಗೆ ತೋರದಿದ್ದರೂ ಕೂಡ ಎಂದರ್ಥ.

### ಅಸಮವಾಯಿಕಾರಣವೇ ಅಪ್ರಾಮಾಣಿಕ

**तत्वप्रकाशिका – अभ्युपगम्य चेदमुदितम् । किं तन्तूनां यथाकथञ्चित्संयोगः पटस्य कारणं विवक्षितो वा । नाद्यः अनभ्युपगमात् । द्वितीये कस्येति वाच्यम् । पटस्येति चेत् कस्तदा पटोऽवशिष्यते । अतोऽसमवायिकारणं नाम न किञ्चिदस्तीति सिद्धम् ।।**

ಅಸಮವಾಯಿಕಾರಣ ಎಂಬ ಪದಾರ್ಥವನ್ನು ಅಂಗೀಕಾರ ಮಾಡಿ ಇಲ್ಲಿಯ ತನಕ ಪ್ರತಿಬಂದಿಯನ್ನು ಹೇಳಿದ್ದು. ವಾಸ್ತವಿಕವಾಗಿ ಈ ಪದಾರ್ಥವೇ ಇಲ್ಲ. ಏಕೆಂದರೆ ಯಥಾಕಥಂಚಿತ್ ತಂತುಗಳ ಸಂಯೋಗವು ಪಟಕ್ಕೆ ಕಾರಣವೆಂದು ಹೇಳುತ್ತೀರೋ ? ಅಥವಾ ಓತಪ್ರೋತವಾಗಿ ಜೋಡಿಸಲ್ಪಟ್ಟ ತಂತುಸಂಯೋಗವು ಪಟಕ್ಕೆ ಕಾರಣವೆಂದು ಹೇಳುತ್ತಿರೋ ? ಮೊದಲನೆಯ ಪಕ್ಷವನ್ನು ತಾರ್ಕಿಕರೆ ಒಪ್ಪುವುದಿಲ್ಲ. ಎರಡನೆಯ ಪಕ್ಷದಲ್ಲಿ ಅಂಥ ತಂತುಗಳ ಸಂಯೋಗವು ಯಾವುದಕ್ಕೆ ಕಾರಣವೆಂದು ಹೇಳಬೇಕು. ಪಟಕ್ಕೆ ಎಂದು ಉತ್ತರಿಸಿದರೆ 'ಆ ತಂತುಸಂಯೋಗಕ್ಕಿಂತ ಅತಿರಿಕ್ತವಾದ ಪಟವೇ ಇರುವುದಿಲ್ಲ. ಅಂದ ಮೇಲೆ ಯಾವುದಕ್ಕೆ ಆ ತಂತುಸಂಯೋಗವು ಕಾರಣ?' ಎಂಬ ಪ್ರಶ್ನೆಗೆ ಉತ್ತರಿಸಬೇಕಾಗುತ್ತದೆ. ಆದ್ದರಿಂದ ಅಸಮವಾಯಿಕಾರಣವೆಂಬುದೇ ಇಲ್ಲವೆಂದು ಸಿದ್ಧವಾಯಿತು.

**भावदीपः – अभ्युपगम्येति ।।** समवायिकारणद्रव्यसंयोगात्तत्कार्यस्य पटादेर्भे दमभ्युपगम्य समवायिकारणसंयोगस्य निमित्तत्वमस्तु इत्युक्तम्। वस्तुतस्तु सम वायिकारणद्रव्यसंयोगादन्यत्कार्यमेव नास्तीत्यर्थः। तदेव व्यनक्ति।। **किं तन्तूनामि ति ।। विवक्षितो वेति ।।** तन्तूनां व्यतिषङ्गविशेषो वेत्यर्थः।। **कस्तदा पट इति ।।**

'तन्तुभ्योऽन्यः पटः साक्षात्कस्य दृष्टिपथं गतः' इत्येकादशे गीतातात्पर्योक्त-ब्रह्मतर्कस्मृतेरिति भावः। एवं द्रव्यगुणयोरसमवायिकारणनिरासे सति कार्यकारणयोरभेदादेव कर्मासमवायिकारणमपि निरस्तप्रायं मत्वाऽऽद्यसूत्र-तात्पर्यार्थमुपसंहरति॥ **अत इति ।।** परिमाणलक्षणगुणासमवायिकारणे विशेषकल्पनस्य निर्बीजत्वात्। उपादानोपादेययोरभेदेन द्रव्यासमवायिकारणस्य कर्मासमवायिकारणस्य चायोगादित्यर्थः॥ ११ ॥

'ಅಭ್ಯುಪಗಮ್ಯ ಚ ಇದಮುದಿತಂ' ಎಂಬ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ಸಮವಾಯಿ-ಕಾರಣದ್ರವ್ಯಸಂಯೋಗಕ್ಕಿಂತ ಆದರ ಕಾರ್ಯವು ಭಿನ್ನವಾಗಿದೆ ಎಂದು ಅಂಗೀಕಾರ ಮಾಡಿ, ಸಮವಾಯಿಕಾರಣಸಂಯೋಗವೇ ನಿಮಿತ್ತವಾಗಲಿ ಎಂಬುದಾಗಿ ಇಲ್ಲಿಯತನಕ ಸಮರ್ಥಿಸಲಾಯಿತು. ಆದರೆ ವಾಸ್ತವಿಕವಾಗಿ ಸಮವಾಯಿಕಾರಣದ್ರವ್ಯಸಂಯೋಗಕ್ಕಿಂತ ಅತಿರಿಕ್ತವಾದ ಕಾರ್ಯವೇ ಇರುವುದಿಲ್ಲ. ಅದನ್ನೇ 'ಕಿಂ ತಂತೂನಾಮ್' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. 'ವಿವಕ್ಷಿತೋ ವಾ' ಎಂದರೆ ಓತಪ್ರೋತವಾಗಿ ಜೋಡಿಸಲ್ಪಟ್ಟ ತಂತುಸಂಯೋಗವು ಪಟಕ್ಕೆ ಕಾರಣವೆಂದು ವಿವಕ್ಷಿಸಲ್ಪಟ್ಟಿದೆಯೋ ಎಂದರ್ಥ. 'ಕಸ್ತದಾ ಪಟಃ' ಎಂಬುದರ ಅಭಿಪ್ರಾಯ ಹೀಗಿದೆ - ತಂತುಗಳಿಗಿಂತ ಬೇರೆಯಾದ ಪಟವು ಯಾರ ಕಣ್ಣಿಗೆ ಕಾಣಿಸುತ್ತಿದೆ.

'ತಂತುಭ್ಯೋಽನ್ಯಃ ಪಟಃ ಸಾಕ್ಷಾತ್ಕಸ್ಯ ದೃಷ್ಟಿಪಥಂ ಗತಃ'

ಎಂದು ಏಕಾದಶಾಧ್ಯಾಯದ ಗೀತಾತಾತ್ಪರ್ಯದಲ್ಲಿ ಉಲ್ಲೇಖ ಮಾಡಿದ ಬ್ರಹ್ಮತರ್ಕಸ್ಮೃತಿಯು ಹೇಳುತ್ತಿದೆ. ಆದ್ದರಿಂದ ಓತಪ್ರೋತವಾಗಿ ಜೋಡಿಸಲ್ಪಟ್ಟ ತಂತುಗಳಿಗಿಂತ ಅತಿರಿಕ್ತವಾದ ಪಟವಿದೆ ಎಂದು ಹೇಳಬಾರದು.

ಹೀಗೆ ದ್ರವ್ಯ ಹಾಗೂ ಗುಣಗಳು ಅಸಮವಾಯಿಕಾರಣಗಳಾಗುವುದಿಲ್ಲವೆಂದು ನಿರಾಕರಣೆ ಮಾಡಿದ್ದಾಯಿತು. ಕಾರ್ಯಕಾರಣಗಳಿಗೆ ಅಭೇದವಿರುವುದರಿಂದಲೇ ಕರ್ಮವೂ ಕೂಡ ಅಸಮವಾಯಿ-ಕಾರಣವಾಗುವುದಿಲ್ಲವೆಂಬುದು ನಿರಸ್ತವಾಯಿತು. ಈ ಅಭಿಪ್ರಾಯದಿಂದ ಪ್ರಥಮಸೂತ್ರ ತಾತ್ಪರ್ಯವನ್ನು 'ಅತಃ' ಇತ್ಯಾದಿಯಾಗಿ ಉಪಸಂಹಾರ ಮಾಡುತ್ತಿದ್ದಾರೆ. ಪರಿಮಾಣವೆಂಬ ಗುಣವು ಅಸಮವಾಯಿ-ಕಾರಣವಾಗುವುದಿಲ್ಲ. ಅದನ್ನು ಅಸಮವಾಯಿಕಾರಣವೆಂದು ಕಲ್ಪನೆ ಮಾಡಲು ಯಾವುದೇ

ನಿಮಿತ್ತವಿರುವುದಿಲ್ಲ. ಮತ್ತು ಉಪಾದಾನ-ಉಪಾದೇಯಗಳಿಗೆ ಅಭೇದವಿರುವುದರಿಂದ ದ್ರವ್ಯವಾಗಲೀ, ಕರ್ಮವಾಗಲೀ ಅಸಮವಾಯಿಕಾರಣವಾಗುವುದಿಲ್ಲ. ಈ ಎಲ್ಲಾ ಕಾರಣದಿಂದ ಎಂದರ್ಥ.

## ಬ್ರಹ್ಮಸೂತ್ರ

'ಉಭಯಥಾऽಪಿ ನ ಕರ್ಮಾऽತಸ್ತದಭಾವಃ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – उभयथाऽपि न कर्माऽतस्तदभावः ।।**

ಪ್ರತಿಯೊಂದು ಕಾರ್ಯಗಳ ಉತ್ಪತ್ತಿಗೆ ಈಶ್ವರೇಚ್ಛೆಯು ನಿಮಿತ್ತಕಾರಣವಾಗಿದೆ ಎಂದು ವೈಶೇಷಿಕರು ಹೇಳುತ್ತಾರೆ. ಇದು ಸರಿಯಲ್ಲ. ಈಶ್ವರನ ಇಚ್ಛೆಯು ನಿತ್ಯವು, ಅನಿತ್ಯವೋ? ಎರಡೂ ಪಕ್ಷಗಳಲ್ಲಿ ಪರಮಾಣುವಿನ ಕ್ರಿಯೆಯು ಹುಟ್ಟಲು ಸಾಧ್ಯವಿಲ್ಲ. ನಿತ್ಯವಾದರೆ ಪ್ರಳಯಕಾಲದಲ್ಲಿ ಇಚ್ಛೆ ಇದ್ದರೂ ಕಾರ್ಯವಿಲ್ಲ. ಅನಿತ್ಯವೆಂದರೆ ಆ ಇಚ್ಛೆಗೂ ಮತ್ತೊಂದು ಕಾರಣದ ಅಪೇಕ್ಷೆ ಇರುವುದರಿಂದ ಅನವಸ್ಥಾ ಬರುತ್ತದೆ. ಆದ್ದರಿಂದ ದ್ವ್ಯಣುಕಾದಿ ಕಾರ್ಯಪ್ರಪಂಚವೇ ಸೃಷ್ಟಿಯಾಗದಿರಬೇಕಾದೀತು.

ಅರ್ಥ -- ಯಾವ ಕಾರಣದಿಂದ ಉಭಯಥಾऽಪಿ = ಈಶ್ವರೇಚ್ಛೆಗೆ ನಿತ್ಯತ್ವ ಅನಿತ್ಯತ್ವ ಎಂಬೆರಡು ಪಕ್ಷಗಳನ್ನು ಒಪ್ಪಿದರೂ ಪರಮಾಣುಗಳಲ್ಲಿ, ನ ಕರ್ಮ = ಕ್ರಿಯೆಯ ಉತ್ಪತ್ತಿಯು ಅಸಂಭಾವಿತವೋ, ಅತಃ = ಆದ್ದರಿಂದ ತದಭಾವಃ = ದ್ವ್ಯಣುಕಾದಿಕಾರ್ಯಗಳ ಸೃಷ್ಟಿಯು ಉಂಟಾಗಲಾರದು. ಹೀಗೆ ತಾರ್ಕಿಕರ ನಿಮಿತ್ತಕಾರಣ ಸಮರ್ಥನೆಯು ಅಸಾಧುವಾಗಿದೆ.

## ಬ್ರಹ್ಮಸೂತ್ರಭಾಷ್ಯ

ಈಶ್ವರನ ಇಚ್ಛೆ ನಿತ್ಯವೋ ಅನಿತ್ಯವೋ

**ब्रह्मसूत्रभाष्यम् – ।।। उभयथाऽपि न कर्मातस्तदभावः ।।२।।**

**ईश्वरेच्छाया नित्यत्वे तद्भावेऽपि परमाणुकर्माभावान्नेदानीमपि तत् स्यात् । अनित्यत्वे तत्कारणाभावात् । अतः परमाणुचेष्टाभावात् तत्कार्याभावः ।**

ಅನುವಾದ - ಈಶ್ವರ ಇಚ್ಛೆಯು ನಿತ್ಯ ಎಂದಾದರೆ ಪ್ರಳಯಕಾಲದಲ್ಲಿ ಈಶ್ವರನ ಇಚ್ಛೆಯಿದ್ದರೂ ಪರಮಾಣುವಿನ ಕ್ರಿಯೆ ಇರುವುದಿಲ್ಲ. ಆದ್ದರಿಂದ ಸೃಷ್ಟಿಕಾಲದಲ್ಲಿಯೂ ಪರಮಾಣುಗಳಲ್ಲಿ ಕ್ರಿಯೆಯು ಬರದೆ ಇರಬೇಕಾದೀತು. ಒಂದು ವೇಳೆ ಈಶ್ವರನ ಇಚ್ಛೆಯು ಅನಿತ್ಯವಾದರೆ ಅದಕ್ಕೂ ಒಂದು ಕಾರಣವನ್ನು ಹೇಳಬೇಕು. ಆದ್ದರಿಂದ ಪರಮಾಣುವಿನಲ್ಲಿ ಕಾರ್ಯವಿಲ್ಲವಾದ್ದರಿಂದ ಪರಮಾಣುವಿನಿಂದ ದ್ವ್ಯಣುಕ ಅವುಗಳಿಂದ ತ್ರ್ಯಣುಕ ಇತ್ಯಾದಿ ಕಾರ್ಯಗಳೂ ಕೂಡ ಹುಟ್ಟದೆ ಇರಬೇಕಾದೀತು.

ಪ್ರತಿಪದಾರ್ಥ -- ಈಶ್ವರೇಚ್ಛಾಯಾಃ = ಈಶ್ವರ ಇಚ್ಛೆಯು, ನಿತ್ಯತ್ವೇ = ನಿತ್ಯವೆಂದು ಒಪ್ಪಿದರೆ, ತದ್ಭಾವೇಽಪಿ = ಪ್ರಳಯಕಾಲದಲ್ಲಿ ಈಶ್ವರ ಇಚ್ಛೆಯಿದ್ದರೂ, ಪರಮಾಣುಕರ್ಮಾಭಾವಾತ್ = ಪರಮಾಣುವಿನಲ್ಲಿ ಕ್ರಿಯೆಯು ಇಲ್ಲವಾದ್ದರಿಂದ, ಇದಾನೀಮಪಿ = ಸೃಷ್ಟಿಕಾಲದಲ್ಲಿಯೂ, ತತ್, ನ ಸ್ಯಾತ್ = ಪರಮಾಣುವಿನಲ್ಲಿ ಕ್ರಿಯೆಯು ಇಲ್ಲದಿರಬೇಕಾದೀತು. ಅನಿತ್ಯತ್ವೇ = ಈಶ್ವರನ ಇಚ್ಛೆಯು ಅನಿತ್ಯವೆಂದು ಒಪ್ಪಿದರೆ, ತತ್ಕಾರಣಾಭಾವಾತ್ = ಈಶ್ವರನ ಇಚ್ಛೆಗೆ ಉತ್ಪಾದಕವಾದ ಮತ್ತೊಂದು ಕಾರಣವಿಲ್ಲವಾದ್ದರಿಂದ ಇಚ್ಛೆಯೂ ಕೂಡ ಹುಟ್ಟುವುದಿಲ್ಲ. ಅತಃ = ಆದ್ದರಿಂದ, ಪರಮಾಣುಚೇಷ್ಟಾಭಾವಾತ್ = ಪರಮಾಣುವಿನಲ್ಲಿ ಯಾವುದೇ ಕ್ರಿಯೆಯು ನಡೆಯದ ಕಾರಣ, ತತ್ಕಾರ್ಯಭಾವಃ = ದ್ವ್ಯಣುಕ ತ್ರ್ಯಣುಕ ಮೊದಲಾದ ಕಾರ್ಯಗಳು ಹುಟ್ಟಲಾರವು.

### ಈಶ್ವರನ ಸರ್ವಶಕ್ತಿತ್ವವು ವೈದಿಕವಾಗಿದೆ

**ब्रह्मसूत्रभाष्यम् – वैदिकेश्वरस्य तु वेदेनैव सर्वशक्तित्वोक्तेः सर्वमुपपद्यते । स्वत एव काले विशेषाङ्गीकृतेश्च ॥२॥**

ಅನುವಾದ - ವೇದದಿಂದ ಈಶ್ವರನನ್ನು ಸಾಧನೆ ಮಾಡಿ ಆ ವೇದದಿಂದಲೇ ಈಶ್ವರನಿಗೆ ವಿಲಕ್ಷಣವಾದ ಸರ್ವಶಕ್ತಿಯನ್ನು ಒಪ್ಪುವುದರಿಂದ ಪ್ರಳಯಕಾಲದಲ್ಲಿ ಈಶ್ವರನ ಇಚ್ಛೆಯಿದ್ದರೂ ಸೃಷ್ಟಿಯು ನಡೆಯುವುದಿಲ್ಲ. ಮತ್ತು ಸೃಷ್ಟಿಕಾಲ ಪ್ರಳಯಕಾಲವೆಂಬ ವಿಭಾಗವು ಸ್ವಾಭಾವಿಕವಾಗಿರುವುದರಿಂದ ಕಾಲವಿಶೇಷವು ಬಂದಾಗ ಮಾತ್ರ ಸೃಷ್ಟಿಪ್ರಕ್ರಿಯೆಯು ನಡೆಯುತ್ತದೆ.

ಪ್ರತಿಪದಾರ್ಥ -- ವೈದಿಕೇಶ್ವರಸ್ಯ ತು = ವೇದದಿಂದ ಸಿದ್ಧವಾಗುವ ಈಶ್ವರನಿಗೆ, ವೇದೇನೈವ = ವೇದದಿಂದಲೇ, ಸರ್ವಶಕ್ತ್ಯೋಕ್ತೇಃ = ವಿಲಕ್ಷಣವಾದ ಸರ್ವಶಕ್ತಿಯನ್ನು ಒಪ್ಪಿದ್ದರಿಂದ, ಸರ್ವಂ = ಪ್ರಳಯಕಾಲದಲ್ಲಿ ಇಚ್ಛೆಯಿದ್ದರೂ ಸೃಷ್ಟಿಯೂ ಆಗದಿರುವಿಕೆಯನ್ನು, ಉಪಪದ್ಯತೇ = ಕೂಡಿಸಬಹುದು. ಕಾಲೇ = ಕಾಲದಲ್ಲಿ, ಸ್ವತ ಏವ = ಸ್ವಾಭಾವಿಕವಾಗಿ, ವಿಶೇಷಾಂಗೀಕೃತೇಶ್ಚ = ಸೃಷ್ಟಿಕಾಲ, ಪ್ರಳಯಕಾಲ ಇತ್ಯಾದಿಯಾಗಿ ಭೇದವನ್ನು ಒಪ್ಪಿರುವುದರಿಂದ ಕಾಲವಿಶೇಷದಲ್ಲಿ ಸೃಷ್ಟಿಯು ನಡೆಯುತ್ತದೆಂದು ಕೂಡಿಸಬಹುದು.

## ಸತ್ತರ್ಕದೀಪಾವಳಿ

### ಕಾಲಭೇದ ಒಪ್ಪದಿದ್ದರೆ ಸೃಷ್ಟ್ಯಾದಿಗಳೇ ಕೂಡುವುದಿಲ್ಲ

**सत्तर्कदीपावळिः – उभयथाऽपि न कर्मेत्यादिना यत्परमते दूषणमुक्तं तत्स्वमतेऽपि किं न स्यादित्याशङ्क्य परिहरति । वैदिकेश्वरस्येत्यादिना । तत्तत्कालभेदेन या सृष्टिस्थित्यादिः सा परमते न स्यात् । अतीतानागतादिकालभेदानङ्गीकारात् । औपाधिकभेदस्य सत्वासत्वाभ्यां निरूपयितुमशक्यत्वात् किं कालेनानुपाधिना । कालानां परस्परं भेद इति प्रश्नस्य परिहर्तुम् अशक्यत्वाद्गुणादिषु शक्तिविशेषानङ्गीकारात् । निर्विशेषेश्वरेच्छावशात् सृष्टिस्थित्यादिकार्यविशेषानुपत्तिश्च स्यादित्यर्थः ।**

'ಉಭಯಥಾಽಪಿ ನ ಕರ್ಮ' ಇತ್ಯಾದಿ ಸೂತ್ರದಿಂದ ತಾರ್ಕಿಕರಿಗೆ ದೋಷವನ್ನು ಹೇಳಲಾಯಿತು. ಆ ದೋಷ ಸಿದ್ಧಾಂತಿಗಳಿಗೂ ಕೂಡ ಬರುತ್ತದಲ್ಲವೇ ? ಎಂದು ಆಕ್ಷೇಪ ಮಾಡಿ, ಪರಿಹಾರ ಮಾಡುವುದಕ್ಕಾಗಿ 'ವೈದಿಕೇಶ್ವರಸ್ಯ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. ಸೃಷ್ಟಿಕಾಲದಲ್ಲಿ ಸೃಷ್ಟಿಯಾಗುತ್ತದೆ. ಸ್ಥಿತಿಕಾಲದಲ್ಲಿ ಸ್ಥಿತಿಯಾಗುತ್ತದೆ. ಪ್ರಳಯಕಾಲದಲ್ಲಿ

ಪ್ರಳಯವಾಗುತ್ತದೆ. ಹೀಗೆ ನಾವು ಹೇಳಬಹುದು. ಆದರೆ ತಾರ್ಕಿಕರಿಗೆ ಹೀಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ಅತೀತಕಾಲ, ಅನಾಗತಕಾಲ, ವರ್ತಮಾನಕಾಲಗಳಲ್ಲಿ ಅವರು ಭೇದವನ್ನು ಅಂಗೀಕಾರ ಮಾಡಿರುವುದಿಲ್ಲ. ಔಪಾಧಿಕವಾಗಿ ಭೇದವನ್ನು ಅಂಗೀಕಾರ ಮಾಡಿದರೆ ಅದು ಸತ್ಯವೋ, ಅಸತ್ಯವೋ? ಇತ್ಯಾದಿ ವಿಕಲ್ಪಗಳನ್ನು ನಾವು ಮಾಡಿದರೆ ಅವರಿಂದ ಉತ್ತರಿಸಲು ಸಾಧ್ಯವಾಗುವುದಿಲ್ಲ. ಔಪಾಧಿಕವಲ್ಲದ ಕಾರಣವನ್ನೇ ಅವರು ಹೇಳಬೇಕು. ಆಗ ಕಾಲಗಳಲ್ಲಿ ಪರಸ್ಪರ ಭೇದವನ್ನು ಉಪಪಾದನೆ ಮಾಡಲು ಅವರಿಂದ ಸಾಧ್ಯವಾಗುವುದಿಲ್ಲ. ಮತ್ತು ಇಚ್ಛೆಯಲ್ಲಿ ಶಕ್ತಿವಿಶೇಷವನ್ನೂ ಕೂಡ ಅವರು ಅಂಗೀಕಾರ ಮಾಡಿರುವುದಿಲ್ಲ. ಯಾವುದೇ ವಿಶೇಷವಿಲ್ಲದ ಈಶ್ವರೇಚ್ಛೆಯ ಅಧೀನವಾಗಿ ಸೃಷ್ಟಿ-ಸ್ಥಿತ್ಯಾದಿ ಕಾರ್ಯವಿಶೇಷವನ್ನು ಉಪಪಾದನೆ ಮಾಡಲೂ ಕೂಡ ತಾರ್ಕಿಕರಿಂದ ಸಾಧ್ಯವಾಗುವುದಿಲ್ಲ.

## ತತ್ವಪ್ರದೀಪ

### ಈಶ್ವರೇಚ್ಛೆಯು ನಿತ್ಯವೆಂದರೆ ಬಾಧಕ

**तत्वप्रदीपः – उभयथाऽपि न कर्मातस्तदभावः । इच्छादयोऽष्टौ गुणा हीश्वरस्य कल्प्यन्ते । सेच्छा किं नित्योतानित्या ? नित्या चेत्, तद्भावेऽपि प्रलयकाले परमाणूनां चलनकर्माभावान्नाभिमतकालेऽपि तत्स्यात् । ये संयुज्य कार्यमारभेरन् ।**

ಈಶ್ವರನಲ್ಲಿ ಎಂಟುಗುಣಗಳಿವೆ ಎಂದು ವೈಶೇಷಿಕರು ಕಲ್ಪನೆ ಮಾಡುತ್ತಾರೆ. ಅವುಗಳಲ್ಲಿ ಇಚ್ಛೆಯೂ ಕೂಡ ಒಂದು. ಈ ಇಚ್ಛೆಯು ನಿತ್ಯವೋ, ಅನಿತ್ಯವೋ? ನಿತ್ಯವೆಂದರೆ ಸೃಷ್ಟಿಯ ಇಚ್ಛೆ ನಿತ್ಯವೆಂದಾಯಿತು. ಪ್ರಳಯಕಾಲದಲ್ಲೂ ಇದೆಯೆಂದಾಯಿತು. ಕಾರಣಭೂತವಾದ ಸೃಷ್ಟಿಯ ಇಚ್ಛೆ ಇದ್ದರೂ ಪರಮಾಣುಗಳಲ್ಲಿ ಚಲನಕರ್ಮ ಆಗುವುದಿಲ್ಲ. ಇದನ್ನು ತಾರ್ಕಿಕರು ಒಪ್ಪುತ್ತಾರೆ. ಹಾಗಾದರೆ ಸೃಷ್ಟಿಯ ಕಾಲದಲ್ಲೂ ಈಶ್ವರೇಚ್ಛೆ ಎಂಬ ನಿಮಿತ್ತಕಾರಣವಿರಲಿ, ಪರಮಾಣುಗಳಲ್ಲಿ ಕರ್ಮವು ಉಂಟಾಗುವುದು ಬೇಡ. ಈಶ್ವರೇಚ್ಛೆ ಇದ್ದರೆ ಮಾತ್ರ ಪರಮಾಣುಗಳಲ್ಲಿ ಸಂಯೋಗಾದಿ ಕ್ರಿಯೆಗಳು ಉಂಟಾಗುತ್ತವೆಂದು ಹೇಳುವ ಮೂಲಕ ಕಾರ್ಯೋತ್ಪತ್ತಿಯನ್ನು ಅಂಗೀಕರಿಸಬಹುದಿತ್ತು. ಆದರೆ ಇದು ಸಾಧ್ಯವಿಲ್ಲ.

## ಈಶ್ವರೇಚ್ಛೆಯು ಅನಿತ್ಯವೆಂದು ಬಾಧಕ

**तत्वप्रदीपः – अनित्या चेत्तत्सत्तायाः कारणं मृग्यम् । न च तत्कारणं युक्तम् । सर्वस्य तदिच्छाधीनत्वात् । अतः कारणाभावेनेच्छाभावात्तन्निमित्त-परमाणुचेष्टाभावात्तत्कार्याभावः ।**

ಈಶ್ವರೇಚ್ಛೆಯು 'ಅನಿತ್ಯಾ' ಎಂದು ಹೇಳಿದರೆ ಈಶ್ವರೇಚ್ಛೆಯ ಉತ್ಪತ್ತಿಗೆ ಮತ್ತೊಂದು ಕಾರಣವನ್ನು ಹುಡುಕಬೇಕು. ಈಶ್ವರೇಚ್ಛೆಗೆ ಮತ್ತೊಂದು ಕಾರಣ ಇರಲು ಸಾಧ್ಯವಿಲ್ಲ. ಏಕೆಂದರೆ ಸಕಲ ಕಾರ್ಯಗಳು ಈಶ್ವರೇಚ್ಛೆಯ ಅಧೀನವಾಗಿವೆ. ಹೀಗೆ ಈಶ್ವರೇಚ್ಛೆಗೆ ಯಾವುದೇ ಕಾರಣವಿಲ್ಲವಾದ್ದರಿಂದ ಇಚ್ಛೆಯೇ ಇಲ್ಲವೆಂದಾಯಿತು. ಇಚ್ಛೆ ಎಂಬ ನಿಮಿತ್ತಕಾರಣ ಇಲ್ಲದಿದ್ದಾಗ ಪರಮಾಣುಗಳಲ್ಲಿ ಚೇಷ್ಟೆಯೂ ಕೂಡ ಉಂಟಾಗುವುದಿಲ್ಲ. ಆದ್ದರಿಂದ ಪರಮಾಣುಗಳಿಂದ ಕಾರ್ಯವೂ ಕೂಡ ಆಗುವುದಿಲ್ಲ ಎಂದಾಯಿತು.

## ಸಿದ್ಧಾಂತಪಕ್ಷದಲ್ಲಿ ವಿಶೇಷಬಲದಿಂದ ಸರ್ವನಿರ್ವಾಹ

**तत्वप्रदीपः – न चायं विकल्प ईश्वरवादिनां समस्समस्तानामिति मन्तव्यम् । यस्य वेदगम्य ईश्वरः तत्पक्षे वेदेनैव तस्य सर्वशक्तित्वोक्तेस्तदा तदा तत्तदिच्छोपपद्यते । नचानित्यत्वापातः । तस्या एवैकस्यास्स्वरूप-भूतायास्तत्तत्काले स्वाभाविकविशेषाङ्गीकृतेः । नौपाधिको भेदश्चाङ्गीकर्तव्य इत्यर्थः ।**

ಈಶ್ವರೇಚ್ಛೆಯು ನಿತ್ಯವೋ, ಅನಿತ್ಯವೋ ? ಎಂಬ ವಿಕಲ್ಪವು ಈಶ್ವರವಾದಿಗಳಿಗೂ ಕೂಡ ಸಮಾನವಲ್ಲವೇ? ಎಂದು ತಿಳಿಯಬಾರದು. ಸಿದ್ಧಾಂತಪಕ್ಷದಲ್ಲಿ ಈಶ್ವರನು ವೇದೈಕಗಮ್ಯ-ನಾಗಿದ್ದಾನೆ. ವೇದದಿಂದ ಈಶ್ವರನು ಸಿದ್ಧವಾಗುವಾಗಲೇ ಸರ್ವಶಕ್ತಿಯುಳ್ಳವನಾಗಿದ್ದಾನೆಂದೇ ಸಿದ್ಧನಾಗಿದ್ದಾನೆ. ಆದ್ದರಿಂದ ಸೃಷ್ಟಿಕಾಲದಲ್ಲಿ ಸೃಷ್ಟಿ ಮಾಡುವ ಇಚ್ಛೆ, ಪ್ರಳಯಕಾಲದಲ್ಲಿ ಪ್ರಳಯ ಮಾಡುವ ಇಚ್ಛೆ ಇತ್ಯಾದಿಗಳೆಲ್ಲವೂ ಉಪಪನ್ನವಾಗುತ್ತವೆ. ಹಾಗಾದರೆ ಪ್ರಳಯಕಾಲದಲ್ಲಿ ಸೃಷ್ಟಿ ಮಾಡುವ ಇಚ್ಛೆ ಇಲ್ಲವೆಂದಾಯಿತು. ಅರ್ಥಾತ್ ಅನಿತ್ಯವೆಂದು ಹೇಳಿದಂತಾಯಿತಲ್ಲವೇ?

ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಈಶ್ವರೇಚ್ಛೆಯು ಸ್ವರೂಪಭೂತವಾಗಿ ಒಂದೇ ಆಗಿದೆ. ಆಯಾ ಕಾಲಗಳು ಸನ್ನಿಹಿತವಾದಾಗ ಸ್ವಾಭಾವಿಕವಾದ ವಿಶೇಷ ಎಂಬ ಗುಣ ಆದರಲ್ಲಿರುವುದರಿಂದ ಸೃಷ್ಟಿ ಮಾಡುವ ಇಚ್ಛೆ, ಸಂಹಾರ ಮಾಡುವ ಇಚ್ಛೆ ಮೊದಲಾದವುಗಳು ಉಪಪನ್ನವಾಗುತ್ತವೆ. ಈ ವಿಶೇಷದ ಬಲದಿಂದ ಇಚ್ಛೆಯು ನಿತ್ಯವಾದರೂ ಕೂಡ ಸೃಷ್ಟಿಸ್ಥಿತ್ಯಾದಿಗಳು ಕ್ರಮವಾಗಿ ನಡೆಯುತ್ತವೆ. ಮತ್ತು ಇಚ್ಛೆಯಲ್ಲಿ ಔಪಾಧಿಕವಾದ ಭೇದವನ್ನೂ ಕೂಡ ಅಂಗೀಕಾರ ಮಾಡಬೇಕಾಗಿಲ್ಲ.

### ವಿಶೇಷವನ್ನೊಪ್ಪದಿದ್ದರೆ ಪ್ರಾಪ್ತವಾಗುವ ಅನೇಕ ದೋಷಗಳು

**तत्वप्रदीपः – औपाधिकभेदस्य सत्यत्वे इच्छादेरनित्यत्वं बहुत्वं च । उपाधिभेदाद्भेदोपचारे सृष्टीच्छा संहारेच्छा घटज्ञानं पटज्ञानमित्यादि मिथ्या स्यात् । ततश्च सर्वज्ञत्वं सर्वस्य तदिच्छाधीनत्वं च नैव स्यात् । स्वतो विशेषाङ्गीकारे न कश्चिद्दोषः ।**

ತಾರ್ಕಿಕರು ಈಶ್ವರೇಚ್ಛೆಯಲ್ಲಿ ಔಪಾಧಿಕಭೇದವನ್ನು ಹೇಳುತ್ತಾರೆ. ಇದು ಸತ್ಯವೋ, ಮಿಥ್ಯವೋ ? ಸತ್ಯವೆಂದು ಹೇಳಿದರೆ ಈಶ್ವರೇಚ್ಛೆಯು ಅನಿತ್ಯವಾಯಿತು. ಮತ್ತು ಈಶ್ವರೇಚ್ಛೆಯು ಒಂದೇ ಅಲ್ಲ. ಅನೇಕವಿದೆ ಎಂದಂತಾಯಿತು. ಉಪಾಧಿಭೇದವಾದ್ದರಿಂದ ಮಿಥ್ಯಾಭೂತವೆಂದು ಹೇಳಿದರೆ ಸೃಷ್ಟಿ ಮಾಡುವ ಇಚ್ಛೆ, ಸಂಹಾರ ಮಾಡುವ ಇಚ್ಛೆ ಎಲ್ಲವೂ ಮಿಥ್ಯಾಭೂತವಾಯಿತು. ಇಚ್ಛಾಧೀನವಾಗಿ ಪ್ರಾಪ್ತವಾಗುವ ಘಟಜ್ಞಾನ-ಪಟಜ್ಞಾನಗಳೂ ಕೂಡ ಮಿಥ್ಯಾಭೂತವಾದವು. ಆಗ ಈಶ್ವರನಲ್ಲಿರುವ ಸಾರ್ವಜ್ಞ್ಯವೂ ಕೂಡ ಮಿಥ್ಯಾಭೂತವಾಯಿತು. ಎಲ್ಲವೂ ಕೂಡ ಈಶ್ವರೇಚ್ಛಾಧೀನ ಎಂದು ಹೇಳುವುದೂ ಕೂಡ ಮಿಥ್ಯಾಭೂತವಾಯಿತು. ಹೀಗೆ ಅನೇಕ ಅನುಪಪತ್ತಿಗಳು ಬರುತ್ತವೆ. ಆದಕ್ಕೋಸ್ಕರ ಈಶ್ವರೇಚ್ಛೆಯು ಒಂದೇ ಆಗಿದೆ ಮತ್ತು ಸ್ವಾಭಾವಿಕವಾಗಿದೆ ಎಂದು ಅಂಗೀಕಾರ ಮಾಡಿ, ಆ ಈಶ್ವರೇಚ್ಛೆಯಲ್ಲಿ ವಿಶೇಷ ಎಂಬ ಧರ್ಮವನ್ನು ಒಪ್ಪಬೇಕು. ಆಗ ತಾರ್ಕಿಕರಿಗೆ ಅಂಟುವ ಯಾವುದೇ ದೋಷಗಳು ಬರುವುದಿಲ್ಲ.

### ಇಚ್ಛೆಯು ಸ್ವಾಭಾವಿಕವೆನ್ನಲು ಪ್ರಮಾಣಗಳ ಆಧಾರ

**तत्वप्रदीपः – वेदेनैव चायमिच्छादिः स्वाभावाकोऽङ्गीक्रियते - ''सोऽभिध्या स जूतिः स प्रज्ञा'' ''गुणक्रियादयो विष्णोः स्वरूपं नान्यदिष्यते'' ''स्वाभाविकी ज्ञानबलक्रिया च'' इत्यादिना । इच्छाज्ञानवत्क्रियाया अपि नित्यत्वं विशेषादेवोपपद्यते । तैरपि नित्यप्रयत्नशब्देन नित्यक्रियाप्युच्यते ''कृतिः प्रयत्न'' इति तल्लक्षणं ब्रुवाणैः। 'स्रष्टाऽस्मि' इतीच्छादिः कुतः संहर्ताऽस्मीतीच्छादिर्भवेद्विशेषादृते ।**

ಈಶ್ವರೇಚ್ಛೆಯು ಸ್ವಾಭಾವಿಕವೇ ಹೊರತು, ಔಪಾಧಿಕವಲ್ಲ ಎಂಬುದು ವೇದದಿಂದಲೂ ಸಿದ್ಧವಾಗಿದೆ. 'ಸೋಽಭಿಧ್ಯಾ ಸ ಜೂತಿಃ ಸ ಪ್ರಜ್ಞಾ' 'ಗುಣಕ್ರಿಯಾದಯೋ ವಿಷ್ಣೋಃ ಸ್ವರೂಪಂ ನಾನ್ಯದಿಷ್ಯತೇ' 'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ ಈಶ್ವರೇಚ್ಛೆಯು ಈಶ್ವರನ ಸ್ವರೂಪವಾಗಿದೆ ಮತ್ತು ಸ್ವಾಭಾವಿಕವಾಗಿವೆ ಎಂದು ಸಿದ್ಧವಾಗುತ್ತದೆ.

ಇಚ್ಛೆ ಹಾಗೂ ಜ್ಞಾನವು ಹೇಗೆ ನಿತ್ಯವಾಗಿದೆಯೋ, ಅದರಂತೆ ಈಶ್ವರನಲ್ಲಿರುವ ಕ್ರಿಯೆಯೂ ಕೂಡ ನಿತ್ಯವಾಗಿದೆ. ಇದನ್ನೂ ಸಹ ವಿಶೇಷಬಲದಿಂದಲೇ ನಿರ್ವಾಹ ಮಾಡಬೇಕು. ತಾರ್ಕಿಕರೂ ಕೂಡ ಈಶ್ವರನಲ್ಲಿ ನಿತ್ಯಪ್ರಯತ್ನವಿದೆ ಎನ್ನುತ್ತಾರೆ. ನಿತ್ಯಪ್ರಯತ್ನ ಎಂದರೆ 'ನಿತ್ಯಕ್ರಿಯೆ' ಎಂದರ್ಥ. 'ಕೃತಿಃ ಪ್ರಯತ್ನಾ' ಎಂಬುದಾಗಿ ಪ್ರಯತ್ನದ ಲಕ್ಷಣವನ್ನು ಅವರೇ ಹೇಳುತ್ತಾರೆ. ಒಂದು ವೇಳೆ ವಿಶೇಷವನ್ನೇ ಒಪ್ಪದಿದ್ದರೆ 'ಸ್ರಷ್ಟಾ ಅಸ್ಮಿ' 'ಸೃಷ್ಟಿ ಮಾಡುತ್ತೇನೆ'. 'ಸಂಹರ್ತಾ ಅಸ್ಮಿ' ಸಂಹಾರ ಮಾಡುತ್ತೇನೆ ಇತ್ಯಾದಿ ಇಚ್ಛೆಗಳು ಹೇಗೆ ತಾನೇ ಬರಲು ಸಾಧ್ಯ ?

### ಕರ್ತೃವಾದವನೇ ಭೋಕ್ತೃವಾಗಿದ್ದಾನೆ

**तत्वप्रदीपः – ननु सृष्टीच्छा संहारकालेऽस्ति वा नवा । अस्ति चेत्कथं संहारः, नास्ति चेत्कथं नित्येच्छादिः स्यात् । उच्यते, नायं दोषः ।**

**तत्तत्कालवर्तित्वादिविशेषवदुपपत्तेः । पूर्वकालवर्त्येव हीश्वर उत्तरकालवर्ती । कर्तैव चाऽत्मा भोक्ता भवति ।**

ಸೃಷ್ಟಿ ಮಾಡುವ ಇಚ್ಛೆಯು ಸಂಹಾರ ಕಾಲದಲ್ಲಿ ಇದೆಯೋ, ಇಲ್ಲವೋ? ಇದೆ ಎಂದು ಹೇಳಿದರೆ ಸಂಹಾರ ಹೇಗಾಗುತ್ತದೆ ? ಇಲ್ಲವೆಂದು ಹೇಳಿದರೆ ಇಚ್ಛೆಯು ನಿತ್ಯವೆಂದು ಹೇಗಾಗುತ್ತದೆ ?

ಈ ಪ್ರಶ್ನೆಯು ಅಯುಕ್ತ. ನಿಮಗೆ ಬರುವ ದೋಷ ನಮಗೆ ಬರುವುದಿಲ್ಲ. ಏಕೆಂದರೆ ಆಯಾಕಾಲದಲ್ಲಿ ಈಶ್ವರೇಚ್ಛೆಯಲ್ಲಿರುವ ವಿಶೇಷವೇ ಈ ಸಮಸ್ಯೆಯನ್ನು ಪರಿಹರಿಸುತ್ತದೆ. ಪೂರ್ವಕಾಲದಲ್ಲಿರುವ ಈಶ್ವರೇಚ್ಛೆಯೇ ಉತ್ತರಕಾಲದಲ್ಲೂ ಕೂಡ ಇದೆ. ಜಗತ್ ಕರ್ತೃವಾಗಿರುವ ಈಶ್ವರನೇ ಜಗತ್‌ಭೋಕ್ತೃವೂ ಕೂಡ ಆಗುತ್ತಾನೆ.

ಕಾಲ, ಇಚ್ಛೆ ಎಲ್ಲದರಲ್ಲೂ ವಿಶೇಷವನ್ನು ಅಂಗೀಕರಿಸಬೇಕು

**तत्वप्रदीपः – न चेश्वरत्वमपि निर्विशेषं दृश्यते । तत्तदीशितव्यविषयत्वात् । स्वत एव काले भेदाङ्गीकृतेश्च सम्प्रति सृजामि पश्चात्संहरिष्यामीत्यादि विशेषेच्छादिकमुपपद्यते । औपाधिकभेदः कालेऽप्युक्तरीत्या निरस्तः । कश्चोपाधिः कालभेदकः । आदित्यगतिरपि नानवच्छिन्ना देशमात्रावच्छिन्ना वा कालावच्छेदिका । व्यभिचारादसम्भवाच्च । नापि कालभेदावच्छिन्ना । इतरेतराश्रयप्रसङ्गात् । अतः स्वत एव कालस्य भेदोऽङ्गीकर्तव्यः । अतश्च काले काले विशेषाङ्गीकृतेरिच्छादौ न कश्चिद्दोषः ।**

ಇಚ್ಛೆಯಂತೆ ಈಶ್ವರತ್ವವೂ ಕೂಡ ಸವಿಶೇಷವೇ ಆಗಿದೆ. ನಿರ್ವಿಶೇಷವಲ್ಲ. ಆಯಾ ಪದಾರ್ಥಗಳ ಪ್ರಭುತ್ವದಲ್ಲಿ ವ್ಯತ್ಯಾಸವಿರುವುದರಿಂದ ಈಶ್ವರತ್ವದಲ್ಲೂ ಕೂಡ ವಿಶೇಷವನ್ನು ಒಪ್ಪಬೇಕು. ಮತ್ತು ಕಾಲದಲ್ಲಿ ಸ್ವಾಭಾವಿಕವಾಗಿ ಭೇದವಿರುತ್ತದೆಂದು ಅಂಗೀಕರಿಸಿದ್ದೇವೆ. ಆದ್ದರಿಂದ 'ಈಗ ಸೃಷ್ಟಿಯನ್ನು ಮಾಡುತ್ತೇನೆ. ಅನಂತರ ಸಂಹಾರ ಮಾಡುತ್ತೇನೆ' ಇತ್ಯಾದಿಯಾಗಿ ವಿಶೇಷವಿಷಯಕವಾದ ಇಚ್ಛೆಯು ಉಪಪನ್ನವಾಗುತ್ತವೆ.

ತಾರ್ಕಿಕರು ಕಾಲದಲ್ಲಿ ಔಪಾಧಿಕಭೇದವನ್ನು ಒಪ್ಪಿದ್ದಾರೆ, ಅದನ್ನೂ ಕೂಡ ಈಗ ನಿರಾಕರಣೆ ಮಾಡಿದಂತಾಯಿತು. ಕಾಲದಲ್ಲಿ ಭೇದವನ್ನು ಉಂಟುಮಾಡುವ ಆ ಉಪಾಧಿ ಯಾವುದು ? ಆದಿತ್ಯಗತಿಯೇ ಉಪಾಧಿಯೆಂದು ಹೇಳಬೇಕು. ಆದರೆ ಈ ಆದಿತ್ಯಗತಿಯು ನಿರವಚ್ಛಿನ್ನವಾಗಿದೆ. ಅಥವಾ ಕೇವಲ ದೇಶಾವಚ್ಛಿನ್ನವಾಗಿ ಕಾಲಭೇದಕವಾಗಲು ಸಾಧ್ಯವಿಲ್ಲ. ಹಾಗಾದಲ್ಲಿ ವ್ಯಭಿಚಾರ ಬರುತ್ತದೆ. ಮತ್ತು ಅಸಂಭಾವಿತವೂ ಆಗಿದೆ. ಕಾಲಭೇದಾವಚ್ಛಿನ್ನವಾಗಿ ಕಾಲದಲ್ಲಿ ಭೇದವನ್ನುಂಟುಮಾಡುತ್ತದೆ ಎಂದು ಹೇಳಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಹಾಗಾಗಿ ಸ್ವಾಭಾವಿಕವಾಗಿಯೇ ಕಾಲದಲ್ಲಿ ಭೇದವನ್ನು ಅಂಗೀಕಾರ ಮಾಡಬೇಕು. ಆದ್ದರಿಂದ ಪ್ರತಿಯೊಂದು ಕಾಲದಲ್ಲೂ ವಿಶೇಷವನ್ನು ಅಂಗೀಕಾರ ಮಾಡುವುದರಿಂದ ಎಲ್ಲಾ ಸಮಸ್ಯೆಗಳು ಪರಿಹಾರವಾಗುತ್ತವೆ. ಇಚ್ಛಾದಿಗಳಲ್ಲೂ ಕೂಡ ವಿಶೇಷವನ್ನು ಅಂಗೀಕಾರ ಮಾಡಬೇಕು. ಆಗ ಯಾವುದೇ ದೋಷಗಳಿಗೆ ಅವಕಾಶವಿರುವುದಿಲ್ಲ.

## ತತ್ವಪ್ರಕಾಶಿಕಾ

### ನಿಮಿತ್ತಕಾರಣದ ನಿರಾಕರಣೆ

**तत्वप्रकाशिका – एवमसमवायिकारणं निरस्य निमित्तकारणनिरासाय सूत्रमुपन्यस्य व्याचष्टे – उभयथेति ।। सर्वकार्याणामीश्वरेच्छानिमित्तं चेत् तत्र प्रष्टव्यम् । किमीश्वरेच्छा नित्याऽनित्या वेति ।**

ಹಿಂದಿನ ಸೂತ್ರದಲ್ಲಿ ತಾರ್ಕಿಕರ ಅಸಮವಾಯಿಕಾರಣವನ್ನು ನಿರಾಕರಣೆ ಮಾಡಿದ್ದಾಯಿತು. ಈಗ ನಿಮಿತ್ತಕಾರಣವನ್ನು ನಿರಾಕರಣೆ ಮಾಡುವುದಕ್ಕಾಗಿ 'ಉಭಯಥಾಽಪಿ' ಎಂದು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಸಕಲಕಾರ್ಯಗಳಿಗೆ ಈಶ್ವರನ ಇಚ್ಛೆಯು ನಿಮಿತ್ತಕಾರಣ ಎಂದು ತಾರ್ಕಿಕರು ಹೇಳುತ್ತಾರೆ. ಇವರನ್ನು ಕುರಿತು ನಾವು ಪ್ರಶ್ನಿಸುತ್ತೇವೆ. ಈಶ್ವರನ ಇಚ್ಛೆಯು ನಿತ್ಯವೋ ಅನಿತ್ಯವೋ ? ಎಂದು.

## ಭಾವದೀಪ

**भावदीपः – ।। उभयथापि न कर्मातस्तदभावः ।। १२ ।।** ईश्वरेच्छाया नित्यत्वादिना दूषणोक्तेः सङ्गत्यर्थमाह **– सर्वकार्याणामिति ।।**

ಈಶ್ವರೇಚ್ಛೆಯು ನಿತ್ಯವಾದರೆ ಬರುವ ದೋಷವನ್ನು ಭಾಷ್ಯದಲ್ಲಿ ಹೇಳಿದ್ದಾರೆ. ಅದಕ್ಕೆ ಸಂಗತಿಯನ್ನು ತೋರಿಸುವುದಕ್ಕಾಗಿ 'ಸರ್ವಕಾರ್ಯಾಣಾಮ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

## ಕಾರಣವಿದ್ದು ಕಾರ್ಯವಾಗದಿರಲು ಸಾಧ್ಯವಿಲ್ಲ

**तत्वप्रकाशिका – नाद्यः, सत्यामपीश्वरेच्छायां प्रलये परमाणुचेष्टाभावेनान्यदाऽपि तस्यास्तदभावापातात् । तथा च द्व्यणुकादिकार्याभावः स्यात् । सति कारणे कार्यानुत्पादे तस्य कारणत्वायोगात् ।**

ಮೊದಲನೆಯ ಪಕ್ಷ ತಪ್ಪು. ಈಶ್ವರನ ಇಚ್ಛೆ ಇದ್ದರೂ ಕೂಡ ಪ್ರಳಯಕಾಲದಲ್ಲಿ ಪರಮಾಣುಗಳಲ್ಲಿ ಚೇಷ್ಟೆಯು ಇರುವುದಿಲ್ಲ. ಆಗ ಈಶ್ವರನ ಇಚ್ಛೆಯು ಕಾರಣವಾಗದಿದ್ದರೆ ಬೇರೆ ಸಮಯದಲ್ಲೂ ಕೂಡ ಈಶ್ವರನ ಇಚ್ಛೆಯು ಕಾರಣವಾಗುವುದು ಬೇಡ. ಹೀಗೆ ಈಶ್ವರನ ಇಚ್ಛೆಯಿಂದ ಪರಮಾಣುಕ್ರಿಯೆ ಎಂಬುದೇ ಇಲ್ಲದೆ ಇರಬೇಕಾಗುತ್ತದೆ. ಇದರಿಂದ ದ್ವ್ಯಣುಕಾದಿಕಾರ್ಯಗಳೂ ಕೂಡ ಇಲ್ಲದೆ ಇರಬೇಕಾಗುತ್ತವೆ. ಕಾರಣವಿದ್ದಾಗಲೂ ಕಾರ್ಯವು ಉತ್ಪತ್ತಿ ಆಗದಿದ್ದರೆ ಆ ಕಾರಣಕ್ಕೆ ಕಾರಣತ್ವವೇ ಅಯುಕ್ತವಾಗುತ್ತದೆ.

**भावदीपः –** तद्भावेऽपीत्यस्यार्थः ।। **सत्यामपीश्वरेच्छायामिति ।।** नेदानीमपीत्यादेरर्थः ।। **अन्यदापीति ।।** इष्टापत्तिमाशङ्क्य कार्याभाव इत्यग्रेतमत्रापि योजयति **– तथा चेति ।।** अन्यदापि तस्याः तदभाव इत्यत्र हेतुमाह **– सति कारण इति ।।**

ಭಾಷ್ಯದಲ್ಲಿರುವ 'ತದ್ಭಾವೇಽಪಿ' ಎಂಬ ಪದಕ್ಕೆ 'ಸತ್ಯಾಮಪೀಶ್ವರೇಚ್ಛಾಯಾಮ್' ಇತ್ಯಾದಿ ವಾಕ್ಯವು ವ್ಯಾಖ್ಯಾನ ಮಾಡುತ್ತಿದೆ. 'ನೇದಾನೀಮಪಿ' ಇತ್ಯಾದಿ ಭಾಷ್ಯದ ಅರ್ಥವನ್ನು 'ಅನ್ಯದಾಪಿ' ಇತ್ಯಾದಿಯಾಗಿ ಹೇಳಿರುತ್ತಾರೆ. ಇಷ್ಟಾಪತ್ತಿಯನ್ನು ಆಶಂಕಿಸಿ ಕಾರ್ಯವೇ ಆಗದಿರಬೇಕಾದೀತು ಎಂದು ಮುಂದೆ

ಹೇಳುವುದನ್ನು ಇಲ್ಲೂ ಕೂಡ ಯೋಜನೆ ಮಾಡಿಕೊಳ್ಳಬೇಕೆಂದು 'ತಥಾ ಚ' ಇತ್ಯಾದಿ ವಾಕ್ಯವು ನಿರೂಪಣೆ ಮಾಡುತ್ತಿದೆ. ಬೇರೆ ಕಾಲದಲ್ಲೂ ಕೂಡ ಈಶ್ವರನ ಇಚ್ಛೆಯು ಕಾರಣವಾಗುವುದು ಬೇಡ ಎಂಬ ವಿಷಯದಲ್ಲಿ ಹೇತುವನ್ನು 'ಸತಿ ಕಾರಣೇ' ಇತ್ಯಾದಿ ವಾಕ್ಯದಿಂದ ನಿರೂಪಣೆ ಮಾಡುತ್ತಿದ್ದಾರೆ.

ಈಶ್ವರೇಚ್ಛೆಗೆ ಯಾವುದು ಕಾರಣ ?

**तत्वप्रकाशिका – न द्वितीयः । तथा सति तस्याः कार्यत्वेन निमित्तमपेक्षितं स्यात् । न च तदस्ति । तदुत्पत्तावीश्वरेच्छाया अनपेक्षायामन्यत्रापि तत्प्रसङ्गः । पूर्वेच्छा निमित्तमिति चेन्न । प्रमाणाभावात्। अतोऽनित्यत्वे तदभावेनेश्वरेच्छातः परमाणुकर्माभावान्न द्व्यणुकाद्युत्पत्तिः स्यात् ।**

ಎರಡನೆಯ ಪಕ್ಷವು ತಪ್ಪು. ಈಶ್ವರನ ಇಚ್ಛೆಯು ಅನಿತ್ಯವಾದರೆ ಅದೂ ಕೂಡ ಕಾರ್ಯವೇ ಆಯಿತು. ಆಗ ಅದಕ್ಕೆ ಮತ್ತೊಂದು ನಿಮಿತ್ತಕಾರಣವನ್ನು ಹೇಳಬೇಕಾಗುತ್ತದೆ. ಆದರೆ ಅದಕ್ಕೆ ಮತ್ತೂಂದು ನಿಮಿತ್ತಕಾರಣ ಇರುವುದಿಲ್ಲ. ಈಶ್ವರನ ಇಚ್ಛೆಯು ಉತ್ಪತ್ತಿಯಾಗಲು ಮತ್ತೊಂದು ನಿಮಿತ್ತಕಾರಣವು ಅನಾವಶ್ಯಕ ಎನ್ನುವುದಾದರೆ ಬೇರೆ ಕಡೆಯೂ ಹಾಗೆಯೇ ಹೇಳಬಹುದು. ಮುಂದಿನ ಈಶ್ವರನ ಇಚ್ಛೆಗೆ ಹಿಂದಿನ ಈಶ್ವರನ ಇಚ್ಛೆಯು ಕಾರಣವೆಂದು ಹೇಳಲು ಯಾವುದೇ ಪ್ರಮಾಣವಿರುವುದಿಲ್ಲ. ಒಂದುವೇಳೆ ಈಶ್ವರನ ಇಚ್ಛೆ ಅನಿತ್ಯವೆಂದು ಹೇಳಿದರೆ ಈಶ್ವರನಿಗೆ ಇಚ್ಛೆಯೇ ಇಲ್ಲವೆಂದಂತಾಯಿತು. ಆಗ ಈಶ್ವರನ ಇಚ್ಛೆಯಿಂದ ಪರಮಾಣುಗಳಲ್ಲಿ ಕರ್ಮವನ್ನು ಹೇಳಲು ಬರುವುದಿಲ್ಲ. ಇದರಿಂದ ದ್ವ್ಯಣುಕಾದಿ ಕಾರ್ಯಗಳು ಉತ್ಪನ್ನ ಆಗದೆ ಇರಬೇಕಾಗುತ್ತದೆ.

**भावदीपः** – अनित्यत्व इत्यादि व्याचष्टे – **न द्वितीय इति ।।** अत इत्यस्य ईश्वरेच्छाया अभावादिति ईश्वरेच्छात इति चार्थद्वयमुपेत्यात इत्यादि व्याचष्टे – **अतो अनित्यत्व इति ।।**

'ಅನಿತ್ಯತ್ವೇ' ಇತ್ಯಾದಿ ಭಾಷ್ಯದ ವಾಕ್ಯವನ್ನು 'ನ ದ್ವಿತೀಯಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. 'ಅತಃ' ಎಂಬುದಕ್ಕೆ ಈಶ್ವರೇಚ್ಛೆಯು ಇಲ್ಲದ ಕಾರಣ ಮತ್ತು ಈಶ್ವರ ಇಚ್ಛೆಯಿಂದ ಎಂಬುದಾಗಿ ಎರಡು

ಅರ್ಥವನ್ನು ಅಂಗೀಕಾರ ಮಾಡಿ, 'ಅತಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಲು 'ಅತೋ ಅನಿತ್ಯತ್ವೇ' ಇತ್ಯಾದಿ ವಾಕ್ಯವು ಹೊರಟಿದೆ.

### ಸಿದ್ಧಾಂತಿಗಳಿಗೆ ದೋಷಸಾಮ್ಯವಿಲ್ಲ

**तत्वप्रकाशिका – अतो द्वेधाऽपि दुष्टत्वान्नेश्वरेच्छा निमित्तमिति भावः । अत्र परिमाणाभिधानसन्निधापितं द्व्यणुकादिकं तदिति परामृशति । ईश्वरेच्छाया नित्यत्वनिमित्तत्वयोरभ्युपगमात् समं भवतामेतद्दूषणमित्यत आह – वैदिकेति ।।**

ಹೀಗೆ ಎರಡು ಪಕ್ಷಗಳೂ ಕೂಡ ದುಷ್ಟವಾಗಿರುವುದರಿಂದ ಈಶ್ವರನ ಇಚ್ಛೆಗೆ ನಿಮಿತ್ತವನ್ನು ಒಪ್ಪಲು ಬರುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ. ಸೂತ್ರದಲ್ಲಿ ಪರಿಮಾಣವನ್ನು ಹೇಳುವಾಗ ಸನ್ನಿಹಿತವಾದ ದ್ವ್ಯಣುಕಾದಿಕಾರ್ಯಗಳನ್ನು ತತ್ ಎಂಬ ಪದದಿಂದ ಪರಾಮರ್ಶ ಮಾಡಬೇಕು. ಈಶ್ವರನ ಇಚ್ಛೆಯು ನಿತ್ಯವಾಗಿದೆ. ಹಾಗೂ ಪ್ರತಿಯೊಂದು ಕಾರ್ಯಗಳಿಗೆ ನಿಮಿತ್ತವಾಗಿದೆ ಎಂದು ಒಪ್ಪಿರುವುದರಿಂದ ಸಿದ್ಧಾಂತಿಗಳಿಗೂ ಕೂಡ ಈ ದೋಷಗಳು ಸಮಾನವಲ್ಲವೆ ? ಎಂಬ ಪ್ರಶ್ನೆಗೆ 'ವೈದಿಕೇಶ್ವರಸ್ಯ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**भावदीपः** – तावता किं प्रकृत इत्यत आह – **अत इति** ।। तस्यैव विवरणम् ।। **द्वेधापि दुष्टत्वादिति** ।। तदभाव इति सूत्रस्थतच्छब्दस्याप्रकृतपरत्वशङ्कां निरस्यति – **अत्र परिमाणाभिधानेति** ।। तेन भाष्ये कार्याभाव इति व्याख्यानं युक्तमिति भावः ।

ಅದನ್ನೇ ವಿವರಿಸಲು 'ದ್ವೇಧಾಪಿ ದುಷ್ಟತ್ವಾತ್' ಇತ್ಯಾದಿ ವಾಕ್ಯವು ಹೊರಟಿದೆ. 'ತದಭಾವಃ' ಎಂಬ ಸೂತ್ರದಲ್ಲಿರುವ ತತ್ ಶಬ್ದವು ಅಪ್ರಕೃತವಾದದ್ದನ್ನು ಪರಾಮರ್ಶ ಮಾಡುತ್ತಿದೆ ಎಂಬ ಆಶಂಕೆಯ ಪರಿಹಾರಕ್ಕಾಗಿ 'ಅತ್ರ ಪರಿಮಾಣಾಭಿಧಾನ' ಇತ್ಯಾದಿ ವಾಕ್ಯವು ಹೊರಟಿದೆ. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿ 'ಕಾರ್ಯಾಭಾವಃ' ಎಂಬುದನ್ನು ವ್ಯಾಖ್ಯಾನ ಮಾಡಿದಂತಾಯಿತು.

## ಸಿದ್ಧಾಂತಿಗಳು ಈಶ್ವರನಲ್ಲಿ ಅಚಿಂತ್ಯಶಕ್ತಿ ಒಪ್ಪಿದ್ದೇವೆ

**तत्वप्रकाशिका – नायमस्मत्पक्षे दोषः । सत्यामपीश्वरेच्छायां कार्यानुत्पादादेव सर्वस्येश्वराचिन्त्यशक्तित एवोपपत्तेः । सा च 'पराऽस्य शक्तिर्विविधैव श्रूयते' इत्यादि श्रुतिसिद्धा ।**

ಸಿದ್ಧಾಂತಿಗಳ ಪಕ್ಷದಲ್ಲಿ ಯಾವುದೇ ದೋಷವಿಲ್ಲ. ಈಶ್ವರನ ಇಚ್ಛೆಯು ಇದ್ದರೂ ಕೂಡ ಕಾರ್ಯದ ಉತ್ಪತ್ತಿ ಆಗದಿರಬಹುದು. ಇದೆಕ್ಕೆಲ್ಲ ಈಶ್ವರನ ಅಚಿಂತ್ಯಶಕ್ತಿಯೇ ಕಾರಣವೆಂದು ನಾವು ಹೇಳುತ್ತೇವೆ. ಈಶ್ವರನಿಗೆ ಈ ಅಚಿಂತ್ಯಶಕ್ತಿಯು 'ಪರಾऽಸ್ಯಶಕ್ತಿರ್ವಿವಿಧೈವ ಶ್ರೂಯತೇ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ.

## ವೈಶೇಷಿಕರು ಈಶ್ವರನಲ್ಲಿ ಅಚಿಂತ್ಯಶಕ್ತಿಯನ್ನು ಒಪ್ಪಿಲ್ಲ

**तत्वप्रकाशिका – न च परपक्षे सममेतत् । तेनानुमानमात्रेणेश्वरमभ्युपगच्छता तस्याचिन्त्यशक्त्यनङ्गीकारादिति भावः । इतश्च नायं दोषोऽस्मत्पक्ष इत्याह – स्वत एवेति ।।**

ಪರಪಕ್ಷದಲ್ಲೂ ಕೂಡ ಈ ಸಮಾಧಾನವನ್ನು ಸಮಾನ ಎಂದು ಹೇಳಬಾರದು. ಅನುಮಾನ ಮಾತ್ರದಿಂದ ಈಶ್ವರನನ್ನು ಸಾಧಿಸುವ ಅವನು ಅಚಿಂತ್ಯ (ವೈಶೇಷಿಕ) ಶಕ್ತಿಯನ್ನು ಈಶ್ವರನಲ್ಲಿ ಸರ್ವಥಾ ಒಪ್ಪಲಾರನು. ಮತ್ತೊಂದು ಕಾರಣದಿಂದಲೂ ಸಿದ್ಧಾಂತದಲ್ಲಿ ಈ ದೋಷವು ಬರುವುದಿಲ್ಲ ಎಂಬುದನ್ನು 'ಸ್ವತಃ ಏವ' ಇತ್ಯಾದಿ ಭಾಷ್ಯದಿಂದ ಹೇಳುತ್ತಿದ್ದಾರೆ.

**भावदीपः –** वैदिकपदव्यावर्त्यमाह– **न च परपक्ष इति ।।**

ವೈದಿಕಪದದಿಂದ ವ್ಯಾವರ್ತ್ಯವಾದದ್ದನ್ನು 'ನ ಚ ಪರಪಕ್ಷ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಈಶೇಚ್ಛೆಯ ಜೊತೆ ಕಾಲವಿಶೇಷವೂ ನಿಮಿತ್ತ ಕಾರಣ

**तत्वप्रकाशिका – नेश्वरेच्छामात्रं निमित्तं येन प्रलयेऽपि कार्योत्पत्तिप्रसङ्गः। किं तु कालोऽपि । न चास्ति प्रलये सोऽपीति वाच्यम् । कालविशेषस्य सृष्टिकालस्याभावात् ।**

ಈಶ್ವರನ ಇಚ್ಛೆಯಷ್ಟೇ ಜಗದುತ್ಪತ್ತಿಗೆ ನಿಮಿತ್ತಕಾರಣವಲ್ಲ. ಹಾಗೆ ನಾವು ಒಪ್ಪಿದ್ದಲ್ಲಿ ಪ್ರಳಯದಲ್ಲೂ ಕೂಡ ಸಕಲಕಾರ್ಯಗಳು ಉತ್ಪನ್ನವಾಗಲಿ ಎಂಬ ಅತಿಪ್ರಸಂಗವು ಬರುತ್ತಿತ್ತು. ಮತ್ತೇನೆಂದರೆ ಕಾಲವೂ ಕೂಡ ನಿಮಿತ್ತಕಾರಣವಾಗಿದೆ. ಪ್ರಳಯಕಾಲದಲ್ಲೂ ಕೂಡ ಕಾಲವು ಇದೆಯಲ್ಲವೆ? ಎಂದು ಪ್ರಶ್ನಿಸಬಾರದು. ಕೇವಲ ಕಾಲವು ಸೃಷ್ಟಿಗೆ ಕಾರಣವಲ್ಲ. ಕಾಲವಿಶೇಷವನ್ನು ಕಾರಣವೆನ್ನುತ್ತೇವೆ. ಕಾಲವಿಶೇಷವೆಂದರೆ ಸೃಷ್ಟಿಕಾಲವೆಂಬ ಕಾಲವಿಶೇಷ ಎಂದರ್ಥ. ಇದು ಪ್ರಳಯಕಾಲದಲ್ಲಿ ಇಲ್ಲದ್ದರಿಂದ ಅತಿಪ್ರಸಂಗವಿಲ್ಲ

ಕಾಲದಲ್ಲಿ ವಿಶೇಷ ವೈಶೇಷಿಕರು ಒಪ್ಪಿಲ್ಲ

**तत्वप्रकाशिका – न चैतदन्यमतेऽपि समम् । अस्माभिः काले स्वाभाविक सृष्टिकालत्वादिविशेषाणामङ्गीकृतत्वेन तदुपपत्तेः ।**

ವೈಶೇಷಿಕರ ಮತದಲ್ಲೂ ಈ ಉತ್ತರವು ಸಮಾನವಲ್ಲ. ಏಕೆಂದರೆ ಕಾಲದಲ್ಲಿ ನಾವು ಸ್ವಾಭಾವಿಕವಾಗಿಯೇ ಸೃಷ್ಟಿಕಾಲತ್ವವೆಂಬ ವಿಶೇಷವನ್ನು ಅಂಗೀಕರಿಸಿದ್ದೇವೆ. ಆದ್ದರಿಂದ ಪ್ರಳಯಕಾಲದಲ್ಲಿ ಸಕಲಕಾರ್ಯಗಳು ಉತ್ಪನ್ನವಾಗಲಿ ಎಂಬ ಆಪಾದನೆಯನ್ನು ತತ್ವವಾದಿಗಳನ್ನು ಕುರಿತು ಮಾಡಲು ಸಾಧ್ಯವಿಲ್ಲ.

**भावदीपः** – स्वत एवेतिपदव्यावर्त्यमाह । न चैतदन्यमतेऽपि सममिति। एवमग्रेऽपि॥

ಭಾಷ್ಯದಲ್ಲಿರುವ 'ಸ್ವತ ಏವ' ಎಂಬ ಪದದಿಂದ ವ್ಯಾವರ್ತ್ಯವಾದದ್ದನ್ನು 'ನ ಚೈತತ್ ಅನ್ಯಮತೇऽಪಿ ಸಮಮ್' ಎಂಬುದರಿಂದ ತಿಳಿಸಿದ್ದಾರೆ. ಹೀಗೆ ಮುಂದೂ ಕೂಡ ತಿಳಿಯಬೇಕು.

ವಿವರಣೆ - ಪ್ರಳಯಕಾಲದಲ್ಲೂ ಕೂಡ ಘಟಪಟಾದಿಗಳ ಸೃಷ್ಟಿ ಉಂಟಾಗಲಿ ಎಂಬ ಆಪತ್ತಿಯನ್ನು ಪರಿಹರಿಸಿಕೊಳ್ಳಲು ತಾರ್ಕಿಕರು ಈಶ್ವರೇಚ್ಛೆಯ ಜೊತೆ ಕಾಲವು ಕೂಡ ಕಾರಣವೆನ್ನುತ್ತಾರೆ. ಈಶ್ವರೇಚ್ಛೆ ಇದ್ದರೂ ಸೃಷ್ಟಿಕಾಲವಿಶೇಷ ಎಂಬ ಮತ್ತೊಂದು ನಿಮಿತ್ತಕಾರಣ ಇಲ್ಲದ ಕಾರಣ ಪ್ರಳಯಕಾಲದಲ್ಲಿ ಘಟಪಟಾದಿಗಳ ಸೃಷ್ಟಿಯಾಗಲಿ ಎಂಬ ಆಪತ್ತಿ ಬರುವುದಿಲ್ಲ ಎಂಬುದು ತಾರ್ಕಿಕರ ಸಮಾಧಾನ. ಆದರೆ 'ನ ಹಿ ಕಾಲ ವಿಶೇಷಸ್ತತ್ ಪಕ್ಷೇ' ಎಂಬ ಅನುವ್ಯಾಖ್ಯಾನದ ಮಾತಿನಂತೆ ತಾರ್ಕಿಕರು ಕಾಲದಲ್ಲಿ ವಿಭಾಗವನ್ನು

ಒಪ್ಪಿರುವುದಿಲ್ಲ. ಆದ್ದರಿಂದ ಅತಿಪ್ರಸಂಗವು ತಾರ್ಕಿಕರಿಗೆ ಬಂದೇ ಬರುತ್ತದೆ. ನಮ್ಮ ಮತದಲ್ಲಿ ಕಾಲದಲ್ಲಿ ಸ್ವಾಭಾವಿಕವಾಗಿಯೇ ಸೃಷ್ಟಿಕಾಲತ್ವಾದಿ ವಿಶೇಷಗಳನ್ನು ಒಪ್ಪಿರುವುದರಿಂದ ಪ್ರಳಯಕಾಲದಲ್ಲಿ ಘಟಾದ್ಯುತ್ಪತ್ತಿಪ್ರಸಂಗವು ಬರುವುದಿಲ್ಲ. (ವಾಕ್ಯಾರ್ಥಮುಕ್ತಾವಳಿ)

### ಕಾಲವು ಔಪಾಧಿಕವೆನ್ನುವ ತಾರ್ಕಿಕರಿಗೆ ಅನ್ಯೋನ್ಯಾಶ್ರಾಯ

**तत्वप्रकाशिका – परेण पुनः सृष्ट्याद्युपाधित एव कालविशेषस्याङ्गीकृतत्वात्। सृष्टिमन्तरेण सृष्टिकालानुपपत्तिः । सृष्टिकालमन्तरेण तदनुपपत्तिरित्यन्योन्याश्रयापातादिति भावः ।**

ತಾರ್ಕಿಕರು ಕಾಲದಲ್ಲಿ ಸೃಷ್ಟಿ ಮೊದಲಾದ ಉಪಾಧಿನಿಮಿತ್ತದಿಂದಲೇ ಕಾಲವಿಶೇಷವನ್ನು ಅಂಗೀಕರಿಸಿರುತ್ತಾರೆ. ಆದ್ದರಿಂದ ಸೃಷ್ಟಿಯಿಲ್ಲದೆ ಸೃಷ್ಟಿಕಾಲವೇ ಅನುಪಪನ್ನವಾಯಿತು. ಈಗ ಸೃಷ್ಟಿಗೋಸ್ಕರ ಸೃಷ್ಟಿಕಾಲತ್ವ ಎಂಬ ವಿಶೇಷವನ್ನು ಒಪ್ಪುತ್ತಿದ್ದರೆ. ಸೃಷ್ಟಿಯನ್ನು ಒಪ್ಪದೇ ಸೃಷ್ಟಿಕಾಲವು ಅನುಪಪನ್ನವಾಗುತ್ತದೆ. ಸೃಷ್ಟಿಕಾಲವು ಕೂಡದೆ ಸೃಷ್ಟಿಯು ಅನುಪಪನ್ನವಾಗುತ್ತದೆ. ಆದ್ದರಿಂದ ತಾರ್ಕಿಕರಿಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ.

ವಿವರಣೆ - ತಾರ್ಕಿಕರು ಕಾಲದಲ್ಲಿ ಸ್ವಾಭಾವಿಕವಿಶೇಷವನ್ನು ಒಪ್ಪದೇ ಔಪಾಧಿಕ ಭೇದವನ್ನು ಒಪ್ಪಿರುತ್ತಾರೆ. ಆದ್ದರಿಂದ ಸೃಷ್ಟಿಯಿಂದ ಸೃಷ್ಟಿಕಾಲ, ಸೃಷ್ಟಿಕಾಲದಿಂದ ಸೃಷ್ಟಿ ಎಂಬ ಅನ್ಯೋನ್ಯಾಶ್ರಯವು ಬರುತ್ತದೆ. ತತ್ವವಾದಿಗಳು ಕಾಲದಲ್ಲಿಯೇ ಸ್ವಾಭಾವಿಕ ವಿಶೇಷವನ್ನು ಒಪ್ಪಿರುವುದರಿಂದ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿಲ್ಲ.

### ಈಶ್ವರೇಚ್ಛೆಯು ನಿಮಿತ್ತವೆಂದಾಗ ನಮಗೆ ದೋಷವಿಲ್ಲ

**तत्वप्रकाशिका – ननु सत्यामपीश्वरेच्छायां सृष्टिकालाभावेन कार्योत्पादोपरमे सा मोघा स्यादिति चेत्तत्राप्याह – स्वत एवेति ।। नैष दोषः । तत्तत्काल एवेश्वरेच्छाया नित्याया अपि सृष्टिविषयत्वादिविशेषाविर्भावाभ्युपगमात् ।**

ಈಶ್ವರನ ಇಚ್ಛೆಯು ಇದ್ದರೂ ಕೂಡ ಸೃಷ್ಟಿಕಾಲವು ಇಲ್ಲದಿದ್ದಾಗ ಕಾರ್ಯವು ಉತ್ಪತ್ತಿಯಾಗದಿದ್ದರೆ ಈಶ್ವರೇಚ್ಛೆಯು ವ್ಯರ್ಥವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ 'ಸ್ವತಃ ಏವ' ಇತ್ಯಾದಿ

ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಈಶ್ವರನ ಇಚ್ಛೆಯು ವ್ಯರ್ಥವಾಗುತ್ತದೆಂಬ ದೋಷಕ್ಕೆ ಅವಕಾಶವಿಲ್ಲ. ಈಶ್ವರನ ಇಚ್ಛೆಯು ನಿತ್ಯವಾಗಿದ್ದರೂ ಸೃಷ್ಟಿಕಾಲವು ಪ್ರಾಪ್ತವಾದಾಗ ಮಾತ್ರ ಸೃಷ್ಟಿಗೆ ಸ್ವಾಭಾವಿಕಕಾರಣವಾಗುತ್ತದೆ. ಈ ಇಚ್ಛೆಯು ಸ್ವಾಭಾವಿಕವಿಶೇಷವನ್ನು ಹೊಂದಿರುವುದರಿಂದ ಅನಿತ್ಯವಾಗುತ್ತದೆಂಬ ಲಕ್ಷೇಪಕ್ಕೂ ಅವಕಾಶವಿಲ್ಲ.

### ಸಿದ್ಧಾಂತದಲ್ಲಿ ಕಾಲವಿಶೇಷಗಳು ಔಪಾಧಿಕವಲ್ಲ

**तत्वप्रकाशिका – न चान्यमतेऽप्येतत्समानम् । अस्माभिस्तद्विशेषाणामनौ- पाधिकत्वाङ्गीकारात् परेण सृष्ट्याद्युपाधिनिबन्धनत वाभ्युपगमात् । तथा चोक्तदोष इति भावः ।**

ತಾರ್ಕಿಕಮತದಲ್ಲಿ ಈ ಸಮಾಧಾನವನ್ನು ಸಮಾನವಾಗಿ ಹೇಳಲಾಗದು. ಏಕೆಂದರೆ ಈಶ್ವರನ ಇಚ್ಛಾವಿಶೇಷಗಳನ್ನು ನಾವು ಔಪಾಧಿಕವಲ್ಲವೆಂದು ಅಂಗೀಕರಿಸಿದ್ದೇವೆ. ಆದರೆ ತಾರ್ಕಿಕರು ಸೃಷ್ಟ್ಯಾದಿ ಈಶ್ವರೇಚ್ಛೆಯು ಉಪಾಧಿಗಳ ಅಧೀನವಾದ್ದರಿಂದ ಔಪಾಧಿಕವೆಂದು ಒಪ್ಪುತ್ತಾರೆ. ಆದ್ದರಿಂದ ಪ್ರಳಯಕಾಲದಲ್ಲೂ ಸೃಷ್ಟಿಯಾಗಲಿ ಎಂಬ ಅತಿಪ್ರಸಂಗವು ತಾರ್ಕಿಕರಿಗೆ ಮಾತ್ರ ಪ್ರಾಪ್ತವಾಯಿತು.

**भावदीपः – उक्तदोष इति ।।** अन्योन्याश्रयरूपदोष इत्यर्थः ।।

'ಉಕ್ತದೋಷಃ' ಎಂದರೆ ಅನ್ಯೋನ್ಯಾಶ್ರಯರೂಪವಾದ ದೋಷವು ಬರುತ್ತದೆಂದರ್ಥ.

ವಿವರಣೆ - 'ಸೃಷ್ಟಿಯನ್ನು ಮಾಡುತ್ತೇನೆ' ಎಂಬ ಇಚ್ಛೆಯನ್ನು ಪರಮಾತ್ಮನು ಪ್ರಳಯಕಾಲದಲ್ಲೂ ಮಾಡುತ್ತಾನೆ. ಆದರೆ ಸೃಷ್ಟಿಕಾಲವು ಇಲ್ಲದ ಕಾರಣ ಸೃಷ್ಟಿಯಾಗುವುದಿಲ್ಲ ಎಂದು ಉತ್ತರಿಸಿದರೆ ಇಚ್ಛೆಯು ಸೃಷ್ಟಿಕಾಲದ ಅಧೀನವೆಂದು ಹೇಳಿದಂತಾಯಿತು. ಆದ್ದರಿಂದ 'ತತ್ಕಾಲಸೃಷ್ಟಿಮೇವಾತೋ ವಾಂಛತೀಶಃ ಸದೈವ ಹಿ । ಸ್ಯಾತ್ಕಾಲಃ ಸತ್ತದೇವೈತಿ ಕಾಲಸ್ಯ ಸ್ವಗತತ್ವತಃ ॥' ಸೃಷ್ಟಿಕಾಲದಲ್ಲಿಯೇ ಸೃಷ್ಟಿಯನ್ನು ಈಶ್ವರನು ಅಪೇಕ್ಷಿಸುತ್ತಾನೆ. ಎಂಬ ಅನುವ್ಯಾಖ್ಯಾನದ ಅಭಿಪ್ರಾಯಕ್ಕೆ ಅನುಗುಣವಾಗಿ 'ತತ್ತತ್ಕಾಲ ಏವ' ಇತ್ಯಾದಿಯಾಗಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ.

ತಾರ್ಕಿಕರು ಇಚ್ಛೆಯನ್ನು ಔಪಾಧಿಕವೆಂದು ಹೇಳಿರುವುದರಿಂದ ಸೃಷ್ಟಿಯಾದರೆ ಇಚ್ಛೆಗೆ ಸೃಷ್ಟಿವಿಷಯತ್ವವು ಸಿದ್ಧವಾಗುತ್ತದೆ. ಇಚ್ಛೆಗೆ ಸೃಷ್ಟಿವಿಷಯತ್ವವು ಸಿದ್ಧವಾದರೆ ಸೃಷ್ಟಿಯಾಗುತ್ತದೆಂಬ ಅನ್ಯೋನ್ಯಾಶ್ರಯದೋಷ ಬರುತ್ತದೆಂಬುದನ್ನು 'ಉಕ್ತಃ ದೋಷಃ' ಎಂಬುದರಿಂದ ತಿಳಿಯಬೇಕು.

'ಕಾಲವಿಶೇಷದಲ್ಲಿ ಸೃಷ್ಟಿ ಮಾಡುತ್ತೇನೆ' ಎಂಬ ಭಗವಂತನ ಇಚ್ಛೆಯು ನಿತ್ಯವೇ ಆಗಿದೆ. ಆದರೂ ಯಾವಾಗ ಸೃಷ್ಟಿಕಾಲವು ಬರುತ್ತದೋ ಆಗಲೇ 'ಸ್ರಕ್ಷ್ಯೇ' ಎಂಬುದಾಗಿ ಸೃಷ್ಟಿವಿಷಯತ್ವವು ಆವಿರ್ಭಾವವಾಗುತ್ತದೆಂದು ಒಪ್ಪುತ್ತೇವೆ. ಉದಾಹರಣೆ 'ಮುಂದೆ ಬರುವ ಸೂರ್ಯಗ್ರಹಣದಲ್ಲಿ ಈ ಬ್ರಾಹ್ಮಣನಿಗೆ ಹಸುವನ್ನು ದಾನ ಮಾಡುತ್ತೇನೆ' ಎಂಬ ಇಚ್ಛೆಯು ಇದ್ದರೂ ಕೂಡ ಗ್ರಹಣ ಬಂದಾಗಲೇ 'ದಾನ ಮಾಡುವೆನು' ಎಂಬ ಇಚ್ಛೆಯು ಹೇಗೆ ಹುಟ್ಟುತ್ತದೋ ಆದರಂತೆ ಇಲ್ಲಿಯೂ ತಿಳಿಯಬೇಕು.

### ಕಾಲನಿಮಿತ್ತತ್ವವಿಚಾರದಲ್ಲೂ ಸಿದ್ಧಾಂತಿಗಳಿಗೆ ದೋಷವಿಲ್ಲ

**तत्वप्रकाशिका – कालस्य निमित्तत्वमीश्वरेच्छानिमित्तत्वनिरासन्यायेन निरस्तमित्यभिप्रेत्य तद्दोषं वा स्वपक्षे परिहरति – स्वत एवेति ।।**

ಈಶ್ವರೇಚ್ಛೆಗೆ ನಿಮಿತ್ತತ್ವವನ್ನು ನಿರಾಕರಣೆ ಮಾಡಿದಂತೆ ಕಾಲಕ್ಕೂ ಕೂಡ ನಿಮಿತ್ತತ್ವವನ್ನೂ ನಿರಾಸಮಾಡಿದಂತಾಯಿತು. ಈ ಅಭಿಪ್ರಾಯದಿಂದ ಸ್ವಪಕ್ಷದಲ್ಲಿ ಬಂದ ದೋಷವನ್ನು ಪರಿಹರಿಸಲು 'ಸ್ವತ ಏವ' ಇತ್ಯಾದಿ ವಾಕ್ಯವು ಹೊರಟಿದೆ.

**भावदीपः – निरस्तमिति ।।** नित्योऽनित्यो वैत्याद्युक्तविकल्पदोषैरिति भावः। परमदृष्टस्येत्यत्रापि बोध्यः।। १२ ।।

'ನಿರಸ್ತಮ್' ಎಂದರೆ 'ನಿತ್ಯೋಽನಿತ್ಯೋ ವಾ' ಇತ್ಯಾದಿಯಾಗಿ ಹಿಂದೆ ಮಾಡಿದ ವಿಕಲ್ಪದೋಷಗಳಿಂದ ನಿರಾಕರಣೆ ಮಾಡಿದಂತಾಯಿತು ಎಂದಭಿಪ್ರಾಯ.

ವಿವರಣೆ - ತಾರ್ಕಿಕರ ಪ್ರಕಾರ ಈಶ್ವರೇಚ್ಛೆಯು ನಿಮಿತ್ತಕಾರಣವಾಗುವುದಿಲ್ಲ ಎಂಬುದನ್ನು ಇಲ್ಲಿಯತನಕ ನಿರಾಕರಣೆ ಮಾಡಿದ್ದಾಯಿತು. ಇದರಿಂದಲೇ ಕಾಲವೂ ಕೂಡ ನಿಮಿತ್ತಕಾರಣವಾಗುವುದಿಲ್ಲ ಎಂಬುದನ್ನು ನಿರಾಕರಣೆ ಮಾಡಿದಂತಾಗುತ್ತದೆ. ಏಕೆಂದರೆ

ಕಾಲವು ನಿತ್ಯವೋ? ಅನಿತ್ಯವೋ? ನಿತ್ಯವೆಂದರೆ ನಿರಂತರ ಕಾರ್ಯವು ಆಗುತ್ತಲೇ ಇರಲಿ. ಅನಿತ್ಯ ಎಂದರೆ ಕಾಲವೆಂಬ ನಿಮಿತ್ತ ಇಲ್ಲದಾಗ ಉತ್ಪತ್ತಿ ಆಗದಿರಬೇಕಾದೀತು. ಕಾಲವೂ ಕೂಡ ಕಾರ್ಯರೂಪವಾದ್ದರಿಂದ ತನ್ನ ಉತ್ಪತ್ತಿಗೆ ಮತ್ತೊಂದು ಕಾಲವನ್ನು ಅಪೇಕ್ಷಿಸಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಮತ್ತೊಂದು ಕಾಲವನ್ನು ಅಪೇಕ್ಷೆ ಪಡದಿದ್ದರೆ ಬೇರೆ ಕಾಲದಲ್ಲೂ ಕೂಡ ಕಾರ್ಯವೇಕೆ ನಿಮಿತ್ತಕಾರಣವಾಗಬೇಕು? ಇತ್ಯಾದಿ ದೋಷಗಳು ತಾರ್ಕಿಕರಿಗೆ ಪ್ರಾಪ್ತವಾಗುತ್ತವೆ. (ವಾಕ್ಯಾರ್ಥಮುಕ್ತಾವಳಿ)

ಆಕ್ಷೇಪ - ಕಾಲವಿಶೇಷದಲ್ಲಿ 'ಸ್ರಕ್ಷ್ಯೇ' ಎಂಬುದಾಗಿ ಕಾರಣವಿಲ್ಲದೆ ಇಚ್ಛೆಗೆ ಅಭಿವ್ಯಕ್ತಿಯನ್ನು ಒಪ್ಪುವುದು ವ್ಯರ್ಥ. ಇದರ ಅಭಿವ್ಯಕ್ತಿಗಾಗಿ ಕಾಲವಿಶೇಷತ್ವಕ್ಕೆ ಪ್ರಯೋಜಕತ್ವವನ್ನು ಒಪ್ಪಬೇಕು. ಕಾಲವಿಶೇಷವು ಇಲ್ಲದಿದ್ದರಿಂದಲೇ ಕಾರ್ಯ ಹುಟ್ಟುವುದಿಲ್ಲ ಎಂದು ಹೇಳಬಹುದಲ್ಲವೆ? ಹಾಗಾದರೆ ಇಚ್ಛೆಯು ವ್ಯರ್ಥವಾಗಲಿ ಎಂದು ಪ್ರಶ್ನಿಸಬಾರದು. 'ವಿಶೇಷಕಾಲ ಏವೈತತ್ ಸೃಷ್ಟ್ಯಾದೀಚ್ಛಾ ಸನಾತನಃ' ಇತ್ಯಾದಿ ಸೃಷ್ಟ್ಯಾದಿಯು ವಿಶೇಷ ಕಾಲದಲ್ಲೇ ಅಭಿವ್ಯಕ್ತವಾಗುತ್ತದೆಂಬ ಅನುವ್ಯಾಖ್ಯಾನದಲ್ಲಿ ಹೇಳಿದಂತೆ 'ಕಾಲವಿಶೇಷೇ ಸ್ರಕ್ಷ್ಯಾಮಿ' ಎಂಬುದಾಗಿ ಭಗವದಿಚ್ಛೆಯು ಕಾಲಗರ್ಭಿತವಾಗಿದೆ. ಆದ್ದರಿಂದ ವ್ಯರ್ಥವಾಗುವುದಿಲ್ಲ.

ಸಮಾಧಾನ - ಹೌದು, ಆದರೂ ಸೃಷ್ಟಿಕಾಲವು ಬಂದಾಗಲೇ ಈಗ ಸೃಷ್ಟಿ ಮಾಡುತ್ತೇನೆ ಎಂಬ ಇಚ್ಛೆಯು ಅಭಿವ್ಯಕ್ತವಾಗುವುದು ಪ್ರಮಾಣಸಿದ್ಧವಾಗಿರುವುದರಿಂದ ಪ್ರಮಾಣಕ್ಕೆ ಅನುಸಾರಿಯಾಗಿ ಹೀಗೆ ಹೇಳಲಾಗಿದೆ - 'ಅಸಂಖ್ಯಾತವಿಶೇಷತ್ವಾತ್ ಇಚ್ಛಾದಪಿ ಸರ್ವಶಃ' ಇತ್ಯಾದಿ ಮಾತುಗಳಿಂದ ಇಚ್ಛೆಯು ಅಸಂಖ್ಯಾತವಾಗಿದೆ. ಕಾಲವಿಶೇಷವು ಪ್ರಾಪ್ತವಾದಾಗ ಸ್ರಕ್ಷ್ಯಾಮಿ ಎಂಬ ರೂಪದಲ್ಲಿ ಭಗವದಿಚ್ಛೆಯು ಹುಟ್ಟುತ್ತದೆ. ಆದ್ದರಿಂದ ಇದು ವ್ಯರ್ಥವಲ್ಲ. (ವಾಕ್ಯಾರ್ಥಮುಕ್ತಾವಳಿ)

### ಕಾಲದಲ್ಲಿ ಕಾಲವಿಶೇಷಗಳು ಸ್ವಾಭಾವಿಕವಾಗಿವೆ

**तत्वप्रकाशिका – नायं दोषोऽस्मत्पक्षेऽस्माभिः काले सृष्टिकालत्वादि-विशेषाङ्गीकारात् । तस्यैव निमित्तत्वात् । न चैवं परपक्षे । अस्माभिः कालविशेषाणां स्वाभाविकत्वोररीकारात् । परेण सृष्ट्याद्युपाधि-निबन्धनत्वाभ्युपगतेस्तत्र चोक्तं दूषणमिति भावः ।**

ಈ ದೋಷವು ನಮ್ಮ ಪಕ್ಷದಲ್ಲಿ ಬರುವುದಿಲ್ಲ. ಏಕೆಂದರೆ ಕಾಲದಲ್ಲೂ ಕೂಡ ಸೃಷ್ಟಿಕಾಲವಿಶೇಷತ್ವವನ್ನು ನಾವು ಅಂಗೀಕರಿಸಿರುತ್ತೇವೆ. ಕಾಲವಿಶೇಷವೇ ನಿಮಿತ್ತಕಾರಣ ಎಂಬುದು ನಮ್ಮ ಸಿದ್ಧಾಂತ. ಇದರಂತೆ ಪರಪಕ್ಷದಲ್ಲಿ ಉತ್ತರಿಸಲಾಗದು. ಏಕೆಂದರೆ ನಾವು ಕಾಲವಿಶೇಷವನ್ನು ಸ್ವಾಭಾವಿಕವೆಂದು ಅಂಗೀಕರಿಸಿರುತ್ತೇವೆ. ತಾರ್ಕಿಕರು ಸೃಷ್ಟ್ಯಾದ್ಯುಪಾಧಿಗಳ ಅಧೀನವಾಗಿ ಕಾಲವಿಶೇಷವನ್ನು ಒಪ್ಪಿರುತ್ತಾರೆ. ಆದ್ದರಿಂದ ಪರವಾದಿಗಳಿಗೆ ಅನ್ಯೋನ್ಯಾಶ್ರಯಾದಿದೋಷಗಳು ಪ್ರಾಪ್ತವಾಗುತ್ತವೆ.

### ಅದೃಷ್ಟವು ನಿಮಿತ್ತಕಾರಣವೆಂದಾಗ ತಾರ್ಕಿಕರಿಗೆ ಇರುವ ದೋಷ ನಮಗಿಲ್ಲ

**तत्वप्रकाशिका – अदृष्टस्य निमित्तत्वं वा पराकृत्य तं दोषं स्वपक्षे परिहरति – स्वत एवेति ।। नायमस्त्पक्षे दोषो भवति । अस्माभिः सृष्ट्यादिकाले पूर्वं सत्येवादृष्टे समुद्बोधविशेषाङ्गीकारात् ।**

ಅದೃಷ್ಟವು ನಿಮಿತ್ತಕಾರಣ ಎಂಬುದನ್ನು ನಿರಾಕರಣೆ ಮಾಡಿ ಸಿದ್ಧಾಂತಪಕ್ಷದಲ್ಲಿ ಆ ದೋಷವನ್ನು 'ಸ್ವತಃ ಏವ' ಇತ್ಯಾದಿಯಾಗಿ ಪರಿಹರಿಸುತ್ತಿದ್ದಾರೆ. ಅದೃಷ್ಟವು ನಿಮಿತ್ತಕಾರಣವಾದರೆ ತಾರ್ಕಿಕರಿಗೆ ಬರುವ ದೋಷವು ನಮ್ಮ ಪಕ್ಷದಲ್ಲಿ ಸಮಾನವಲ್ಲ. ಏಕೆಂದರೆ ನಾವು ಸೃಷ್ಟ್ಯಾದಿಕಾಲದಲ್ಲಿ ಮೊದಲೇ ಇರುವ ಅದೃಷ್ಟವು ಉದ್ಬೋಧವಾಗುತ್ತದೆಂದು ಸಮುದ್ಭವದಲ್ಲಿ ವಿಶೇಷವನ್ನು ಅಂಗೀಕಾರ ಮಾಡಿದ್ದೇವೆ.

ವಿವರಣೆ - ಈಶ್ವರೇಚ್ಛೆಯು ನಿಮಿತ್ತಕಾರಣವೆಂದು ತಾರ್ಕಿಕರಿಗೆ ಹೇಳಲಾಗದೆಂದು ಸಮರ್ಥನೆ ಮಾಡಿದ್ದಾಯಿತು. ಕಾಲವಿಶೇಷವು ನಿಮಿತ್ತಕಾರಣವಾಗುವುದಿಲ್ಲವೆಂಬುದನ್ನು ಕೂಡ ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಅದೃಷ್ಟವು ನಿಮಿತ್ತಕಾರಣವಾಗುತ್ತದೆಂಬುದನ್ನು ನಿರಾಕರಣೆ ಮಾಡಿ ತಾರ್ಕಿಕರಿಗೆ ಇರುವ ದೋಷ ಸ್ವಪಕ್ಷದಲ್ಲಿ ಇಲ್ಲವೆಂದು ಸಮರ್ಥಿಸುತ್ತಿದ್ದಾರೆ. ಅದೃಷ್ಟವು ನಿಮಿತ್ತಕಾರಣವಾದರೆ ಪ್ರಳಯಕಾಲದಲ್ಲಿ ಅದೃಷ್ಟ ಇರುವುದರಿಂದ ಆಗಲೂ ಸೃಷ್ಟಿ ಆಗುತ್ತಲೇ ಇರಲಿ ಎಂಬ ಆಪತ್ತಿಯು ತಾರ್ಕಿಕರಿಗೆ ಬರುತ್ತದೆ. ಈ ಆಪತ್ತಿಯನ್ನು ಪರಿಹರಿಸಿಕೊಳ್ಳಲು ಅದೃಷ್ಟವು ಪ್ರಳಯಕಾಲದಲ್ಲಿ ಉದ್ಬುದ್ಧವಾಗಿಲ್ಲವೆಂದೇ ತಾರ್ಕಿಕರು ಉತ್ತರಿಸಬೇಕು. ಆದರೆ ಏಕೆ ಉದ್ಬೋಧವಾಗಲಿಲ್ಲ ? ಎಂದು ನಾವು ಪ್ರತಿಯಾಗಿ ಪ್ರಶ್ನಿಸಿದರೆ ಅವರಲ್ಲಿ ಪರಿಹಾರವಿಲ್ಲ.

### ಸಮವಾಯಕಾರಣದ ನಿವಾರಣೆ

### ಕಾಲವು ಯಾವಾಗ ಉದ್ಬೋಧವಾಗುತ್ತದೆ ಎಂದು ತಾರ್ಕಿಕರಿಗೆ ಗೊತ್ತಿಲ್ಲ

**तत्वप्रकाशिका – न चैतदन्यमते सम्भवति । अस्माभिः काले स्वभाविकविशेषाङ्गीकारात्। परेण पुनः स्वतः काले सृष्टिकालत्वादि-विशेषानङ्गीकारेण कदोद्बोध इत्यस्य परिहाराभावात् । उपाध्युक्तौ सोऽपि कदेत्यस्य परिहाराभावादिति भावः ।।**

ತಾರ್ಕಿಕರ ಮತದಲ್ಲಿ ಇದು ಕೂಡುವುದಿಲ್ಲ. ಏಕೆಂದರೆ ನಾವು ಕಾಲದಲ್ಲಿ ಸ್ವಾಭಾವಿಕವಾದ ವಿಶೇಷವನ್ನು ಅಂಗೀಕಾರ ಮಾಡಿದ್ದೇವೆ. ತಾರ್ಕಿಕರು ಕಾಲದಲ್ಲಿ ಸೃಷ್ಟಿಕಾಲತ್ವಾದಿವಿಶೇಷವನ್ನು ಅಂಗೀಕಾರ ಮಾಡಿರುವುದಿಲ್ಲ. ಆದ್ದರಿಂದ ಅದೃಷ್ಟವು ಯಾವಾಗ ಉದ್ಬೋಧ ಆಗುತ್ತದೆ ಎಂಬುದಕ್ಕೆ ಅವರಲ್ಲಿ ಉತ್ತರವಿಲ್ಲ. ಕಾಲದಲ್ಲೊಂದು ಉಪಾಧಿಯನ್ನು ಹೇಳಿ ಅಂಥ ಕಾಲದಲ್ಲಿ ಅದೃಷ್ಟವು ಉದ್ಬೋಧವಾಗುತ್ತದೆಂದು ತಾರ್ಕಿಕರು ಉತ್ತರಿಸಬೇಕು. ಆದರೆ ಔಪಾಧಿಕವಾದ ಆ ಕಾಲವು ಯಾವಾಗ ಬರುತ್ತದೆ ? ಎಂಬ ಪ್ರಶ್ನೆಗೆ ಅವರಲ್ಲಿ ಪರಿಹಾರವಿಲ್ಲ.

ವಿವರಣೆ - ಕಾಲದಲ್ಲಿ ಔಪಾಧಿಕಭೇದವನ್ನು ಒಪ್ಪಿ ಅಂಥ ಕಾಲವಿಶೇಷವು ಪ್ರಳಯಕಾದಲ್ಲಿ ಇರುವುದರಿಂದ ಅದೃಷ್ಟವು ಉದ್ಬೋಧವಾಗಲಿಲ್ಲವೆಂದೇ ಅವರು ಉತ್ತರಿಸಬೇಕು. ಆದರೆ ಔಪಾಧಿಕ ಕಾಲವನ್ನು ಒಪ್ಪಿದರೆ ಅನ್ಯೋನ್ಯಾಶ್ರಯದೋಷಗಳು ಪ್ರಾಪ್ತವಾಗುತ್ತದೆಂದು ಈಗಾಗಲೇ ಹೇಳಿದ್ದರಿಂದ ಅದೃಷ್ಟವು ಉದ್ಬೋಧವಾಗುವುದಿಲ್ಲ-ವೆಂಬುದಕ್ಕೂ ಅವರಲ್ಲಿ ಉತ್ತರವಿಲ್ಲ.

ಸಿದ್ಧಾಂತಿಗಳಾದ ನಮ್ಮ ಪಕ್ಷದಲ್ಲಿ ಈ ದೋಷವಿಲ್ಲ. ಏಕೆಂದರೆ ಕಾಲದಲ್ಲಿ ಸ್ವಾಭಾವಿಕ ಭೇದವನ್ನು ಒಪ್ಪಿರುವುದರಿಂದ ಸೃಷ್ಟಿಯ ಪ್ರಾರಂಭದಲ್ಲಿ ಯಾವ ಕಾಲವಿಶೇಷ ಇರುತ್ತದೋ ಅದು ಪ್ರಳಯಕಾಲದಲ್ಲಿ ಇಲ್ಲದ ಕಾರಣ ಸೃಷ್ಟಿಯ ಪ್ರಾರಂಭದಲ್ಲೇ ಅದೃಷ್ಟವು ಉದ್ಬೋಧವಾಗುತ್ತದೆ. ಪ್ರಳಯಕಾಲದಲ್ಲಿ ಅದೃಷ್ಟವು ಉದ್ಬೋಧವಾಗುವುದಿಲ್ಲವೆಂದು ನಾವು ಸುಲಭವಾಗಿ ಉತ್ತರಿಸುತ್ತೇವೆ.

## ಬ್ರಹ್ಮಸೂತ್ರ

'ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – समवायाभ्युपगमाच्च साम्यादनवस्थितेः ।।**

ತಾರ್ಕಿಕರು ಅವಯವ ಹಾಗೂ ಅವಯವಿಗಳಿಗೆ ಭೇದವನ್ನು ಒಪ್ಪಿ, ಸಮವಾಯಸಂಬಂಧವನ್ನು ಅಂಗೀಕರಿಸುತ್ತಾರೆ. ಇದೇ ಕಾರಣದಿಂದ ಸಮವಾಯ ಮತ್ತು ಸಮವಾಯಿಗಳಿಗೂ ಭೇದವನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ಸಮವಾಯ ಸಮವಾಯಿಗಳ ನಡುವೆ ಮತ್ತೊಂದು ಸಮವಾಯವನ್ನು ಒಪ್ಪುವ ಅವಶ್ಯಕತೆಯಿರುವುದರಿಂದ ಅನವಸ್ಥಾದೋಷವು ಬರುತ್ತದೆ.

ಅರ್ಥ -- ವೈಶೇಷಿಕರು ಅವಯವ ಮತ್ತು ಅವಯವಿಗಳಿಗೆ ಭೇದವನ್ನು ಒಪ್ಪಿರುವ ಕಾರಣ ಸಮವಾಯಾಭ್ಯುಗಮಾತ್ = ಸಮವಾಯಸಂಬಂಧವನ್ನು ಅಂಗೀಕರಿಸಿರುತ್ತಾರೆ. ಇದರಂತೆ ಸಾಮ್ಯಾತ್ = ಸಮವಾಯ ಮತ್ತು ಸಮವಾಯಿಗಳಿಗೂ ಭೇದವು ಸಮಾನವಾಗಿರುವುದರಿಂದ ಅಲ್ಲಿಯೂ ಸಮವಾಯಸಂಬಂಧವನ್ನು ಒಪ್ಪಬೇಕು. ಆವಾಗ ಅನವಸ್ಥಿತೇಃ = ಅನವಸ್ಥಾದೋಷವು ಬರುತ್ತದೆ. ಆದ್ದರಿಂದ ತಾರ್ಕಿಕರು ಸಮರ್ಥಿಸಿದ ಸಮವಾಯಕಾರಣತಾವಾದವು ಅಯುಕ್ತವಾಗಿದೆ.

## ಬ್ರಹ್ಮಸೂತ್ರಭಾಷ್ಯ

### ಸಮವಾಯ ಒಪ್ಪಿದರೆ ಅನವಸ್ಥಾದೋಷ

**ब्रह्मसूत्रभाष्यम् – ।। समवायाभ्युपगमाच्च साम्यादनवस्थितेः ।।३।।**

**कार्यकारणादीनां समवायसम्बन्धाङ्गीकारात् तस्य च भिन्नत्वसाम्यात् समवायान्तरापेक्षायामनवस्थितिः ।।३।।**

ಅನುವಾದ - ಕಾರ್ಯ-ಕಾರಣಗಳಿಗೆ, ಜಾತಿ-ವ್ಯಕ್ತಿಗಳಿಗೆ, ಅವಯವ-ಅವಯವಿಗಳಿಗೆ, ಸಮವಾಯ ಸಂಬಂಧಗಳನ್ನು ತಾರ್ಕಿಕರು ಒಪ್ಪುತ್ತಾರೆ. ಆ ಸಮವಾಯಸಂಬಂಧಗಳಾದರೂ ವಸ್ತುವಿಗಿಂತ ಭಿನ್ನವೇ ಆಗಿರುವುದರಿಂದ ಮತ್ತೊಂದು ಸಮವಾಯವನ್ನು ಅದಕ್ಕೆ ಹೇಳಬೇಕಾಗುತ್ತದೆ. ಹೀಗೆ ಹೇಳುತ್ತಾ ಹೊರಟರೆ ಅನವಸ್ಥಾ ದೋಷವು ಬರುತ್ತದೆ.

ಪ್ರತಿಪದಾರ್ಥ -- ವೈಶೇಷಿಕರ ಮತದಲ್ಲಿ ನಿಮಿತ್ತಕಾರಣವು ಯುಕ್ತವಾಗುವುದಿಲ್ಲವೆಂದು ಸಮರ್ಥಿಸಿ ಸಮವಾಯಕಾರಣವೂ ಕೂಡ ಯುಕ್ತವಾಗುವುದಿಲ್ಲವೆಂದು ನಿರಾಕರಿಸಲು ಮುಂದಿನ ಸೂತ್ರ ಹೊರಟಿದೆ. ಕಾರ್ಯಕಾರಣಾದೀನಾಂ = ಕಾರ್ಯ-ಕಾರಣಗಳಿಗೆ ಜಾತಿವ್ಯಕ್ತಿಗಳಿಗೆ ಅವಯವ-ಅವಯವಿಗಳಿಗೆ, ಸಮವಾಯ-ಸಂಬಂಧಾಂಗೀಕಾರಾತ್ = ಸಮವಾಯ ಸಂಬಂಧವನ್ನು ಒಪ್ಪಿರುವುದರಿಂದ, ತಸ್ಯ ಚ = ಆ ಸಮವಾಯಕ್ಕೂ ಕೂಡ, ಭಿನ್ನತ್ವಸಾಮ್ಯತ್ವಾತ್ = ಕಾರ್ಯಕಾರಣಗಳಂತೆ ಪದಾರ್ಥದ ಜೊತೆಗೆ ಭೇದವೇ ಇರುವುದರಿಂದ, ಸಮವಾಯಾಂತರಾಪೇಕ್ಷಾಯಾಮ್ = ಮತ್ತೊಂದು ಸಮವಾಯ ಸಂಬಂಧದ ಅಪೇಕ್ಷೆ ಇದ್ದಲ್ಲಿ. ಅನವಸ್ಥಿತಿಃ = ಅನವಸ್ಥಾದೋಷವು ಬರುತ್ತದೆ.

## ಸಂಬಂಧ ಪರಂಪರೆಯನ್ನು ಒಪ್ಪಲು ಪ್ರಮಾಣವಿಲ್ಲ

**ब्रह्मसूत्रभाष्यम् – न च तत्प्रमाणम् । प्रथमसम्बन्धासिद्ध्यैव च तदसिद्धिः । स्वनिर्वाहकत्वे समवाय एव न स्यात् ।।३।।**

ಅನುವಾದ - ಸಮವಾಯಸಂಬಂಧಗಳ ಪರಂಪರೆಯನ್ನು ಒಪ್ಪಲು ಯಾವುದೇ ಪ್ರಮಾಣವಿಲ್ಲ. ಹಾಗೆ ಪ್ರಮಾಣವಿದ್ದಿದ್ದರೆ ಅನವಸ್ಥಾದೋಷವು ಬರುತ್ತಿರಲಿಲ್ಲ ಮೊದಲಿನ ಸಮವಾಯಸಂಬಂಧವೇ ಅಸಿದ್ಧವಾದ್ದರಿಂದ ಮುಂದಿನ ಸಮವಾಯದ ಪರಂಪರೆಯು ಅಸಿದ್ಧವಾಗುತ್ತದೆ. ಅವಯವ-ಅವಯವಿಗಳಿಗಿರುವ ಸಮವಾಯಸಂಬಂಧವು ಸ್ವನಿರ್ವಾಹಕವೆಂದು ಒಪ್ಪುವುದಾದರೆ ಸಮವಾಯವನ್ನು ಒಪ್ಪುವ ಅವಶ್ಯಕತೆಯೇ ಇರುವುದಿಲ್ಲ. ಅವಯವ ಅವಯವಿಗಳಿಗೆ ಸ್ವನಿರ್ವಾಹಕತ್ವವನ್ನು ಒಪ್ಪಿಯೇ ಸಮಸ್ಯೆಯನ್ನು ಪರಿಹರಿಸಬಹುದು.

ಪ್ರತಿಪದಾರ್ಥ -- ಪ್ರಾಮಾಣಿಕವಾದ್ದರಿಂದ ಸಮವಾಯ ಪರಂಪರೆಯನ್ನು ಒಪ್ಪಬಹುದು. ಆದ್ದರಿಂದ ಅನವಸ್ಥಾದೋಷ ಬರುವುದಿಲ್ಲವೆಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ತತ್ = ಸಮವಾಯದ ವಿಷಯದಲ್ಲಿ, ನಚ ಪ್ರಮಾಣಂ = ಬೀಜಾಂಕುರ ಪರಂಪರೆಯಂತೆ ಪ್ರಮಾಣವಿರುವುದಿಲ್ಲ. ಪ್ರಥಮಸಂಬಂಧಾಸಿದ್ಧ್ಯೈವ = ಅವಯವ ಅವಯವಿಗಳಿಗೆ ಇರುವ ಸಮವಾಯ ಸಂಬಂಧ ಅಸಿದ್ಧವಾದ್ದರಿಂದಲೇ, ತದಸಿದ್ಧಿಃ = ಉಳಿದ

## ಬ್ರಹ್ಮಸೂತ್ರ

### 'ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – समवायाभ्युपगमाच्च साम्यादनवस्थितेः ।।**

ತಾರ್ಕಿಕರು ಅವಯವ ಹಾಗೂ ಅವಯವಿಗಳಿಗೆ ಭೇದವನ್ನು ಒಪ್ಪಿ, ಸಮವಾಯಸಂಬಂಧವನ್ನು ಅಂಗೀಕರಿಸುತ್ತಾರೆ. ಇದೇ ಕಾರಣದಿಂದ ಸಮವಾಯ ಮತ್ತು ಸಮವಾಯಿಗಳಿಗೂ ಭೇದವನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ಸಮವಾಯ ಸಮವಾಯಿಗಳ ನಡುವೆ ಮತ್ತೊಂದು ಸಮವಾಯವನ್ನು ಒಪ್ಪುವ ಅವಶ್ಯಕತೆಯಿರುವುದರಿಂದ ಅನವಸ್ಥಾದೋಷವು ಬರುತ್ತದೆ.

ಅರ್ಥ -- ವೈಶೇಷಿಕರು ಅವಯವ ಮತ್ತು ಅವಯವಿಗಳಿಗೆ ಭೇದವನ್ನು ಒಪ್ಪಿರುವ ಕಾರಣ ಸಮವಾಯಾಭ್ಯುಗಮಾತ್ = ಸಮವಾಯಸಂಬಂಧವನ್ನು ಅಂಗೀಕರಿಸಿರುತ್ತಾರೆ. ಇದರಂತೆ ಸಾಮ್ಯಾತ್ = ಸಮವಾಯ ಮತ್ತು ಸಮವಾಯಿಗಳಿಗೂ ಭೇದವು ಸಮಾನವಾಗಿರುವುದರಿಂದ ಅಲ್ಲಿಯೂ ಸಮವಾಯಸಂಬಂಧವನ್ನು ಒಪ್ಪಬೇಕು. ಆವಾಗ ಅನವಸ್ಥಿತೇಃ = ಅನವಸ್ಥಾದೋಷವು ಬರುತ್ತದೆ. ಆದ್ದರಿಂದ ತಾರ್ಕಿಕರು ಸಮರ್ಥಿಸಿದ ಸಮವಾಯಕಾರಣತಾವಾದವು ಅಯುಕ್ತವಾಗಿದೆ.

## ಬ್ರಹ್ಮಸೂತ್ರಭಾಷ್ಯ

### ಸಮವಾಯ ಒಪ್ಪಿದರೆ ಅನವಸ್ಥಾದೋಷ

**ब्रह्मसूत्रभाष्यम् – ।। समवायाभ्युपगमाच्च साम्यादनवस्थितेः ।।३।।**

**कार्यकारणादीनां समवायसम्बन्धाङ्गीकारात् तस्य च भिन्नत्वसाम्यात् समवायान्तरापेक्षायामनवस्थितिः ।।३।।**

ಅನುವಾದ - ಕಾರ್ಯ-ಕಾರಣಗಳಿಗೆ, ಜಾತಿ-ವ್ಯಕ್ತಿಗಳಿಗೆ, ಅವಯವ-ಅವಯವಿಗಳಿಗೆ, ಸಮವಾಯ ಸಂಬಂಧಗಳನ್ನು ತಾರ್ಕಿಕರು ಒಪ್ಪುತ್ತಾರೆ. ಆ ಸಮವಾಯಸಂಬಂಧಗಳಾದರೂ ವಸ್ತುವಿಗಿಂತ ಭಿನ್ನವೇ ಆಗಿರುವುದರಿಂದ ಮತ್ತೊಂದು ಸಮವಾಯವನ್ನು ಅದಕ್ಕೆ ಹೇಳಬೇಕಾಗುತ್ತದೆ. ಹೀಗೆ ಹೇಳುತ್ತಾ ಹೊರಟರೆ ಅನವಸ್ಥಾ ದೋಷವು ಬರುತ್ತದೆ.

ಪ್ರತಿಪದಾರ್ಥ -- ವೈಶೇಷಿಕರ ಮತದಲ್ಲಿ ನಿಮಿತ್ತಕಾರಣವು ಯುಕ್ತವಾಗುವುದಿಲ್ಲವೆಂದು ಸಮರ್ಥಿಸಿ ಸಮವಾಯಕಾರಣವೂ ಕೂಡ ಯುಕ್ತವಾಗುವುದಿಲ್ಲವೆಂದು ನಿರಾಕರಿಸಲು ಮುಂದಿನ ಸೂತ್ರ ಹೊರಟಿದೆ. ಕಾರ್ಯಕಾರಣಾದೀನಾಂ = ಕಾರ್ಯ-ಕಾರಣಗಳಿಗೆ ಜಾತಿವ್ಯಕ್ತಿಗಳಿಗೆ ಅವಯವ-ಅವಯವಿಗಳಿಗೆ, ಸಮವಾಯ-ಸಂಬಂಧಾಂಗೀಕಾರಾತ್ = ಸಮವಾಯ ಸಂಬಂಧವನ್ನು ಒಪ್ಪಿರುವುದರಿಂದ, ತಸ್ಯ ಚ = ಆ ಸಮವಾಯಕ್ಕೂ ಕೂಡ, ಭಿನ್ನತ್ವಸಾಮ್ಯತ್ವಾತ್ = ಕಾರ್ಯಕಾರಣಗಳಂತೆ ಪದಾರ್ಥದ ಜೊತೆಗೆ ಭೇದವೇ ಇರುವುದರಿಂದ, ಸಮವಾಯಾಂತರಾಪೇಕ್ಷಾಯಾಮ್ = ಮತ್ತೊಂದು ಸಮವಾಯ ಸಂಬಂಧದ ಅಪೇಕ್ಷೆ ಇದ್ದಲ್ಲಿ. ಅನವಸ್ಥಿತಿಃ = ಅನವಸ್ಥಾದೋಷವು ಬರುತ್ತದೆ.

## ಸಂಬಂಧ ಪರಂಪರೆಯನ್ನು ಒಪ್ಪಲು ಪ್ರಮಾಣವಿಲ್ಲ

**ब्रह्मसूत्रभाष्यम् – न च तत्प्रमाणम् । प्रथमसम्बन्धासिद्ध्यैव च तदसिद्धिः । स्वनिर्वाहकत्वे समवाय एव न स्यात् ।।३।।**

ಅನುವಾದ - ಸಮವಾಯಸಂಬಂಧಗಳ ಪರಂಪರೆಯನ್ನು ಒಪ್ಪಲು ಯಾವುದೇ ಪ್ರಮಾಣವಿಲ್ಲ. ಹಾಗೆ ಪ್ರಮಾಣವಿದ್ದಿದ್ದರೆ ಅನವಸ್ಥಾದೋಷವು ಬರುತ್ತಿರಲಿಲ್ಲ ಮೊದಲಿನ ಸಮವಾಯಸಂಬಂಧವೇ ಅಸಿದ್ಧವಾದ್ದರಿಂದ ಮುಂದಿನ ಸಮವಾಯದ ಪರಂಪರೆಯು ಅಸಿದ್ಧವಾಗುತ್ತದೆ. ಅವಯವ-ಅವಯವಿಗಳಿಗಿರುವ ಸಮವಾಯಸಂಬಂಧವು ಸ್ವನಿರ್ವಾಹಕವೆಂದು ಒಪ್ಪುವುದಾದರೆ ಸಮವಾಯವನ್ನು ಒಪ್ಪುವ ಅವಶ್ಯಕತೆಯೇ ಇರುವುದಿಲ್ಲ. ಅವಯವ ಅವಯವಿಗಳಿಗೆ ಸ್ವನಿರ್ವಾಹಕತ್ವವನ್ನು ಒಪ್ಪಿಯೇ ಸಮಸ್ಯೆಯನ್ನು ಪರಿಹರಿಸಬಹುದು.

ಪ್ರತಿಪದಾರ್ಥ -- ಪ್ರಾಮಾಣಿಕವಾದ್ದರಿಂದ ಸಮವಾಯ ಪರಂಪರೆಯನ್ನು ಒಪ್ಪಬಹುದು. ಆದ್ದರಿಂದ ಅನವಸ್ಥಾದೋಷ ಬರುವುದಿಲ್ಲವೆಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ತತ್ = ಸಮವಾಯದ ವಿಷಯದಲ್ಲಿ, ನಚ ಪ್ರಮಾಣಂ = ಬೀಜಾಂಕುರ ಪರಂಪರೆಯಂತೆ ಪ್ರಮಾಣವಿರುವುದಿಲ್ಲ. ಪ್ರಥಮಸಂಬಂಧಾಸಿದ್ಧ್ಯೈವ = ಅವಯವ ಅವಯವಿಗಳಿಗೆ ಇರುವ ಸಮವಾಯ ಸಂಬಂಧ ಅಸಿದ್ಧವಾದ್ದರಿಂದಲೇ, ತದಸಿದ್ಧಿಃ = ಉಳಿದ

ಸಂಬಂಧಗಳು ಅಸಿದ್ಧವಾಗಿವೆ. ಸ್ವನಿರ್ವಾಹಕತ್ವೇ = ಅವಯವ-ಅವಯವಿಗಳಿಗಿರುವ ಸಮವಾಯವು ಸ್ವನಿರ್ವಾಹಕವೆಂದು ಒಪ್ಪಿದರೆ, ಸಮವಾಯಃ ಏವ = ಸಮವಾಯ ಸಂಬಂಧವೇ, ನಸ್ಯಾತ್ = ಬೇಕಾಗಿರುವುದಿಲ್ಲ.

## ಸತ್ತರ್ಕದೀಪಾವಳಿ

### ಸಮವಾಯವು ಅಪ್ರಾಮಾಣಿಕ

**सत्तर्कदीपावळिः – परमाणुभ्यां समवायिकारणाभ्यां द्व्यणुकस्योत्पत्तिः द्व्यणुकेभ्यः समवायिकारणेभ्यस्त्र्यणुकस्योत्पत्तिरित्यादिकः परमाण्वारम्भवादः समवायस्य निरूपयितुमशक्यत्वादनुपपन्नः । तथाहि । अवयवावयविनोः समवायस्य ताभ्यां भिन्नत्वेन समवायान्तरेण भाव्यम् । तस्याप्येवं तस्याप्येवमित्यनवस्था स्यात् । न च अवयवावयविनोः परस्परभेदः तयोः समवायश्च ततोऽभिन्नः केनाप्यनुभूयते । अतः प्रथमसमवायस्यासिद्धत्वात् तत्सिद्ध्यर्थम् उत्तरोत्तरसमवाकल्पनमप्रामाणिकम् ।**

ಸಮವಾಯಕಾರಣಗಳಾದ ಎರಡು ಪರಮಾಣುಗಳಿಂದ ಒಂದು ದ್ವ್ಯಣುಕವು ಹುಟ್ಟುತ್ತದೆ. ಸಮವಾಯಿಕಾರಣಗಳಾದ ಮೂರು ದ್ವ್ಯಣುಕಗಳಿಂದ ಒಂದು ತ್ರ್ಯಣುಕವು ಹಟ್ಟುತ್ತದೆ. ಹೀಗೆ ಪರಮಾಣ್ವಾರಂಭವಾದಿಗಳು ಹೇಳುತ್ತಾರೆ. ಆದರೆ ಇವರ ಪ್ರಕಾರ ಸಮವಾಯವನ್ನು ನಿರೂಪಣೆ ಮಾಡಲು ಸಾಧ್ಯವಾಗದ ಕಾರಣ ಇವರ ಈ ಪರಮಾಣ್ವಾರಂಭವಾದ ಪ್ರಕ್ರಿಯೆಯು ಅನುಪಪನ್ನವಾಗಿದೆ.

ಅದು ಹೀಗೆ - ಅವಯವ-ಅವಯವಿಗಳಿಗೆ ಸಮವಾಯಸಂಬಂಧವಿದೆಯೆಂದು ಹೇಳುತ್ತಾರೆ. ಈ ಸಮವಾಯವು ಅವಯವ ಹಾಗೂ ಅವಯವಿಗಳಿಗಿಂತ ಭಿನ್ನವೇ ಆಗಿದೆ. ಆದ್ದರಿಂದ ಸಮವಾಯಕ್ಕೂ ಅವಯವ-ಅವಯವಿಗಳಿಗೂ ಮತ್ತೊಂದು ಸಮವಾಯವನ್ನು ಒಪ್ಪಬೇಕು. ಆ ಸಮವಾಯವೂ ಕೂಡ ಸಮವಾಯಿಗಿಂತ ಭಿನ್ನವೇ ಆದ್ದರಿಂದ ಮತ್ತೊಂದು ಸಮವಾಯುವನ್ನು ಒಪ್ಪಬೇಕು. ಸಮವಾಯವನ್ನು ಒಪ್ಪುತ್ತಲೇ ಇರಬೇಕಾದ್ದರಿಂದ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ.

ಅವಯವ ಹಾಗೂ ಅವಯವಿಗಳಿಗೆ ಪರಸ್ಪರ ಭೇದವಿದೆ. ಇವುಗಳಿಂದ ಸಮವಾಯಕ್ಕೆ ಅಭೇದವು ಯಾರಿಂದಲೂ ಅನುಭೂತವಾಗುತ್ತಿಲ್ಲ. ಆದ್ದರಿಂದ ಮೊದಲನೆಯ ಸಮವಾಯವೇ ಅಸಿದ್ಧವಾಗದ ಕಾರಣ ಅದರ ಸಿದ್ಧಿಗೋಸ್ಕರ ಉತ್ತರೋತ್ತರ ಸಮವಾಯವನ್ನು ಕಲ್ಪನೆ ಮಾಡುವುದು ಅಪ್ರಾಮಾಣಿಕವಾಗಿದೆ.

### ಸಮವಾಯವು ಅಪ್ರಾಮಾಣಿಕ

**सत्तर्कदीपावळिः – यदि समवायस्य स्वनिर्वाहकत्वमङ्गीकृत्य नोत्तरोत्तर-समवायकल्पनमित्युच्यते तर्हि अवयवावयविनोः स्वनिर्वाहकत्वमङ्गीकृत्य समवायो न कल्प्यताम् । अविशेषात् । यथा समवायस्य स्वनिर्वाहकत्वात् स्वयमेव समवायी समवायान्तरमन्तरेणेत्यङ्गीक्रियते एवं द्रव्यमेव गुणादिरूपेण तत्सम्बन्धरूपेण स्वयमेव स्वरूपं निर्वहतीत्यङ्गीक्रियताम् । अविशेषात् । तदाह । समवायेत्यादिना ।**

ಒಂದುವೇಳೆ ಮೊದಲನೆಯ ಸಮವಾಯವು ಸ್ವನಿರ್ವಾಹಕ ಎಂದು ಅಂಗೀಕಾರ ಮಾಡಿ, ಮುಂದಿನ ಅನೇಕ ಸಮವಾಯಗಳನ್ನು ಕಲ್ಪನೆ ಮಾಡಬೇಕಾಗಿಲ್ಲ ಎಂದು ಹೇಳುವುದಾದರೆ ಅವಯವ ಹಾಗೂ ಅವಯವಿಗಳೇ ಸ್ವನಿರ್ವಾಹಕವಾಗುತ್ತವೆಂದು ಅಂಗೀಕರಿಸಬಹುದು. ಆಗ ಸಮವಾಯವನ್ನು ಕಲ್ಪನೆ ಮಾಡುವ ಆವಶ್ಯಕತೆಯೂ ಕೂಡ ಇರುವುದಿಲ್ಲ. ಸಮವಾಯವನ್ನು ಅಂಗೀಕರಿಸಿ, ಸ್ವನಿರ್ವಾಹಕವೆಂದು ಒಪ್ಪುವುದಕ್ಕಿಂತ ಅವಯವ-ಅವಯವಿಗಳನ್ನೇ ಸ್ವನಿರ್ವಾಹಕವೆಂದು ಹೇಳುವುದು ಇವುಗಳಲ್ಲಿ ಯಾವುದೇ ವಿಶೇಷ ಇರುವುದಿಲ್ಲ. ಹೇಗೆ ಸಮವಾಯವು ಸ್ವನಿರ್ವಾಹಕವಾದ್ದರಿಂದ ತಾನೇ ಮತ್ತೊಂದು ಸಮವಾಯವಿಲ್ಲದೆ ಸಮವಾಯಿ ಆಗುತ್ತದೆಂದು ಅಂಗೀಕರಿಸುತ್ತೀರೋ, ಅದರಂತೆ ದ್ರವ್ಯವೇ ಗುಣಾದಿರೂಪದಿಂದ ಮತ್ತು ತತ್ ಸಂಬಂಧರೂಪದಿಂದ ಸ್ವತಃ ತನ್ನ ಸ್ವರೂಪವನ್ನು ನಿರ್ವಹಣೆ ಮಾಡುತ್ತದೆ ಎಂದು ಅಂಗೀಕರಿಸಿದಿರಿ. ವ್ಯತ್ಯಾಸ ಮಾಡಲು ವಿನಿಗಮಕವಿಲ್ಲ. ಇದನ್ನೇ ಸಮವಾಯ ಇತ್ಯಾದಿಯಾಗಿ ಭಾಷ್ಯದಲ್ಲಿ ನಿರೂಪಣೆ ಮಾಡಿರುತ್ತಾರೆ.

## ತತ್ವಪ್ರದೀಪ

### ವೈಶೇಷಿಕರು ಕಲ್ಪನೆ ಮಾಡಿದ ಆರು ಭಾವಪದಾರ್ಥಗಳು

**तत्वप्रदीपः – समवायाभ्युपगमाच्च साम्यादनवस्थितेः । किञ्च वैशेषिकाः कल्पयन्ति द्रव्यगुणकर्मसामान्यविशेषसमवायाः षड्भावपदार्थाः । तत्र समवायिकारणं द्रव्यम् । गुणवद्वा । कर्मान्यत्वे सति जातिमात्राश्रयो गुणः । संयोगविभागयोरसमवायिकारणं कर्म । नित्यमनेकसमवेतं सामान्यम् । एकसमवायी निस्सामान्यो विशेषः । नित्यसम्बन्धस्समवायः ।**

ವೈಶೇಷಿಕರು ಒಟ್ಟು ಆರು ಭಾವಪದಾರ್ಥಗಳನ್ನು ಒಪ್ಪುತ್ತಾರೆ - ೧. ದ್ರವ್ಯ, ೨. ಗುಣ, ೩. ಕರ್ಮ, ೪. ಸಾಮಾನ್ಯ, ೫. ವಿಶೇಷ, ೬. ಸಮವಾಯ ಎಂದು. ಇವುಗಳಲ್ಲಿ ಸಮವಾಯಕಾರಣವಾದದ್ದು ದ್ರವ್ಯ. ಅಥವಾ ಗುಣಾಶ್ರಯವಾದದ್ದು ದ್ರವ್ಯ. ಯಾವುದು ಕರ್ಮಕ್ಕಿಂತ ಭಿನ್ನವಾಗಿ ಕೇವಲ ಜಾತಿಗೆ ಆಶ್ರಯವಾಗಿದೆಯೋ, ಅದು ಗುಣ ಎನಿಸುತ್ತದೆ. ಸಂಯೋಗ ಮತ್ತು ವಿಭಾಗಗಳಿಗೆ ಅಸಮವಾಯಕಾರಣವಾದದ್ದು ಕರ್ಮ ಎನಿಸುತ್ತದೆ. ನಿತ್ಯವಾದದ್ದು ಹಾಗೂ ಅನೇಕ ಪದಾರ್ಥಗಳಲ್ಲಿ ಸಮವಾಯಸಂಬಂಧೇನ ಇರುವಂಥದ್ದು ಸಾಮಾನ್ಯ ಎನಿಸುತ್ತದೆ. ಒಂದೇ ಸಮವಾಯವುಳ್ಳದ್ದು ಜಾತಿ ಇಲ್ಲದ್ದು ವಿಶೇಷದ ಲಕ್ಷಣ. ನಿತ್ಯಸಂಬಂಧವು ಸಮವಾಯದ ಲಕ್ಷಣ. ಹೀಗೆ ಆರು ಪದಾರ್ಥಗಳ ವಿಭಾಗ ಹಾಗೂ ಲಕ್ಷಣವನ್ನು ಹೇಳುತ್ತಾರೆ.

### ಗುಣಕರ್ಮಾದಿಗಳ ವಿಭಾಗ

**तत्वप्रदीपः – पृथिव्यप्तेजोवाय्वाकाशकालदिगात्ममनांसि नवैव द्रव्याणि। गन्धरसरूपस्पर्शशब्दा बुद्धिसुखदुःखेच्छाद्वेषप्रयत्न धर्माधर्म संस्काराः सङ्ख्यापरिमाणपृथक्त्व संयोगविभागपरत्वापरत्वगुरुत्वद्रवत्वस्नेहाश्चतुर्विंशतिगुणाः । उत्क्षेपणमपक्षेपणमाकुञ्चनं प्रसारणं गमनमिति कर्मभेदः । तत्र कार्यकारणयोर्गुणगुणिनोः क्रियातद्वतोर्जातिव्यक्त्योर्विशेषविशेषिणोश्च समवायं सम्बन्धमभ्युपगच्छन्ति । यथा मृद्घटयोः, शौक्लकल्यपटयोः, पतनपक्षिणोः, गोत्वखण्डयोः, अन्त्यव्यावर्तकात्मनोः ।**

೧. ಪೃಥಿವೀ, ೨. ಅಪ್, ೩. ತೇಜಸ್ಸು, ೪. ವಾಯು, ೫. ಕಾಲ, ೬. ದಿಕ್, ೭. ಆತ್ಮ, ೮. ಮನಸ್ಸು ಎಂಬುದಾಗಿ ದ್ರವ್ಯಗಳು ಒಂಬತ್ತು ಮಾತ್ರ.

೧. ಗಂಧ, ೨. ರಸ, ೩. ರೂಪ, ೪. ಸ್ಪರ್ಶ, ೫. ಶಬ್ದ, ೬. ಬುದ್ಧಿ, ೭. ಸುಖ, ೮, ದುಃಖ, ೯. ಇಚ್ಛಾ, ೧೦. ದ್ವೇಷ, ೧೧. ಪ್ರಯತ್ನ, ೧೨. ಧರ್ಮ, ೧೩. ಅಧರ್ಮ, ೧೪. ಸಂಸ್ಕಾರ, ೧೫. ಸಂಖ್ಯಾ, ೧೬. ಪರಿಮಾಣ, ೧೭. ಪೃಥಕ್ತ್ವ, ೧೮. ಸಂಯೋಗ, ೧೯. ವಿಭಾಗ, ೨೦. ಪರತ್ವ, ೨೧. ಅಪರತ್ವ, ೨೨. ಗುರುತ್ವ, ೨೩. ದ್ರವತ್ವ, ೨೪. ಸ್ನೇಹ ಎಂಬುದಾಗಿ ಇಪ್ಪತ್ನಾಕು ಗುಣಗಳು.

೧. ಉತ್‌ಕ್ಷೇಪಣ, ೨. ಅಪಕ್ಷೇಪಣ, ೩. ಆಕುಂಚನ, ೪. ಪ್ರಸಾರಣ, ೫. ಗಮನ ಎಂಬುದಾಗಿ ಐದು ಕರ್ಮಗಳಿವೆ.

೧. ಕಾರ್ಯ ಹಾಗೂ ಕಾರಣಗಳಿಗೆ, ೨. ಗುಣ ಮತ್ತು ಗುಣಿಗಳಿಗೆ, ೩. ಕ್ರಿಯಾ ಮತ್ತು ಕ್ರಿಯಾವುಳ್ಳ ಪದಾರ್ಥಕ್ಕೆ, ೪. ಜಾತಿ ಮತ್ತು ವ್ಯಕ್ತಿಗೆ, ೫. ವಿಶೇಷ ಮತ್ತು ವಿಶೇಷಿಗಳಿಗೆ ಸಮವಾಯಸಂಬಂಧವನ್ನು ಈ ಐದುಸ್ಥಳದಲ್ಲಿ ಅಂಗೀಕರಿಸುತ್ತಾರೆ. ಉದಾಹರಣೆ - ಕಾರ್ಯಕಾರಣಗಳಲ್ಲಿ ಎಂದರೆ ಮಣ್ಣು ಮತ್ತು ಘಟಗಳಲ್ಲಿ ಸಮವಾಯಸಂಬಂಧವಿದೆ. ಗುಣಗುಣಿಗಳೆನಿಸಿದ ಶೌಕ್ಲ ಹಾಗೂ ಪಟಗಳಲ್ಲಿ ಸಮವಾಯಸಂಬಂಧವಿದೆ. ಕ್ರಿಯಾ ಮತ್ತು ಕ್ರಿಯಾವುಳ್ಳ ಪತನ ಮತ್ತು ಪಕ್ಷಿಗಳಲ್ಲಿ ಸಮವಾಯಸಂಬಂಧವಿದೆ. ಜಾತಿ ಮತ್ತು ವ್ಯಕ್ತಿಗಳೆನಿಸಿದ ಗೋತ್ವ ಮತ್ತು ಗೋವಿನಲ್ಲಿ ಸಮವಾಯಸಂಬಂಧವಿದೆ. ವಿಶೇಷ ಮತ್ತು ವಿಶೇಷಿಯೆನಿಸಿದ ಅಂತ್ಯವ್ಯಾವರ್ತಕಗಳಲ್ಲಿ ಸಮವಾಯಸಂಬಂಧಗಳಿವೆ. ಹೀಗೆ ಆರು ಭಾವಪದಾರ್ಥಗಳನ್ನು ತಾರ್ಕಿಕರು ಒಪ್ಪಿದ್ದಾರೆ.

### ಕಾರ್ಯಕಾರಣಗಳ ಭೇದವಿಷಯದಲ್ಲಿ ಪ್ರಮಾಣವಿಲ್ಲ

**तत्वप्रदीपः – यथा च तयोस्तयोः परस्परभेदः तथा तस्य ताभ्यां ताभ्यां भिन्नत्वसाम्यात्समवायान्तरापेक्षयाऽनवस्थितिः । न च कार्यकारणादीनां भिन्नत्वे तत्समवाये च प्रमाणमस्ति ।**

ಯಾವರೀತಿಯಾಗಿ ಕಾರ್ಯಕಾರಣಗಳಿಗೆ ಪರಸ್ಪರ ಭೇದವಿದೆಯೋ, ಅದರಂತೆ ಆ ಭೇದಕ್ಕೆ ಆ ಕಾರ್ಯಕಾರಣಗಳಿಂದ ಭೇದವು ಇರಲೇಬೇಕು. ಅವರೆಡಕ್ಕೆ ಸಂಬಂಧವನ್ನು ಹೇಳಲೇ ಬೇಕಾದ್ದರಿಂದ ಮತ್ತೊಂದು ಸಮವಾಯವನ್ನು ಅಪೇಕ್ಷೆ ಮಾಡಬೇಕು. ಆಗ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಕಾರ್ಯಕಾರಣಗಳಿಗೆ ಪರಸ್ಪರ ಭೇದವಿದೆ ಎಂಬ ವಿಷಯದಲ್ಲಿ ಕಾರ್ಯಕಾರಣಗಳಿಗೆ ಸಮವಾಯಸಂಬಂಧವಿದೆ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣ ಇರುವುದಿಲ್ಲ.

**ವಿವರಣೆ** - ಕಾರ್ಯಕಾರಣಗಳಿಗೆ, ಗುಣಗುಣಿಗಳಿಗೆ, ಕ್ರಿಯಾಕ್ರಿಯವತ್‌ಗಳಿಗೆ, ಜಾತಿವ್ಯಕ್ತಿಗಳಿಗೆ, ವಿಶೇಷವಿಶೇಷಿಗಳಿಗೆ ತಾರ್ಕಿಕರು ಭೇದವನ್ನು ಒಪ್ಪುತ್ತಾರೆ. ಭೇದವಿರುವುದರಿಂದ ಸಮವಾಯಸಂಬಂಧವಿದೆ ಎನ್ನುತ್ತಾರೆ. ಆದರೆ ಇದು ತಪ್ಪು. ಕಾರ್ಯಕಾರಣಗಳಿಗೆ ಹೇಗೆ ಭೇದವನ್ನು ಹೇಳುವಿರೋ, ಅದರಂತೆ ಕಾರ್ಯಕಾರಣಗಳಿಗೆ ಮತ್ತು ಅವುಗಳಲ್ಲಿರುವ ಭೇದಕ್ಕೂ ಭೇದವನ್ನೇ ಹೇಳಬೇಕು. ಭೇದವಿದ್ದ ಮೇಲೆ ಸಂಬಂಧವನ್ನು ಹೇಳಬೇಕಾದ್ದರಿಂದ ಭೇದಕ್ಕೂ ಕಾರ್ಯಕಾರಣಗಳಿಗೂ ಮತ್ತೊಂದು ಸಮವಾಯಸಂಬಂಧವನ್ನು ಅಂಗೀಕಾರ ಮಾಡಬೇಕು. ಆ ಸಮವಾಯಕ್ಕೂ ಭೇದಕ್ಕೂ ಪುನಃ ಭೇದವನ್ನೇ ಅಂಗೀಕಾರ ಮಾಡಬೇಕು. ಭೇದವನ್ನು ಅಂಗಿಕಾರ ಮಾಡಿದ ಮೇಲೆ ಸಂಬಂಧವನ್ನು ಹೇಳಲೇಬೇಕಾದ್ದರಿಂದ ಮತ್ತೊಂದು ಸಮವಾಯವನ್ನು ಅಂಗೀಕರಿಸಬೇಕು. ಆದ್ದರಿಂದ ಭೇದ ಮತ್ತು ಭೇದಿಗಳಿಗೆ ಸಮವಾಯಸಂಬಂಧವನ್ನು ಅಂಗೀಕರಿಸಿದರೆ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಒಂದು ವೇಳೆ ಕಾರ್ಯಕಾರಣಗಳಿಗೆ ಭೇದದ ವಿಷಯದಲ್ಲಿ, ಸಮವಾಯಸಂಬಂಧದ ವಿಷಯದಲ್ಲಿ ಪ್ರಮಾಣವಿದ್ದರೆ ಅನವಸ್ಥಾವು ದೋಷವೆನಿಸುವುದಿಲ್ಲ. ಆದರೆ ಭೇದದ ವಿಷಯದಲ್ಲಾಗಲೀ, ಸಮವಾಯ ವಿಷಯದಲ್ಲಾಗಲೀ ಪ್ರಮಾಣವಿರುವುದಿಲ್ಲ. ಅಪ್ರಾಮಾಣಿಕವಾದ ಅನಂತಕಲ್ಪನೆಗಳನ್ನು ಮಾಡಬೇಕಾದ್ದರಿಂದ ಅನವಸ್ಥಾದೋಷವು ಬಂದೇ ಬರುತ್ತದೆ.

### ಕಾರ್ಯಕಾರಣಗಳಿಗೆ ಭೇದಾಭೇದವನ್ನೇ ಹೇಳಬೇಕು

**तत्वप्रदीपः – यद्यपि कार्यस्य विनाशिरूपेण भेदः, मृद्धट इत्यादि-सामानाधिकरण्यान्मृदादिरूपेणाभेदः, ताभ्यां चाभेदो घटस्य । 'मृद्धटः' 'विनाशी घट' इत्युभयत्राप्यभेदानुभवात् । न च मृदस्तदा विनाशित्वम् । न**

**हि घटनाशेमृदो विनाशानुभवः । नष्टो घटो मृदेवात्राभूदिति स्थितिरेवात्रानुभूयते।**

ವಾಸ್ತವಿಕವಾಗಿ ಘಟರೂಪವಾದ ಕಾರ್ಯಕ್ಕೆ ವಿನಾಶಿತ್ವವೆಂಬ ಕಾರಣದಿಂದ ಭೇದವಿದೆ. 'ಮೃದ್ಘಟಃ' ಇತ್ಯಾದಿಯಾದ ಸಾಮಾನಾಧಿಕರಣ್ಯದ ಪ್ರಯೋಗವಿರುವುದರಿಂದ, ಮೃದಾದಿ-ರೂಪದಿಂದ ಅಭೇದವಿದೆ. ಈ ವಿನಾಶಿತ್ವ ಹಾಗೂ ಮೃತ್ವಗಳಿಂದ ಘಟಕ್ಕೆ ಅಭೇದವಿದೆ. ಆದ್ದರಿಂದ 'ಮೃದ್ಘಟಃ' ಎಂಬುದಾಗಿ ಅಭೇದಾನುಭವ ಇರುವಂತೆ 'ವಿನಾಶೀಘಟಃ' ಎಂಬುದಾಗಿಯೂ ಅಭೇದಾನುಭವವಿದೆ. ಘಟದಲ್ಲಿ ವಿನಾಶಿತ್ವವಿದ್ದಂತೆ ಮೃತ್ತಿನಲ್ಲಿ ವಿನಾಶಿತ್ವವು ಇರುವುದಿಲ್ಲ. ಘಟನಾಶವಾದಾಗ ಮೃತ್‌ನಾಶವಾಯಿತು ಎಂಬ ಅನುಭವ ಯಾರಿಗೂ ಬರುತ್ತಿಲ್ಲ. ವಿಪರೀತವಾಗಿ 'ನಷ್ಟೋ ಘಟಃ ಮೃದೇವಾತ್ರಾಭೂತ್' ಘಟವು ನಾಶವಾಗಿದೆ ಮಣ್ಣೇ ಇದೆ ಎಂಬುದಾಗಿ ಅನುಭವ ಬರುತ್ತಿದೆ. ಆದ್ದರಿಂದ ಕಾರ್ಯಕಾರಣಗಳಿಗೆ ಭೇದವನ್ನು ಹೇಳಬಾರದು. ಭೇದಾಭೇದವನ್ನೇ ಹೇಳಬೇಕು.

ವಿವರಣೆ - ತಾರ್ಕಿಕರು ಕಾರ್ಯ ಮತ್ತು ಕಾರಣಗಳಿಗೆ ಭೇದವನ್ನು ಅಂಗೀಕಾರ ಮಾಡುತ್ತಾರೆ. ಇದು ತಪ್ಪು. ಏಕೆಂದರೆ ಕಾರ್ಯಕ್ಕೆ ವಿನಾಶಿತ್ವವಿದೆ. ಕಾರಣಕ್ಕೆ ವಿನಾಶಿತ್ವ-ವಿರುವುದಿಲ್ಲ. ಉದಾಹರಣೆ - ಘಟವು ವಿನಾಶವಾಗುತ್ತದೆ. ಮಣ್ಣು ವಿನಾಶವಾಗುವುದಿಲ್ಲ. ಈ ವಿನಾಶಿತ್ವ ಎಂಬ ಹೇತುವಿನಿಂದ ಕಾರ್ಯವು ಕಾರಣದಿಂದ ಭಿನ್ನವಾಗುತ್ತದೆ.

ಪಂಡಿತಾಚಾರ್ಯರು ಪ್ರಯೋಗಿಸಿದ 'ವಿನಾಶಿರೂಪೇಣ' ಎಂಬ ಪದದ ಅರ್ಥವನ್ನು ಹೀಗೆ ತಿಳಿಯಬೇಕು - ವಿನಾಶಿತ್ವದಿಂದ ಎಂಬರ್ಥದಲ್ಲಿ 'ವಿನಾಶಿರೂಪೇಣ' ಎಂದು ಪ್ರಯೋಗಿಸಿದ್ದಾರೆ. ಇಲ್ಲಿರುವ ತೃತೀಯಾ ವಿಭಕ್ತಿಗೆ ಹೇತು ಎಂದರ್ಥ. 'ಹೇತೌ' ಎಂಬ ಸೂತ್ರದ ಪ್ರಕಾರ ಇಲ್ಲಿ ತೃತೀಯಾ ವಿಭಕ್ತಿಯು ಪ್ರಾಪ್ತವಾಗುತ್ತದೆ. ವಿನಾಶಿತ್ವವಿರುವ ಕಾರಣದಿಂದ ಎಂಬರ್ಥವನ್ನು ಹೇಳಿದಂತಾಗುತ್ತದೆ.

ಘಟದಲ್ಲಿ ಮೃತ್‌ಪ್ರತಿಯೋಗಿಕವಾದ ಭೇದವಿದೆ. ಏಕೆಂದರೆ ವಿನಾಶಿತ್ವವು ಘಟದಲ್ಲಿದೆ. ಇದೇ ಘಟದಲ್ಲಿ ಕಾರಣವಾದ ಮೃತ್ತುವಿನಿಂದ ಅಭೇದವೂ ಇದೆ. ಸಾಮಾನಾಧಿಕರಣ್ಯ-ಪ್ರಯೋಗವಿರುವುದರಿಂದ. ಘಟವು ಮೃದ್‌ರೂಪವಾಗಿದೆ ಎಂದು ತಿಳಿದಾಗ ಕಾರಣದಿಂದ ಅಭಿನ್ನವಾಗುತ್ತದೆ. ಘಟವು ವಿನಾಶಿಯಾಗಿದೆ ಎಂದು ತಿಳಿದಾಗ ಕಾರಣದಿಂದ ಭಿನ್ನವಾಗುತ್ತದೆ. ಹೀಗೆ ಒಂದೇ ಘಟವು ಕಾರಣದಿಂದ ಭಿನ್ನವೂ ಆಗಿದೆ. ಅಭಿನ್ನವೂ ಆಗಿದೆ.

ಕಾರಣೀಭೂತವಾದ ಘಟಕ್ಕೆ ವಿನಾಶಿತ್ವದಿಂದಲೂ ಅಭೇದವಿದೆ. ಮೃತ್ವದಿಂದಲೂ ಕೂಡ ಅಭೇದವಿದೆ.

'ಯದ್ಯಪಿ' ಇತ್ಯಾದಿ ವಾಕ್ಯದ ಒಟ್ಟು ಅಭಿಪ್ರಾಯ ಹೀಗಿದೆ - ತಾರ್ಕಿಕರು ಕಾರ್ಯ ಮತ್ತು ಕಾರಣಗಳಿಗೆ ಭೇದವನ್ನೇ ಅಂಗೀಕಾರ ಮಾಡುತ್ತಾರೆ. ಆದರೆ ಸರಿಯಾಗಿ ವಿಚಾರ ಮಾಡಿದಾಗ ಭೇದ ಹೇಳುವುದು ತಪ್ಪು. ಭೇದಾಭೇದವನ್ನೇ ಹೇಳಬೇಕು ಎಂಬುದು ಮನದಟ್ಟಾಗುತ್ತದೆ. ವಿನಾಶಿತ್ವರೂಪದಿಂದ ಘಟವು ಕಾರಣದಿಂದ ಭಿನ್ನವಾಗಿದೆ. ಮೃತ್ವರೂಪದಿಂದ ಅಭಿನ್ನವಾಗಿದೆ. ಈ ವಿನಾಶಿತ್ವ ಮತ್ತು ಮೃತ್ವಗಳಿಂದ ಘಟಕ್ಕೆ ಅಭೇದವಿರುವ ಕಾರಣ ಅಭೇದವನ್ನೇ ಅಂಗೀಕಾರ ಮಾಡಬೇಕು. 'ಮೃದ್ಘಟಃ' ಎಂಬಲ್ಲಿ ಹಾಗೂ 'ವಿನಾಶೀ ಘಟಃ' ಎಂಬಲ್ಲಿ ಅಭೇದಾನುಭವವೇ ಎಲರಿಗೂ ಕೂಡ ಪ್ರಾಪ್ತವಾಗುತ್ತಿದೆ. ಹೀಗೆ ಪ್ರತಿಯೊಬ್ಬರಿಗೂ ಕೂಡ ಕಾರ್ಯಕಾರಣಗಳಿಗೆ ಭೇದಾಭೇದದ ಅನುಭವವೇ ಇದೆ. 'ತಸ್ಮಿನ್ ಸತ್ಯಪಿ ಅಸತಃ ಭೇದಾಭೇದಃ' ಕಾರಣವಿದ್ದಾಗಲೂ ಕಾರ್ಯವು ನಾಶವಾದರೆ, ಭೇದಾಭೇದವನ್ನು ಅಂಗೀಕಾರ ಮಾಡಬೇಕು ಎಂಬ ನಿಯಮದ ಪ್ರಕಾರ ಭೇದಾಭೇದವನ್ನು ಅಂಗೀಕಾರ ಮಾಡಬೇಕೆಂಬುದೇ ತತ್ವವಾದಿಗಳ ಸಿದ್ಧಾಂತ. ಆದ್ದರಿಂದ ತಾರ್ಕಿಕರು ಹೇಳುವ ಕಾರ್ಯಕಾರಣಗಳ ಭೇದವಿಚಾರವು ಅಸಾಧುವಾಗಿದೆ.

ಭೇದಾಭೇದ ಒಪ್ಪಿದರೂ ವಿರೋಧವಿಲ್ಲ

**तत्वप्रदीपः – नचाबाधितानुभवस्य भ्रान्तित्वं वक्तुं युक्तम् । सर्वस्य भ्रान्तित्वप्रसङ्गात् । न च प्रमाणदृष्टे विरोधाशङ्का । प्रमाणदृष्टेरेवा-विरोधापादकत्वात् । स्त्रीत्वपुंस्त्वयोरन्यत्र सहादृष्टयोर्दृष्टिरेवार्धनारीश्वरेऽविरोध-साधिका ।**

ಅಬಾಧಿತವಾದ ಅನುಭವವನ್ನು ಭ್ರಾಂತಿ ಎಂದು ಹೇಳುವುದು ತಪ್ಪು. ಹಾಗಾದಲ್ಲಿ ಎಲ್ಲಾ ಅನುಭವಗಳೂ ಕೂಡ ಭ್ರಾಂತಿ ಎಂದಾಗಬೇಕಾಗುತ್ತದೆ. ಒಂದೇ ವಸ್ತುವಿನಲ್ಲಿ ಭೇದಾಭೇದಗಳಿಗೆ ಪರಸ್ಪರ ವಿರೋಧವಿದೆ. ಒಂದರಲ್ಲಿ ವಿರುದ್ಧವಾದ ಭೇದ ಮತ್ತು ಅಭೇದಗಳನ್ನು ಹೇಗೆ ಅಂಗೀಕರಿಸುತ್ತೀರಿ? ಎಂಬ ಪ್ರಶ್ನೆ ಅಯುಕ್ತ. ಪ್ರಮಾಣದಿಂದ ಸಿದ್ಧವಾದ ವಿಷಯದಲ್ಲಿ ವಿರೋಧದ ಆಶಂಕೆಗೆ ಅವಕಾಶವೇ ಇಲ್ಲ. ಪ್ರಮಾಣಗೋಚರತ್ವವೇ ಅವಿರೋಧಕ್ಕೆ

ಆಪಾದಕವಾಗಿದೆ. ಒಂದೇ ಘಟದಲ್ಲಿ ಮಣ್ಣಿನಿಂದ ಅಭೇದವಿರುವುದು ವಿನಾಶಿತ್ವದಿಂದ ಭೇದವಿರುವುದು ಅನುಭವಸಿದ್ಧವಾಗಿರುವಾಗ ವಿರೋಧವನ್ನು ಆಪಾದನೆ ಮಾಡಬಾರದು. ಉದಾಹರಣೆ - ಸ್ತ್ರೀತ್ವವಿದ್ದಲ್ಲಿ ಪುಂಸ್ತ್ವವಿಲ್ಲ. ಪುಂಸ್ತ್ವವಿದ್ದಲ್ಲಿ ಸ್ತ್ರೀತ್ವವಿಲ್ಲ. ಆದರೆ ಅರ್ಧನಾರೀಶ್ವರನಾದ ಶಿವನಲ್ಲಿ ಸ್ತ್ರೀತ್ವ ಹಾಗೂ ಪುಂಸ್ತ್ವಗಳೆರಡೂ ಒಟ್ಟಿಗೆ ಇವೆ. ಪ್ರಮಾಣದೃಷ್ಟಿಯೇ ಈ ಸ್ತ್ರೀಪುಂಸ್ತ್ವಗಳ ವಿರೋಧವನ್ನು ಪರಿಹರಿಸುತ್ತದೆ. ಅದರಂತೆ ಪ್ರಕೃತ ಭೇದಾಭೇದಗಳ ಪರಸ್ಪರ ವಿರೋಧವನ್ನೂ ಕೂಡ ಪ್ರಮಾಣಗೋಚರತ್ವವೇ ಪರಿಹಾರ ಮಾಡುತ್ತದೆ.

### ಪ್ರಥಮ ಸಮವಾಯವೇ ಅಪ್ರಾಮಾಣಿಕ

**तत्वप्रदीपः – न च समवायो नाम कश्चित्पदार्थः प्रमाणेनोपलभ्यते । प्रथमसमवायासिद्धिरेव समवायान्तरासिद्धिः । कार्यकारणादीनां निर्वाहकस्य समवायस्य स्वस्यापि निर्वाहकत्वान्न समवायान्तरापेक्षयाऽनवस्थेति चेत् । यथा समवायः स्वयमेव स्वसम्बन्धरूपश्च तथा द्रव्यमेव स्वकार्यगुणक्रियादिरूपं स्वनिर्वाहकमिति भेदाभावात् समवाय एव न स्यात् ।।**

ಸಮವಾಯ ಎಂಬ ಒಂದು ಪದಾರ್ಥವೇ ಪ್ರಮಾಣದಿಂದ ಸಿದ್ಧವಾಗುವುದಿಲ್ಲ. ಮೊದಲನೆಯ ಸಮವಾಯದ ಅಸಿದ್ಧಿಯೇ ಉಳಿದ ಸಮವಾಯಗಳ ಅಸಿದ್ಧಿಗೆ ಕಾರಣವಾಗಿದೆ. ಕಾರ್ಯಕಾರಣಗಳಿಗೆ ಯಾವ ಸಮವಾಯವನ್ನು ಒಪ್ಪುತ್ತೇವೋ, ಅದು ಸ್ವನಿರ್ವಾಹಕ-ವಾಗಿರುವುದರಿಂದ ಮತ್ತೊಂದು ಸಮವಾಯದ ಅಪೇಕ್ಷೆ ಇಲ್ಲದ ಕಾರಣ ಅನವಸ್ಥಾದೋಷ ಬರುವುದಿಲ್ಲ ಎಂದು ತಾರ್ಕಿಕರು ಹೇಳುತ್ತಾರೆ. ಇದು ತಪ್ಪು. ಹೇಗೆ ಸಮವಾಯವು ಸ್ವತಃ ತಾನೇ ಸಂಬಂಧರೂಪವಾಗಿದ್ದು ಸ್ವನಿರ್ವಾಹಕವಾಗಿದೆಯೋ, ಅದರಂತೆ ದ್ರವ್ಯವೇ ತನ್ನ ಕಾರ್ಯವೆನಿಸಿದ ಗುಣಕ್ರಿಯಾದಿರೂಪವಾಗಿ ಸ್ವನಿರ್ವಾಹಕವಾಗುತ್ತದೆ. ದ್ರವ್ಯದಲ್ಲೂ ಸಮವಾಯದಲ್ಲೂ ಇಲ್ಲ. ಆದ್ದರಿಂದ ಸಮವಾಯವನ್ನು ಅಂಗೀಕಾರ ಮಾಡಬೇಕಾಗಿಲ್ಲ.

## ತತ್ವಪ್ರಕಾಶಿಕಾ

### ಸಮವಾಯಕಾರಣದ ನಿರಾಕರಣೆ

**तत्वप्रकाशिका – एवं परपक्षे निमित्तकारणासम्भवं दर्शयित्वा समवायिकारणनिरासाय सूत्रमुपन्यस्य व्याचष्टे – समवायेति ।।**

ಹಿಂದಿನ ಸೂತ್ರದಲ್ಲಿ ತಾರ್ಕಿಕರ ಮತದಲ್ಲಿ ನಿಮಿತ್ತಕಾರಣವು ಅಸಂಭಾವಿತವಾಗಿದೆ ಎಂದು ತೋರಿಸಿದ್ದಾಯಿತು. ಪ್ರಕೃತ ಸಮವಾಯಿಕಾರಣವನ್ನು ನಿರಾಕರಣೆ ಮಾಡುವುದಕ್ಕಾಗಿ 'ಸಮವಾಯ ಅಭ್ಯುಪಗಮಾಚ್ಚ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಪದಾರ್ಥಗಳಿಗೆ ಸಮವಾಯಸಂಬಂಧವನ್ನು ಒಪ್ಪಬೇಕೆಂದು ತಾರ್ಕಿಕರು ಹೇಳುತ್ತಾರೆ. ಘಟವನ್ನು ಕುರಿತು ಕಪಾಲವು ಸಮವಾಯಿಕಾರಣವಾಗಿದೆ ಎಂಬುದು ಅವರ ಸಿದ್ಧಾಂತ. ಇದನ್ನು ಈ ಸೂತ್ರದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಸಮವಾಯಿಕಾರಣವು ಅಪ್ರಾಮಾಣಿಕವಾಗಿದೆ ಎಂಬುದು ಎರಡನೆಯ ಅಂಶ. ಸಮವಾಯವು ಸಿದ್ಧವಾದರಷ್ಟೇ ಸಮವಾಯಿಕಾರಣವು ಸಿದ್ಧವಾಗುತ್ತದೆ. ಆದರೆ ಸಮವಾಯವೇ ಸಿದ್ಧವಾಗುವುದಿಲ್ಲ.

೧. ಗುಣ-ಗುಣಿಗಳಿಗೆ, ೨. ಜಾತಿ-ವ್ಯಕ್ತಿಗಳಿಗೆ, ೩. ಕ್ರಿಯಾ-ಕ್ರಿಯಾವತ್‌ಗಳಿಗೆ, ೪. ಅವಯವ-ಅವಯವಿಗಳಿಗೆ, ೫. ವಿಶೇಷ ಮತ್ತು ನಿತ್ಯದ್ರವ್ಯಗಳಿಗೆ ಹೀಗೆ ಐದು ಸ್ಥಳದಲ್ಲಿ ಸಮವಾಯ ಸಂಬಂಧವನ್ನು ತಾರ್ಕಿಕರು ಒಪ್ಪುತ್ತಾರೆ. ಆದರೆ ಈ ಐದು ಸ್ಥಳದಲ್ಲಿ ಸಮವಾಯಸಂಬಂಧವನ್ನು ಒಪ್ಪುವ ಅವಶ್ಯಕತೆಯಿಲ್ಲ ಸ್ವರೂಪಸಂಬಂಧದಿಂದಲೇ ನಿರ್ವಾಹ ಮಾಡಬಹುದು ಎಂಬುದು ಸಿದ್ಧಾಂತಿಗಳ ಅಭಿಪ್ರಾಯ.

### 'ಕಾರ್ಯಕಾರಣಾದೀನಾಂ' ಎಂಬ ಭಾಷ್ಯಕ್ಕೆ ವ್ಯಾಖ್ಯಾನ

**तत्वप्रकाशिका – अत्र कार्यकारणपदमवयवावयविविषयम् । आदिपदेनाऽनित्यगुणक्रियातद्वतां सङ्ग्रहः । अथवा कार्यकारणपदेनैवैषां सङ्ग्रहः। आदिपदेन नित्यगुणगुणिजातिव्यक्तिविशेषविशेषिणां प्रसङ्गाद् ग्रहणम्।**

ಭಾಷ್ಯದಲ್ಲಿರುವ ಕಾರ್ಯಕಾರಣ ಎಂಬ ಪದಕ್ಕೆ ಅವಯವ ಮತ್ತು ಅವಯವಿಗಳೆಂದು ಅರ್ಥ. 'ಕಾರ್ಯಕಾರಣಾದೀನಾಂ ಎಂಬಲ್ಲಿರುವ ಆದಿಪದದಿಂದ ಅನಿತ್ಯವಾದ ಗುಣಕ್ರಿಯಾ

ಅವುಗಳಿಗೆ ಆಶ್ರಯವಾದ ದ್ರವ್ಯ ಇವುಗಳನ್ನು ಸಂಗ್ರಹ ಮಾಡಬೇಕು. ಅಥವಾ ಕಾರ್ಯಕಾರಣ-ಪದದಿಂದಲೇ ಇವುಗಳನ್ನು ಸಂಗ್ರಹಿಸಬಹುದು. ಆದಿಪದದಿಂದ ನಿತ್ಯವಾದ ಗುಣ-ಗುಣಿಗಳು ಜಾತಿ-ವ್ಯಕ್ತಿಗಳು, ವಿಶೇಷ ಮತ್ತು ನಿತ್ಯದ್ರವ್ಯಗಳನ್ನು ವಿವಕ್ಷಿಸಬೇಕು.

## ಭಾವದೀಪ

**भावदीपः – ।। समवायाभ्युपगमाच्च साम्यादनवस्थितेः ।।१३।।** समवायिकारणनिरासप्रस्तावे नित्यग्रहणं किमर्थमित्यत आह – **प्रसङ्गाद्ग्रहणमिति ।।**

ಸಮವಾಯಕಾರಣವನ್ನು ನಿರಾಸ ಮಾಡುವ ಸಂದರ್ಭದಲ್ಲಿ ನಿತ್ಯವಾದದ್ದರ ಗ್ರಹಣವನ್ನು ಏಕೆ ಮಾಡಿದರು ? ಎಂಬ ಪ್ರಶ್ನೆಗೆ 'ಪ್ರಾಸಂಗಿಕವಾಗಿ' ಎಂದು ಉತ್ತರಿಸಿದ್ದಾರೆ.

ವಿವರಣೆ - ಕಾರ್ಯಪದದಿಂದ ಅವಯವಿಯನ್ನು ಕಾರಣಪದದಿಂದ ಅವಯವವನ್ನು ಭಾಷ್ಯದಲ್ಲಿ ವಿವಕ್ಷಿಸಬೇಕು. ಅಥವಾ ಕಾರ್ಯಪದದಿಂದ ಅವಯವಿಯಲ್ಲಿರುವ ಅನಿತ್ಯವಾದ ಗುಣಕ್ರಿಯೆಗಳನ್ನು ಕಾರಣಪದದಿಂದ ಅವಯವದಲ್ಲಿರುವ ಗುಣಕ್ರಿಯಾವಸ್ತುಗಳನ್ನು ವಿವಕ್ಷಿಸಬೇಕು. (ವಾಕ್ಯಾರ್ಥವಿವರಣ)

ಅಸಮವಾಯಕಾರಣವನ್ನು ನಿರಾಕರಣೆ ಮಾಡುವ ಪ್ರಸಂಗದಲ್ಲಿ ನಿತ್ಯವಾದ ಗುಣ ಮತ್ತು ಗುಣಿಗಳನ್ನು ಸ್ವೀಕರಿಸುವುದು ಅಪ್ರಸ್ತುತವಾಗುತ್ತದೆ. ಆದ್ದರಿಂದ ಟೀಕೆಯಲ್ಲಿ 'ಅನಿತ್ಯಗುಣಕ್ರಿಯಾ ತದ್ವತಾಂ ಸಂಗ್ರಹಃ' ಎಂದು ಹೇಳಿರುತ್ತಾರೆ.

### ಅವಯವ-ಅವಯವಿಭಾವ ಹೇಗೆ ಕೂಡಿಸಬೇಕು?

**तत्वप्रकाशिका – परमाण्वादीनां द्रव्यादिकारणत्वं नोपपन्नम् । तेषां भिन्नत्वमभ्युपेत्य समवायाभ्युपगमात् । भिन्नयोरवयवावयवित्वादिविशेषण-विशेष्यभावोपपत्तये समवायोऽङ्गीकार्य एवातस्तदभ्युपगमे को दोष इति चेन्न ।**

ಪರಮಾಣು ಮೊದಲಾದವುಗಳಿಗೆ ದ್ರವ್ಯಾದಿಕಾರಣತ್ವವನ್ನು ಒಪ್ಪಿರುವುದು ಯುಕ್ತವಾಗುವುದಿಲ್ಲ. ಏಕೆಂದರೆ ಪರಮಾಣ್ವಾದಿಗಳಿಗಿಂತ ದ್ವ್ಯಣುಕಾದಿಗಳಲ್ಲಿ ಭೇದವನ್ನು ಒಪ್ಪಿ ಸಮವಾಯವನ್ನು ಒಪ್ಪಿರುವುದರಿಂದ ದ್ರವ್ಯಾದಿಕಾರಣತ್ವವು ಪರಮಾಣ್ವಾದಿಗಳಿಗೆ ಯುಕ್ತವಾಗುವುದಿಲ್ಲ. ಭಿನ್ನಪದಾರ್ಥಗಳಲ್ಲಿ ಅವಯವ-ಅವಯವಿತ್ವಾದಿ ವಿಶೇಷಣ-ವಿಶೇಷ್ಯ-ಭಾವವನ್ನು ಕೂಡಿಸಲು ಸಮವಾಯವನ್ನು ಅಂಗೀಕರಿಸಬೇಕಲ್ಲವೆ? ಹಾಗೆ ಸಮವಾಯ-ಸಂಬಂಧವನ್ನು ಅಂಗೀಕರಿಸುವುದರಿಂದ ಬರುವ ದೋಷವಾದರೂ ಏನು ?

## ಸಮವಾಯ ಒಪ್ಪುವ ತಾರ್ಕಿಕರಿಗೆ ಅನವಸ್ಥಾ

**ತत्वप्रकाशिका – तथा सति समवायस्यापि समवायिभ्यां भिन्नत्व-साम्यान्मृद्घटसमवाय इत्यादिविशेषणविशेष्यभावोपपत्तये समवायान्तरापेक्षापातात्। तत्रापि भिन्नत्वसाम्यात् समवायस्य समवाय इत्यादिविशेषरविशेष्य-भावोपपत्तये समवायान्तरापेक्षेत्यनवस्था स्यादिति भावः ।**

ಹಾಗಾದರೆ ಸಮವಾಯಕ್ಕೂ ಕೂಡ ಸಮವಾಯಿಗಳಿಂದ (ಅವಯವ ಮತ್ತು ಅವಯವಿಗಳಿಗೆ) ಭೇದವು ಸಮಾನವಾಗಿದೆ. ಈ ಭೇದಸಾಮ್ಯದಿಂದ ಮಣ್ಣು ಹಾಗೂ ಘಟಗಳಿಗೆ ಸಮವಾಯವಿದೆ ಎಂಬ ವಿಶೇಷಣವಿಶೇಷ್ಯಭಾವವನ್ನು ಕೂಡಿಸಲು ಮತ್ತೊಂದು ಸಮವಾಯವು ಬೇಕಾಗುತ್ತದೆ. ಈ ಸಮವಾಯ ಮತ್ತು ಸಮವಾಯಿಗಳಿಗೂ ಭೇದವು ಸಮಾನವಾದ್ದರಿಂದ 'ಸಮವಾಯದ ಸಮವಾಯ' ಇತ್ಯಾದಿ ವಿಶೇಷಣವಿಶೇಷ್ಯಭಾವವನ್ನು ಕೂಡಿಸಲು ಮತ್ತೊಂದು ಸಮವಾಯವು ಬೇಕಾಗುತ್ತದೆ. ಹೀಗೆ ಅನವಸ್ಥಾ ದೋಷವು ಪ್ರಾಪ್ತವಾಯಿತು.

ವಿವರಣೆ - 'ಭಿನ್ನತ್ವಸಾಮ್ಯಾತ್' ಎಂಬುದು ಉಪಲಕ್ಷಣವಾಗಿದೆ .'ಇಹ ಪ್ರತ್ಯಯಸಾಮ್ಯಾತ್' ಎಂಬುದನ್ನು ಕೂಡ ವಿವಕ್ಷಿಸಬೇಕು. ಆದ್ದರಿಂದ 'ಮೃದಿ ಘಟಃ ಇತ್ಯಾದಿ ಪ್ರತ್ಯಯಃ ಸಂಬಂಧಪೂರ್ವಕಃ ಭಿನ್ನತ್ವಾತ್' 'ಅಬಾಧಿತ ಪ್ರತ್ಯಯತ್ವಾಚ್ಚ ಇಹ ಕುಂಡೇ ಬದರಾಣಿ ಇತ್ಯಾದಿಪ್ರತ್ಯಯವತ್' ಇತ್ಯಾದಿಯಾಗಿ ತಾರ್ಕಿಕರು ಅಬಾಧಿತಪ್ರತ್ಯಯದಿಂದ ಹಾಗೂ ಭಿನ್ನತ್ವಹೇತುವಿನಿಂದ 'ಮೃದಿ ಘಟಃ' ಎಂಬ ಪ್ರತೀತಿಯು ಸಂಬಂಧಪೂರ್ವಕವಾಗಿದೆ. ಆ ಸಂಬಂಧವು ಸಮವಾಯವೇ ಆಗಿದೆ ಎಂದು ಪರ್ಯವಸಾನ ಮಾಡುತ್ತಾರೆ ಎಲ್ಲಿ ಭಿನ್ನತ್ವ

ಇದೆಯೋ ಅಲ್ಲಿ ಸಂಬಂಧವಿದೆ ಎಂಬ ವ್ಯಾಪ್ತಿಗೆ ವ್ಯಭಿಚಾರದೋಷವನ್ನು ಹೇಳುತ್ತಿದ್ದಾರೆ. 'ಮೃದ್‌ಘಟಯೋಃ ಸಮವಾಯಃ' ಮಣ್ಣು ಮತ್ತು ಮಡಿಕೆಗಳಿಗೆ ಎಂಬ ಅಬಾಧಿತ ಪ್ರತ್ಯಯವಿದೆ. ಭೇದವೂ ಕೂಡ ಇದೆ. ಆದರೆ ಸಮವಾಯಕ್ಕೂ ಮೃದ್‌ಘಟಗಳಿಗೂ ಸಂಬಂಧ ಪೂರ್ವಕತ್ವವು ಇಲ್ಲದ ಕಾರಣ ಅನೈಕಾಂತಿಕದೋಷ ಬರುತ್ತದೆ. ಒಂದುವೇಳೆ ಮೃದ್‌ಘಟಗಳಿಗೂ ಸಮವಾಯಕ್ಕೂ ಮತ್ತೊಂದು ಸಮವಾಯವನ್ನು ಒಪ್ಪಿದರೆ 'ಸಮವಾಯೇ ಸಮವಾಯಃ' ಎಂಬ ಮತ್ತೊಂದು ಇಹಪ್ರತ್ಯಯವು ಬರುತ್ತದೆ. ಇವೆರಡಕ್ಕೆ ಭೇದವಿರುವುದರಿಂದ ಮತ್ತೊಂದು ಸಮವಾಯವನ್ನು ಒಪ್ಪಿದರೆ ಅನವಸ್ಥಾದೋಷ ಬರುತ್ತದೆ. (ವಾಕ್ಯಾರ್ಥವಿವರಣ)

ಮೂಲಕ್ಷತಿ ಇರುವ ಸ್ಥಳದಲ್ಲಿ ಅನವಸ್ಥಾದೋಷವಾಗುತ್ತದೆ

**तत्वप्रकाशिका – सन्त्वनन्ताः समवायाः प्रामाणिकत्वान्न दोष इत्यत आह – न चेति ।। तत् = तत्र समवायानन्त्ये । मूलक्षयाभावान्नानवस्था-दूषणमित्यत आह – प्रथमेति ।। मूलभूतावयवावयव्यादिसम्बन्धस्यैव प्रमाणाभावेनासिद्धेस्तत्सिद्ध्यर्थमभ्युपगन्तव्यसम्बन्धानां सुतराम-सिद्धिरित्यस्त्येव मूलक्षतिरिति भावः ।**

ಅನಂತಸಮವಾಯಗಳು ಇರಲಿ; ಅವು ಪ್ರಾಮಾಣಿಕವಾದ್ದರಿಂದ ದೋಷವಿಲ್ಲವೆಂಬ ಆಕ್ಷೇಪಕ್ಕೆ 'ನ ಚ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಭಾಷ್ಯದಲ್ಲಿರುವ ತತ್ ಎಂಬ ಪದಕ್ಕೆ ಸಮವಾಯದ ಆನಂತ್ಯ ವಿಷಯದಲ್ಲಿ ಎಂದರ್ಥ. ಮೂಲಕ್ಷಯವಿಲ್ಲದ ಕಾರಣ ಅನವಸ್ಥಾವು ದೋಷವಾಗುವುದಿಲ್ಲವಲ್ಲವೆ? ಎಂಬ ಆಕ್ಷೇಪಕ್ಕೆ 'ಪ್ರಥಮಸಂಬಂಧ' ಇತ್ಯಾದಿ ಭಾಷ್ಯದಲ್ಲಿ ಉತ್ತರಿಸುತ್ತಿದ್ದಾರೆ. ಮೂಲಭೂತವಾದ ಅವಯವ-ಅವಯವ್ಯಾದಿಗಳ ಸಂಬಂಧವಿಷಯದಲ್ಲೇ ಪ್ರಮಾಣ ಇಲ್ಲದಿರುವುದರಿಂದ ಆ ಸಂಬಂಧವೇ ಅಸಿದ್ಧವಾಗಿದೆ. ಅದರ ಸಿದ್ಧಿಗಾಗಿ ಒಪ್ಪಬೇಕಾದ ಬೇರೆ ಸಂಬಂಧಗಳೂ ಕೂಡ ಸುತರಾಂ ಅಸಿದ್ಧವಾಗಿದೆ. ಆದ್ದರಿಂದ ಮೂಲಕ್ಷತಿ ದೋಷವು ಇರುತ್ತದೆ.

**भावदीपः** – तत्प्रमाणमित्यत्र तच्छब्दार्थः।। **तत् तत्रेति।।** तस्यार्थः।। **समवायानन्त्य इति।।**

ಭಾಷ್ಯದಲ್ಲಿ 'ತತ್‌ಪ್ರಮಾಣಂ' ಎಂದಿದ್ದಾರೆ. ಇಲ್ಲಿರುವ ತತ್‌ಶಬ್ದದ ಅರ್ಥವನ್ನು ಪ್ರಕೃತ ಟೀಕೆಯಲ್ಲಿ 'ತತ್ ತತ್ರ' ಎಂದು ವ್ಯಾಖ್ಯಾನ ಮಾಡಿದ್ದಾರೆ. 'ತತ್ರ' ಎಂಬುದರ ಅರ್ಥವನ್ನು ಸಮವಾಯಾನಂತ್ಯದಲ್ಲಿ ಎಂದು ಹೇಳಿದ್ದಾರೆ.

ವಿವರಣೆ - ಬೀಜಾಂಕುರಪರಂಪರೆಯು ಪ್ರಾಮಾಣಿಕವಾದ್ದರಿಂದ ಅನವಸ್ಥಾವೆಂಬುದು ಇಲ್ಲಿ ದೋಷವಾಗುವುದಿಲ್ಲ. ಅದರಂತೆ ಸಮವಾಯದ ಆನಂತ್ಯವು ಕೂಡ ಪ್ರಾಮಾಣಿಕವಾದ್ದರಿಂದ ದೋಷವಾಗುವುದಿಲ್ಲ ಎಂಬುದು ತಾರ್ಕಿಕರ ಸಮರ್ಥನೆ ಆದರೆ ಅವಯವ-ಅವಯವಿಗಳಿಗೆ ಯಾವ ಸಮವಾಯಸಂಬಂಧವನ್ನು ತಾರ್ಕಿಕರು ಒಪ್ಪುತ್ತಾರೋ, ಇದರಲ್ಲೇ ಪ್ರಮಾಣವಿಲ್ಲ. ಮುಂದಿನ ಎಲ್ಲಾ ಸಮವಾಯಪರಂಪರೆಗೆ ಇದೇ ಮೂಲಭೂತವಾಗಿದೆ. ಇದೇ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಮೂಲಕ್ಷತಿ ಉಂಟಾಗುತ್ತದೆ. ಆದ್ದರಿಂದ ಮುಂದಿನ ಸಮವಾಯಪರಂಪರೆಯನ್ನು ಒಪ್ಪಿದರೆ ಅನವಸ್ಥಾದೋಷವು ಬಂದೇ ಬರುತ್ತದೆಂಬುದು ಅಭಿಪ್ರಾಯ.

### ಸಮವಾಯಕ್ಕೆ ಸ್ವನಿರ್ವಾಹಕತ್ವದ ನಿರಾಕರಣೆ

**तत्वप्रकाशिका – माऽस्तु तर्हि समवायपरम्परा प्रथमसमवाय एव स्वनिर्वाहक इति तत्राह ।। स्वनिर्वाहकत्व इति ।। यदि समवायः स्वस्मिन् स्वयमेव विशेषणविशेष्यभावबुद्धिजनकस्तर्हि स एव न स्यात् द्रव्यस्यैव गुणगुण्यादिरूपेण स्वनिर्वाहकत्वोपपत्तौ तद्वैयर्थ्यादिति भावः ।**

ಹಾಗಾದರೆ ಸಮವಾಯ ಪರಂಪರೆಯನ್ನು ನಾವು ಒಪ್ಪುವುದಿಲ್ಲ. ಮೊದಲನೆಯ ಸಮವಾಯವೇ ಸ್ವನಿರ್ವಾಹಕವೆಂದು ಹೇಳುತ್ತೇವೆಂಬುದನ್ನು 'ಸ್ವನಿರ್ವಾಹಕತ್ವೇ' ಇತ್ಯಾದಿ ಭಾಷ್ಯದಿಂದ ನಿರಾಕರಿಸುತ್ತಿದ್ದಾರೆ. ಒಂದು ವೇಳೆ ಸಮವಾಯವು ತನ್ನಲ್ಲಿ ತಾನೇ ವಿಶೇಷಣ-ವಿಶೇಷ್ಯ ಭಾವಬುದ್ಧಿಯನ್ನು ಹುಟ್ಟಿಸುವುದಾದರೆ ಆಗ ದ್ರವ್ಯವೇ ತನ್ನಲ್ಲಿರುವ ಗುಣ ಮೊದಲಾದವುಗಳಿಗೆ ಗುಣಗುಣಿ ಮೊದಲಾದ ರೂಪದಿಂದ ವಿಶೇಷಣ-ವಿಶೇಷ್ಯಭಾವವನ್ನು ನಿರ್ವಹಣೆ ಮಾಡಬಹುದು. ಸಮವಾಯ ಸಂಬಂಧವನ್ನು ಒಪ್ಪುವ ಅವಶ್ಯಕತೆ ಇರುವುದಿಲ್ಲ.

ವಿವರಣೆ - ವಿಶೇಷ್ಯ-ವಿಶೇಷಣಭಾವದ ಜ್ಞಾನಕ್ಕೋಸ್ಕರ ಸಮವಾಯಸಂಬಂಧವನ್ನು ಅಂಗೀಕರಿಸಿದ್ದಾರೆ. 'ಮೃದ್‌ಘಟಯೋಃ ಸಮವಾಯಃ' ಎಂಬಲ್ಲಿಯೂ ವಿಶೇಷಣ

ವಿಶೇಷ್ಯಭಾವವಿದೆ. ಇದಕ್ಕಾಗಿ ಮತ್ತೊಂದು ಸಮವಾಯವನ್ನು ಒಪ್ಪುವ ಅವಶ್ಯಕತೆಯಿಲ್ಲ. ಮೃತ್ ಹಾಗೂ ಘಟಗಳಿಗೆ ಯಾವ ಸಮವಾಯಸಂಬಂಧವಿದೆಯೋ ಅದೇ ಸಮವಾಯ ಸಂಬಂಧವೇ 'ಮೃದ್‌ಘಟಯೋಃ ಸಮವಾಯಃ' ಎಂಬ ವಿಶೇಷಣ-ವಿಶೇಷ್ಯಭಾವವನ್ನು ಕೂಡ ನಿರ್ವಹಣೆ ಮಾಡುತ್ತದೆ. ಆದ್ದರಿಂದ ಮತ್ತೊಂದು ಸಮವಾಯವನ್ನು ಒಪ್ಪುವ ಅವಶ್ಯಕತೆಯಿಲ್ಲದ್ದರಿಂದ ಅನವಸ್ಥಾದೋಷವು ಬರುವುದಿಲ್ಲ.

ತಾರ್ಕಿಕರು ಹೀಗೆ ಸಮವಾಯಕ್ಕೆ ಸ್ವನಿರ್ವಾಹಕತ್ವವನ್ನು ಒಪ್ಪುವುದಾದರೆ ಸಮವಾಯವನ್ನು ಒಪ್ಪುವುದೇ ಬೇಡ, ಗುಣ ಹಾಗೂ ಗುಣಿಗಳೇ ಸ್ವತಃ ವಿಶೇಷಣ ವಿಶೇಷ್ಯಭಾವವನ್ನು ನಿರ್ವಹಣೆ ಮಾಡುತ್ತವೆ. ಅಪ್ರಾಮಾಣಿಕವಾದ ಸಮವಾಯವನ್ನೇಕೆ ಒಪ್ಪಬೇಕು ? ಎಂಬುದು ನಮ್ಮ ಅಭಿಪ್ರಾಯ. ಆದ್ದರಿಂದ ಗುಣಗುಣಿಗಳೆಂಬ ಸ್ವರೂಪವೇ ಸ್ವನಿರ್ವಾಹಕವಾದ್ದರಿಂದ ಸ್ವರೂಪಸಂಬಂಧವನ್ನು ಒಪ್ಪಿದರೆ ಸಾಕು, ಸಮವಾಯವನ್ನು ಒಪ್ಪುವ ಅವಶ್ಯಕತೆಯಿಲ್ಲ ಎಂದು ತಿಳಿಯಬೇಕು.

### ಸಮವಾಯದಲ್ಲಿ ಪ್ರಮಾಣವೇ ಇಲ್ಲ

**तत्वप्रकाशिका – न च सम्बन्धत्वात्तस्य स्वनिर्वाहकत्वम् । संयोगेऽपि प्रसङ्गात् । न चैवमतिप्रसङ्गः । प्रमाणसदसद्भावेन व्यवस्थोपपत्तेः । न च समवाये प्रमाणमस्ति। रूपं नित्यसम्बन्धसम्बद्धं गुणत्वान्महत्त्ववदित्यत्र साध्यशून्यं निदर्शनम् । विशेषणविशेष्यभावत्वेन हेतुना तस्य सम्बन्धनिबन्धनत्वसाधने व्यभिचारः। विशेषणेऽतिप्रसङ्गः ।।**

ಗುಣ ಹಾಗೂ ಗುಣಿಗಳು ಸಂಬಂಧವೇ ಅಲ್ಲ. ಆದ್ದರಿಂದ ಅವುಗಳಿಗೆ ಸ್ವನಿರ್ವಾಹಕತ್ವವು ಬರುವುದಿಲ್ಲವೆಂದು ಹೇಳಬಾರದು. ಸಂಬಂಧವಾಗಿದೆ ಎಂಬುದರಿಂದಷ್ಟೇ ಸ್ವನಿರ್ವಾಹಕ ಆಗುವುದಾದರೆ ಸಂಯೋಗವೂ ಕೂಡ ಸಂಬಂಧವಾಗಿರುವುದರಿಂದ ಸ್ವನಿರ್ವಾಹಕವಾಗಲಿ. ಪ್ರಮಾಣವಿದ್ದಲ್ಲಿ ಸ್ವನಿರ್ವಾಹಕತ್ವವನ್ನು ಒಪ್ಪಿ ಪ್ರಮಾಣ ಇಲ್ಲದಿದ್ದಲ್ಲಿ ಸ್ವನಿರ್ವಾಹಕತ್ವ ಇಲ್ಲವೆಂದು ಉತ್ತರಿಸಬಹುದಾದ್ದರಿಂದ ಅತಿಪ್ರಸಂಗವೂ ಕೂಡ ಬರುವುದಿಲ್ಲ.

ಸಮವಾಯವಿಷಯದಲ್ಲಿ ಪ್ರಮಾಣವೇ ಇಲ್ಲ. 'ರೂಪಂ ನಿತ್ಯಸಂಬಂಧವತ್ ಗುಣತ್ವಾತ್ ಮಹತ್ವವತ್' ಮಹತ್ವವು ಗುಣವಾಗಿದೆ ನಿತ್ಯಸಂಬಂಧದಿಂದ ಕೂಡಿದೆ. ಆದರಂತೆ ರೂಪವೂ

ಗುಣವಾಗಿರುವುದರಿಂದ ನಿತ್ಯಸಂಬಂಧದಿಂದ ಕೂಡಿದೆ ಎಂಬ ಅನುಮಾನವನ್ನು ಪ್ರಮಾಣವನ್ನಾಗಿ ಹೇಳಬೇಕು.

ಆದರೆ ಮಹತ್ವವೆಂಬ ದೃಷ್ಟಾಂತದಲ್ಲಿ ನಿತ್ಯಸಂಬಂಧವೇ ಇರುವುದಿಲ್ಲ. ಆದ್ದರಿಂದ ದೃಷ್ಟಾಂತಕ್ಕೆ ಸಾಧ್ಯವೈಕಲ್ಯ ದೋಷವು ಬರುತ್ತದೆ. ಮಹತ್ವ ಹಾಗೂ ಆಕಾಶಗಳಿಗೆ ವಿಶೇಷಣ ವಿಶೇಷ್ಯಭಾವ ಇರುವುದರಿಂದ ಅಲ್ಲೂ ಕೂಡ ಸಂಬಂಧವನ್ನು ಸಾಧಿಸುತ್ತೇವೆ ಎಂದು ಹೇಳಿದರೆ ಘಟಾಭಾವಕ್ಕೂ ಭೂತಳಕ್ಕೂ ವಿಶೇಷಣವಿಶೇಷ್ಯಭಾವ ಇರುವುದರಿಂದ ಮತ್ತೊಂದು ಸಂಬಂಧವನ್ನು ಒಪ್ಪಬೇಕಾಗುತ್ತದೆ. ಅಪ್ರಯೋಜಕವಾದ ಹೇತುವಿನಿಂದ ಸಂಬಂಧವನ್ನು ಸಾಧನೆ ಮಾಡಿದರೆ ಅತಿಪ್ರಸಂಗ ಬರುತ್ತದೆ.

**भावदीपः – न चैवमतिप्रसङ्ग इति ।।** संयोगसम्बन्धोऽपि नोपेयतामित्यर्थः। समवाये मानान्तरमाशङ्कते – **विशेषणेति ।। तस्येति ।।** गुणगुण्यादिविशेषणविशेष्य- भावस्येत्यर्थः॥ **व्यभिचार इति ।।** घटाभाववद् भूतलमिति अभावभूतलविशेषण- विशेष्यभावे व्यभिचार इत्यर्थः। भावमात्रनिष्ठविशेषणविशेष्यभावत्वादिभिर्हेतुर्विशेष्यत इत्यत आह – **विशेषण इति ।।** गुणादावपि विशेषणविशेष्यभावस्याभाववदेव सम्बन्धं विनाप्युपपत्त्याऽप्रयोजकत्वात्। अप्रयोजकेनापि साधनेऽतिप्रसङ्ग इत्यर्थः। यद्वा अन्योन्यसंयुक्तानिष्ठत्वविशेषितेन विशेषणविशेष्यभावत्वेन हेतुना अभावनिष्ठविशेषण- विशेष्यभावदृष्टान्तेन सम्बन्धाभाव साधनसम्भवादतिप्रसङ्ग इत्यर्थः ॥१३॥

'ನ ಚೈವಮತಿಪ್ರಸಂಗಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಸಂಯೋಗಸಂಬಂಧವನ್ನೂ ಕೂಡ ಒಪ್ಪದೇ ಇರಬೇಕಾದೀತು ಎಂದರ್ಥ. ಸಮವಾಯ ವಿಷಯದಲ್ಲಿ ಬೇರೆ ಪ್ರಮಾಣವನ್ನು 'ವಿಶೇಷಣ' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾನೆ. 'ತಸ್ಯ' ಎಂಬುದಕ್ಕೆ ಗುಣಗುಣಿ ಮೊದಲಾದ ವಿಶೇಷಣ ವಿಶೇಷ್ಯ ಭಾವಕ್ಕೆ ಎಂದರ್ಥ. 'ವ್ಯಭಿಚಾರಃ' ಎಂಬುದಕ್ಕೆ 'ಘಟಾಭಾವವದ್ ಭೂತಲಮ್' ಎಂಬಲ್ಲಿ ಅಭಾವ ಮತ್ತು ಭೂತಳಗಳಿಗೆ ವಿಶೇಷಣವಿಶೇಷ್ಯಭಾವವಿರುವುದರಿಂದ ವ್ಯವಭಿಚಾರ ಬರುತ್ತದೆ ಎಂದರ್ಥ. ಭಾವದಲ್ಲಷ್ಟೇ ಇರುವ ವಿಶೇಷಣವಿಶೇಷ್ಯಭಾವತ್ವಾದಿಗಳಿಂದ ಹೇತುವನ್ನು ಪರಿಷ್ಕರಿಸುತ್ತೇವೆ ? ಎಂಬ ಪ್ರಶ್ನೆಗೆ 'ವಿಶೇಷಣೇ ಅತಿಪ್ರಸಂಗಃ' ಎಂದು ಉತ್ತರಿಸಿದ್ದಾರೆ. ಗುಣಾದಿಗಳಲ್ಲೂ ಕೂಡ ವಿಶೇಷಣ

ವಿಶೇಷ್ಯಭಾವವು ಇಲ್ಲದಿರುವುದರಿಂದ ಸಂಬಂಧ ಇಲ್ಲದಿದ್ದರೂ ಉಪಪನ್ನವಾಗುವ ಕಾರಣ ಅಪ್ರಯೋಜಕವಾಗಿದೆ. ಅಪ್ರಯೋಜಕವಾದ್ದರಿಂದಲೂ ಸಾಧ್ಯವನ್ನು ಸಾಧನೆ ಮಾಡುವುದಾದರೆ, ಸಾಧನದಲ್ಲೇ ಅತಿಪ್ರಸಂಗ ಬರುತ್ತದೆ ಎಂದರ್ಥ. ಅಥವಾ ಪರಸ್ಪರವಾಗಿ ಸಂಯುಕ್ತವಾಗಿರಬೇಕು. ಅಲ್ಲೇ ವಿಶೇಷಣವಿಶೇಷ್ಯ-ಭಾವವಿರಬೇಕು. ಮತ್ತು ಭಾವಪದಾರ್ಥದಲ್ಲಷ್ಟೇ ಇರಬೇಕು. ಅನ್ಯೋನ್ಯಸಂಯುಕ್ತ-ನಿಷ್ಠತ್ವವೆಂಬ ವಿಶೇಷಣದಿಂದ ಕೂಡಿರುವ ವಿಶೇಷಣವಿಶೇಷ್ಯಭಾವತ್ವ ಎಂಬ ಹೇತುವಿನಿಂದ ಸಂಬಂಧಾಭಾವವನ್ನು ಸಾಧನೆ ಮಾಡಲು ಭಾವನಿಷ್ಠವಿಶೇಷಣವಿಶೇಷ್ಯಭಾವವು ದೃಷ್ಟಾಂತವಾಗಿದೆ ಎಂದು ಹೇಳಬೇಕು. ಹೀಗೆ ಹೇಳಿದರೆ ಅತಿಪ್ರಸಂಗ ಬರುತ್ತದೆ ಎಂದು ಅಭಿಪ್ರಾಯ.

ವಿವರಣೆ - ಸಮವಾಯದ ವಿಷಯದಲ್ಲಿ ತಾರ್ಕಿಕರು ಅನುಮಾನವನ್ನೇ ಪ್ರಮಾಣವನ್ನಾಗಿ ಹೇಳಬೇಕು. 'ರೂಪಂ ನಿತ್ಯಸಂಬಂಧವತ್ ಗುಣತ್ವಾತ್ ಮಹತ್ವವತ್' ಎಂಬ ಅನುಮಾನದಲ್ಲಿ ನಿತ್ಯಸಂಬಂಧವೆಂದರೆ ಸಮವಾಯವೇ ಆಗಬೇಕೆಂಬುದು ಅವರ ಅಭಿಪ್ರಾಯ. ಆದರೆ ಮಹತ್ವವೆಂಬ ದೃಷ್ಟಾಂತದಲ್ಲಿ ಸಾಧ್ಯವೇ ಇರುವುದಿಲ್ಲ. ಮಹತ್ವವು ಆಕಾಶಾದಿಸ್ವರೂಪವಾಗಿರುವುದರಿಂದ ಅತಿರಿಕ್ತಸಂಬಂಧವು ಇಲ್ಲಿ ಅನಾವಶ್ಯಕ. ಒಂದುವೇಳೆ ಆಕಾಶ ಹಾಗೂ ಮಹತ್ವಗಳಿಗೂ ಸಮವಾಯ ಸಂಬಂಧಗಳನ್ನು ಸಾಧನೆ ಮಾಡಿದರೆ ವ್ಯಭಿಚಾರ ಬರುತ್ತದೆ. ಅದು ಹೀಗೆ - 'ಮಹತ್ವಂ, ವಿಶೇಷಣವಿಶೇಷ್ಯಭಾವನಿಯಾಮಕ-ಸಂಬಂಧವತ್ ವಿಶೇಷಣ-ವಿಶೇಷ್ಯಭಾವತ್ವಾತ್, ಘಟಭೂತಲ ವಿಶೇಷಣವಿಶೇಷ್ಯಭಾವವತ್' 'ಘಟ ಹಾಗೂ ಭೂತಲಗಳಿಗೆ ವಿಶೇಷಣ ವಿಶೇಷ್ಯಭಾವಸಂಬಂಧವು ಇರುತ್ತದೆ. ನಿಯಾಮಕ-ಸಂಬಂಧವೂ ಇದೆ. ಅದರಂತೆ ಆಕಾಶದಲ್ಲಿ ಮಹತ್ವವಿದೆ. 'ವಿಶೇಷಣವಿಶೇಷ್ಯ- ಭಾವತ್ವಾತ್' ಎಂಬ ಹೇತು ಇರುವುದರಿಂದ ನಿಯಾಮಕಸಂಬಂಧವೂ ಇರಲೇಬೇಕು. ಅದೇ ಸಮವಾಯ-ಸಂಬಂಧ' ಎಂಬುದು ತಾರ್ಕಿಕರ ಅಭಿಪ್ರಾಯ.

ಇದು ಸರಿಯಲ್ಲ. ಈ ಅನುಮಾನಕ್ಕೆ 'ಘಟಾಭಾವವದ್‌ಭೂತಲಮ್' ಎಂಬಲ್ಲಿ ವ್ಯಭಿಚಾರ ಬರುತ್ತದೆ. ಘಟಾಭಾವಕ್ಕೂ ಭೂತಲಕ್ಕೂ ವಿಶೇಷಣವಿಶೇಷ್ಯಭಾವ ಇದೆ. ಆದರೆ ಇಲ್ಲಿ ಯಾವುದೇ ನಿಯಾಮಕಸಂಬಂಧವನ್ನು ತಾರ್ಕಿಕರು ಒಪ್ಪಿರುವುದಿಲ್ಲ. ಸ್ವರೂಪವನ್ನೇ ಸಂಬಂಧವೆನ್ನುತ್ತಾರೆ. ಆದ್ದರಿಂದ ಹೇತು ಬಂದು ಸಾಧ್ಯವು ಬಾರದ ಕಾರಣ ವ್ಯಭಿಚಾರವು ಪ್ರಾಪ್ತವಾಯಿತು. ಒಂದುವೇಳೆ ಭಾವಮಾತ್ರೇ ವಿಶೇಷಣ-ವಿಶೇಷ್ಯಭಾವತ್ವಾತ್ ಎಂಬುದಾಗಿ ಹೇತುವಿನಲ್ಲಿ ಭಾವತ್ವವನ್ನು ವಿಶೇಷಣವನ್ನಾಗಿ ನೀಡಿದರೆ ಆಗ 'ವಿಶೇಷಣೇ ಅತಿಪ್ರಸಂಗಃ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಈ ಪಕ್ಷದಲ್ಲೂ ಕೂಡ 'ಘಟಾದಿಕಂ ಜ್ಞಾತಂ'

'ಘಟಾದಿಕಮ್ ದೃಷ್ಟಂ' ಇತ್ಯಾದಿ ವಿಶೇಷಣ ವಿಶೇಷ್ಯಭಾವ ಇರುವಲ್ಲಿ ವ್ಯಭಿಚಾರದೋಷ ಬರುತ್ತದೆ. 'ಘಟಾದಿಕಂ ಜ್ಞಾತಂ' ಎಂಬಲ್ಲೂ ವಿಶೇಷಣ ವಿಶೇಷ್ಯಭಾವ ಇದೆ. ಆದರೆ ಯಾವುದೇ ನಿಯಾಮಕಸಂಬಂಧ ಇರುವುದಿಲ್ಲ ಎಂದು ತಾರ್ಕಿಕರೇ ಒಪ್ಪುತ್ತಾರೆ. ಹೀಗೆ ಹೇತು ಬಂದು ಸಾಧ್ಯ ಬಾರದ ಕಾರಣ 'ಘಟಾದಿಕಂ ಜ್ಞಾತಂ' ಇತ್ಯಾದಿ ಸ್ಥಳದಲ್ಲಿ ವ್ಯಭಿಚಾರವು ಬರುತ್ತದೆ. ಈ ವ್ಯಭಿಚಾರದ ಪರಿಹಾರಕ್ಕಾಗಿ ಮತ್ತೊಂದು ವಿಶೇಷಣವನ್ನು ನೀಡಿದರೆ 'ಘಟಾದಿಕಂ ಜ್ಞಾತಂ' ಇತ್ಯಾದಿ ಸ್ಥಳದಲ್ಲಿ ವ್ಯಭಿಚಾರದೋಷವನ್ನು ಪರಿಹರಿಸಲು ಸಾಧ್ಯವಾಗದ ಪ್ರಸಂಗ ಬರುತ್ತದೆ. ಲೋಕದಲ್ಲಿ ವ್ಯಭಿಚಾರವೆಂಬ ದೋಷವೇ ಇಲ್ಲದಂತಾಗುತ್ತದೆ.

## ಬ್ರಹ್ಮಸೂತ್ರ

### 'ನಿತ್ಯಮೇವ ಚ ಭಾವಾತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – नित्यमेव च भावात् ।।**

ನಿಮಿತ್ತಕಾರಣವಾದ ಈಶ್ವರನ ಇಚ್ಛೆ ಸಮವಾಯಕಾರಣವೆನಿಸಿದ ಪರಮಾಣುಗಳು ನಿತ್ಯದಲ್ಲಿ ಇರುವುದರಿಂದ ಯಾವಾಗಲೂ ಕಾರ್ಯವು ಆಗುತ್ತಲೇ ಇರಬೇಕಾದೀತು. ಅಂದರೆ ಪ್ರಳಯಕಾಲವೇ ಇಲ್ಲದ ಪ್ರಸಂಗ ಬರುತ್ತದೆ.

ದೋಷಸಮುಚ್ಚಯಾತ್ = ದೋಷವನ್ನು ಸಮುಚ್ಚಯ ಮಾಡಲು 'ಚ' ಶಬ್ದವಿದೆ. ಈಶ್ವೇರೇಚ್ಛೆ ಪರಮಾಣು ಮೊದಲಾದ ಕಾರಣಗಳು ನಿತ್ಯವಾಗಿರುವುದರಿಂದ ವೈಶೇಷಿಕರ ಮತದಲ್ಲಿ, ನಿತ್ಯಮೇವ = ಯಾವಾಗಲೂ, ಭಾವಾತ್ = ಕಾರ್ಯೋತ್ಪತ್ತಿಯೇ ಆಗಬೇಕಾದೀತು ಹೊರತು ಸೃಷ್ಟಿಯ ಕಾಲದಲ್ಲಿ ಮಾತ್ರ ಕಾರ್ಯೋತ್ಪತ್ತಿ ಎಂಬ ವ್ಯವಸ್ಥೆ ತಪ್ಪಾಗಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

### ಪರಮಾಣು ಮತ್ತು ಸಮವಾಯಗಳು ನಿತ್ಯವಲ್ಲ

**ब्रह्मसूत्रभाष्यम् –।। नित्यमेव च भावात् ।।४।।**

**नित्यत्वाच्च परमाणूनां समवायस्य च तस्यैव जनित्वाङ्गीकारान्नित्यमेव कार्यं स्यात् । अन्यथा न कदाचित् ।।४।।**

ಅನುವಾದ - ಪರಮಾಣು ಮತ್ತು ಸಮವಾಯ ಸಂಬಂಧಗಳು ನಿತ್ಯವಾಗಿವೆ ಎಂದು ವೈಶೇಷಿಕರು ಒಪ್ಪುತ್ತಾರೆ. ಹೀಗೆ ಒಪ್ಪಿದರೆ ಕಾರ್ಯವು ನಿತ್ಯವಾಗಬೇಕಾದೀತು. ಪ್ರಳಯವೇ ಇಲ್ಲವೆಂದು ಒಪ್ಪುವ ಪರಿಸ್ಥಿತಿ ಬರುತ್ತದೆ. ಸಕಲವಿಧವಾದ ಕಾರಣಗಳಿದ್ದರೂ ಕಾರ್ಯವು ಹುಟ್ಟುವುದಿಲ್ಲವೆಂದು ಹೇಳಿದರೆ ಸೃಷ್ಟಿಕಾಲದಲ್ಲಿಯೂ ಕೂಡ ಕಾರ್ಯವು ಹುಟ್ಟದೇ ಇರಬೇಕಾದೀತು.

ಪ್ರತಿಪದಾರ್ಥ -- ವೈಶೇಷಿಕರ ಪಕ್ಷದಲ್ಲಿ ಕಾರಣತ್ರಯವನ್ನು ನಿರಾಸಮಾಡುವ ಮೂಲಕ ಸೃಷ್ಟಿ ಪ್ರಕ್ರಿಯೆಯನ್ನು ನಿರಾಕರಣೆ ಮಾಡಿ ಪ್ರಳಯವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರ ಹೊರಟಿದೆ. ಪರಮಾಣೂನಾಂ = ಪರಮಾಣುಗಳು, ನಿತ್ಯತ್ವಾಚ್ಚ = ನಿತ್ಯವಾಗಿರುವುದರಿಂದಲೂ, ಸಮವಾಯಸ್ಯ ಚ = ಸಮವಾಯಸಂಬಂಧಕ್ಕೂ ಕೂಡ ನಿತ್ಯತ್ವವನ್ನು ಹೇಳಿರುವುದರಿಂದ, ತಸ್ಯೈವ = ಆ ಸಂಬಂಧಕ್ಕೆ, ಜನಿತ್ವಾಂಗೀಕಾರಾತ್ = ಜನನವನ್ನು ಒಪ್ಪಿರುವುದರಿಂದ, ನಿತ್ಯಮೇವ = ನಿರಂತರವಾಗಿ, ಕಾರ್ಯಂ = ಕಾರ್ಯವು, ಸ್ಯಾತ್ = ಆಗಬೇಕಾದೀತು. ಅನ್ಯಥಾ = ಕಾರಣಗಳಿದ್ದರೂ ಕಾರ್ಯವು ಹುಟ್ಟುವುದಿಲ್ಲವೆಂದು ಹೇಳಿದರೆ, ನ ಕದಾಚಿತ್ = ಸೃಷ್ಟಿಯ ಕಾಲದಲ್ಲಿಯೂ ಕೂಡ ಕಾರ್ಯವು ಹುಟ್ಟದೆ ಇರಬೇಕಾದೀತು.

## ಸತ್ತರ್ಕದೀಪಾವಳಿ

### ತಾರ್ಕಿಕರಿಗೆ ಅಪಸಿದ್ಧಾಂತ ದೋಷ

**सत्तर्कदीपावळिः – परमाण्वादिकारणसङ्घसद्भावेऽपि प्रलयकाले परमाणुसंयोगेन यदि किमपि कार्यं नोत्पद्यते तर्हि इदानीमपि नोत्पद्यताम् । अविशेषात् । असतः सत्तासमवायो जनिरित्यङ्गीकुर्वन् वैशेषिकः समवायवज्जनेरपि नित्यत्वमङ्गीकुर्यात् । न चानित्योऽपि कश्चन समवायोऽस्तीति वाच्यम् । अपसिद्धान्तापत्तेः । तदेतदाह । नित्यमेव चेत्यादिना ।**

ಪರಮಾಣ್ವಾದಿಕಾರಣಗಳ ಸಮೂಹವಿದ್ದರೂ ಪ್ರಳಯಕಾಲದಲ್ಲಿ ಪರಮಾಣುಗಳ ಸಂಯೋಗದಿಂದ ಯಾವುದೇ ಕಾರ್ಯ ಹುಟ್ಟುವುದಿಲ್ಲ ಎಂದು ಹೇಳಿದರೆ ಸೃಷ್ಟಿಯ ಕಾಲದಲ್ಲೂ ಕೂಡ ಯಾವುದೇ ಕಾರ್ಯವು ಹುಟ್ಟದೇ ಇರಬೇಕಾದೀತು. ಏಕೆಂದರೆ ಎರಡರಲ್ಲೂ ಯಾವುದೇ ವ್ಯತ್ಯಾಸವಿರುವುದಿಲ್ಲ. ಮತ್ತು ಅಸತ್‌ಪದಾರ್ಥಕ್ಕೆ ಸತ್ತಾಸಮವಾಯವನ್ನೇ ಉತ್ಪತ್ತಿಯೆಂದು ಕರೆಯುವುದಾದರೆ, ಈ ಉತ್ಪತ್ತಿಯೂ ಕೂಡ ನಿತ್ಯವೆಂದು ಹೇಳಬೇಕಾದೀತು. ಇನ್ನು ಅನಿತ್ಯವಾದ ಸಮವಾಯವೊಂದನ್ನು ಒಪ್ಪುವುದರಿಂದ ಉತ್ಪತ್ತಿಯು ನಿತ್ಯವಾಗುವುದಿಲ್ಲ ಎಂದು ಉತ್ತರಿಸಲು ಸಾಧ್ಯವಾಗುವುದಿಲ್ಲ. ಸಮವಾಯವನ್ನು ಹಾಗೇ ಹೇಳಿದರೆ ಅಪಸಿದ್ಧಾಂತದೋಷವು ಬರುತ್ತದೆ. ಇದನ್ನೇ 'ನಿತ್ಯಮೇವ ಚ' ಇತ್ಯಾದಿಯಾಗಿ ಭಾಷ್ಯದಲ್ಲಿ ಸಮರ್ಥನೆ ಮಾಡಿದ್ದಾರೆ.

## ತತ್ತ್ವಪ್ರದೀಪ

### ಕಾರ್ಯ ಆಗುತ್ತಲೇ ಇರಲಿ

**तत्वप्रदीपः – नित्यमेव च भावात् ।। परमाणूनां समवायिकारणानां कालादीनां निमित्तकारणानां च नित्यत्वात्सर्वदा कार्यं स्यात् । विशेषकारणाभावात् ।**

ಪರಮಾಣುಗಳು, ಸಮವಾಯಿಕಾರಣಗಳು, ಕಾಲಾದಿಗಳು ಹಾಗೂ ನಿಮಿತ್ತಕಾರಣಗಳು ಎಲ್ಲವೂ ಕೂಡ ತಾರ್ಕಿಕರ ಪ್ರಕಾರ ನಿತ್ಯವಾಗಿವೆ. ಹೀಗೆ ಕಾರಣಸಂಘಾತಗಳು ನಿರಂತರವಾಗಿರುವುದರಿಂದ ಕಾರ್ಯವೂ ಕೂಡ ನಿರಂತರವಾಗಿ ಆಗುತ್ತಲೇ ಇರಲಿ. ಕೆಲವೊಮ್ಮೆ ಮಾತ್ರ ಆಗುತ್ತದೆಂದು ಉತ್ತರಿಸಲು ವಿಶೇಷ ಪ್ರಮಾಣವಿಲ್ಲ.

## ತತ್ತ್ವಪ್ರಕಾಶಿಕಾ

### ತಾರ್ಕಿಕರು ಹೇಳುವ ಪ್ರಳಯನಿರಾಕರಣೆ

**तत्वप्रकाशिका – एवं परपक्षे कारणत्रयनिरासेन सृष्टिं निरस्य प्रलयनिरासार्थं सूत्रं पठित्वा व्याचष्टे ।। नित्यमिति ।।**

ವೈಶೇಷಿಕರ ಪಕ್ಷದಲ್ಲಿ ಸಮವಾಯಿಕಾರಣ, ಅಸಮವಾಯಿಕಾರಣ ಹಾಗೂ ನಿಮಿತ್ತ-ಕಾರಣಗಳನ್ನು ನಿರಾಕರಣೆ ಮಾಡಿದ್ದಾಯಿತು. ತನ್ಮೂಲಕವಾಗಿ ಅವರ ಸೃಷ್ಟಿಕ್ರಮವನ್ನು ನಿರಾಕರಿಸಿದ್ದಾಯಿತು. ಈಗ ಅವರು ಹೇಳುವ ಪ್ರಳಯವನ್ನು ನಿರಾಕರಣೆ ಮಾಡಲು 'ನಿತ್ಯಮೇವ ಚ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ.

## ತಾರ್ಕಿಕರಿಗೆ ನಿತ್ಯಪ್ರಳಯ ದೋಷ

**तत्वप्रकाशिका – परपक्षे कार्यं नित्यदा स्यान्न तु कदाचित्प्रलयः । समवायिकारणपरमाणूनां सदा सद्भावात् निमित्तस्य चेश्वरेच्छादेर्नित्यत्वात् । असमवायिकारणसंयोगाद्यभावान्नेति चेन्न । तदनुत्पत्तावपि कारणाभावात् ।**

ವೈಶೇಷಿಕರ ಪಕ್ಷದಲ್ಲಿ ಯಾವಾಗಲೂ ಕಾರ್ಯವೇ ಆಗುತ್ತಿರಲಿ ಪ್ರಳಯವೇ ಆಗುವುದು ಬೇಡವೆಂಬ ಅತಿಪ್ರಸಂಗ ಬರುತ್ತದೆ. ಏಕೆಂದರೆ ಕಾರ್ಯಕ್ಕೆ ಪ್ರಯೋಜಕವಾದ ಸಮವಾಯಿಕಾರಣ ಎನಿಸಿದ ಪರಮಾಣುಗಳು ಸದಾ ಇರುತ್ತವೆ. ನಿಮಿತ್ತಕಾರಣವಾದ ಈಶ್ವರೇಚ್ಛೆಯೂ ನಿತ್ಯವಾಗಿ ಇರುತ್ತದೆ. ಅಸಮವಾಯಿಕಾರಣವಾದ ಪರಮಾಣುಸಂಯೋಗ ಮೊದಲಾದವು ಪ್ರಳಯಕಾಲದಲ್ಲಿ ಇರುವುದಿಲ್ಲ. ಆದ್ದರಿಂದ ಕಾರ್ಯವು ಉತ್ಪತ್ತಿಯಾಗುವುದಿಲ್ಲವೆಂದು ಹೇಳಬಾರದು. ಪರಮಾಣು ಸಂಯೋಗವು ಹುಟ್ಟುವುದಿಲ್ಲವೆನ್ನಲೂ ಕೂಡ ಕಾರಣವಿಲ್ಲ.

## ಭಾವದೀಪ

**भावदीपः – ।। नित्यमेव च भावात् ।। १४ ।।** कार्यं नित्यमेव स्यादिति भाष्यं व्याघातनिरासाय व्याचष्टे – **कार्यं नित्यदेति ।।** सर्वैकान्यकिंयत्तदः काले देति दाप्रत्यये सत्यपि तदोदा चेति पुनर्दाविधिः शब्दान्तरादपि यथा स्यादित्येतदर्थमिति नित्यदेति साध्वित्याहुः। एवकारव्यावर्त्यमाह – **न त्विति ।।** परमाणूनामित्युपलक्षणमिति भावेनाह –**निमित्तस्य चेति ।।** नित्येच्छत्वात् परेशस्य परमाणुसदात्वतः। अदृष्टकालयोश्चैव भावात्कार्यं सदा भवेदित्यनुभाष्योक्तेरिति भावः ।।

'ಕಾರ್ಯಂ ನಿತ್ಯಮೇವ ಸ್ಯಾತ್' ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ಕಾರ್ಯವು ಯಾವತ್ತೂ ಕೂಡ ಅನಿತ್ಯವೇ ಆಗಿರುತ್ತದೆ. ಹೀಗಿರುವಾಗ ನಿತ್ಯವೇ ಆಗಬೇಕಾದೀತು ಎಂದು ಹೇಳಿದರೆ ವ್ಯಾಘಾತ ಬರುತ್ತದೆ. ಇದರ ಪರಿಹಾರಕ್ಕಾಗಿ 'ಕಾರ್ಯಂ ನಿತ್ಯದಾ' ಇತ್ಯಾದಿ ವಾಕ್ಯವು ಹೊರಟಿದೆ. ಪರಪಕ್ಷದವರಿಗೆ ಈ ದೋಷ ಬರುತ್ತದೆಂದು ತಿಳಿಯಬೇಕು.

'ಸರ್ವೈಕಾನ್ಯಕಿಂಯತ್ತದಃ ಕಾಲೇ ದಾ' ಎಂಬ ಸೂತ್ರದಿಂದ 'ದಾ' ಪ್ರತ್ಯಯವು ಬರುತ್ತಿದ್ದರೂ ಕೂಡ 'ತದೋದಾ ಚ' ಎಂಬ ಸೂತ್ರದಿಂದ ಪುನಃ 'ದಾ' ಎಂಬುದರ ವಿಧಿಯನ್ನು ಮಾಡಿದ್ದಾರೆ. ಇದರಿಂದ 'ಸರ್ವ' ಇತ್ಯಾದಿ ಶಬ್ದಗಳಿಗಷ್ಟೇ 'ದಾ' ಪ್ರತ್ಯಯವು ಬರುವುದಲ್ಲ. ಕಾಲವಾಚಿಯಾದ ಬೇರೆ ಶಬ್ದಗಳಿಗೂ ಕೂಡ 'ದಾ' ಪ್ರತ್ಯಯವು ಬರುತ್ತದೆಂದು ತಿಳಿಯುತ್ತದೆ. ಆದ್ದರಿಂದ 'ನಿತ್ಯದಾ' ಎಂಬ ಪ್ರಯೋಗವು ಸಾಧುವಾಗಿದೆ. ಭಾಷ್ಯದಲ್ಲಿ 'ನಿತ್ಯಮೇವ' ಎಂಬಲ್ಲಿರುವ ಏವಕಾರದಿಂದ ವ್ಯಾವರ್ತ್ಯವಾಗುವ ಆಕ್ಷೇಪವನ್ನು 'ನ ತು' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. 'ಪರಮಾಣೂನಾಮ್' ಎಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕೆಂದು 'ನಿಮಿತ್ತಸ್ಯ ಚ' ಎಂಬುದಾಗಿ ಹೇಳಿದ್ದಾರೆ.

ನಿತ್ಯೇಚ್ಛತ್ವಾತ್ ಪರೇಶಸ್ಯ ಪರಮಾಣುಸದಾತ್ವತಃ ।
ಅದೃಷ್ಟಕಾಲಯೋಶ್ಚೈವ ಭಾವಾತ್ಕಾರ್ಯಂ ಸದಾ ಭವೇತ್ ॥

ಪರಮಾತ್ಮನ ಇಚ್ಛೆಯು ನಿತ್ಯವಾಗಿದೆ. ಪರಮಾಣುಗಳೂ ಕೂಡ ನಿತ್ಯವಾಗಿವೆ. ಅದೃಷ್ಟಕಾಲಾದಿಗಳೂ ಕೂಡ ನಿತ್ಯವಾಗಿವೆ. ಈ ಎಲ್ಲಾ ಕಾರಣಗಳಿರುವುದರಿಂದ ಕಾರ್ಯವು ನಿತ್ಯವಾಗಿಯೂ ಆಗಬೇಕಾದೀತು ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಅದಕ್ಕನುಗುಣವಾಗಿ 'ನಿಮಿತ್ತಸ್ಯ ಚ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ್ದಾರೆಂದು ತಿಳಿಯಬೇಕು.

ವಿವರಣೆ - ಕಾರಣವಿದ್ದಾಗ ಕಾರ್ಯವು ಆಗಲೇಬೇಕು. ಪರಮಾಣುಸಂಯೋಗವೇ ಸಮವಾಯಿಕಾರಣವಾಗಿದೆ. ಇದು ನಿರಂತರ ಇರುವುದರಿಂದ ಯಾವಾಗಲೂ ಸೃಷ್ಟಿಯೇ ಆಗಲಿ ಪ್ರಳಯವು ಆಗದೆ ಇರಲಿ. ಈಶ್ವರೇಚ್ಛೆ, ಕಾಲ, ಪರಮಾಣುಸಂಯೋಗ, ಮೊದಲಾದ ಕಾರಣಗಳನ್ನು ವೈಶೇಷಿಕರು ನಿತ್ಯವಾಗಿವೆಯೆಂದು ಹೇಳುತ್ತಾರೆ. ಇವು ನಿತ್ಯವಾಗಿದ್ದಾಗ ಪ್ರಳಯವಾಗಲು ಹೇಗೆ ಸಾಧ್ಯ ?

ಅಸಮವಾಯಿಕಾರಣವೂ ಕೂಡ ಕಾರಣಕಲಾಪಗಳಲ್ಲಿ ಸೇರಿದೆ. ಪರಮಾಣುಗಳ ಸಂಯೋಗವೇ ಅಸಮವಾಯಿಕಾರಣವೆನಿಸಿದೆ. ಇದು ನಿರಂತರ ಇಲ್ಲದ್ದರಿಂದ ಸೃಷ್ಟಿ ಆಗುತ್ತಲೇ ಇರಲಿ ಎಂದು ಹೇಗೆ ಆಕ್ಷೇಪಿಸಿದಿರಿ? ಎಂದು ಪ್ರಶ್ನಿಸಿದರೆ 'ಅಸಮವಾಯಿಕಾರಣ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

### ಅದೃಷ್ಟವನ್ನು ಎಲ್ಲಿ ಆಶ್ರಯಿಸಬೇಕು ?

**तत्वप्रकाशिका – तदसमवायिकारणकर्माद्यभावस्य चानुपपत्तेः । अदृष्टस्य**

**च बाह्यसामग्रीसत्त्वे स्वाभावापराधेन कार्यनिरोधकत्वादर्शनात् । न चैवं वैयर्थ्यम्। सामग्रीसम्पत्तावुपयोगादिति भावः ।**

ಪರಮಾಣುಸಂಯೋಗಕ್ಕೆ ಅಸಮವಾಯಿಕಾರಣವಾದ ಕರ್ಮವು ಸಹ ಹುಟ್ಟದೆ ಇರಲು ಯಾವುದೇ ಕಾರಣವಿಲ್ಲ. ಇನ್ನು ಅದೃಷ್ಟ ಇಲ್ಲದ್ದರಿಂದ ಕರ್ಮವು ಹುಟ್ಟುವುದಿಲ್ಲ ಎನ್ನಬೇಕು. ಆದರೆ ಬಾಹ್ಯವಾದ ಸಾಮಗ್ರಿಗಳಿದ್ದಾಗ ಅದೃಷ್ಟವು ತಾನಿಲ್ಲದ್ದರಿಂದ ಕಾರ್ಯವನ್ನು ಹುಟ್ಟಿಸಿಲ್ಲ ಎನ್ನುವುದು ಎಲ್ಲಿಯೂ ಕಂಡಿಲ್ಲ. ಹಾಗಾದರೆ ಅದೃಷ್ಟವು ವ್ಯರ್ಥವಲ್ಲವೆ? ಎನ್ನಬಾರದು ಸಾಮಗ್ರಿಗಳನ್ನು ಕೂಡಿಸುವಲ್ಲಿ ಮಾತ್ರ ಅದೃಷ್ಟವು ಉಪಯೋಗವಾಗುತ್ತದೆ.

**भावदीपः – वैयर्थ्यमिति ।।** अदृष्टस्येत्यनुषङ्गः।

'ವೈಯರ್ಥ್ಯಮ್' ಎಂಬಲ್ಲಿ ಅದೃಷ್ಟಸ್ಯ ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು. ಆಗ ಅದೃಷ್ಟಕ್ಕೆ ವೈಯರ್ಥ್ಯವು ಬರುವುದಿಲ್ಲ ಎಂದರ್ಥವಾಗುತ್ತದೆ.

ಘಟಪಟಾದಿಪದಾರ್ಥಗಳ ಉತ್ಪತ್ತಿ ನಿರಂತರ ಆಗುತ್ತಲೇ ಇರಲಿ

**तत्वप्रकाशिका – किं च तत्पक्षे पदार्थजनिरपि नित्या स्यात् । समवायस्य नित्यमेव भावाङ्गीकारात् । प्रागसतः सत्तासमवायस्यैव जनित्वाभ्युपगमादिति सूत्रस्यार्थान्तरम्। समवायिकारणादिसत्त्वेऽपि कार्योत्पत्त्युपरमे बाधकमाह – अन्यथेति ।।**

ವೈಶೇಷಿಕರ ಪಕ್ಷದಲ್ಲಿ ಪದಾರ್ಥದ ಉತ್ಪತ್ತಿಯು ಯಾವಾಗಲೂ ಆಗುತ್ತಲೇ ಇರಲಿ ಎಂಬ ಮತ್ತೊಂದು ದೋಷವಿದೆ. ಏಕೆಂದರೆ ಸಮವಾಯವನ್ನು ನಿತ್ಯವೆಂದು ಒಪ್ಪಿರುವುದರಿಂದ ಸಮವಾಯಿಕಾರಣವೂ ಕೂಡ ನಿತ್ಯವಾಗಿರುತ್ತದೆ. ಮೊದಲು ಇಲ್ಲದಿರುವ ವಸ್ತುವಿಗೆ ಸತ್ತಾಸಮವಾಯವೇ ಉತ್ಪತ್ತಿ ಎಂದು ಒಪ್ಪಿರುವುದರಿಂದ ಸಮವಾಯವು ಯಾವಾಗಲೂ ಇದೆ ಎಂದು ಹೇಳಿದಂತಾಯಿತು. ಇದು ಸೂತ್ರಕ್ಕೆ ಮತ್ತೊಂದು ಅರ್ಥ. ಸಮವಾಯಿಕಾರಣ ಮೊದಲಾದವುಗಳಿದ್ದು ಕಾರ್ಯವು ಉತ್ಪತ್ತಿಯಾಗದಿದ್ದರೆ ಬಾಧಕವನ್ನು ಅನ್ಯಥಾ ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**भावदीपः** – अन्यथाशब्दस्यार्थं वदन्नेवावतारयति – **समवायिकारणादि–सत्त्वेऽपीति ।।** सति कारणे कार्यानुत्पादे तस्य कारणत्वायोगादिति भाष्याभिप्रायः ।।१४।।

ಭಾಷ್ಯದಲ್ಲಿರುವ 'ಅನ್ಯಥಾ' ಎಂಬ ಶಬ್ದದ ಅರ್ಥವನ್ನು ಹೇಳುವ ಮೂಲಕ ಅವತಾರಿಕೆ ನೀಡಲು 'ಸಮವಾಯಿಕಾರಣಾದಿಸತ್ತ್ವೇऽಪಿ' ಎಂಬ ವಾಕ್ಯವು ಹೊರಟಿದೆ. ಕಾರಣವಿದ್ದು ಕಾರ್ಯವು ಹುಟ್ಟದಿದ್ದರೆ ಅದಕ್ಕೆ ಕಾರಣತ್ವವೇ ಕೂಡುವುದಿಲ್ಲ ಎಂಬುದು ಭಾಷ್ಯದ ಅಭಿಪ್ರಾಯ.

ವಿವರಣೆ - ೧) ಸಮವಾಯಸಂಬಂಧವು ನಿರಂತರವಾಗಿರುವುದರಿಂದ ಕಾರ್ಯೋತ್ಪತ್ತಿಯೂ ನಿರಂತರವಾಗಿರಲಿ. ನಿತ್ಯಮೇವ - ಯಾವಾಗಲೂ ಭಾವಾತ್ - ಕಾರ್ಯೋತ್ಪತ್ತಿಯು ಆಗುತ್ತಲೇ ಇರಲಿ.

೨) ಸಮವಾಯವನ್ನು ನಿತ್ಯವೆಂದು ಒಪ್ಪಿರುವುದರಿಂದ ಭಾವಾತ್- ಅಂಗೀಕರಿಸಿರುವುದರಿಂದ ಮೊದಲು ಇಲ್ಲದಿರುವ ವಸ್ತುವಿಗೆ ಸತ್ತಾಸಮವಾಯವನ್ನೇ ಉತ್ಪತ್ತಿ ಎಂದು ಅಂಗೀಕರಿಸಿರುವುದರಿಂದ ಪದಾರ್ಥದ ಉತ್ಪತ್ತಿ ನಿರಂತರ ಆಗುತ್ತಲೇ ಇರಲಿ.

## ಬ್ರಹ್ಮಸೂತ್ರ

### 'ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್' ಎಂಬ ಸೂತ್ರ ವ್ಯಾಖ್ಯಾನ

### ब्रह्मसूत्रम् – रूपादिमत्त्वाच्च विपर्ययो दर्शनात् ।।

ಪಾರ್ಥಿವಪರಮಾಣು, ಜಲೀಯಪರಮಾಣು, ತೈಜಸಪರಮಾಣು ಇವುಗಳಲ್ಲಿ ರೂಪಾದಿ-ಗಳಿರುವುದರಿಂದ ಇವುಗಳೂ ಕೂಡ ಅನಿತ್ಯವಾಗಬೇಕಾದೀತು. ಏಕೆಂದರೆ ಯಾವುದು ರೂಪಾದಿಗಳುಳ್ಳದ್ದೋ ಅದು ಅನಿತ್ಯವಾಗಿರುತ್ತದೆ ಎಂಬ ವ್ಯಾಪ್ತಿಯು ಘಟಪಟಾದಿಗಳಲ್ಲಿ ಕಂಡಿರುತ್ತದೆ.

ಅರ್ಥ -- ಮತ್ತು ವೈಶೇಷಿಕರ ಮತದಲ್ಲಿ ಪಾರ್ಥಿವ ಪರಮಾಣು, ಜಲೀಯ ಪರಮಾಣು, ತೈಜಸ-ಪರಮಾಣುಗಳಿಗೆ ರೂಪರಸಾದಿಗಳಿರುವುದರಿಂದ, ರೂಪಾದಿಮತ್ತ್ವಾಚ್ಚ = ರೂಪಾದಿಗಳಿರುವುದರಿಂದಲೂ,

ವಿಪರ್ಯಯಃ = ನಿತ್ಯತ್ವಕ್ಕೆ ವಿಪರೀತವಾದ ಅನಿತ್ಯತ್ವವು ಬರಬೇಕಾದೀತು. ಏಕೆಂದರೆ ದರ್ಶನಾತ್ = ಯಾವುದು ರೂಪಾದಿವುಳ್ಳದ್ದೋ, ಅದು ಅನಿತ್ಯವಾಗಿದೆ ಎಂಬ ವ್ಯಾಪ್ತಿಯು ಘಟಾದಿಗಳಲ್ಲಿ ಕಂಡಿರುತ್ತದೆ. ಆದ್ದರಿಂದ ಪರಮಾಣ್ವಾದಿಗಳು ನಿತ್ಯವಾಗಿವೆ ಎಂಬ ತಾರ್ಕಿಕರ ನಿಲುವು ತಪ್ಪಾಗಿದೆ.

## ಬ್ರಹ್ಮಸೂತ್ರಭಾಷ್ಯ

### ರೂಪಾದಿಗಳಿದ್ದಲ್ಲಿ ಅನಿತ್ಯತ್ವವಿದೆ

**ब्रह्मसूत्रभाष्यम् – ।।रूपादिमत्त्वाच्च विपर्ययो दर्शनात् ।।५।।**

**रूपादिमत्त्वाच्च परमाणूनामनित्यत्वं, तथा दृष्टत्वाल्लोके ।।५।।**

ಅನುವಾದ - ಪರಮಾಣುಗಳಲ್ಲಿ ರೂಪ, ರಸ, ಗಂಧ, ಸ್ಪರ್ಶ ಮೊದಲಾದ ಗುಣಗಳಿವೆ ಯಾವ ವಸ್ತುವಿನಲ್ಲಿ ರೂಪಾದಿಮತ್ವವಿರುತ್ತದೋ ಅದಕ್ಕೆ ನಾಶವಿರುವುದು ಲೋಕದಲ್ಲಿ ಕಂಡಿದೆ. ಪರಮಾಣುಗಳಲ್ಲಿ ಈ ರೂಪರಸಾದಿಗಳು ಇರುವುದರಿಂದ ನಾಶವಾಗುತ್ತದೆ ಎಂದು ಒಪ್ಪಲೇಬೇಕು.

ಪ್ರತಿಪದಾರ್ಥ -- ಇಲ್ಲಿಯ ತನಕ ಪರಮಾಣುಗಳಿಗೆ ನಿತ್ಯತ್ವವನ್ನು ಒಪ್ಪಿ ಪರಮಾಣುವಿನಿಂದ ಸೃಷ್ಟಿ ಆಗುತ್ತದೆಂಬ ಪ್ರಕ್ರಿಯೆಯನ್ನು ನಿರಾಕರಣೆ ಮಾಡಲಾಯಿತು. ಈಗ ಪರಮಾಣುವಿಗೆ ನಿತ್ಯತ್ವವನ್ನೇ ನಿರಾಕರಿಸುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ - ರೂಪಾದಿಮತ್ವಾಚ್ಚ = ಭೌತಿಕವಾದ ರೂಪ, ರಸ, ಗಂಧ, ಸ್ಪರ್ಶಗಳು ಇರುವುದರಿಂದ, ಪರಮಾಣೂನಾಂ = ಪರಮಾಣುಗಳಿಗೆ, ಅನಿತ್ಯತ್ವಂ = ಅನಿತ್ಯತ್ವವನ್ನು ಒಪ್ಪಬೇಕು. ತಥಾ = ರೂಪಾದಿಗಳು ಇದ್ದಲ್ಲಿ ಅನಿತ್ಯತ್ವ ಇರುವುದು, ಲೋಕೇ = ಲೋಕದಲ್ಲಿ, ದೃಷ್ಟತ್ವಾತ್ = ಕಂಡಿರುವುದರಿಂದ.

## ಸತ್ತರ್ಕದೀಪಾವಳಿ

**सत्तर्कदीपावलिः – परमाणूनां नित्यत्वं यदभ्युपगतं तन्न युज्यते । रूपादिमत्त्वेन घटादिवत् अनित्यत्वानुमानसम्भवात् ।**

ಪರಮಾಣುಗಳು ನಿತ್ಯವಾಗಿವೆ ಎಂದು ತಾರ್ಕಿಕರು ಹೇಳಿದ್ದೂ ಕೂಡ ಅಯುಕ್ತವೇ ಆಗಿದೆ. ಘಟಾದಿಗಳು ರೂಪಾದಿಗಳಿರುವುದರಿಂದ ಹೇಗೆ ಅನಿತ್ಯವಾಗಿವೆಯೋ, ಅದರಂತೆ ಪರಮಾಣುವೂ ಕೂಡ ರೂಪಾದಿಗಳನ್ನು ಹೊಂದಿರುವುದರಿಂದ ಅನಿತ್ಯವೇ ಆಗುತ್ತವೆ.

## ತತ್ವಪ್ರದೀಪ

**तत्वप्रदीपः – रूपादिमत्त्वाच्च विपर्ययो दर्शनात् ।। रूपरसगन्धस्पर्शवत्त्वाच्च परमाणूनां स्वाभिमतनित्यत्वविपर्यय आपतत्यनुमानैकशरणानाम् । तथा हि लोके दृश्यते । चकारात्सावयवत्वं च।।**

ರೂಪ, ರಸ, ಗಂಧ, ಸ್ಪರ್ಶ ಎಂಬ ಗುಣಗಳಿರುವುದರಿಂದ ಪರಮಾಣುಗಳಿಗೆ ಸ್ವಾಭಿಮತವಾದ ನಿತ್ಯತ್ವಕ್ಕೆ ವಿರುದ್ಧವಾದ ಅನಿತ್ಯತ್ವಗಳೇ ಪ್ರಾಪ್ತವಾಗುತ್ತವೆ. ಅನುಮಾನೈಕ-ಶರಣರಾದ ತಾರ್ಕಿಕರಿಗೆ ಇದು ಅನಿವಾರ್ಯ. ಏಕೆಂದರೆ ಲೋಕದಲ್ಲಿ ಹಾಗೇ ಕಂಡಿದೆ. ಚಕಾರದಿಂದ ತಾರ್ಕಿಕರು ಹೇಳಿದ ಪರಮಾಣುವು ಸಾವಯವವೂ ಕೂಡ ಆಗಿದೆ ಎಂದು ತಿಳಿಯಬೇಕು.

ವಿವರಣೆ - 'ಪರಮಾಣವಃ ಅನಿತ್ಯಾ ರೂಪರಸಗಂಧಸ್ಪರ್ಶವತ್ತ್ವಾತ್ ಘಟಾದಿವತ್' ಎಂಬ ಅನುಮಾನದಿಂದ ತಾರ್ಕಿಕರಿಗೆ ಅನಿತ್ಯತ್ವವೇ ಸಿದ್ಧವಾಗುತ್ತದೆ. ಇದರಂತೆ 'ಪರಮಾಣವಃ ಸಾವಯವಾಃ ರೂಪರಸಗಂಧಾದಿಗುಣತ್ವಾತ್ ಘಟಾದಿವತ್' ಎಂಬ ಅನುಮಾನದಿಂದ ಪರಮಾಣುಗಳಲ್ಲಿ ಅವಯವವಿದೆ ಎಂಬುದೂ ಕೂಡ ಸಿದ್ಧವಾಗುತ್ತದೆ.

## ತತ್ವಪ್ರಕಾಶಿಕಾ

### ಪರಮಾಣು ನಿತ್ಯವೂ ಅಲ್ಲ

**तत्वप्रकाशिका – एवं परमाणूनां नित्यत्वमभ्युपेत्य तदारम्भवादो दूषितः । इदानीं तन्नित्यत्वमपि पराकुर्वत्सूत्रमुपन्यस्य व्याचष्टे – रूपादीति।। पार्थिवादिपरमाणूनां रूपादिमत्त्वहेतुना प्रकृतनित्यत्वविपर्ययो भवति । यद्रूपादिमत् तस्य घटादेरनित्यत्वदर्शनादित्यर्थः ।।**

ಇಲ್ಲಿಯ ತನಕ ಪರಮಾಣುವನ್ನು ನಿತ್ಯವೆಂದು ಅಂಗೀಕರಿಸಿ ವೈಶೇಷಿಕರ ಪರಮಾಣ್ವಾರಂಭ-ವಾದವನ್ನು ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಪರಮಾಣುಗಳ ನಿತ್ಯತ್ವವನ್ನೇ ನಿರಾಕರಣೆ ಮಾಡುವ ಸೂತ್ರವನ್ನು 'ರೂಪಾದಿಮತ್ವಾತ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಪಾರ್ಥಿವಾದಿ ಪರಮಾಣುಗಳಿಗೆ ರೂಪಾದಿಮತ್ವಹೇತುವಿನಿಂದ ನಿತ್ಯತ್ವಕ್ಕೆ ವಿರುದ್ಧವಾದ ಅನಿತ್ಯತ್ವವನ್ನು ಹೇಳಿದಂತಾಗುತ್ತದೆ. ಎಲ್ಲಿ ರೂಪಾದಿಮತ್ವ ಇದೆಯೋ ಅಂಥ ಘಟಾದಿಗಳಿಗೆ ಅನಿತ್ಯತ್ವವು ಕಂಡಿದೆ.

## ಭಾವದೀಪ

**।। रूपादिमत्त्वाच्च विपर्ययोऽदर्शनात् ।। १५ ।।**

**भावदीपः –** अनित्यत्वमित्यस्य व्याख्येयं दर्शयन् सूत्रार्थमाह – **पार्थिवादीति ।।** रूपादेर्भौतिकत्वलाभाय पार्थिवादीति विशेषोक्तिः। तेन नेश्वरादौ व्यभिचार इति भावः। उक्तं चैतत्। एवं चात्माकात्स्र्न्यमित्यत्रानुभाष्ये। भौतिकं त्वेव रूपादि व्याप्तं नाशेन नो मत इति।। १६ ।।

'ಅನಿತ್ಯತ್ವಮ್' ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ಇದಕ್ಕೆ ಸೂತ್ರದ ಯಾವ ಅಂಶವು ವ್ಯಾಖ್ಯೇಯವಾಗಿದೆ ಎಂಬುದನ್ನು ತೋರಿಸುವ ಮೂಲಕ ಸೂತ್ರಾರ್ಥವನ್ನು 'ಪಾರ್ಥಿವಾದಿ'

ಇತ್ಯಾದಿಯಾಗಿ ನಿರೂಪಣೆ ಮಾಡುತ್ತಿದ್ದಾರೆ. ರೂಪಾದಿಗಳು ಭೌತಿಕವಾಗಿದೆ ಎಂಬುದನ್ನು ತಿಳಿಸುವುದಕ್ಕಾಗಿ ಪಾರ್ಥಿವಾದಿ ಎಂದು ಹೇಳಿದ್ದಾರೆ. ಆದ್ದರಿಂದ ಈಶ್ವರನಲ್ಲಿ ರೂಪವಿದ್ದರೂ ಕೂಡ ಅನಿತ್ಯತ್ವ ಬರಲಿ ಎಂಬುದಾಗಿ ವ್ಯಭಿಚಾರವು ಬರುವುದಿಲ್ಲ. ಇದನ್ನೇ 'ಏವಂ ಚಾತ್ಮಾಕಾರ್ತ್ಸ್ನ್ಯಂ' ಎಂಬ ಸೂತ್ರದ ಅನುವ್ಯಾಖ್ಯಾನದಲ್ಲಿ 'ಭೌತಿಕಂ ತ್ವೇವ ರೂಪಾದಿ ವ್ಯಾಪ್ತಂ ನಾಶೇನ ನೋ ಮತಃ' ಭೌತಿಕವಾದ ರೂಪಾದಿಗಳಷ್ಟೇ ಅನಿತ್ಯತ್ವದಿಂದ ವ್ಯಾಪ್ತವಾಗಿದೆ ಎಂದು ಹೇಳಿದ್ದಾರೆ.

ವಿವರಣೆ - ಪಾರ್ಥಿವಪರಮಾಣು, ಜಲೀಯಪರಮಾಣು, ತೈಜಸಪರಮಾಣು ಇವುಗಳಲ್ಲಿ ರೂಪವತ್ತ್ವವಿದೆ. ವಾಯವೀಯಪರಮಾಣುವಿನಲ್ಲಿ ಸ್ಪರ್ಶವತ್ತ್ವವಿದೆ. ಆದ್ದರಿಂದ ರೂಪವತ್ತ್ವ ಹಾಗೂ ಸ್ಪರ್ಶವತ್ತ್ವ ಎಂಬ ಹೇತುವಿನಿಂದ ಅನಿತ್ಯತ್ವವನ್ನು ಸಾಧಿಸುತ್ತಿದ್ದಾರೆ. ಸೂತ್ರದಲ್ಲಿರುವ ಆದಿಪದದಿಂದ ಸ್ಪರ್ಶವತ್ತ್ವವೆಂಬ ಹೇತುವನ್ನು ವಿವಕ್ಷಿಸಬೇಕು. 'ಯತ್ರಯತ್ರ ರೂಪಾದಿಮತ್ತ್ವಂ ತತ್ರತತ್ರ ಅನಿತ್ಯತ್ವಮ್' ಎಂಬ ವ್ಯಾಪ್ತಿಯು ಘಟಾದಿಗಳಲ್ಲಿ ಕಂಡಿರುವುದರಿಂದ ಪರಮಾಣುವಿನಲ್ಲೂ ರೂಪವತ್ತ್ವಾದಿಗಳು ಇರುವುದರಿಂದ ಅನಿತ್ಯತ್ವವನ್ನು ಒಪ್ಪಬೇಕೆಂಬುದು ಸೂತ್ರದ ಅಭಿಪ್ರಾಯ. ಹಾಗಾದರೆ ಪರಮಾತ್ಮನಲ್ಲೂ ಅನಿತ್ಯತ್ವವನ್ನು ಒಪ್ಪಬೇಕಾಗುತ್ತದಲ್ಲವೆ? ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ರೂಪಾದಿಗಳಲ್ಲಿ ಭೌತಿಕತ್ವವನ್ನು ವಿಶೇಷಣವನ್ನಾಗಿ ನೀಡಬೇಕು. ಆಗ ಭೌತಿಕತ್ವವು ಈಶ್ವರನಲ್ಲಿಲ್ಲದ ಕಾರಣ ವ್ಯಭಿಚಾರಕ್ಕೆ ಅವಕಾಶವಿಲ್ಲ.

## ಬ್ರಹ್ಮಸೂತ್ರ

### 'ಉಭಯಥಾ ಚ ದೋಷಾತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – उभयथा च दोषात् ।।**

ಪರಮಾಣುಗಳು ನಿತ್ಯವಾದ ಪಕ್ಷದಲ್ಲಿ ಅನಿತ್ಯವಾದ ಪಕ್ಷದಲ್ಲಿ ದೋಷವು ಸಮಾನವಾಗಿರುವುದರಿಂದ ವೈಶೇಷಿಕರ ಮತವು ಅಸಮಂಜಸವಾಗಿದೆ.

ಅರ್ಥ -- ವೈಶೇಷಿಕರ ಮತದಲ್ಲಿ ಉಭಯಥಾ ಚ = ಪರಮಾಣುಗಳ ನಿತ್ಯತ್ವ, ಅನಿತ್ಯತ್ವವೆಂಬ ಎರಡೂ ಪಕ್ಷಗಳಲ್ಲಿಯೂ, ದೋಷಾತ್ = ದೋಷವಿರುವುದರಿಂದ ವೈಶೇಷಿಕಮತವು ಅಸಾಧುವಾಗಿದೆ. ಅಂದರೆ ನಿತ್ಯವೆಂದು

ಹೇಳಿದರೆ ಘಟಾದಿ ವಸ್ತುಗಳೂ ಕೂಡ ನಿತ್ಯವಾಗಬೇಕಾದೀತು. ಘಟವು ಹೇಗೆ ಸಾವಯವವಾಗಿದೆಯೋ, ಆದರಂತೆ ಪರಮಾಣವೂ ಕೂಡ ಸಾವಯವ ಆಗಬೇಕಾದೀತು. ಪರಮಾಣುಗಳು ಅನಿತ್ಯವೆಂದು ಹೇಳಿದರೆ ಪರಮಾಣು ನಾಶವಾದ ಮೇಲೆ ಪುನಃ ಅದೇ ಪರಮಾಣು ಹುಟ್ಟಲು ಕಾರಣವಿಲ್ಲದ್ದರಿಂದ ಪರಮಾಣುವನ್ನು ಅವಲಂಬಿಸಿದ ಕಾರ್ಯಪ್ರಪಂಚವವೇ ಇಲ್ಲವೆಂದಾಗಬೇಕಾದೀತು ಎಂದಭಿಪ್ರಾಯ.

## ಬ್ರಹ್ಮಸೂತ್ರಭಾಷ್ಯ

### ಪರಮಾಣುಗಳು ನಿತ್ಯವೋ ? ಅನಿತ್ಯವೋ?

**ब्रह्मसूत्रभाष्यम् – ।। उभयथा च दोषात् ।।६।।**

**नित्यत्वे परमाणूनां तद्वत् सर्वनित्यत्वं स्यात् । विशेषप्रमाणाभावात्। अनित्यत्वे कारणाभावात् तदुत्पत्त्यभावः ।।६।।**

ಅನುವಾದ - ಪರಮಾಣುಗಳು ರೂಪ ರಸಗಳುಳ್ಳದ್ದಾಗಿವೆ. ಆದರೂ ನಿತ್ಯವಾಗುವುದಾದರೆ ಘಟಪಟಾದಿಗಳೂ ಕೂಡ ನಿತ್ಯವೇ ಆಗಬೇಕಾದೀತು. ಪರಮಾಣುಗಳು ಮಾತ್ರ ನಿತ್ಯವಾಗಿವೆ ಎನ್ನಲು ವಿಶೇಷ ಪ್ರಮಾಣ ಇರುವುದಿಲ್ಲ. ಹಾಗೇನಾದರು ಪರಮಾಣುಗಳಿಗೆ ಅನಿತ್ಯತ್ವವನ್ನು ಒಪ್ಪಿದರೆ ಆ ಪರಮಾಣುಗಳಿಗೆ ಕಾರಣವೇ ಇಲ್ಲದ್ದರಿಂದ ಪರಮಾಣುಗಳ ಉತ್ಪತ್ತಿಯೇ ಅಸಂಭಾವಿತವಾಗುತ್ತದೆ.

ಪ್ರತಿಪದಾರ್ಥ -- ಪರಮಾಣೂನಾಂ = ಪರಮಾಣುಗಳಿಗೆ, ನಿತ್ಯತ್ವೇ = ನಿತ್ಯತ್ವವನ್ನು ಒಪ್ಪಿದರೆ, ತದ್ವತ್ = ಪರಮಾಣುಗಳ ದೃಷ್ಟಾಂತದಂತೆ, ಸರ್ವನಿತ್ಯತ್ವಂ = ಘಟಪಟಾದಿಗಳಿಗೂ ನಿತ್ಯತ್ವವು, ಸ್ಯಾತ್ = ಬರಬೇಕಾದೀತು. ವಿಶೇಷಪ್ರಮಾಣಾಭಾವಾತ್ =ಪರಮಾಣುಗಳಿಗೆ ನಿತ್ಯತ್ವವಿದೆ. ಆದರೆ ಘಟಪಟಾದಿಗಳಿಗೆ ನಿತ್ಯತ್ವ ಇಲ್ಲವೆನ್ನಲು ಯಾವುದೇ ವಿಶೇಷ ಪ್ರಮಾಣ ಇರುವುದಿಲ್ಲ. ಅನಿತ್ಯತ್ವೇ = ಪರಮಾಣುಗಳಿಗೆ ಅನಿತ್ಯತ್ವವನ್ನು ಒಪ್ಪಿದರೆ, ಕಾರಣಾಭಾವಾತ್ = ಅನಿತ್ಯತ್ವಕ್ಕೆ ಕಾರಣವಿಲ್ಲದಿರುವುದರಿಂದ, ತದುತ್ಪತ್ತ್ಯಭಾವಃ = ಪರಮಾಣುಗಳ ಉತ್ಪತ್ತಿಯೇ ಇಲ್ಲದಿರಬೇಕಾದೀತು..

## ಸತ್ತರ್ಕದೀಪಾವಳಿ

**सत्तर्कदीपावळिः** – यादि रूपादिमतामपि परमाणूनां नित्यत्वमङ्गीक्रियते तर्हि घटादीनामपि तदङ्गीक्रियतामविशेषात् । न च परमाणूनां प्रलये विनाशोऽस्तु का हानिरिति वाच्यम् । समवायिकारणाभावेन पुनः पृथिव्यादिसृष्ट्यभावप्रसङ्गात् ।

ಒಂದು ವೇಳೆ ರೂಪರಸಾದಿಗಳುಳ್ಳ ಪರಮಾಣುಗಳನ್ನು ನಿತ್ಯವೆಂದು ಅಂಗೀಕಾರ ಮಾಡುವುದಾದರೆ, ಘಟಾದಿಗಳನ್ನೂ ಕೂಡ ನಿತ್ಯವೆಂದು ಒಪ್ಪಬೇಕಾದೀತು. ಎರಡರಲ್ಲೂ ಯಾವುದೇ ವ್ಯತ್ಯಾಸವಿಲ್ಲ. ಪರಮಾಣುಗಳೂ ಕೂಡ ಪ್ರಳಯಕಾಲದಲ್ಲಿ ನಾಶವನ್ನು ಹೊಂದಲಿ ಏನು ತೊಂದರೆ ? ಎಂದು ಹೇಳಬಾರದು. ಆ ಪರಮಾಣುಗಳಿಗೆ ಸಮವಾಯಿಕಾರಣವೇ ಇಲ್ಲದ್ದರಿಂದ ಪುನಃ ಪೃಥಿವ್ಯಾದಿಸೃಷ್ಟಿಯೇ ಅನುಪಪನ್ನವಾಗುತ್ತದೆ. ಆದ್ದರಿಂದ ಪರಮಾಣುಗಳನ್ನು ನಿತ್ಯವೆಂದು ಅಂಗೀಕರಿಸಲಾದು.

## ತತ್ವಪ್ರದೀಪ

**तत्वप्रदीपः** – उभयथा च दोषात् ।। परमाणूनां नित्यत्वमभिमतम् । तत्र दोष उक्तः । अनित्यत्वमुक्तव्याप्तिबलादभ्युपगन्तव्यम् । तत्र च मूलकारणाभावप्रसङ्गोऽपसिद्धान्तश्च दोषोऽर्थसिद्धः । अथ चोभयत्र दूषणान्तरमुच्यते । रूपादिमत्त्वेऽपि परमाणूनां नित्यत्वमिष्टं चेत्तद्वद्रूपादिमतः सर्वस्य नित्यत्वप्रसङ्गः। रूपादिमत्त्वस्यानित्यत्वाव्याप्यत्वात् । रूपादिमदपि किञ्चिन्नित्यं किञ्चिदनित्यमिति विशेषसाधक प्रमाणाभावात्तेषाम् । न च कृतकत्वादनित्यत्वमितरस्य, तदभावात्परमाणूनां नित्यत्वमिति वाच्यम् । रूपादिमत्त्वादेव घटादिवत्तद्भावापत्तेः । अणुपरिमाणं क्वचिद्विश्रान्तं परिमाणत्वान्महत्परिमाणवदिति च न नित्यपरमाणुप्रमाणम् ।

**साध्यविकलत्वाद्दृष्टान्तस्य। महत्त्वस्याविश्रान्तेः । ''महतो महीयान्'' ''सत्यं ज्ञानमनन्तं ब्रह्म'' इत्यादिश्रुतेः । क्वचिदिति चाप्रसिद्धविशेषणः पक्षः ।।**

ಪರಮಾಣುಗಳು ನಿತ್ಯವಾಗಿವೆ ಎಂಬುದು ತಾರ್ಕಿಕರ ಅಭಿಪ್ರಾಯ. ಆದರೆ ಈ ವಿಷಯದಲ್ಲಿ ನಾವು ದೋಷವನ್ನು ಈಗಾಗಲೇ ಹೇಳಿದ್ದೇವೆ. ಆದ್ದರಿಂದ ಪರಮಾಣುಗಳನ್ನು ಅನಿತ್ಯವೆಂದೇ ಹಿಂದೆ ಹೇಳಿದ ವ್ಯಾಪ್ತಿಯ ಬಲದಿಂದ ಅಂಗೀಕರಿಸಬೇಕು. ಅನಿತ್ಯತ್ವಪಕ್ಷದಲ್ಲಿ ಮೂಲಕಾರಣವೇ ಇಲ್ಲದಂತಾಗುತ್ತದೆ. ಮತ್ತು ಅಪಸಿದ್ಧಾಂತ ಎಂಬೆರಡು ದೋಷಗಳು ಅರ್ಥಾತ್ ಸಿದ್ಧವಾಗುತ್ತವೆ. ಹೀಗೆ ನಿತ್ಯವೆಂದಾಗಲೀ, ಅನಿತ್ಯವೆಂದಾಗಲೀ ಎರಡೂ ಪಕ್ಷಗಳಲ್ಲಿ ದೋಷವನ್ನು ಹೇಳಿದ್ದಾಯಿತು. ಈಗ ಮತ್ತೊಂದು ದೋಷವು ಹೇಳುತ್ತಿದ್ದಾರೆ.

ರೂಪಾದಿಗಳು ಇದ್ದರೂ ಕೂಡ ಪರಮಾಣುಗಳು ನಿತ್ಯವೆಂದು ಹೇಳುವುದಾದರೆ, ರೂಪಾದಿಗಳುಳ್ಳ ಸಕಲಪದಾರ್ಥಗಳೂ ಕೂಡ ನಿತ್ಯವೇ ಆಗಬೇಕಾದೀತು. ಏಕೆಂದರೆ ರೂಪಾದಿಮತ್ವವು ನಿಮ್ಮ ಪ್ರಕಾರ ಅನಿತ್ಯತ್ವದಿಂದ ವ್ಯಾಪ್ಯವಾಗಿರುವುದಿಲ್ಲ. ರೂಪಾದಿಗಳಿದ್ದರೂ ಕೂಡ ಕೆಲವು ನಿತ್ಯ, ಕೆಲವು ಅನಿತ್ಯ ಎಂದು ಹೇಳಲು ವಿಶೇಷಸಾಧಕಪ್ರಮಾಣವು ಇರುವುದಿಲ್ಲ.

ಘಟಾದಿಗಳು ಕೃತಕವಾಗಿರುವುದರಿಂದ ಅನಿತ್ಯವಾಗಿವೆ. ಪರಮಾಣುಗಳು ಕೃತಕವಲ್ಲದ್ದರಿಂದ ನಿತ್ಯವಾಗಿವೆ ಎಂದು ಹೇಳಬಹುದಲ್ಲವೇ? ಇದೂ ಕೂಡ ತಪ್ಪು. ರೂಪಾದಿಗಳಿರುವುದರಿಂದಲೇ ಘಟಾದಿಗಳಂತೆ ಪರಮಾಣುಗಳು ಅನಿತ್ಯವಾಗಲಿ ಎಂಬುದೇ ನಾವು ಮಾಡುತ್ತಿರುವ ಆಪಾದನೆಯಾಗಿದೆ.

'ಅಣುಪರಿಮಾಣಮ್ ಕ್ವಚಿದ್ವಿಶ್ರಾಂತಂ ಪರಿಮಾಣತ್ವಾತ್ ಮಹತ್‌ಪರಿಮಾಣವತ್' ಮಹತ್‌ಪರಿಮಾಣವು ಪರಿಮಾಣವಾಗಿರುವುದರಿಂದ ಒಂದು ಕಡೆ ವಿಶ್ರಾಂತಿಯನ್ನು ಪಡೆದಿದೆ. ಅದರಂತೆ ಅಣುಪರಿಮಾಣವೂ ಕೂಡ ಪರಿಮಾಣವಾಗಿರುವುದರಿಂದ ಒಂದು ಕಡೆ ವಿಶ್ರಾಂತಿ ಪಡೆಯಬೇಕು. ಅದನ್ನೇ ನಾವು ಪರಮಾಣುವೆಂದು ಹೇಳುತ್ತೇವೆ.

ಈ ತಾರ್ಕಿಕರ ಈ ಅನುಮಾನವೂ ಕೂಡ ಅಸಾಧಕವಾಗಿದೆ. ದೃಷ್ಟಾಂತದಲ್ಲಿ 'ಕ್ವಚಿದ್ವಿಶ್ರಾಂತಿ' ಎಂಬ ಸಾಧ್ಯವೇ ಇರುವುದಿಲ್ಲ. ಏಕೆಂದರೆ ಮಹತ್ವಕ್ಕೆ ವಿಶ್ರಾಂತಿಯನ್ನು ನಾವು ಒಪ್ಪಿರುವುದಿಲ್ಲ. 'ಮಹತೋ ಮಹೀಯಾನ್' ಮಹತ್ತಿಗಿಂತಲೂ ಮಹೀಯನಾಗಿದ್ದಾನೆ. 'ಸತ್ಯಂ ಜ್ಞಾನಮನಂತಂ

ಬ್ರಹ್ಮ' ಬ್ರಹ್ಮನು ಅನಂತನಾಗಿದ್ದಾನೆ. ಇವೇ ಮೊದಲಾದ ಶ್ರುತಿಗಳಿಂದ ಮಹತ್ವಕ್ಕೆ ಅವಿಶ್ರಾಂತಿಯು ಸಿದ್ಧವಾಗಿದೆ. ಮತ್ತು ಸಾಧ್ಯದಲ್ಲಿ 'ಕ್ವಚಿತ್' ಎಂಬ ಪದವನ್ನು ನಿವೇಶ ಮಾಡಿರುವುದರಿಂದ ಪಕ್ಷವು ಅಪ್ರಸಿದ್ಧವಿಶೇಷಣವುಳ್ಳದ್ದಾಗುತ್ತದೆ.

## ತತ್ವಪ್ರಕಾಶಿಕಾ

### ಪರಮಾಣು ಅನಿತ್ಯವಾದರೆ ಬಾಧಕವೇನು ?

**तत्वप्रकाशिका – ननु रूपादिमत्त्वेऽपि परमाणूनां नित्यत्वं किं न स्यात् अस्तु वाऽनित्यत्वं किं बाधकमित्यशङ्कां परिहरत्सूत्रमुपन्यस्य व्याचष्टे – उभयथा चेति ।।**

ರೂಪಾದಿಗಳಿದ್ದರೂ ಪರಮಾಣುವಿನಲ್ಲಿ ನಿತ್ಯತ್ವವನ್ನು ಏಕೆ ಒಪ್ಪಬಾರದು ? ಅಥವಾ ಆ ಪರಮಾಣುಗಳು ಅನಿತ್ಯವೇ ಆದರೆ ಏನು ಬಾಧಕ ? ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ಉಭಯಥಾಚ ದೋಷಾತ್' ಎಂಬ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಪರಮಾಣವಃ ಅನಿತ್ಯಾಃ ರೂಪಾದಿಮತ್ವಾತ್ ಘಟವತ್, ಯತ್ ರೂಪಾದಿಮತ್ ತದ್ ಅನಿತ್ಯಮ್' ಎಂಬ ಅನುಮಾನದಿಂದ ಹಿಂದಿನ ಸೂತ್ರದಲ್ಲಿ ಪರಮಾಣುಗಳಿಗೆ ಅನಿತ್ಯತ್ವವನ್ನು ಸಾಧನೆ ಮಾಡಲಾಯಿತು. ಈ ಅನುಮಾನದಲ್ಲಿ 'ರೂಪಾದಿಮತ್ವ' ಎಂಬ ಹೇತುವಿರಲಿ ಅನಿತ್ಯತ್ವವು ಇರುವುದು ಬೇಡ ಎಂಬ ಅಪ್ರಯೋಜಕಾಶಂಕೆಯನ್ನು ಈ ಸೂತ್ರದಲ್ಲಿ ಪರಿಹರಿಸುತ್ತಿದ್ದಾರೆ. ಮತ್ತು 'ಯದಿ ಪರಮಾಣವಃ ರೂಪಾದಿಮಂತಃ ಭವೇಯುಃ ತರ್ಹಿ ಅನಿತ್ಯಾಃ ಸ್ಯುಃ' ಎಂಬ ತರ್ಕಕ್ಕೆ ಇಷ್ಟಾಪತ್ತಿಯನ್ನು ಆಕ್ಷೇಪಿಸುತ್ತಿದ್ದಾರೆ.

ಪರಮಾಣುಗಳು ಸಾದಿಯೇ ಆಗಲಿ ಆದರೂ ಇವುಗಳಿಂದ ದ್ವ್ಯಣುಕಾದಿಕಾರ್ಯಗಳು ಉತ್ಪನ್ನವಾಗುವುದಿಲ್ಲ ಎಂದು ಆಪಾದಿಸಲಾಗದು. ಪರಮಾಣುಗಳು ಕಾರಣಾಂತರಗಳಿಂದ ಉತ್ಪನ್ನವಾಗುತ್ತವೆ. ಇಂಥ ಪರಮಾಣುಗಳಿಂದ ದ್ವ್ಯಣುಕಾದಿಕಾರ್ಯಗಳು ಉತ್ಪನ್ನವಾಗುತ್ತವೆ. ಹೀಗೆ ಹೇಳಬಹುದಲ್ಲವೆ? ಎಂಬ ಆಶಂಕೆಗೆ 'ನನು' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**साध्यविकलत्वाद्दृष्टान्तस्य। महत्त्वस्याविश्रान्तेः । ''महतो महीयान्'' ''सत्यं ज्ञानमनन्तं ब्रह्म'' इत्यादिश्रुतेः । क्वचिदिति चाप्रसिद्धविशेषणः पक्षः ।।**

ಪರಮಾಣುಗಳು ನಿತ್ಯವಾಗಿವೆ ಎಂಬುದು ತಾರ್ಕಿಕರ ಅಭಿಪ್ರಾಯ. ಆದರೆ ಈ ವಿಷಯದಲ್ಲಿ ನಾವು ದೋಷವನ್ನು ಈಗಾಗಲೇ ಹೇಳಿದ್ದೇವೆ. ಆದ್ದರಿಂದ ಪರಮಾಣುಗಳನ್ನು ಅನಿತ್ಯವೆಂದೇ ಹಿಂದೆ ಹೇಳಿದ ವ್ಯಾಪ್ತಿಯ ಬಲದಿಂದ ಅಂಗೀಕರಿಸಬೇಕು. ಅನಿತ್ಯತ್ವಪಕ್ಷದಲ್ಲಿ ಮೂಲಕಾರಣವೇ ಇಲ್ಲದಂತಾಗುತ್ತದೆ. ಮತ್ತು ಅಪಸಿದ್ಧಾಂತ ಎಂಬೆರಡು ದೋಷಗಳು ಅರ್ಥಾತ್ ಸಿದ್ಧವಾಗುತ್ತವೆ. ಹೀಗೆ ನಿತ್ಯವೆಂದಾಗಲೀ, ಅನಿತ್ಯವೆಂದಾಗಲೀ ಎರಡೂ ಪಕ್ಷಗಳಲ್ಲಿ ದೋಷವನ್ನು ಹೇಳಿದ್ದಾಯಿತು. ಈಗ ಮತ್ತೊಂದು ದೋಷವು ಹೇಳುತ್ತಿದ್ದಾರೆ.

ರೂಪಾದಿಗಳು ಇದ್ದರೂ ಕೂಡ ಪರಮಾಣುಗಳು ನಿತ್ಯವೆಂದು ಹೇಳುವುದಾದರೆ, ರೂಪಾದಿಗಳುಳ್ಳ ಸಕಲಪದಾರ್ಥಗಳೂ ಕೂಡ ನಿತ್ಯವೇ ಆಗಬೇಕಾದೀತು. ಏಕೆಂದರೆ ರೂಪಾದಿಮತ್ವವು ನಿಮ್ಮ ಪ್ರಕಾರ ಅನಿತ್ಯತ್ವದಿಂದ ವ್ಯಾಪ್ಯವಾಗಿರುವುದಿಲ್ಲ. ರೂಪಾದಿಗಳಿದ್ದರೂ ಕೂಡ ಕೆಲವು ನಿತ್ಯ, ಕೆಲವು ಅನಿತ್ಯ ಎಂದು ಹೇಳಲು ವಿಶೇಷಸಾಧಕಪ್ರಮಾಣವು ಇರುವುದಿಲ್ಲ.

ಘಟಾದಿಗಳು ಕೃತಕವಾಗಿರುವುದರಿಂದ ಅನಿತ್ಯವಾಗಿವೆ. ಪರಮಾಣುಗಳು ಕೃತಕವಲ್ಲದ್ದರಿಂದ ನಿತ್ಯವಾಗಿವೆ ಎಂದು ಹೇಳಬಹುದಲ್ಲವೇ? ಇದೂ ಕೂಡ ತಪ್ಪು. ರೂಪಾದಿಗಳಿರುವುದರಿಂದಲೇ ಘಟಾದಿಗಳಂತೆ ಪರಮಾಣುಗಳು ಅನಿತ್ಯವಾಗಲಿ ಎಂಬುದೇ ನಾವು ಮಾಡುತ್ತಿರುವ ಆಪಾದನೆಯಾಗಿದೆ.

'ಅಣುಪರಿಮಾಣಮ್ ಕ್ವಚಿದ್ವಿಶ್ರಾಂತಂ ಪರಿಮಾಣತ್ವಾತ್ ಮಹತ್‌ಪರಿಮಾಣವತ್' ಮಹತ್‌ಪರಿಮಾಣವು ಪರಿಮಾಣವಾಗಿರುವುದರಿಂದ ಒಂದು ಕಡೆ ವಿಶ್ರಾಂತಿಯನ್ನು ಪಡೆದಿದೆ. ಅದರಂತೆ ಅಣುಪರಿಮಾಣವೂ ಕೂಡ ಪರಿಮಾಣವಾಗಿರುವುದರಿಂದ ಒಂದು ಕಡೆ ವಿಶ್ರಾಂತಿ ಪಡೆಯಬೇಕು. ಅದನ್ನೇ ನಾವು ಪರಮಾಣುವೆಂದು ಹೇಳುತ್ತೇವೆ.

ಈ ತಾರ್ಕಿಕರ ಈ ಅನುಮಾನವೂ ಕೂಡ ಅಸಾಧಕವಾಗಿದೆ. ದೃಷ್ಟಾಂತದಲ್ಲಿ 'ಕ್ವಚಿದ್ವಿಶ್ರಾಂತಿ' ಎಂಬ ಸಾಧ್ಯವೇ ಇರುವುದಿಲ್ಲ. ಏಕೆಂದರೆ ಮಹತ್ವಕ್ಕೆ ವಿಶ್ರಾಂತಿಯನ್ನು ನಾವು ಒಪ್ಪಿರುವುದಿಲ್ಲ. 'ಮಹತೋ ಮಹೀಯಾನ್' ಮಹತ್ತಿಗಿಂತಲೂ ಮಹೀಯನಾಗಿದ್ದಾನೆ. 'ಸತ್ಯಂ ಜ್ಞಾನಮನಂತಂ

ಬ್ರಹ್ಮ' ಬ್ರಹ್ಮನು ಅನಂತನಾಗಿದ್ದಾನೆ. ಇವೇ ಮೊದಲಾದ ಶ್ರುತಿಗಳಿಂದ ಮಹತ್ವಕ್ಕೆ ಅವಿಶ್ರಾಂತಿಯು ಸಿದ್ಧವಾಗಿದೆ. ಮತ್ತು ಸಾಧ್ಯದಲ್ಲಿ 'ಕ್ವಚಿತ್' ಎಂಬ ಪದವನ್ನು ನಿವೇಶ ಮಾಡಿರುವುದರಿಂದ ಪಕ್ಷವು ಅಪ್ರಸಿದ್ಧವಿಶೇಷಣವುಳ್ಳದ್ದಾಗುತ್ತದೆ.

### ತತ್ವಪ್ರಕಾಶಿಕಾ

ಪರಮಾಣು ಅನಿತ್ಯವಾದರೆ ಬಾಧಕವೇನು ?

**तत्वप्रकाशिका – ननु रूपादिमत्त्वेऽपि परमाणूनां नित्यत्वं किं न स्यात् अस्तु वाऽनित्यत्वं किं बाधकमित्यशङ्कां परिहरत्सूत्रमुपन्यस्य व्याचष्टे – उभयथा चेति ।।**

ರೂಪಾದಿಗಳಿದ್ದರೂ ಪರಮಾಣುವಿನಲ್ಲಿ ನಿತ್ಯತ್ವವನ್ನು ಏಕೆ ಒಪ್ಪಬಾರದು ? ಅಥವಾ ಆ ಪರಮಾಣುಗಳು ಅನಿತ್ಯವೇ ಆದರೆ ಏನು ಬಾಧಕ ? ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ಉಭಯಥಾಚ ದೋಷಾತ್' ಎಂಬ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಪರಮಾಣವಃ ಅನಿತ್ಯಾಃ ರೂಪಾದಿಮತ್ವಾತ್ ಘಟವತ್, ಯತ್ ರೂಪಾದಿಮತ್ ತದ್ ಅನಿತ್ಯಮ್' ಎಂಬ ಅನುಮಾನದಿಂದ ಹಿಂದಿನ ಸೂತ್ರದಲ್ಲಿ ಪರಮಾಣುಗಳಿಗೆ ಅನಿತ್ಯತ್ವವನ್ನು ಸಾಧನೆ ಮಾಡಲಾಯಿತು. ಈ ಅನುಮಾನದಲ್ಲಿ 'ರೂಪಾದಿಮತ್ವ' ಎಂಬ ಹೇತುವಿರಲಿ ಅನಿತ್ಯತ್ವವು ಇರುವುದು ಬೇಡ ಎಂಬ ಅಪ್ರಯೋಜಕಾಶಂಕೆಯನ್ನು ಈ ಸೂತ್ರದಲ್ಲಿ ಪರಿಹರಿಸುತ್ತಿದ್ದಾರೆ. ಮತ್ತು 'ಯದಿ ಪರಮಾಣವಃ ರೂಪಾದಿಮಂತಃ ಭವೇಯುಃ ತರ್ಹಿ ಅನಿತ್ಯಾಃ ಸ್ಯುಃ' ಎಂಬ ತರ್ಕಕ್ಕೆ ಇಷ್ಟಾಪತ್ತಿಯನ್ನು ಆಕ್ಷೇಪಿಸುತ್ತಿದ್ದಾರೆ.

ಪರಮಾಣುಗಳು ಸಾದಿಯೇ ಆಗಲಿ ಆದರೂ ಇವುಗಳಿಂದ ದ್ವ್ಯಣುಕಾದಿಕಾರ್ಯಗಳು ಉತ್ಪನ್ನವಾಗುವುದಿಲ್ಲ ಎಂದು ಆಪಾದಿಸಲಾಗದು. ಪರಮಾಣುಗಳು ಕಾರಣಾಂತರಗಳಿಂದ ಉತ್ಪನ್ನವಾಗುತ್ತವೆ. ಇಂಥ ಪರಮಾಣುಗಳಿಂದ ದ್ವ್ಯಣುಕಾದಿಕಾರ್ಯಗಳು ಉತ್ಪನ್ನವಾಗುತ್ತವೆ. ಹೀಗೆ ಹೇಳಬಹುದಲ್ಲವೆ? ಎಂಬ ಆಶಂಕೆಗೆ 'ನನು' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

### ಪರಮಾಣುಗಳಿಗೂ ಅವಯವಗಳಿವೆ

**तत्वप्रकाशिका – यदि रूपादिमतामपि परमाणूनां नानित्यत्वं तर्हि तद्वद्घटादेरपि किं न स्यात्। न चावयदित्वाविविशेषः । रूपादिमत्त्वादेव तत्सिद्धेः ।**

ಒಂದುವೇಳೆ ರೂಪಾದಿಗಳು ಇದ್ದರೂ ಕೂಡ ಪರಮಾಣುಗಳಲ್ಲಿ ಅನಿತ್ಯತ್ವ ಇಲ್ಲವೆಂದರೆ ಆಗ ರೂಪಾದಿಗಳುಳ್ಳ ಘಟ ಮೊದಲಾದವುಗಳು ಅನಿತ್ಯ ಏಕಾಗಬೇಕು? ಎಂಬ ಆಪತ್ತಿ ಬರುತ್ತದೆ. ಘಟಾದಿಗಳು ಅವಯವವುಳ್ಳದ್ದರಿಂದ ಅನಿತ್ಯವಾಗುತ್ತವೆ. ಪರಮಾಣುಗಳಿಗೆ ಅವಯವ ಇಲ್ಲದ್ದರಿಂದ ಅನಿತ್ಯವಾಗುವುದಿಲ್ಲ ಎಂದು ತಾರ್ಕಿಕರು ಉತ್ತರಿಸಬೇಕು.

ವಿವರಣೆ - ಪರಮಾಣುಗಳು ನಿರವಯವಗಳಾದ್ದರಿಂದ ರೂಪಾದಿಗಳಿದ್ದರೂ ಅನಿತ್ಯವಾಗುವುದಿಲ್ಲ. ಘಟಾದಿಗಳು ಸಾವಯವಾದ್ದರಿಂದ ರೂಪಾದಿಗಳಿರುವುದರಿಂದ ಅನಿತ್ಯವಾಗುತ್ತವೆಯೆಂಬ ಆಶಂಕೆಯನ್ನು 'ನ ಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

### ಪರಮಾಣುವಿನಿಂದ ದ್ವ್ಯಣುಕ ಹುಟ್ಟಲು ಸಾಧ್ಯವಿದೆಯೆ?

**तत्वप्रकाशिका – अस्त्वनित्यत्वं परमाणूनां किं बाधकमित्युक्तमेवेति चेन्न। तथा सति परपक्षे तत्समवायिकारणाभावेन तदुत्पत्त्यभावान्न व्यणुकादिकार्योत्पत्तिरिति भावः ।।**

ಹಾಗಾದಲ್ಲಿ ರೂಪಾದಿಮತ್ವ ಹೇತುವಿನಿಂದ ಪರಮಾಣುಗಳಲ್ಲೂ ಅವಯವಿತ್ವವನ್ನು ಸಾಧಿಸುತ್ತೇವೆ. ಪರಮಾಣುಗಳಲ್ಲಿ ಅನಿತ್ಯತ್ವವಿರಲಿ ಏನು ಬಾಧಕ ? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ಪರಮಾಣುಗಳಿಗೆ ಸಮವಾಯಕಾರಣ ಇಲ್ಲದ್ದರಿಂದ ಪರಮಾಣುಗಳ ಉತ್ಪತ್ತಿಯನ್ನೇ ವೈಶೇಷಿಕರಿಂದ ಸಮರ್ಥಿಸಲಾಗದು. ಪರಮಾಣುಗಳೇ ಇಲ್ಲದ್ದರಿಂದ ದ್ವ್ಯಣುಕಾದಿ ಕಾರ್ಯಗಳ ಉತ್ಪತ್ತಿಯೂ ಕೂಡ ಆಗದೇ ಇರಬೇಕಾದೀತು.

ವಿವರಣೆ - ಪರಮಾಣು ಅನಿತ್ಯವಾಗಲಿ ಅದರಿಂದೇನು ಹಾನಿ? ಎಂದರೆ 'ತಥಾಸತಿ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

## ಬ್ರಹ್ಮಸೂತ್ರ

'ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् — अपरिग्रहाच्चात्यन्तमनपेक्षा ।।**

ಶ್ರುತಿ-ಸ್ಮೃತಿಗಳಿಂದ ವೈಶೇಷಿಕರ ಮತವು ಸ್ವೀಕೃತವಾಗದ ಕಾರಣ ಶ್ರುತಿ-ಸ್ಮೃತಿಗಳಿಗೆ ವಿರುದ್ಧವೂ ಆಗಿರದ ಕಾರಣ ಈ ವಾದದಲ್ಲಿ ಅನಾದರ ಮಾಡಬೇಕು.

ಅರ್ಥ -- ಅಪರಿಗ್ರಹಾಚ್ಚ = ವೈಶೇಷಿಕರ ಮತವು ಶ್ರುತಿ-ಸ್ಮೃತಿಗಳಿಂದ ಸ್ವೀಕೃತವಾಗದ ಕಾರಣ ಶ್ರುತಿ-ಸ್ಮೃತಿಗಳಿಗೆ ವಿರುದ್ಧವೇ ಆಗಿರುವುದರಿಂದ ಅತ್ಯಂತಮನಪೇಕ್ಷಾ = ಅನಾದರವನ್ನು ಮಾಡಬೇಕು.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ವೈಶೇಷಿಕಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

ತರ್ಕದ ಬಗ್ಗೆ ಇಂದ್ರದೇವರ ಅನಿಸಿಕೆ

**ब्रह्मसूत्रभाष्यम् — ।। अपरिग्रहाच्चात्यन्तमनपेक्षा ।।७।।**

**श्रुतिस्मृत्यपरिगृहीतत्वाच्चातिशयेनानपेक्षता ।**

**आन्वीक्षिकीं तर्कविद्यामनुरक्तो निरर्थकाम् ।**

**इति च मोक्षधर्मे ।।७।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये वैशेषिकाधिकरणम् ।। ६ ।।**

ಅನುವಾದ - ವೈಶೇಷಿಕರ ಮತವು ಶ್ರುತಿ ಸ್ಮೃತಿಗಳಿಂದ ಪರಿಗ್ರಹಿತವಾಗಿಲ್ಲ. ಆದ್ದರಿಂದ ಸಜ್ಜನರಿಂದ ಅತಿಶಯವಾಗಿ ತಿರಸ್ಕಾರಾರ್ಹವಾಗಿದೆ. ಮಹಾಭಾರತದ ಮೋಕ್ಷಧರ್ಮ ಪರ್ವದಲ್ಲಿ ಹೀಗೆ ಹೇಳಲಾಗಿದೆ - ನಿರರ್ಥಕವಾದ ಆನ್ವೀಕ್ಷಿಕೀ ಎಂಬ ತರ್ಕವಿದ್ಯೆಯಲ್ಲಿ ನಾನು ಆಸಕ್ತನಾಗಿದ್ದೆನು ಎಂದು.

ಪ್ರತಿಪದಾರ್ಥ -- ಅಪ್ರಾಮಾಣಿಕವಾದ ವೈಶೇಷಿಕಮತವನ್ನು ತಿರಸ್ಕಾರ ಮಾಡಬೇಕು ಎಂದು ಸಮರ್ಥಿಸಲು ಮುಂದಿನ ಸೂತ್ರ ಹೊರಟಿದೆ, ಶ್ರುತಿಸ್ಮೃತ್ಯಪರಿಗೃಹೀತತ್ವಾತ್ = ಶ್ರುತಿಸ್ಮೃತಿಗಳಿಗೆ ಅನುಕೂಲವಾಗದೆ ವಿರುದ್ಧವೇ ಆಗಿರುವ ಪರಮಾಣ್ವಾರಂಭವಾದವು ಅತಿಶಯೇನ ಬಹಳವಾಗಿ, ಅನಪೇಕ್ಷಿತಃ = ತಿರಸ್ಕಾರಕ್ಕೆ ಅರ್ಹವಾಗಿದೆ.

ನಿರರ್ಥಕಾಂ = ಅಪ್ರಯೋಜಕವಾದ, ಆನ್ವೀಕ್ಷಿಕಿಂ = ಆನ್ವೀಕ್ಷಿಕೀ ಎಂದು ಕರೆಸಿಕೊಳ್ಳುವ, ತರ್ಕವಿದ್ಯಾಮ್ = ತರ್ಕವಿದ್ಯೆಯಲ್ಲಿ, ಅಹಂ = ನಾನು, ಅನುರಕ್ತಃ = ಆಸಕ್ತವಾಗಿದ್ದೆನು. ಇತಿ ಚ = ಹೀಗೆ, ಮೋಕ್ಷಧರ್ಮೇ = ಮಹಾಭಾರತ ಮೋಕ್ಷಧರ್ಮಪರ್ವದಲ್ಲಿ ಹೇಳಲಾಗಿದೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ವೈಶೇಷಿಕಾಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

**सत्तर्कदीपावळिः – न चैवमपौरुषेयवेदमूलसिद्धान्तोऽनुमानेन विघटयितुं शक्यते । वेदविरुद्धानुमानस्य प्रत्यक्षविरुद्धानुमानवदप्रमाणत्वात् । 'अक्षपादकणादौ च साङ्ख्ययोगौ च हैतुका' इति नारदीयवचनात् । अहमासं पण्डितको हैतुको वेदनिन्दकः । आन्वीक्षिकीं तर्कविद्यामनुरक्तो निरर्थकामिति भृगालवचनाच्च । न कणादाक्षपादमतं वेदमूलमिति वक्तुं शक्यते । तदेतदाह । रूपादिमत्वादित्यादिना ।।**

ಅಪೌರುಷೇಯವಾದ ವೇದಮೂಲಕವಾದ ನಮ್ಮ ಸಿದ್ಧಾಂತವನ್ನು ತಾರ್ಕಿಕರಾದ ನಿಮಗೆ ಕೇವಲ ಅನುಮಾನದಿಂದ ನಿರಾಕರಣೆ ಮಾಡಲು ಸಾಧ್ಯವಿಲ್ಲ. ವೇದವಿರುದ್ಧವಾದ ಅನುಮಾನಕ್ಕೆ

ಪ್ರತ್ಯಕ್ಷವಿರುದ್ಧಾನುಮಾನದಂತೆ ಅಪ್ರಾಮಾಣ್ಯವೇ ಇರುತ್ತದೆ. ಅಕ್ಷಪಾದಕಣಾದೌ ಚ ಸಾಂಖ್ಯಯೋಗೌ ಚ ಹೈತುಕಾಃ' ಎಂಬ ನಾರದೀಯಪುರಾಣದ ಮಾತು ಇದಕ್ಕೆ ಆಧಾರವಾಗಿದೆ. 'ಅಹಮಾಸಂ ಪಂಡಿತಕೋ ಹೈತುಕೋ ವೇದನಿಂದಕಃ । ಆನ್ವೀಕ್ಷಿಕೀಂ ತರ್ಕವಿದ್ಯಾಮನುರಕ್ತೋ ನಿರರ್ಥಕಾಮ್' ನಾನು ಹಿಂದಿನ ಜನ್ಮದಲ್ಲಿ ವೇದವನ್ನು ನಿಂದನೆ ಮಾಡುವ ತರ್ಕವಿದ್ಯೆಯನ್ನು ಅಧ್ಯಯನ ಮಾಡಿದ್ದೆ. ಆದ್ದರಿಂದ ಈಗ ನರಿಜನ್ಮವು ಬಂದಿದೆ. ಆ ತರ್ಕವಿದ್ಯೆಯು ನಿರರ್ಥಕವಾಗಿದೆ. 'ಆನ್ವೀಕ್ಷಿಕೀ' ಎಂದು ಕರೆಸಿಕೊಳ್ಳುತ್ತದೆ. ಹೀಗೆ ನರಿಯಾಗಿ ಹುಟ್ಟಿದ ಇಂದ್ರನು ಹೇಳುವ ಮಾತು.

ಕಣಾದಮತ ಮತ್ತು ಅಕ್ಷಪಾದಮತವು ವೇದಮೂಲವಾಗಿದೆ ಎಂದು ಹೇಳಲು ಸಾಧ್ಯವೇ ಇಲ್ಲ. ಇದನ್ನು 'ರೂಪಾದಿಮತ್ತ್ವಾತ್' ಇತ್ಯಾದಿಯಾಗಿ ಸಮರ್ಥನೆ ಮಾಡುತ್ತಿದ್ದಾರೆ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ವೈಶೇಷಿಕಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

## ತತ್ತ್ವಪ್ರದೀಪ

**तत्वप्रदीपः – अपरिग्रहाचात्यन्तमनपेक्षा । श्रुतिस्मृत्यपरिगृहीतत्वात् तद्विरुद्धत्वाचातिशयेनानपेक्ष्यता शिष्टैरस्य समयस्य । आन्वीक्षिकीं दृष्टवदुत्प्रेक्षणरूपाम् ।**

**।। इति वैशेषिकाधिकरणम् ।।**

ಶ್ರುತಿ-ಸ್ಮೃತಿಗಳಿಂದ ಪರಿಗ್ರಹ ಮಾಡದೇ ಇರುವ ಕಾರಣ ಹಾಗೂ ಶ್ರುತಿ-ಸ್ಮೃತಿಗಳಿಗೆ ವಿರುದ್ಧವಾಗಿರುವುದರಿಂದ ಈ ತಾರ್ಕಿಕರ ಮತವು ಗೌರವಪೂರ್ವಕವಾಗಿ ಯಾವ ಶಿಷ್ಟರೂ ಕೂಡ ಸ್ವೀಕಾರ ಮಾಡುವುದಿಲ್ಲ. 'ಆನ್ವೀಕ್ಷಿಕೀಂ' ಎಂಬ ಪದಕ್ಕೆ ದುಷ್ಟನಂತೆ ಉಪೇಕ್ಷರೂಪವಾಗಿದೆ ಎಂದರ್ಥ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ತ್ವಪ್ರದೀಪದಲ್ಲಿ
ವೈಶೇಷಿಕಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

### ತತ್ವಪ್ರಕಾಶಿಕಾ

### ವೈಶೇಷಿಕರ ಮತವು ವೇದವಿರುದ್ಧ

**तत्वप्रकाशिका – एवं प्रपञ्चेन दूषितं परमाण्वारम्भवादमप्रामाणिकत्वेनापि दूषयत्सूत्रं पठित्वा व्याचष्टे – अपरिग्रहाचेति ।। न केवलं श्रुत्याद्यपरिगृहीतत्वं तस्य तद्विरूद्धत्वं चेति भावेनाह – आन्वीक्षिकीमिति ।।**

ಇಲ್ಲಿಯ ತನಕ ವಿಸ್ತಾರವಾಗಿ ಪರಮಾಣ್ವಾರಂಭವಾದವನ್ನು ದೂಷಣೆ ಮಾಡಿದ್ದಾಯಿತು. ಈಗ ಇದು ಅಪ್ರಾಮಾಣಿಕವಾಗಿದೆ ಎಂದು ದೂಷಣೆ ಮಾಡುವ ಸೂತ್ರವನ್ನು 'ಅಪರಿಗ್ರಹಾಚ್ಚ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವೈಶೇಷಿಕಮತವು ಶ್ರುತಿಸ್ಮೃತಿಗಳಿಗೆ ಅನುಗುಣವಾಗಿಲ್ಲ ಎಂದಷ್ಟೇ ಅಲ್ಲ, ಶ್ರುತಿಸ್ಮೃತಿಗಳಿಗೆ ವಿರುದ್ಧವೂ ಆಗಿದೆ ಎಂಬ ಅಭಿಪ್ರಾಯದಿಂದ 'ಅನ್ವೀಕ್ಷಿಕೀ' ಎಂಬ ಭಾಷ್ಯದ ವಾಕ್ಯವು ಹೊರಟಿದೆ.

### ಭಾವದೀಪ

**भावदीपः– ।। अपरिग्रहाच्चात्यन्तमनपेक्षा ।। १७ ।। तद्विरुद्धत्वं चेति** ।। सूत्रे अपरिग्रहादिति नञस्तदभावतद्विरुद्धरूपार्थद्वयमिति दर्शितम्।

'ತದ್ವಿರುದ್ಧತ್ವಂ ಚ' ಎಂಬುದಕ್ಕೆ ಹೀಗರ್ಥ - ಸೂತ್ರದಲ್ಲಿ ಅಪರಿಗ್ರಹಾತ್ ಎಂಬಲ್ಲಿರುವ ನಞ್ ಎಂಬುದು 'ತದಭಾವ' ಹಾಗೂ 'ತದ್ವಿರುದ್ಧ' ಎಂಬೆರಡು ಅರ್ಥಗಳನ್ನು ಹೊಂದಿದೆ ಎಂದು.

### ಈಶ್ವರನ ಗುಣಾನಂತ್ಯಕ್ಕೆ ಯಾವ ವಿರೋಧವೂ ಇಲ್ಲ

**तत्वप्रकाशिका – 'अहमासं पण्डितको हैतुको वेदनिन्दकः । आन्वीक्षिकीम्' इत्यादि सृगालवाक्यम् । अतः परमाण्वारम्भवादस्यानुपपन्नत्वेनाविरोधकत्वाद्युक्तम् पूर्वाध्यायोक्तमीश्वरस्य अनन्तगुणत्वमिति सिद्धम् ।।**

'ಅಹಮಾಸಂ ಪಂಡಿತಕೋ ಹೈತುಕೋ ವೇದನಿಂದಕಃ ಅನ್ವೀಕ್ಷಿಕೀಂ' ನಾನು ಕೇವಲ ಯುಕ್ತಿಯನ್ನು ಸಮರ್ಥಿಸುವ ವೇದವನ್ನು ನಿಂದನೆ ಮಾಡುವ ಪಂಡಿತನಾಗಿದ್ದೇನೆ. ವ್ಯರ್ಥವಾದ ಅನ್ವೀಕ್ಷಿಕೀವಿದ್ಯೆಯಲ್ಲಿ ಆಸಕ್ತನಾಗಿದ್ದೇನೆ ಎಂಬುದಾಗಿ ನರಿಯ ರೂಪದಲ್ಲಿರುವ ದೇವೇಂದ್ರನು ಹೇಳುತ್ತಾನೆ. ಆದ್ದರಿಂದ ಪರಮಾಣ್ವಾರಂಭವಾದವು ಅತ್ಯಂತ ಅನುಪಪನ್ನವಾಗಿದೆ. ಈ ವಾದದ ವಿರೋಧವು ವಿಷ್ಣುವಿನ ಗುಣಪೂರ್ಣತ್ವದ ಪ್ರಮೇಯಕ್ಕೆ ಸರ್ವಥಾ ಬರುವುದಿಲ್ಲ. ಆದ್ದರಿಂದ ಹಿಂದಿನ ಅಧ್ಯಾಯದಲ್ಲಿ ಹೇಳಿದ ಈಶ್ವರನ ಅನಂತಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ.

ವಿವರಣೆ - 'ಶ್ರುತ್ಯಾದಿ' ಎಂಬಲ್ಲಿರುವ ಆದಿಪದದಿಂದ ಸ್ಮೃತಿ ಮತ್ತು ಪುರಾಣಗಳನ್ನು ವಿವಕ್ಷಿಸಬೇಕು. 'ತದ್‌ವಿರುದ್ಧಂ ಚ' ಎಂದು ಟೀಕೆಯಲ್ಲಿ ಹೇಳಿದ್ದರಿಂದ ಸೂತ್ರದಲ್ಲಿರುವ 'ಚ' ಶಬ್ದದಿಂದ ಅನುಕ್ತವಾದದ್ದನ್ನು ಸಮುಚ್ಚಯ ಮಾಡಬೇಕು.

ತರ್ಕವಿದ್ಯೆಯಲ್ಲಿ ಅತ್ಯಂತ ಅನುರಾಗವನ್ನು ತೋರಿದ್ದರಿಂದ ದೇವೇಂದ್ರನಿಗೆ ಒಮ್ಮೆ ನರಿಜನ್ಮ ಬರುತ್ತದೆ. ಆಗ ಪಶ್ಚಾತ್ತಾಪ ಬುದ್ಧಿಯಿಂದ ದೇವೇಂದ್ರನು ಪಶ್ಚಾತ್ತಾಪದಿಂದ ಹೇಳಿದ ಮಾತನ್ನು 'ಅಹಮಾಸಂ' ಇತ್ಯಾದಿಯಾಗಿ ಉಲ್ಲೇಖ ಮಾಡಿದ್ದಾರೆ.

ಈ ಅಧಿಕರಣದಲ್ಲಿ ಒಟ್ಟು ಏಳು ಸೂತ್ರಗಳಿವೆ. ಈ ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸ್ವರಸವಾಗಿದೆ. ಸೃಷ್ಟಿಸಂಹಾರಗಳಲ್ಲಿ ಸೃಷ್ಟಿಯು ಪ್ರಾಥಮಿಕವಾದ್ದರಿಂದ ಮೊದಲಿನ ಮೂರು ಸೂತ್ರಗಳಲ್ಲಿ ಸೃಷ್ಟಿಯ ಬಗ್ಗೆ ನಿರೂಪಣೆ ಮಾಡಿ ನಾಕನೇ ಸೂತ್ರದಲ್ಲಿ ಸಂಹಾರದ ಬಗ್ಗೆ ಹೇಳಲಾಯಿತು. ಐದನೇ ಸೂತ್ರದಲ್ಲಿ ಸಮವಾಯಕಾರಣವೆನಿಸಿದ ಪರಮಾಣುಗಳ ನಿತ್ಯತ್ವವನ್ನು ಆರನೆಯ ಸೂತ್ರದಲ್ಲಿ ತನ್ನಿರಾಸಕವಾದ ಅನುಮಾನಕ್ಕೆ ಅಪ್ರಯೋಜಕತ್ವಾದಿ ಶಂಕೆಯ ಪರಿಹಾರವನ್ನು ಏಳನೆಯ ಸೂತ್ರದಲ್ಲಿ ವೈಶೇಷಿಕಾದಿ ಮತಕ್ಕೆ ಅಪ್ರಾಮಾಣಿಕತ್ವವನ್ನು ನಿರೂಪಣೆ ಮಾಡಿದರು. ಹೀಗೆ ಸೂತ್ರಕ್ರಮ ವಿನ್ಯಾಸವು ಸ್ವರಸವಾಗಿದೆ.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ತ್ವಪ್ರಕಾಶಿಕಾಟೀಕೆಯಲ್ಲಿ
ವೈಶೇಷಿಕಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

**भावदीपः– सृगालेति ।।** देवेन्द्रो जम्बुकरूपेणागत्य कश्चित्प्रति वक्ति। अहमा-समित्यादिना। तेन दृष्टवदुत्प्रेक्षारूपतर्कासक्तेः सृगालजन्महेतुत्वं सूच्यत इति भावः!!

**अत इति ।।** महदित्यादिसूत्रोक्तदूषणगणात् श्रुत्यादिप्रमाणशून्यत्वात् तद्विरुद्धत्वाच्चेत्यर्थः ॥१७॥

ದೇವೇಂದ್ರನು ಒಮ್ಮೆ ನರಿರೂಪದಿಂದ ಬಂದು ಒಬ್ಬನನ್ನು ಕುರಿತು 'ಅಹಮಾಸಮ್' ಇತ್ಯಾದಿಯಾಗಿ ಹೇಳಿದ್ದಾನೆ. ಈ ದೇವೇಂದ್ರನ ಮಾತಿನಿಂದ ದೃಷ್ಟವಾದ ತರ್ಕದಲ್ಲಿ ಯಾರು ಆಸಕ್ತಿಯನ್ನು ಹೊಂದುತ್ತಾನೋ, ಅವನಿಗೆ ನರಿ ಜನ್ಮ ಬರುತ್ತದೆಂದು ತಿಳಿಸಲಾಗಿದೆ. 'ಅತಃ' ಎಂಬ ಪದಕ್ಕೆ ಮಹತ್ ಇತ್ಯಾದಿ ಸೂತ್ರದಿಂದ ಹೇಳಲ್ಪಟ್ಟ ದೋಷಗಳ ಸಮೂಹವೇ ಇರುವುದರಿಂದ ವೈಶೇಷಿಕರು ಸಮರ್ಥಿಸಿದ ವಿಷಯಗಳಲ್ಲಿ ಶ್ರುತ್ಯಾದಿಪ್ರಮಾಣಗಳು ಇಲ್ಲದ್ದರಿಂದ ಶ್ರುತ್ಯಾದಿಪ್ರಮಾಣಗಳಿಗೆ ವಿರುದ್ಧವಾದ್ದರಿಂದ ಎಂದರ್ಥ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ವೈಶೇಷಿಕಾಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## वैशेषिकाधिकरणम् - ६

'ಮಹದ್ದೀರ್ಘವದ್ವಾ' ಎಂಬುದರ ವ್ಯಾಖ್ಯಾನ

महद्दीर्घवद्वा ह्रस्वपरिमण्डलाभ्याम् ।।२-२-११।।

अत्र प्रागुक्तनिरीशमतोक्तदोषोऽत्र नास्तीति प्राप्तं वैशेषिकमतं निरस्यते। पञ्चम्यन्ताद्वतिः । प्रतियोगिनस्तथा निर्देशात् । तत्र तस्येवेत्यस्य प्रायिकत्वात् । षष्ठ्यन्ताद्वतित्वे तु सकाशादिति योज्यम् । भावप्रधानोऽयम्।

ಹಿಂದಿನ ಅಧಿಕರಣದಲ್ಲಿ ಈಶ್ವರನನ್ನು ಒಪ್ಪದ ಸಮಯಿಗಳಿಗೆ ಯಾವ ದೋಷವನ್ನು ಹೇಳಲಾಯಿತೋ, ಆ ದೋಷಗಳು ತಮಗೆ ಬರುವುದಿಲ್ಲವೆಂದು ವೈಶೇಷಿಕರು ಹೇಳುತ್ತಿದ್ದಾರೆ.

ಸೂತ್ರದಲ್ಲಿ 'ಮಹದ್ದೀರ್ಘವತ್' ಎಂಬ ಪದವಿದೆ. ವತಿಪ್ರತ್ಯಯದ ಅರ್ಥವೆನಿಸಿದ ಸಾದೃಶ್ಯಕ್ಕೆ ಯಾವುದು ಪ್ರತಿಯೋಗಿಯೋ ಅವುಗಳನ್ನು ವಿವಕ್ಷಿಸಲಾಗಿದೆ. ಹ್ರಸ್ವ ಮತ್ತು ಅಣುಪರಿಮಾಣಗಳನ್ನು ಪಂಚಮೀವಿಭಕ್ತ್ಯಂತವಾದ ಪದದಿಂದ ನಿರ್ದೇಶಿಸಲಾಗಿದೆ. ಪಂಚಮೀವಿಭಕ್ತ್ಯಂತವಾದ ಮಹದ್ದೀರ್ಘ ಎಂಬ ಶಬ್ದದ ಮೇಲೆ ವತಿಪ್ರತ್ಯಯವು ಬಂದಾಗ 'ಮಹದ್ದೀರ್ಘವತ್' ಎಂಬ ರೂಪವು ನಿಷ್ಪನ್ನವಾಗಿದೆ. ಷಷ್ಠೀವಿಭಕ್ತ್ಯಂತವಾದ ಪದಕ್ಕೆ ವತಿಪ್ರತ್ಯಯವನ್ನು 'ತತ್ರ ತಸ್ಯೆವ' ಎಂಬ ಸೂತ್ರವು ಹೇಳುತ್ತಿದೆ. ಈ ಸೂತ್ರ ಹೇಳುವ ನಿಯಮವು ಸಾಮಾನ್ಯ ನಿಯಮವಾಗಿರುವುದರಿಂದ, ಮಹದ್ದೀರ್ಘವತ್ ಎಂಬ ಪದವು

ಅಪವಾಗಿದೆ. ಷಷ್ಠ್ಯಂತವಾದ ಪದಕ್ಕೆ ವತಿಪ್ರತ್ಯಯವು ಬರುವುದಾದಲ್ಲಿ 'ಸಕಾಶಾತ್' ಎಂಬ ಪದವನ್ನು ಯೋಜನೆ ಮಾಡಬೇಕಿತ್ತು. 'ಮಹತ್' ಮತ್ತು 'ದೀರ್ಘ' ಎಂಬ ಪದಗಳು ಭಾವಪ್ರದಾನ ನಿರ್ದೇಶವಾಗಿರುವುದರಿಂದ, ಮಹತ್ವ ಮತ್ತು ದೀರ್ಘತ್ವ ಎಂಬರ್ಥವನ್ನು ತಿಳಿಸುತ್ತವೆ.

**ವಿವರಣೆ** - 'ಮಹದ್ದೀರ್ಘವದ್ವಾ' ಎಂಬ ಸೂತ್ರದಲ್ಲಿರುವ ಪದಕ್ಕೆ ಇಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಮಹತ್ ಮತ್ತು ದೀರ್ಘ ಎಂಬ ಪದಗಳಿಂದ ಮಹತ್ವ ಹಾಗೂ ದೀರ್ಘತ್ವಗಳು ತಿಳಿಯುತ್ತವೆ. 'ತತ್ರೈವ' ಮತ್ತು 'ತಸ್ಯೈವ' ಎಂಬ ಅರ್ಥದಲ್ಲಿ ವತಿಪ್ರತ್ಯಯವು ಪ್ರಾಪ್ತವಾಗುತ್ತದೆಂದು 'ತತ್ರ ತಸ್ಯೈವ' ಎಂಬ ಸೂತ್ರವು ಹೇಳುತ್ತಿದೆ. 'ಮಹತಃ ಸಕಾಶಾತ್' 'ದೀರ್ಘತ್ವಸಕಾಶಾತ್' ಎಂಬರ್ಥವನ್ನು ಇಲ್ಲಿ ತಿಳಿಯಬೇಕು. ಮಹತ್‌ಪರಿಮಾಣದ ದೆಸೆಯಿಂದ ದೀರ್ಘಪರಿಮಾಣದ ದೆಸೆಯಿಂದ ಮತ್ತೊಂದು ಮಹತ್‌ಪರಿಮಾಣ ಹಾಗೂ ದೀರ್ಘಪರಿಮಾಣಗಳು ಹುಟ್ಟುತ್ತವೋ, ಅದರಂತೆ ಎಂಬುದು 'ಮಹದ್ದೀರ್ಘವದ್ವಾ' ಎಂಬುದರ ಅರ್ಥವಾಗಿದೆ. ವತಿ ಪ್ರತ್ಯಯವು ಸಾದೃಶ್ಯಪ್ರತಿಯೋಗಿಯನ್ನು ಹೇಳುತ್ತಿರುವುದರಿಂದ ಹ್ರಸ್ವಪರಿಮಾಣ ಮತ್ತು ಅಣುಪರಿಮಾಣಗಳು ಅರ್ಥಾತ್ ಲಭ್ಯವಾಗುತ್ತವೆ. 'ತತ್ರ ತಸ್ಯೈವ' ಎಂಬ ಪಾಣಿನಿಯ ಸೂತ್ರದಂತೆ ಷಷ್ಠೀ ವಿಭಕ್ತಿ ಹಾಗೂ ಸಪ್ತಮೀವಿಭಕ್ತ್ಯಂತವಾದ ಪದಗಳ ಮುಂದೆ ಮಾತ್ರ ವತಿ ಪ್ರತ್ಯಯವು ಬರಬೇಕು. ಪ್ರಕೃತ ಪಂಚಮೀವಿಭಕ್ತ್ಯಂತವಾದ ಪದದ ಮುಂದೆ ವತಿ ಪ್ರತ್ಯಯವು ಹೇಗೆ ಬಂದಿತು ? ಎಂಬ ಪ್ರಶ್ನೆಗೆ 'ಪ್ರಾಯಿಕತ್ವಾತ್' ಎಂದು ಉತ್ತರಿಸಿದ್ದಾರೆ. ಈ ಸೂತ್ರವು ಸಾಮಾನ್ಯ ನಿಯಮವಾಗಿರುವುದರಿಂದ 'ಮಹದ್ದೀರ್ಘವತ್' ಎಂಬ ಪದದಲ್ಲಿ ಇದು ಅಪವಾದವಾಗಿದೆ ಎಂಬುದಾಗಿ ತಿಳಿಯಬೇಕು.

**यथा महत्वाद्दीर्घत्वाच्च परिमाणाच्चतुरणुकादिकार्यगतं परिमाणं जायते तथा ह्रस्वत्वात्पारिमाण्डल्याच्च परिमाणात् तत्तत्कार्ये परिमाणमुत्पद्येतेत्यर्थः।**

ಸೂತ್ರಾರ್ಥ - ಮಹತ್ವಾದ್ದೀರ್ಘತ್ವಾತ್ = ಹೇಗೆ ಮಹತ್ವ ಹಾಗೂ ದೀರ್ಘತ್ವ ಎಂಬ ಪರಿಮಾಣಗಳ ದೆಸೆಯಿಂದ ಚತುರಣುಕ ಮೊದಲಾದ ಕಾರ್ಯವಸ್ತುಗಳಲ್ಲಿರುವ ಪರಿಮಾಣವು ಹುಟ್ಟುತ್ತದೋ, ಅದರಂತೆ 'ಹ್ರಸ್ವಪರಿಮಾಂಡಲಾಭ್ಯಾಮ್' = ಹ್ರಸ್ವತ್ವ ಮತ್ತು ಅಣುಪರಿಮಾಣಗಳ ದೆಸೆಯಿಂದ ದ್ವ್ಯಣುಕ ಮೊದಲಾದ ಕಾರ್ಯವಸ್ತುಗಳಲ್ಲೂ ಪರಿಮಾಣವು ಹುಟ್ಟಬೇಕಾದೀತು ಎಂದರ್ಥ.

## ಅಸಮವಾಯಿ ನಿರಾಕರಣೆ

**अन्यथा महत्त्वदीर्घत्वाभ्यामपि नोत्पद्येत । अविशेषादिति वाशब्दार्थः। परिमाणावान्तरजातौ मानाभावेनाणुत्वमहत्त्वादेः सावधिकतया द्व्यणुकादिपरिमाणस्यापि स्वापकृष्टपरिमाणान्महत्त्वेन सारूप्याद्वैजात्येऽपि संख्ययेव द्व्यणुकादिपरिमाणेन तत्कार्ये परिमाणोत्पत्तिसम्भवादिति भावः । एवं द्रव्यसमवायिकारणमपि निरसनीयम् ।**

ಮೇಲೆ ಹೇಳಿದಂತೆ ಒಪ್ಪದಿದ್ದರೆ ಮಹತ್ತ್ವ ಮತ್ತು ದೀರ್ಘತ್ವಗಳಿಂದಲೂ ಕೂಡ ಯಾವುದೇ ಪರಿಮಾಣವು ಹುಟ್ಟದೇ ಇರಬೇಕಾದೀತು. ಏಕೆಂದರೆ ವೈಲಕ್ಷಣ್ಯಕ್ಕೆ ಯಾವುದೇ ಕಾರಣಗಳು ಇರುವುದಿಲ್ಲ. ಎರಡರಲ್ಲೂ ಯಾವುದೇ ವ್ಯತ್ಯಾಸವಿಲ್ಲ. ಇದನ್ನು ಸೂತ್ರದಲ್ಲಿರುವ 'ವಾ' ಶಬ್ದವು ತಿಳಿಸುತ್ತಿದೆ. ಹ್ರಸ್ವಪರಿಮಾಣ, ಮಹತ್ತಪರಿಮಾಣ, ದೀರ್ಘಪರಿಮಾಣ, ಅಣುಪರಿಮಾಣ ಎಂಬ ಅವಾಂತರಜಾತಿಯಲ್ಲಿ ಯಾವುದೇ ಪ್ರಮಾಣವಿಲ್ಲ. ಆದ್ದರಿಂದ ಅಣುತ್ವ ಮತ್ತು ಮಹತ್ವಗಳು ಸಾವಧಿಕವಾಗಿವೆ. ಪ್ರತಿಯೊಂದು ಪದಾರ್ಥಗಳಲ್ಲೂ ಇವು ಇರುತ್ತವೆ. ಹಾಗಾಗಿ ದ್ವ್ಯಣುಕಪರಿಮಾಣವೂ ಕೂಡ ತನಗಿಂತ ನಿಕೃಷ್ಟಪರಿಮಾಣವನ್ನು ಅಪೇಕ್ಷಿಸಿ ಮಹತ್‌ಪರಿಮಾಣವಾಗುತ್ತದೆಂದು ಹೇಳಬಹುದು. ಆದ್ದರಿಂದ ದ್ವ್ಯಣುಕಪರಿಮಾಣವು ತ್ರ್ಯಣುಕಪರಿಮಾಣಕ್ಕೆ ಸಜಾತೀಯವಾಯಿತು. ದ್ವ್ಯಣುಕಪರಿಮಾಣದಿಂದ ತ್ರ್ಯಣುಕಪರಿಮಾಣವು ಹುಟ್ಟುತ್ತದೆಂದು ಸುಲಭವಾಗಿ ಹೇಳಬಹುದು. ಏಕೆಂದರೆ ಸಜಾತೀಯ ಪರಿಮಾಣವಾಗಿದೆ ಮತ್ತು ಮಹದಾರಂಭಕವಾಗಿದೆ. ಒಂದು ವೇಳೆ ದ್ವ್ಯಣುಕದ ಪರಿಮಾಣ ಮತ್ತು ತ್ರ್ಯಣುಕದ ಪರಿಮಾಣವು ವಿಜಾತೀಯವಾಗಿದೆ ಎಂದು ವಿವಕ್ಷಿಸುವುದಾದರೆ, ದ್ವ್ಯಣುಕಗಳ ಸಂಖ್ಯೆಯು ಪರಿಮಾಣದ ದೃಷ್ಟಿಯಿಂದ ವಿಜಾತೀಯವಾಗಿರಬಹುದು. ತ್ರ್ಯಣುಕದ ಪರಿಮಾಣಕ್ಕೆ ಕಾರಣವೆಂದು ಹೇಳಲು ಯಾವುದೇ ಬಾಧಕವಿಲ್ಲ. ಇದನ್ನು ವೈಶೇಷಿಕರೂ ಕೂಡ ಒಪ್ಪಿದ್ದಾರೆ. ಅದರಂತೆ ವಿಜಾತೀಯವಾದ ದ್ವ್ಯಣುಕಪರಿಮಾಣದಿಂದ ತ್ರ್ಯಣುಕಪರಿಮಾಣವು ಹುಟ್ಟುತ್ತದೆಂದು ಯಾವುದೇ ಬಾಧಕವಿಲ್ಲ. ಇದರಂತೆ ದ್ರವ್ಯಸಮವಾಯಕಾರಣವನ್ನೂ ಕೂಡ ನಿರಾಕರಣೆ ಮಾಡಬೇಕು.

ವಿವರಣೆ - ಎರಡು ಪರಿಮಾಣುಗಳು ಸೇರಿ ದ್ವ್ಯಣುಕವಾಗುತ್ತದೆ. ಮೂರು ದ್ವ್ಯಣುಕಗಳು ಸೇರಿ ಒಂದು ತ್ರ್ಯಣುಕವಾಗುತ್ತದೆ. ಘಟದಲ್ಲಿ ಪರಿಮಾಣ ಬರಲು ಕಪಾಲ ಪರಿಮಾಣವು ಕಾರಣವಾಗಿದೆ. ಅದರಂತೆ ಚತುರಣುಕದಲ್ಲಿ ಮಹತ್‌ಪರಿಮಾಣ ಬರಲು

ತ್ರ್ಯಣುಕದಲ್ಲಿರುವ ಮಹತ್‌ಪರಿಮಾಣವು ಕಾರಣವಾಗಿದೆ ಎಂದು ತಾರ್ಕಿಕರು ಹೇಳುತ್ತಾರೆ. ಸಜಾತೀಯವಾದ ಪರಿಮಾಣಗಳಲ್ಲಷ್ಟೇ ಕಾರ್ಯಕಾರಣಭಾವವು ಸಾಧ್ಯ. ದ್ವ್ಯಣುಕದಲ್ಲಿ ಅಣುಪರಿಮಾಣವಿದೆ. ತ್ರ್ಯಣುಕದಲ್ಲಿ ಮಹತ್‌ಪರಿಮಾಣವಿದೆ. ಇವೆರಡರಲ್ಲಿ ಸಾಜಾತ್ಯವಿಲ್ಲ, ವೈಜಾತ್ಯವೇ ಇಲ್ಲ. ಆದ್ದರಿಂದ ತ್ರ್ಯಣುಕದ ಮಹತ್‌ಪರಿಮಾಣಕ್ಕೆ ದ್ವ್ಯಣುಕದ ಅಣುಪರಿಮಾಣವು ಕಾರಣವಾಗುವುದಿಲ್ಲ. ಕೇವಲ ದ್ವ್ಯಣುಕದಲ್ಲಿರುವ ಸಂಖ್ಯೆಯೇ, ತ್ರ್ಯಣುಕದ ಪರಿಮಾಣಕ್ಕೆ ಕಾರಣವಾಗುತ್ತವೆಂದು ಹೇಳುತ್ತಾರೆ. ಆದರೆ ಈ ಸಂಖ್ಯೆಯು ವಿಜಾತೀಯವೇ ಆಗಿದೆ. ಆದರೂ ಕೂಡ ಕಾರಣವೆಂದು ವೈಶೇಷಿಕರು ಹೇಗೆ ಒಪ್ಪಿದ್ದಾರೋ, ಅದರಂತೆ ತ್ರ್ಯಣುಕಪರಿಮಾಣಕ್ಕೆ ದ್ವ್ಯಣುಕಪರಿಮಾಣವು ವಿಜಾತೀಯವಾಗಿದ್ದರೂ ಕೂಡ ಕಾರಣವಾಗುತ್ತದೆಂದು ಹೇಳಬಹುದು ಎಂಬುದಾಗಿ ವೈಶೇಷಿಕರಿಗೆ ದೋಷವನ್ನು ಹೇಳಲಾಗಿದೆ. ಇದರಿಂದ ವೈಶೇಷಿಕರು ಒಪ್ಪುವ ಅಸಮವಾಯಿಕಾರಣವನ್ನು ನಿರಾಕರಣೆ ಮಾಡಿದಂತಾಯಿತು.

ಸಮವಾಯಿಕಾರಣದ ನಿರಾಕರಣೆಯನ್ನೂ ಕೂಡ ಮೇಲೆ ಹೇಳಿದ ಪ್ರಕಾರದಲ್ಲಿಯೇ ತಿಳಿದುಕೊಳ್ಳಬೇಕು.

### ಮಹತ್ವ ದೀರ್ಘತ್ವ ಎನ್ನಬಹುದಿತ್ತಲ್ಲವೇ ?

**अत्र महत्त्वदीर्घत्वेत्यादिवाच्ये महदित्यादिनिर्देशस्तु ''प्रचयविशेषाच्च महत्'' इति काणादसूत्रानुसारादिति ध्येयम् । दार्ष्टान्तिकस्य द्वित्वाद्वा विषयव्याप्त्यर्थं वा परोपेतपरिमाणचतुष्कमप्रामाणिकमिति सूचयितुं वा दृष्टान्तद्वयोक्तिः ॥**

ಸೂತ್ರದಲ್ಲಿ ಮಹತ್ವ ಮತ್ತು ದೀರ್ಘತ್ವ ಎಂಬ ಪದಗಳನ್ನೇ ಪ್ರಯೋಗ ಮಾಡಬೇಕಿತ್ತು. ಮಹತ್ ಮತ್ತು ದೀರ್ಘತ್ವ ಎಂಬ ಪದಗಳನ್ನೇಕೆ ಪ್ರಯೋಗ ಮಾಡಿದರು ? ಎಂದರೆ 'ಪ್ರಚಯವಿಶೇಷಾಚ್ಚ ಮಹತ್' ಎಂಬ ಕಾಣಾದಸೂತ್ರದಲ್ಲಿ ಪ್ರಚಯಪದದಿಂದ ಮಹತ್ವವನ್ನು ವಿವಕ್ಷಿಸಲಾಗಿದೆ. ಅದಕ್ಕನುಗುಣವಾಗಿ ಸೂತ್ರಕಾರರೂ ಕೂಡ ಮಹತ್‌ಪದದಿಂದ ಮಹತ್ವವನ್ನು ವಿವಕ್ಷಿಸಿದ್ದಾರೆ. ದಾರ್ಷ್ಟಾಂತಿಕಗಳು ಹ್ರಸ್ವಪರಿಮಾಣ, ಅಣುಪರಿಮಾಣ ಎಂಬುದಾಗಿ ಎರಡು ಬಗೆಯಾಗಿದೆ. ಅದಕ್ಕನುಗುಣವಾಗಿ ಅಥವಾ ಪರಿಮಾಣಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ಸಂಗ್ರಹಿಸುವುದಕ್ಕಾಗಿ

ಅಥವಾ ವೈಶೇಷಿಕರು ಅಂಗೀಕಾರ ಮಾಡಿದ ನಾಕು ಬಗೆಯ ಪರಿಣಾಮಗಳು ಅಪ್ರಾಮಾಣಿಕವಾಗಿವೆ ಎಂಬುದನ್ನು ತಿಳಿಸುವುದಕ್ಕಾಗಿ ಮಹತ್ ಮತ್ತು ದೀರ್ಘ ಎಂಬೆರಡನ್ನು ದೃಷ್ಟಾಂತಪುರಸ್ಸರವಾಗಿ ಉಲ್ಲೇಖ ಮಾಡಿದ್ದಾರೆ.

### ನಿಮಿತ್ತಕಾರಣ ನಿರಾಕರಣೆ

असमवायिकारणं निरस्य निमित्तं निरस्यति -

।। उभयथाऽपि न कर्मातस्तदभावः ।।२-२-१२।।

उभयथाऽपि ईश्वरेच्छाया नित्यानित्यत्वरूपप्रकारद्वयेऽपि न कर्म परमाणुषु क्रिया न सम्भवति । अतः परमाणुषु क्रियाभावात् तदभावः परिमाणसन्निधापितद्व्यणुकादिकार्याभाव इत्यर्थः ।

ಅಸಮವಾಯಿಕಾರಣವನ್ನು ಪ್ರಥಮಸೂತ್ರದಲ್ಲಿ ನಿರಾಕರಣೆ ಮಾಡಿದ್ದಾಯಿತು. ಈ ಸೂತ್ರದಲ್ಲಿ ನಿಮಿತ್ತಕಾರಣವನ್ನು ನಿರಾಕರಣೆ ಮಾಡುತ್ತಿದ್ದಾರೆ 'ಉಭಯಥಾऽಪಿ ನ ಕರ್ಮಾತಃ ತದಭಾವಃ' ಎಂದು.

ಉಭಯಥಾऽಪಿ = ಈಶ್ವರೇಚ್ಛೆಯು ನಿತ್ಯವಾಗಿದೆ ಅಥವಾ ಅನಿತ್ಯವಾಗಿದೆ ಎಂಬುದಾಗಿ ಎರಡು ಪ್ರಕಾರವನ್ನು ಒಪ್ಪಿದರೂ ಕೂಡ, ನ ಕರ್ಮ = ಪರಮಾಣುಗಳಲ್ಲಿ ಕ್ರಿಯೆಯು ಕೂಡುವುದಿಲ್ಲ. ಅತಃ = ಪರಮಾಣುಗಳಲ್ಲಿ ಕ್ರಿಯೆಯು ಕೂಡದಿರುವುದರಿಂದ, ತದಭಾವಃ = ಹಿಂದಿನ ಸೂತ್ರದಲ್ಲಿ ಪರಮಾಣುವಿನ ಪ್ರಸ್ತಾಪದಿಂದ ಬುದ್ಧಿಯಲ್ಲಿ ಸನ್ನಿಹಿತವಾದ ದ್ವ್ಯಣುಕಾದಿ ಕಾರ್ಯಗಳೂ ಕೂಡ ಉತ್ಪನ್ನ ಆಗುವುದಿಲ್ಲ. ಇಷ್ಟು ಸೂತ್ರಾರ್ಥ.

### ಈಶ್ವರೇಚ್ಛೆಯ ನಿರಾಕರಣೆ

नित्यत्वे लये तस्यां सत्यामणुषु कर्मानुत्पादेन व्यभिचाराद्धेतुत्वं नास्ति । अनित्यत्वे अनवस्थाद्यापातेनोत्पादकाभावादीशेच्छाया हेतुत्वं न युक्तमिति भावः ।

ಈಶ್ವರನ ಇಚ್ಛೆಯು ನಿತ್ಯವೆಂದು ಒಪ್ಪಿದರೆ ಪ್ರಳಯಕಾಲದಲ್ಲಿ ಈಶ್ವರೇಚ್ಛೆ ಎಂಬ ಕಾರಣವು ಇದ್ದರೂ ಕೂಡ ಪರಮಾಣುಗಳಲ್ಲಿ ಕ್ರಿಯೆಯೆಂಬ ಕಾರ್ಯವು ಹುಟ್ಟುವುದಿಲ್ಲ. ಆದ್ದರಿಂದ ವ್ಯಭಿಚಾರದೋಷವು ಬರುತ್ತದೆ. ವ್ಯಭಿಚಾರದೋಷಗ್ರಸ್ತವಾದ್ದರಿಂದ ಈಶ್ವರನ ಇಚ್ಛೆಯು ಪರಮಾಣುಕ್ರಿಯೆಗೆ ಕಾರಣ-ವಾಗುವುದಿಲ್ಲ. ಈಶ್ವರೇಚ್ಛೆಯು ಅನಿತ್ಯವೆಂದು ಒಪ್ಪಿದರೆ ಆ ಇಚ್ಛೆಗೆ ಮತ್ತೊಂದು ಕಾರಣವು ಬೇಕಾಗುತ್ತದೆ. ಅದೂ ಕೂಡ ಅನಿತ್ಯವಾದ್ದರಿಂದ ಅದಕ್ಕೆ ಮತ್ತೊಂದು ಕಾರಣ ಬೇಕಾಗುತ್ತದೆ. ಹೀಗೆ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಹಾಗಾಗಿ ಈಶ್ವರೇಚ್ಛೆಗೆ ಹೇತುತ್ವವೇ ಯುಕ್ತವಾಗುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

## ದಲಕೃತ್ಯ ವಿಚಾರ

**सिद्धान्ते त्वीशस्य वैदिकत्वान्न दोष इति हृदयम् । उभयथापि तदभावादित्येवोक्तौ कर्माद्यभावेनान्यथासिद्धिं शङ्केत । अतो न कर्मेत्युक्तिः। तस्य इच्छैकहेतुकत्वाददृष्टविलम्बेन कार्यविलम्बाभावात् । उभयथाऽपि न कर्मेत्येव पूर्तौ शेषोक्तिरनिष्टसूचनार्था । उभयथाऽपि कर्माभावादिति वाच्ये न कर्मात इति भेदेनोक्तिर्लये सत्यामपीशेच्छायां न कर्मातो व्यभिचारः । तदन्यदापि न कर्म अतः कार्याभाव सति सूचयितुतम् ।।**

ಸಿದ್ಧಾಂತದಲ್ಲಿ ಈಶ್ವರೇಚ್ಛೆಯು ವೇದದಿಂದ ಸಿದ್ಧವಾಗುತ್ತದೆ. ಆದ್ದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

ಸೂತ್ರದಲ್ಲಿ 'ನ ಕರ್ಮಾತಃ' ಎಂದೇಕೆ ಹೇಳಬೇಕಿತ್ತು ? ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ಈಶ್ವರೇಚ್ಛೆಯು ನಿತ್ಯವಾಗಲೀ, ಅನಿತ್ಯವಾಗಲೀ, ದ್ವ್ಯಣುಕದ ಉತ್ಪತ್ತಿಯು ಯುಕ್ತವಾಗುವುದಿಲ್ಲ. ಎಂದಷ್ಟೇ ಅರ್ಥವನ್ನು ತಿಳಿಸುವ 'ಉಭಯಥಾಪಿ ತದಭಾವಾತ್' ಎಂಬುದಾಗಿ ಸೂತ್ರವನ್ನು ಉಲ್ಲೇಖ ಮಾಡಿದರೆ, ದ್ವ್ಯಣುಕದ ಉತ್ಪತ್ತಿ ಆಗದೇ ಇರುವುದಕ್ಕೆ ಪರಮಾಣುವಿನಲ್ಲಿ ಕ್ರಿಯೆ ಆಗದಿರುವುದೇ ಕಾರಣ ಆಗಿದೆ. ಈಶ್ವರೇಚ್ಛೆಯ ನಿತ್ಯತ್ವಾದಿಗಳು ಕಾರಣವಲ್ಲ ಎಂಬುದಾಗಿ ಅನ್ಯಥಾಸಿದ್ಧಿಯ ಸಂಶಯವು ಬರುತ್ತಿತ್ತು. ಅದಕ್ಕಾಗಿ 'ನ ಕರ್ಮ' ಎಂಬುದಾಗಿ ಸೂತ್ರದಲ್ಲಿ ಹೇಳಿದ್ದಾರೆ.

'ಉಭಯಥಾಪಿ ನ ಕರ್ಮ' ಎಂದಷ್ಟೇ ಹೇಳುವುದರಿಂದ ಉದ್ದೇಶವು ಸತ್ಕವಾಗುತ್ತದೆ. ಆದರೂ ಕೂಡ ಉಳಿದ ಭಾಗವನ್ನು ಹೇಳಿರುವುದು ಅನಿಷ್ಟ ಸೂಚನೆ ಮಾಡುವುದಕ್ಕಾಗಿ 'ಉಭಯಥಾಪಿ ಕರ್ಮಾಭಾವಾತ್' ಎಂದು ಹೇಳಬಹುದು. ಆದರೆ ಪ್ರಳಯಕಾಲದಲ್ಲಿ ಪರಮಾಣುಕ್ರಿಯೆಗೂ ಈಶ್ವರೇಚ್ಛೆಗೂ ಕಾರ್ಯಕಾರಣಭಾವ ವಿಷಯದಲ್ಲಿ ವಿಚಾರ ಬರುತ್ತದೆ. ಆದ್ದರಿಂದ ಉಳಿದ ಸಮಯದಲ್ಲೂ ಈ ಪರಮಾಣು ಕ್ರಿಯೆಗಳು ಈಶ್ವರೇಚ್ಛೆಯಿಂದ ಉಂಟಾಗುವುದಿಲ್ಲ. ಈ ಅರ್ಥವನ್ನು ತಿಳಿಸಲು 'ನ ಕರ್ಮಾತಃ' ಎಂದು ಹೇಳಿದ್ದಾರೆ.

ವಿವರಣೆ - 'ಉಭಯಥಾಪಿ ತದಭಾವಾತ್' ಎಂದಷ್ಟೇ ಸೂತ್ರವನ್ನು ರಚನೆ ಮಾಡಿದರೆ ದ್ವ್ಯಣುಕವು ಉತ್ಪನ್ನ ಆಗದೇ ಇರಲು ಪರಮಾಣುಕ್ರಿಯೆಯ ಅಭಾವವೇ ಕಾರಣ ನಿರ್ದಿಷ್ಟವಾದ ಈಶ್ವರೇಚ್ಛೆಯ ನಿತ್ಯತ್ವಾದಿಗಳು ಕಾರಣವಲ್ಲ ಎಂಬುದಾಗಿ ಅನ್ಯಥಾಸಿದ್ಧಿಯ ಶಂಕೆಯು ಬರುತ್ತದೆ. ಅದಕ್ಕಾಗಿ 'ನ ಕರ್ಮ' ಎಂಬುದಾಗಿ ಸೂತ್ರದಲ್ಲಿ ಹೇಳಬೇಕು. ಆಗ ಪರಮಾಣು ಕರ್ಮದ ಮೂಲಕವೇ ಈಶ್ವರೇಚ್ಛೆಯ ನಿತ್ಯತ್ವಾದಿಗಳು ದ್ವ್ಯಣುಕಾಭಾವಕ್ಕೆ ಕಾರಣವೆಂದು ಹೇಳಿದಂತಾಗುತ್ತದೆ. ಹೀಗೆ ಹೇಳಿದಾಗ ಅನ್ಯಥಾಸಿದ್ಧಿಯ ಶಂಕೆಗೆ ಅವಕಾಶವಿಲ್ಲ.

ವೈಶೇಷಿಕರು ಪರಮಾಣುಗಳಲ್ಲಿ ಕ್ರಿಯೆಯು ಉತ್ಪನ್ನವಾಗದೇ ಇರುವುದಕ್ಕೆ ಕೇವಲ ಈಶ್ವರೇಚ್ಛೆಯು ಕಾರಣವೆನ್ನುತ್ತಾರೆ. ಬೇರೆ ಕಾರ್ಯಗಳ ಉತ್ಪತ್ತಿ ವಿಷಯದಲ್ಲಿ ಅದೃಷ್ಟವು ಇಲ್ಲದಿದ್ದರೆ ಹೇಗೆ ಕಾರ್ಯವು ಆಗುವುದಿಲ್ಲವೋ, ಅದರಂತೆ ಪರಮಾಣುಕ್ರಿಯೆಯು ಉತ್ಪತ್ತಿ ಆಗದೇ ಇರುವುದಕ್ಕೆ ಅದೃಷ್ಟವೆಂಬ ಕಾರಣವಿಲ್ಲದಿರುವುದು ಹೇತುವಾಗುತ್ತದೆ ಎಂದು ಹೇಳಬಾರದು. ಕೇವಲ ಈಶ್ವರೇಚ್ಛೆಯ ಅಭಾವವೇ ಪರಮಾಣುಕ್ರಿಯೆಯ ಅನುತ್ಪತ್ತಿಗೆ ಕಾರಣವೆಂದು ಹೇಳಬೇಕು. ಅದಕ್ಕಾಗಿ 'ನ ಕರ್ಮ' ಎಂಬ ಪದಗಳನ್ನು ಉಲ್ಲೇಖ ಮಾಡಲೇ ಬೇಕು.

ಹಾಗಾದರೆ 'ಉಭಯಥಾಪಿ ನ ಕರ್ಮ' ಎಂದಷ್ಟೇ ಸೂತ್ರದಲ್ಲಿ ಹೇಳಿದರೆ ಸಾಕು. ಉಳಿದದ್ದು ಅನಾವಶ್ಯಕ ? ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ಪರಮಾಣುಗಳಲ್ಲಿ ಕ್ರಿಯೆಯು ಉತ್ಪತ್ತಿ ಆಗದೇ ಇದ್ದಾಗ ಯಾವ ಅನಿಷ್ಟಾಪತ್ತಿಯು ಬರುತ್ತದೋ, ಅದನ್ನು ಸೂಚನೆ ಮಾಡುವುದಕ್ಕಾಗಿ 'ಉಭಯಥಾಪಿ ಕರ್ಮಾಭಾವಾತ್' ಎಂದು ಹೇಳಲಾಗಿದೆ. ಇಷ್ಟೇ ಹೇಳಿದರೆ ಪ್ರಳಯಕಾಲದಲ್ಲಿ ಈಶ್ವರೇಚ್ಛೆ ಇದೆ. ಆದರೆ ಪರಮಾಣುಗಳಲ್ಲಿ ಕ್ರಿಯೆಯಿಲ್ಲ. ಪುನಃ ಕಾರ್ಯಕಾರಣಭಾವವು ವ್ಯಭಿಚರಿತವಾಗುತ್ತದೆ. ಅದಕ್ಕಾಗಿ 'ಅತಃ'

ಎಂಬ ಪದವನ್ನು ಉಲ್ಲೇಖ ಮಾಡಿದ್ದಾರೆ. ಈಶ್ವರೇಚ್ಛೆ ಮತ್ತು ಪರಮಾಣು ಕ್ರಿಯೆಗಳ ಕಾರ್ಯಕಾರಣಭಾವಕ್ಕೆ ವ್ಯಭಿಚಾರ ಬರುವುದರಿಂದ ಪ್ರಳಯಕಾಲ ಬಿಟ್ಟು, ಬೇರೆ ಕಾಲದಲ್ಲಿ ಈಶ್ವರೇಚ್ಛೆಯಿಂದ ಪರಮಾಣುಕ್ರಿಯೆಯಾಗಲು ಸಾಧ್ಯವಿಲ್ಲ ಎಂಬರ್ಥವು ತಿಳಿಯುವುದಿಲ್ಲ. 'ನ ಕರ್ಮ ಅತಃ' ಎಂಬುದಾಗಿ ಸೂತ್ರದಲ್ಲಿ ಪದಗಳನ್ನು ವಿನ್ಯಾಸ ಮಾಡಿದಾಗ 'ಅತಃ' ಎಂಬ ಪದಕ್ಕೆ ವ್ಯಭಿಚಾರದೋಷ ಇರುವುದರಿಂದ ಎಂಬರ್ಥವನ್ನು ವಿವಕ್ಷಿಸಿ, ಪ್ರಳಯ ಬಿಟ್ಟು ಬೇರೆ ಕಾಲದಲ್ಲಿ ಈಶ್ವರೇಚ್ಛೆಯು ಪರಮಾಣುಕ್ರಿಯೆಗೆ ಕಾರಣವಲ್ಲ ಎಂದು ಹೇಳಲು ವ್ಯಭಿಚಾರವೇ ನಿಮಿತ್ತವಾಗಿದೆ ಎಂಬುದಾಗಿ ಹೇಳಿದಂತಾಗುತ್ತದೆ. ಆದ್ದರಿಂದ ಸೂತ್ರದಲ್ಲಿರುವ ಎಲ್ಲಾ ಪದಗಳು ಸಾರ್ಥಕವಾಗಿವೆ.

## ಸಮವಾಯಿ ನಿರಾಕರಣೆ

**समवायिकारणं च निराह -**

**।। समवायाभ्युपगमाच्च साम्यादनवस्थितेः ।। २-२-१३।।**

**चः समुच्चये । अवयवावयव्यादीनां भिन्नत्वमुपेत्य तेषां समवायाभ्युपगमाच्च तन्मतमसत् । कुतः? समवायस्यापि समवायिभ्यां भिन्नत्वसाम्यात् । मृद्धटसमवाय इत्यादिविशिष्टबुद्ध्युपपत्तये समवायान्तरापेक्षायां तत्राप्येवं तत्राप्येवमित्यनवस्थानादित्यर्थः । समवायासम्भवान्न परमाण्वादीनां द्रव्यादिकारणत्वं युक्तमिति भावः ।।**

ಸಮವಾಯಕಾರಣವನ್ನು ನಿರಾಕರಣೆ ಮಾಡುತ್ತಿದ್ದಾರೆ - 'ಸಮವಾಯಾಭ್ಯುಪಗಮಾಚ್ಚ ಸಾಮ್ಯದನವಸ್ಥಿತೇಃ'.

ಸೂತ್ರದಲ್ಲಿ ಚ ಶಬ್ದವು ಸಮುಚ್ಚಾಯಾರ್ಥದಲ್ಲಿದೆ. ಅವಯವ ಮತ್ತು ಅವಯವಿಗಳಿಗೆ ಭೇದವನ್ನು ಅಂಗೀಕಾರ ಮಾಡಿ, ಅವುಗಳಿಗೆ ಸಮವಾಯಸಂಬಂಧವನ್ನು ಅಂಗೀಕರಿಸುವುದರಿಂದಲೂ ವೈಶೇಷಿಕಮತವು ಅಸಾಧುವಾಗಿದೆ. ಏಕೆಂದರೆ ಸಮವಾಯಕ್ಕೂ ಕೂಡ ಸಮವಾಯಿಗಳಿಂದ ಭೇದವು ಸಮಾನ. ಮೃದ್-ಘಸಮವಾಯ = ಮಣ್ಣಿನಲ್ಲಿ ಘಟಸಮವಾಯ ಇದೆ ಎಂಬ ವಿಶಿಷ್ಟಬುದ್ಧಿಯನ್ನು ಉಪಪಾದನೆ ಮಾಡುವುದಕ್ಕಾಗಿ ಘಟಸಮವಾಯಕ್ಕೂ ಮಣ್ಣಿಗೂ ಮತ್ತೊಂದು ಸಮವಾಯವನ್ನು

ಅಂಗೀಕಾರ ಮಾಡಬೇಕು. ಆ ಮತ್ತೊಂದು ಸಮವಾಯಕ್ಕೂ ಮಣ್ಣಿಗೂ ಇನ್ನೊಂದು ಸಮವಾಯವನ್ನು ಅಂಗೀಕಾರ ಮಾಡಬೇಕು. ಆ ಸಮವಾಯಕ್ಕೂ ಕೂಡ ಮತ್ತೊಂದು ಸಮವಾಯ ಬೇಕು. ಹೀಗೆ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ವೈಶೇಷಿಕಮತದಲ್ಲಿ ಸಮವಾಯವೇ ಅಸಂಭಾವಿತವಾಗಿದೆ. ಆದ್ದರಿಂದ ಪರಮಾಣುಗಳು ದ್ರವ್ಯ ಮೊದಲಾದವುಗಳನ್ನು ಕುರಿತು ಸಮವಾಯಕಾರಣವಾಗಿವೆ ಎಂದು ಹೇಳುವುದು ಸಮಂಜಸ ಆಗುವುದಿಲ್ಲ.

ವಿವರಣೆ - ಹಿಂದೆ ಅಸಮವಾಯಕಾರಣವನ್ನು ನಿರಾಕರಣೆ ಮಾಡಿದ್ದಾಯಿತು. ಸಮವಾಯಕಾರಣವೂ ಕೂಡ ಅಯುಕ್ತವಾಗಿದೆ ಎಂಬುದನ್ನು ತಿಳಿಸುವುದಕ್ಕಾಗಿ ಚಶಬ್ದವನ್ನು ಪ್ರಯೋಗಿಸಿದ್ದಾರೆ. ಅವಯವಿಗೆ ಅವಯವದಿಂದ ಭೇದವಿದೆ ಎಂಬುದು ವೈಶೇಷಿಕ ಸಿದ್ಧಾಂತ. ಸಮವಾಯಕ್ಕೂ ಸಮವಾಯ ಸಂಬಂಧವನ್ನು ಹೊಂದಿರುವ ಪದಾರ್ಥಗಳಿಗೂ ಕೂಡ ಭೇದವಿದೆ ಎಂಬುದು ವೈಶೇಷಿಕ ಸಿದ್ಧಾಂತ. ಆದ್ದರಿಂದ ಅವಯವ ಅವಯವಿಗಳಿಗೆ ಭೇದವಿರುವ ಕಾರಣ ಸಮವಾಯಸಂಬಂಧವನ್ನು ಒಪ್ಪುತ್ತಾರೆ. ಅದೇ ನ್ಯಾಯದಲ್ಲಿ ಸಮವಾಯಕ್ಕೂ, ಸಮವಾಯಿಗಳಿಗೂ ಭೇದವಿರುವುದರಿಂದ ಮತ್ತೊಂದು ಸಮವಾಯವನ್ನು ಒಪ್ಪಲೇ ಬೇಕು. ಹೀಗೆ ಹೇಳುತ್ತಾ ಹೋದರೆ ಅನವಸ್ಥಾದೋಷವು ಬರುತ್ತದೆಂಬುದು ಸೂತ್ರಕಾರರ ಹೃದಯ.

### ಪ್ರಲಯ ನಿರಾಕರಣೆ

एवं कारणत्रयनिरासेन सृष्टिं निरस्य प्रलयं निराचष्टे -

।। नित्यमेव च भावात् ।।२-२-१४।।

किञ्चेति चार्थः । ईशेच्छापरमाण्वादिकारणस्य नित्यं भावान्नित्यमेव च कार्यं स्यान्न तु कदाचित्प्रलय इत्येवार्थः । यद्वा समवायस्येत्यस्ति । सत्तासमवायो जनिरिति परैरङ्गीकृतत्वात् समवायस्य च नित्यमेव भावात् सर्वं नित्यं जनिमत्स्यादित्यर्थः । तथाच सृष्टिप्रलयानुपपत्तिरिति भावः ।।

ಹೀಗೆ ಸಮವಾಯಕಾರಣ, ಅಸಮವಾಯಕಾರಣ ಹಾಗೂ ನಿಮಿತ್ತ ಕಾರಣಗಳೆಂಬ ಮೂರು ಕಾರಣಗಳನ್ನು ನಿರಾಸ ಮಾಡುವ ಮೂಲಕ ವೈಶೇಷಿಕಮತದಲ್ಲಿ ಸೃಷ್ಟಿಪ್ರಕ್ರಿಯೆಯನ್ನು ನಿರಾಕರಣೆ

ಮಾಡಿದ್ದಾಯಿತು. ಪ್ರಕೃತ ಅವರು ಹೇಳುವ ಪ್ರಳಯವನ್ನು ನಿರಾಕರಣೆ ಮಾಡುತ್ತಿದ್ದಾರೆ - 'ನಿತ್ಯಮೇವ ಚ ಭಾವಾತ್'.

ಸೂತ್ರದಲ್ಲಿರುವ 'ಚ'ಶಬ್ದವು 'ಕಿಂಚ' ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ನಿತ್ಯಮೇವ = ಈಶ್ವರನ ಇಚ್ಛೆ ಪರಮಾಣ್ವಾದಿ ಕಾರಣಗಳು ನಿತ್ಯವಾಗಿಯೂ, ಭಾವಾತ್ = ಇರುವುದರಿಂದ ಕಾರ್ಯಗಳು ಹುಟ್ಟುತ್ತಲೇ ಇರಬೇಕಾದೀತು. ಪ್ರಳಯವೇ ಇಲ್ಲವೆಂದಾಗಬೇಕಾದೀತು. ಇದು 'ಏವ' ಶಬ್ದದ ಅರ್ಥ.

ಅಥವಾ 'ಸಮವಾಯಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಆಗ ಹೀಗರ್ಥ - ಸತ್ತಾಜಾತಿಯ ಸಮವಾಯವೇ ಪದಾರ್ಥದ ಉತ್ಪತ್ತಿ ಎಂದು ವೈಶೇಷಿಕರು ಅಂಗೀಕರಿಸಿದ್ದಾರೆ. ನಿತ್ಯಮೇವ = ಸಮವಾಯವು ನಿತ್ಯವೇ ಆಗಿರುವುದರಿಂದ, ಭಾವಾತ್ = ಎಲ್ಲಾ ಪದಾರ್ಥಗಳು ಯಾವಾಗಲೂ ಉತ್ಪತ್ತಿವುಳ್ಳವುಗಳಾಗಬೇಕಾದೀತು. ಆದ್ದರಿಂದ ಸೃಷ್ಟಿ ಪ್ರಳಯಗಳು ವೈಶೇಷಿಕಮತದಲ್ಲಿ ಯುಕ್ತವಾಗುವುದಿಲ್ಲ ಎಂದಭಿಪ್ರಾಯ.

### ಪರಮಾಣುನಿತ್ಯತ್ವದ ನಿರಾಕರಣೆ

अभ्युपेत्य परमाणुनित्यत्वं तदारम्भवादो दूषितः । इदानीं तु तन्नित्यत्वमेव नेत्याह -

।। रूपादिमत्त्वाच्च विपर्ययो दर्शनात् ।।२-२-१५।।

किञ्च पार्थिवादिपरमाणूनां रूपरसादिमत्त्वात् प्रकृतनित्यत्व विपर्ययः अनित्यत्वं भवति । यद्रूपादिमत् तदनित्यमिति घटादौ दर्शनादित्यर्थः । भौतिकत्वेन रूपादेर्विशेषणात् नेशादौ व्यभिचारः ।।

ಪರಮಾಣುನಿತ್ಯತ್ವವನ್ನು ಹಾಗೂ ಪರಮಾಣ್ವಾರಂಭವಾದವನ್ನು ಅಂಗೀಕಾರ ಮಾಡಿ, ವೈಶೇಷಿಕರಿಗೆ ಇಲ್ಲಿಯತನಕ ದೋಷಗಳನ್ನು ಹೇಳಲಾಯಿತು. ಪ್ರಕೃತ ಆ ಪರಮಾಣುಗಳಿಗೆ ನಿತ್ಯತ್ವವೇ ಇಲ್ಲವೆಂದು ಸಮರ್ಥಿಸುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ - 'ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್'.

ಚ ಮತ್ತು ರೂಪಾದಿಮತ್ತ್ವಾತ್ = ಪಾರ್ಥಿವಪರಮಾಣುಗಳೇ ಮೊದಲಾದ ಪರಮಾಣುಗಳಿಗೆ ರೂಪ, ರಸ ಮೊದಲಾದ ಗುಣಗಳಿರುವುದರಿಂದ, ವಿಪರ್ಯಯಃ = ಪ್ರಕೃತವಾದ ನಿತ್ಯತ್ವಕ್ಕೆ ವಿಪರೀತವಾದ ಅನಿತ್ಯತ್ವವು ಉಂಟಾಗುತ್ತದೆ. ಏಕೆಂದರೆ ದರ್ಶನಾತ್ = ಯಾವುದು ರೂಪ ಮೊದಲಾದ ಗುಣಗಳುಳ್ಳದ್ದೋ ಅದು ಅನಿತ್ಯವಾಗಿದೆ ಎಂಬ ನಿಯಮವು ಘಟಾದಿಗಳಲ್ಲಿ ಅನುಭವಸಿದ್ಧವಾಗಿದೆ ಎಂಬುದು ಸೂತ್ರಾರ್ಥ. ಯಾವುದು ರೂಪ ಮೊದಲಾದ ಗುಣಗಳನ್ನು ಹೊಂದಿದೆಯೋ, ಅದು ಅನಿತ್ಯವಾಗಿದೆ ಎಂಬ ನಿಯಮ ಘಟಪಟಾದಿಗಳಲ್ಲಿ ಅನುಭವಸಿದ್ಧವಾಗಿದೆ ಎಂಬುದು ಸೂತ್ರಾರ್ಥ.

'ಭೌತಿಕತ್ವ' ಎಂಬ ವಿಶೇಷಣವನ್ನು ರೂಪಾದಿಗಳಲ್ಲಿ ಹೇಳಿದ್ದರಿಂದ ಈಶ್ವರನಲ್ಲಿ ವ್ಯಭಿಚಾರದೋಷವು ಬರುವುದಿಲ್ಲ.

'ಉಭಯಥಾ ಚ' ಎಂಬ ಸೂತ್ರ ವ್ಯಾಖ್ಯಾನ

अस्तु रूपादिमत्त्वेऽपि नित्यत्वम् । अस्तु वा अनित्यत्वम् । किं बाधकमत आह -

।। उभयथा च दोषात् ।।२-२-१६।।

उक्तपक्षद्वयेऽपि दोषसत्त्वादित्यर्थः । आद्ये घटादेरपि नित्यतापत्तिः । तत्साम्यस्य अणुष्वप्यनेन हेतुना सुसाधत्वात् । अन्त्येऽणूनामभावेन द्व्यणुकादिकार्याभाव इति भावः ।

ರೂಪಾದಿಗಳಿದ್ದರೂ ಕೂಡ ಪರಮಾಣುಗಳು ನಿತ್ಯವೇ ಆಗಲಿ. ಅಥವಾ ಪರಮಾಣುಗಳು ಅನಿತ್ಯವೇ ಆಗಲಿ ಏನು ಬಾಧಕ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - 'ಉಭಯಥಾ ಚ ದೋಷಾತ್' ಎಂದು.

ಹಿಂದೆ ಹೇಳಿದ ಪಕ್ಷಗಳಲ್ಲೂ ಕೂಡ ದೋಷಗಳಿವೆ ಎಂದು 'ಉಭಯಥಾಚ ದೋಷಾತ್' ಎಂಬುದರ ಅರ್ಥ. ಅದು ಹೀಗೆ - ರೂಪಾದಿಗಳಿದ್ದರೂ ಕೂಡ ಪರಮಾಣುಗಳು ಹೇಗೆ ನಿತ್ಯವಾಗಿವೆಯೋ, ಅದರಂತೆ ಘಟಾದಿಗಳೂ ಕೂಡ ನಿತ್ಯವಾಗಲಿ ಎಂಬುದಾಗಿ ಆಪತ್ತಿ ಬರುತ್ತದೆ. ಏಕೆಂದರೆ ಇದೇ ರೂಪಾದಿ ಹೇತುವಿನಿಂದ ಅಣುಗಳಲ್ಲೂ ಕೂಡ ಘಟಾದಿಸಾಮ್ಯವನ್ನು ಸುಲಭವಾಗಿ

ಸಾಧಿಸಬಹುದು. ಅಣುಗಳು ಅನಿತ್ಯವಾಗಿವೆ ಎಂಬ ಎರಡನೆಯ ಪಕ್ಷದಲ್ಲಿ ಅಣುಗಳೇ ಇಲ್ಲದಿರುವಾಗ ದ್ವ್ಯಣುಕಾದಿ ಕಾರ್ಯಗಳೂ ಕೂಡ ಸಾಧ್ಯವಾಗುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

### 'ಅಪರಿಗ್ರಹಾಚ್ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ

इतश्च तन्मतं निराचष्टे -

।। अपरिग्रहाच्च अत्यन्तमनपेक्षा ।।२-२-१७।।

परमाण्वारम्भवादस्य श्रुत्यादिपरिग्रहशून्यत्वात् तद्विरुद्धत्वाच्चानपेक्षा अनादरणं युक्तमित्यर्थः ।।६।।

ಮತ್ತೊಂದು ಕಾರಣದಿಂದಲೂ ವೈಶೇಷಿಕಮತವನ್ನು ನಿರಾಕರಣೆ ಮಾಡುತ್ತಿದ್ದಾರೆ - 'ಅಪರಿಗ್ರಹಾಚ್ಚ ಅತ್ಯಂತಮನಪೇಕ್ಷಾಚ್ಚ' ಎಂದು. ಅಪರಿಗ್ರಹಾಚ್ಚ = ಪರಮಾಣ್ವಾರಂಭವಾದವು ಶ್ರುತ್ಯಾದಿಪ್ರಮಾಣಗಳಿಂದ ಪರಿಗ್ರಹೀತವಾಗಿರುವುದಿಲ್ಲ. ಮತ್ತು ಶ್ರುತ್ಯಾದಿಗಳಿಂದ ವಿರುದ್ಧವೇ ಆಗಿದೆ. ಆದ್ದರಿಂದ ಅತ್ಯಂತಮನಪೇಕ್ಷಾ = ಶ್ರುತ್ಯಾದಿಗಳಿಂದ ವಿರುದ್ಧವಾಗಿರುವ ಕಾರಣ ಅತ್ಯಂತ ಅನಾದರಕ್ಕೆ ಪಾತ್ರವಾಗಿದೆ ಎಂದು ಸೂತ್ರಾರ್ಥ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ವೈಶೇಷಿಕಾಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಸಮುದಾಯಾಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥
॥ ಶ್ರೀವೇದವ್ಯಾಸಾಯ ನಮಃ ॥
॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥
॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥
॥ ಶ್ರೀಗುರುಭ್ಯೋ ನಮಃ ॥

# ಸಮುದಾಯಾಧಿಕರಣ

## ಬ್ರಹ್ಮಸೂತ್ರ

'ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – समुदाय उभयहेतुकेऽपि तदप्राप्तिः ।।**

ಪರಮಾಣುಗಳ ಸಮುದಾಯವೇ ಘಟ-ಪಟಾದಿ ಪದಾರ್ಥಗಳೆಂದು ಬೌದ್ಧರು ಹೇಳುತ್ತಾರೆ. ಒಂದೇ ಅಣುವಿನಿಂದ ಸಮುದಾಯವು ಹುಟ್ಟುತ್ತದೆ ಎಂಬ ಮಾತು ವ್ಯಾಹತ. ಅನೇಕ ಅಣುಗಳಿಂದ ಸಮುದಾಯವು ಹುಟ್ಟುತ್ತದೆಂದರೆ ವಿರಳವಾದ ಅಣುಗಳಿಂದ ಸಮುದಾಯ ಹುಟ್ಟುತ್ತದೋ, ಮಿಲಿತವಾದ ಅಣುಗಳಿಂದ ಸಮುದಾಯ ಹುಟ್ಟುತ್ತದೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ವಿರಳವಾದ ಪರಮಾಣುಗಳಿಂದ ಸಮುದಾಯ ಹುಟ್ಟುವುದಾದರೆ, ಪ್ರಳಯಕಾಲದಲ್ಲಿಯೂ ಘಟ-ಪಟಾದಿ ವಸ್ತುಗಳು ಹುಟ್ಟಬೇಕಾದೀತು. ಮಿಲಿತವಾದ ಪರಮಾಣುಗಳಿಂದ ಸಮುದಾಯ ಹುಟ್ಟುತ್ತದೆ ಎಂದರೆ ಮಿಲಿತವಾಗಬೇಕಾದರೆ ಸಮುದಾಯವಿರಬೇಕು. ಸಮುದಾಯಕ್ಕಾಗಿ ಮಿಲಿತ ಅಣುಗಳು ಬೇಕು. ಹೀಗೆ ಅನ್ಯೋನ್ಯಾಶ್ರಯ ಬರುತ್ತದೆ.

ಅರ್ಥ -- ಯಾವ ಕಾರಣದಿಂದ ಸಮುದಾಯೇ = ಪರಮಾಣು ಸಮುದಾಯದಲ್ಲಿ ಅನೇಕತ್ವಸಂಖ್ಯೆಯನ್ನು ಒಪ್ಪಿದರೆ, ಅನೇಕ ಪರಮಾಣುಗಳು ಮಿಲಿತವಾಗಿ ಸಮುದಾಯಕ್ಕೆ ಕಾರಣವಾಗುತ್ತವೋ, ವಿರಳವಾಗಿ ಸಮುದಾಯಕ್ಕೆ ಕಾರಣವಾಗುತ್ತವೋ ? ಎರಡು ಪಕ್ಷದಲ್ಲಿಯೂ, ತದಪ್ರಾಪ್ತಿಃ = ಸಮುದಾಯವೇ

ಅನುಪಪನ್ನವಾಗುತ್ತದೆ ಏಕೆಂದರೆ, ಅನ್ಯೋನ್ಯಾಶ್ರಯದೋಷ ಬರುತ್ತದೆ. ಇದನ್ನು ಟೀಕೆಯಲ್ಲಿ ಉಪಪಾದನೆ ಮಾಡಿದ್ದಾರೆ. ಆದ್ದರಿಂದ ಪರಮಾಣುಗಳ ಸಮುದಾಯವೇ ಘಟ-ಪಟ ಮೊದಲಾದ ಪದಾರ್ಥಗಳೆಂಬ ಬೌದ್ಧರ ಪಕ್ಷವು ಸಹಿಸಲು ಅಸಾಧ್ಯವಾಗಿದೆ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

ಪರಮಾಣುಗಳ ಗುಂಪು ಸೃಷ್ಟಿಗೆ ಕಾರಣವೇ ?

**ब्रह्मसूत्रभाष्यम् – परमाणुपुञ्जवादिमतमपाकरोति ।**

**।। समुदाय उभयहेतुकेऽपि तदप्राप्तिः ।।१।।**

**समुदायस्यैकहेतुकत्वं न युज्यते ।**

**उभयहेतुकेऽपि अन्योन्याश्रयात् तदप्राप्तिः । अन्यथा सर्वदा समुदायत्वं स्यात् ।।१।।**

ಅನುವಾದ - ಪರಮಾಣುಗಳ ಸಮೂಹವೇ ಘಟಪಟಾದಿ ಕಾರ್ಯಪ್ರಪಂಚವಾಗಿದೆ ಎಂದು ಹೇಳುವ ಕೆಲವು ಬೌದ್ಧರ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ಒಂದೇ ವಸ್ತುವು ಸಮುದಾಯಕ್ಕೆ ಕಾರಣವಾಗಲು ಸಾಧ್ಯವಿಲ್ಲ. ಅನೇಕ ವಸ್ತುಗಳನ್ನು ಕಾರಣವೆಂದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ವಿರಳವಾದ ಅನೇಕ ವಸ್ತುಗಳು ಸಮುದಾಯಕ್ಕೆ ಕಾರಣವೆಂದು ಹೇಳಿದರೆ ನಿರಂತರವಾಗಿ ಸಮುದಾಯವು ಇರಬೇಕಾದೀತು.

ಪ್ರತಿಪದಾರ್ಥ -- ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ, ಯೋಗಾಚಾರ ಎಂಬ ನಾಲ್ಕುಪಂಗಡವನ್ನು ಹೊಂದಿರುವ ಬೌದ್ಧರ ಮತದಲ್ಲಿ ಪರಮಾಣುಸಮುದಾಯವೇ ಘಟಪಟಾದಿಕಾರ್ಯವೆಂದು

ಹೇಳುವ ವೈಭಾಷಿಕರ ಮತವನ್ನು ಮೊದಲು ನಿರಾಕರಣೆ ಮಾಡುತ್ತಿದ್ದಾರೆ. ಪರಮಾಣುಪುಂಜವಾದಿಮತಮ್ = ಪರಮಾಣು-ಗುಂಪಿನಿಂದ ಕಾರ್ಯಪ್ರಪಂಚವೆಂದು ಹೇಳುವ ವೈಭಾಷಿಕರ ಮತವನ್ನು, ಅಪಾಕರೋತಿ = ಸೂತ್ರಕಾರರು ನಿರಾಕಣೆ ಮಾಡುತ್ತಿದ್ದಾರೆ.

ಸಮುದಾಯಸ್ಯ = ಪರಮಾಣು ಸಮುದಾಯಕ್ಕೆ, ಏಕಹೇತುಕತ್ವಮ್ = ಒಂದೇ ಪರಮಾಣುವು ಕಾರಣವಾಗಿದೆ ಎಂಬುದು, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಉಭಯಹೇತುಕೇಽಪಿ = ಒಂದೇ ಪರಮಾಣು ಅಥವಾ ಅನೇಕ ಪರಮಾಣುಗಳು ಕಾರಣವೆಂದು ಹೇಳಿದರೂ, ಅನ್ಯೋನ್ಯಾಶ್ರಯಾತ್ = ಅನ್ಯೋನ್ಯಾಶ್ರಯದೋಷವು ಬರುತ್ತದೆ. ಆದ್ದರಿಂದ ತದಪ್ರಾಪ್ತಿಃ = ಸಮುದಾಯವು ಯುಕ್ತವೇ ಆಗುವುದಿಲ್ಲ. ಅನ್ಯಥಾ = ವಿರಳವಾದ ವಸ್ತುಗಳು ಕಾರಣವೆಂದು ಹೇಳಿದರೆ, ಸರ್ವದಾ = ನಿರಂತರವಾಗಿ, ಸಮುದಾಯತ್ವಂ = ಸಮುದಾಯದ ಇರುವಿಕೆಯು, ಸ್ಯಾತ್ = ಒಪ್ಪಬೇಕಾದೀತು.

### ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

ಪರಮಾಣುಪುಂಜ ಎಂಬುದೇ ತಪ್ಪು

**सत्तर्कदीपावळिः – परमाण्वारम्भवादवत्परमाणुपुञ्जवादोऽप्यनुपपन्नः । तथाहि । परमाणुपुञ्जशब्दादिभेदः समुदायस्तावदेकपरमाणुहेतुकश्चेत्प्रलये समुदायस्याप्यविच्छेदः स्यात् । बहुपरमाणुहेतुकश्चेद्बहुसमुदाय योर्भेदोऽङ्गीकृतः स्यातः । न च तथा सति बहुत्वैकत्वे समुदायस्य समुदायिभूतानां बहुत्वमिति सामुदायहेतुकत्वं बहुत्वं किं न स्यादिति । अन्योन्याश्रयतया परमाणुपुञ्जवादोऽपास्तः स्यात् । तदाह । परमाणुपुञ्जेत्यादिना ।**

ಪರಮಾಣ್ವಾರಂಭವಾದ ಎನಿಸಿದ ತಾರ್ಕಿಕರ ಮತವು ಹೇಗೆ ಅನುಪಪನ್ನವೋ, ಅದರಂತೆ ಪರಮಾಣುಪುಂಜವಾದಿಗಳಾದ ಬೌದ್ಧರ ಮತವೂ ಕೂಡ ಅನುಪಪನ್ನವಾಗಿದೆ. ಅದು ಹೀಗೆ - ಪರಮಾಣುಪುಂಜ ಎಂದರೇನು ? ಪರಮಾಣುಗಳ ಸಮುದಾಯ ಎಂಬರ್ಥವನ್ನು ಹೇಳಿದರೆ ಇದು ಒಂದೇ ಪರಮಾಣುವಿನಿಂದ ಸೃಷ್ಟವಾಗಿದೆಯೋ, ಅನೇಕ ಪರಮಾಣುಗಳಿಂದ ಸೃಷ್ಟವಾಗಿದೆಯೋ, ಮೊದಲನೆಯ ಪಕ್ಷದಲ್ಲಿ ಪ್ರಳಯಕಾಲದಲ್ಲೂ ಕೂಡ ಸಮುದಾಯವು ಅವಿಚ್ಛಿನ್ನವಾಗಿ ಮುಂದುವರೆಯಬೇಕಾಗುತ್ತದೆ. ಅನೇಕ ಪರಮಾಣುಗಳಿಂದ ಈ ಸಮುದಾಯವು ಹುಟ್ಟಿದೆ ಎಂದು ಹೇಳಿದಲ್ಲಿ ಅನೇಕ ಸಮುದಾಯಗಳಿಗೆ ಭೇದವನ್ನು ಅಂಗೀಕಾರ ಮಾಡಿದಂತಾಯಿತು. ಆ ಅನೇಕ ಪರಮಾಣುಗಳು ಜೊತೆಯಾಗಿ ಸಮುದಾಯವನ್ನು ಹುಟ್ಟಿಸಿವೆಯೋ, ಅಥವಾ ಬಿಡಿಬಿಡಿಯಾಗಿದ್ದು ಸಮುದಾಯವನ್ನು ಹುಟ್ಟಿಸಿವೆಯೋ? ಎಲ್ಲಾ ಪರಮಾಣುಗಳು ಸೇರಿ ಸಮುದಾಯವನ್ನು ಹುಟ್ಟಿಸಿವೆ ಎಂದು ಹೇಳಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಜೊತೆಯಾಗಿ ಸೇರಿದರೆ ಸಮುದಾಯವು ಸಿದ್ಧವಾಗುತ್ತದೆ. ಸಮುದಾಯವು ಸಿದ್ಧವಾದರೆ ಜೊತೆ ಸೇರುವುದು ಯುಕ್ತವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ. ವಿರಳವಾಗಿ ಸಮುದಾಯವನ್ನು ಹುಟ್ಟಿಸುತ್ತದೆಂದು ಹೇಳಿದರೆ ಪ್ರಳಯಕಾಲದಲ್ಲೂ ಕೂಡ ಇರುವುದರಿಂದ ಆಗಲೂ ಸಮುದಾಯವು ಹುಟ್ಟಬೇಕಾದೀತು. ಆದ್ದರಿಂದ ಪರಮಾಣುಪುಂಜವಾದವು ಅಯುಕ್ತವಾಗಿದೆ.

### ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

### ವೈಭಾಷಿಕ ಹಾಗೂ ಸೌತ್ರಾಂತಿಕಮತದ ಬಗ್ಗೆ

**तत्वप्रदीपः – चतुर्विधेषु बौद्धेषु वैभाषिकाः सौत्रान्तिकाश्च बाह्यार्थवादिनः । ते तावदुभयेऽपि परमाणूनां पुञ्जविशेषं जगत्क्षणभङ्गि सङ्गिरन्ते । विज्ञानवेदनासंज्ञासंस्कारानन्यस्कन्धांश्च । तत्र प्रथमे प्रत्यक्षमेतत्प्रचक्षते । अपरे तु नितरां मूढतमाः प्रतिबिम्बेनानेन बुद्ध्यारोपितेन**

**बिम्बादन्यदनुमेयमितीत्येष भेदः । तेषां परमाणुकारणनिरासप्रसङ्गसङ्गतं मतमधुना निरस्यति । समुदाय उभयहेतुकेऽपि तदप्राप्तिः ।।**

ಬೌದ್ಧರಲ್ಲಿ ನಾಕು ಪಂಗಡವಿದೆ. ಅವರಲ್ಲಿ ವೈಭಾಷಿಕರು ಹಾಗೂ ಸೌತ್ರಾಂತಿಕರು ಬಾಹ್ಯವಾದ ಪದಾರ್ಥಗಳನ್ನು ಅಂಗೀಕರಿಸುತ್ತಾರೆ. ಇವರಿಬ್ಬರೂ ಕೂಡ ಪರಮಾಣುಗಳ ಸಮೂಹವೇ ಜಗತ್ತೆನ್ನುತ್ತಾರೆ. ಹಾಗೂ ಕ್ಷಣಿಕವೆನ್ನುತ್ತಾರೆ. ವಿಜ್ಞಾನಸ್ಕಂಧ, ವೇದನಾಸ್ಕಂಧ, ಸಂಜ್ಞಾಸ್ಕಂಧಗಳನ್ನು ಒಪ್ಪುತ್ತಾರೆ. ಇವರಿಬ್ಬರಲ್ಲಿ ವೈಭಾಷಿಕರು ಈ ಜಗತ್ತು ಪ್ರತ್ಯಕ್ಷದಿಂದಲೇ ತಿಳಿಯುತ್ತದೆನ್ನುತ್ತಾರೆ. ಸೌತ್ರಾಂತಿಕರು ಬಹಳ ಮೂಢರು. ಪ್ರತಿಬಿಂಬನಾದ ಈ ಪುರುಷನಿಂದ ಎಲ್ಲಾ ಪದಾರ್ಥಗಳು ಬುದ್ಧ್ಯಾರೋಪಿತವಾಗಿವೆ. ಬಿಂಬನಿಗಿಂತ ಭಿನ್ನವಾದ ಇವುಗಳೆಲ್ಲವೂ ಅನುಮೇಯವಾಗಿವೆ ಎಂದು ಹೇಳುತ್ತಾರೆ. ಪ್ರಕೃತ ಪರಮಾಣುಗಳು ಕಾರಣವಾಗುತ್ತವೆಂಬ ತಾರ್ಕಿಕಮತವನ್ನು ನಿರಾಕರಣೆ ಮಾಡುವ ಸಂದರ್ಭದಲ್ಲಿ ಈ ಮತದ ನಿರಾಕರಣೆಯೂ ಕೂಡ ಸಂಗತವಾಗಿದೆ. ಆದ್ದರಿಂದ 'ಉಭಯಹೇತುಕೇऽಪಿ ತದಪ್ರಾಪ್ತಿಃ' ಎಂಬ ಸೂತ್ರವು ಹೊರಟಿದೆ.

ಎರಡು ಹಂತದಲ್ಲೂ ಸಮುದಾಯ ಕೂಡದು

**तत्वप्रदीपः – न तावत्परमाणुसमुदायस्यैकहेतुकत्वम् । समुदायत्वाभाव-प्रसङ्गात् । द्व्यादिहेतुके समुदायेऽङ्गीक्रियमाणेऽन्योन्याश्रयात्तस्यायुक्तिः, द्वित्वादिसिद्धौ समुदायसिद्धिः, तत्सिद्धौ द्वित्वादिसिद्धिरिति । द्व्यादिहेतुकत्वानङ्गीकारे द्वितीयानपेक्षत्वादेकस्यैव समुदायत्वमिति सर्वदा समुदायः स्यात् । अतः समुदाय एव न युज्यते द्वय्यामपि पदव्याम् । समुदायविशेषात्मना जगज्जन्म दूरापेतम् ।।**

ಒಂದು ಪರಮಾಣುವು ಸಮುದಾಯಕ್ಕೆ ಕಾರಣವಾಗಲು ಸಾಧ್ಯವಿಲ್ಲ. ಹಾಗಾದಲ್ಲಿ ಸಮುದಾಯವೇ ಉಂಟಾಗುವುದಿಲ್ಲ. ಎರಡಕ್ಕಿಂತ ಹೆಚ್ಚು ಪರಮಾಣುಗಳು ಸಮುದಾಯಕ್ಕೆ ಕಾರಣವೆಂದು ಹೇಳಿದರೆ ಮೊದಲೇ ಸಮುದಾಯವು ಸಿದ್ಧವಾಗಬೇಕು. ಆಗ ಅನ್ಯೋನ್ಯಾಶ್ರಯ-ದೋಷ ಬರುತ್ತದೆ. ಎರಡಕ್ಕಿಂತ ಹೆಚ್ಚು ಪರಮಾಣುಗಳು ಒಟ್ಟಿಗೆ ಸಿದ್ಧವಾದರೆ ಸಮುದಾಯವು

ಸಿದ್ಧವಾಗುತ್ತವೆ. ಸಮುದಾಯವು ಸಿದ್ಧವಾದರೆ ಎರಡಕ್ಕಿಂತ ಹೆಚ್ಚು ಪರಮಾಣುಗಳು ಒಟ್ಟಿಗೆ ಸಿದ್ಧವಾಗುತ್ತವೆ ಎಂದು. ಎರಡಕ್ಕಿಂತ ಹೆಚ್ಚು ಪರಮಾಣುಗಳನ್ನು ಸಮುದಾಯಕ್ಕೆ ಕಾರಣವೆಂದು ಅಂಗೀಕರಿಸದೇ ಇದ್ದರೆ ಎರಡನೆಯ ಪರಮಾಣುವೇ ಅನಾವಶ್ಯಕ. ಆಗ ಸಮುದಾಯಕ್ಕೆ ಒಂದೇ ಪರಮಾಣು ಸಾಕು. ಆಗಲಿ ಎಂದರೆ ಸಮುಗಾಯವು ನಿರಂತರ ಇದೆ ಎಂದಾಯಿತು. ಒಟ್ಟಾರೆ ಸಮುದಾಯವು ಎರಡೂ ಪಕ್ಷಗಳಲ್ಲಿ ಯುಕ್ತವಾಗುವುದಿಲ್ಲ. ಹೀಗಿರುವಾಗ ಸಮುದಾಯ ವಿಶೇಷದಿಂದಾಗಿ ಜಗತ್ತಿನ ಹುಟ್ಟುವಿಕೆ ಎಂಬ ವಾದವು ದೂರದಲ್ಲೇ ನಿರಸ್ತವಾಯಿತು.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

ಅವೈದಿಕಪಾಷಂಡಿಗಳ ನಿರಾಕರಣೆ

**तत्वप्रकाशिका –**

**।। अधिकरणार्थं दर्शयति ।। परमाणुपुञ्जेति ।। द्विविधसमयिनां मध्ये हैतुकनिरासानन्तरं पाषण्डिनां निराकरणं प्राप्तम् । पाषण्डिनोऽपि द्विविधाः । अवैदिका वैदिकाश्च । तत्रावैदिकानामतिविरोधिनां निराकरणं प्रथमप्राप्तम् । तत्र बौद्धजैनानां मध्ये बौद्धस्यैव प्राथमिकत्वादादौ तन्निराक्रिया युक्ता ।**

ಸಮುದಾಯಾಧಿಕರಣದ ಪ್ರಮೇಯವನ್ನು 'ಪರಮಾಣುಪುಂಜ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

ಹೈತುಕ ಹಾಗೂ ಪಾಷಂಡಿ ಎಂಬುದಾಗಿ ಸಮಯಗಳು ಎರಡುವಿಧ. ಇವರಿಬ್ಬರ ನಡುವೆ ಹೈತುಕಮತವನ್ನು ಇಲ್ಲಿಯತನಕ ನಿರಾಕರಣೆ ಮಾಡಿದ್ದಾಯಿತು. ಈಗ ಪಾಷಂಡಿಗಳ ನಿರಾಕರಣೆಯು ಸಂಗತವಾಗಿದೆ. ಪಾಷಂಡಿಗಳೂ ಕೂಡ ಎರಡು ವಿಧ - ೧) ಅವೈದಿಕರು

೨) ವೈದಿಕರು ಎಂದು. ಅವೈದಿಕರು ನಮ್ಮ ಸಿದ್ಧಾಂತಕ್ಕೆ ಅತ್ಯಂತ ವಿರೋಧಿಗಳಾದ್ದರಿಂದ ಅವರ ನಿರಾಕರಣೆಯು ಮೊದಲು ಪ್ರಾಪ್ತವಾಗಿದೆ. ಅದರಲ್ಲೂ ಬೌದ್ಧ ಜೈನರ ನಡುವೆ ಬೌದ್ಧರೇ ಮೊದಲು ಪ್ರಾಪ್ತರಾಗಿದ್ದಾರೆ. ಆದ್ದರಿಂದ ಇವರ ನಿರಾಕರಣೆಯನ್ನು ಮಾಡುವುದೇ ಈಗ ಸಂಗತವಾಗಿದೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಭಾವದೀಪ

**भावदीपः – ।। समुदाय उभयहेतुकेऽपि तदप्राप्तिः ।।१८।।** अत्रैतन्मतनिरासे परमाणुपुञ्जेतिपदप्रयोगसूचितां सङ्गतिं वक्तुमाह – **द्विविधेति ।।** प्रागुक्तद्विविधेत्यर्थः।

ವೈಶೇಷಿಕಮತದ ಅನಂತರ ಬೌದ್ಧಮತವನ್ನು ನಿರಾಕರಣೆ ಮಾಡಲು ಯಾವ ಸಂಗತಿಯಿದೆ ? ಎಂಬ ಪ್ರಶ್ನೆಗೆ ಪರಮಾಣುಪುಂಜ ಎಂಬ ಪದಪ್ರಯೋಗದಿಂದ ಟೀಕೆಯಲ್ಲಿ ಇದಕ್ಕೆ ಉತ್ತರವನ್ನು ನೀಡಿದ್ದಾರೆ. ಇದರಿಂದ ತಿಳಿಯುವ ಸಂಗತಿಯನ್ನು 'ದ್ವಿವಿಧ' ಇತ್ಯಾದಿ ಟೀಕಾವಾಕ್ಯವು ನಿರೂಪಣೆ ಮಾಡುತ್ತಿದೆ. ಹಿಂದೆ ಉಲ್ಲೇಖ ಮಾಡಿದ ಎರಡು ಬಗೆಯ ಸಮಯಗಳಲ್ಲಿ ಎಂದರ್ಥ.

ವಿವರಣೆ - ೧. ಗೌತಮ, ೨. ಕಾಣಾದ, ೩. ಸಾಂಖ್ಯ. ೪. ಯೋಗ ಎಂಬುದಾಗಿ ಹೈತುಕರು ನಾಕುವಿಧ. ಈ ಎಲ್ಲರ ಮತಗಳನ್ನು ಇಲ್ಲಿಯತನಕ ನಿರಾಕರಣೆ ಮಾಡಿದ್ದಾಯಿತು. ಇವರೆಲ್ಲರೂ ಹೈತುಕರ ಪಂಗಡದಲ್ಲಿ ಸೇರುತ್ತಾರೆ. ಮುಂದೆ ಪಾಷಂಡಿಗಳ ನಿರಾಕರಣೆಯನ್ನು ಮಾಡಲು ಹೊರಟಿದ್ದಾರೆ.

'ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ' ಎಂಬ ಮಾತಿನಂತೆ ಜಿನನೇ ಮೊದಲು ಹುಟ್ಟಿದನು. ಬುದ್ಧನು ಅನಂತರ ಹುಟ್ಟಿದವನು. ಆದರೂ ಕೂಡ ಶಿಶುರೂಪದಿಂದ ಬುದ್ಧನು ವೇದನಿಂದಾತ್ಮಕವಾದ ಪಾಷಂಡಮತವನ್ನು ಸ್ಥಾಪನೆ ಮಾಡಿದನು. ಅದರಲ್ಲಿ ಕೆಲವನ್ನು ಅಂಗೀಕರಿಸಿ ಪುನಃ ಜಿನನು ವೇದನಿಂದಾತ್ಮಕವಾದ ಮತ್ತೊಂದು ಮತವನ್ನು ಸ್ಥಾಪನೆ ಮಾಡಿದನು. ಆದ್ದರಿಂದ ಬುದ್ಧನನ್ನು ಇಲ್ಲಿ ಪ್ರಾಥಮಿಕನೆಂದು ಅಂಗೀಕರಿಸಲಾಗಿದೆ.

ವೈಭಾಷಿಕ ಸೌತ್ರಾಂತಿಕಮತ ನಿರಾಕರಣೆಗಾಗಿ ಈ ಅಧಿಕರಣ

**तत्वप्रकाशिका – बौद्धानां बहुविधत्वेऽपि परमाणुकारणताभ्युपगन्तृ-निराकरणसङ्गत्या वैभाषिकसौत्रान्तिकमतमत्र निषिध्यत इति भावः ।**

ಬೌದ್ಧರು ಬಹುವಿಧರಾಗಿದ್ದಾರೆ. ಆದರೂ ಕೂಡ ಪರಮಾಣುಕಾರಣತ್ವವನ್ನು ಒಪ್ಪುವ ವೈಶೇಷಿಕರ ನಿರಾಕರಣೆಯನ್ನು ಈಗಾಗಲೇ ಮಾಡಿದ್ದರಿಂದ ಪ್ರಸಂಗಸಂಗತಿಯಿಂದ ಮೊದಲು ವೈಭಾಷಿಕ ಮತ್ತು ಸೌತ್ರಾಂತಿಕ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ.

**भावदीपः** – तामाह – **बौद्धानामिति ।। वैभाषिकेति ।।** तन्मतयोरनति-भिन्नार्थत्वादिति भावः।

ಪರಮಾಣುಪುಂಜವಾದಿಗಳ ಮತವನ್ನೇ 'ಬೌದ್ಧಾನಾಮ್' ಇತ್ಯಾದಿ ಗ್ರಂಥದಿಂದ ಉಲ್ಲೇಖ ಮಾಡುತ್ತಿದ್ದಾರೆ. ವೈಭಾಷಿಕರ ಹಾಗೂ ಸೌತ್ರಾಂತಿಕರ ಮತವನ್ನು ಈ ಒಂದೇ ಅಧಿಕರಣದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಏಕೆಂದರೆ ಈ ಎರಡು ಮತಗಳಲ್ಲಿ ಹೆಚ್ಚಿನ ವ್ಯತ್ಯಾಸ ಇರುವುದಿಲ್ಲ. ಇಬ್ಬರೂ ಕೂಡ ಬಾಹ್ಯಪದಾರ್ಥಗಳಿವೆ ಎಂದು ಅಂಗೀಕರಿಸಿದ್ದಾರೆ.

ವಿವರಣೆ - ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ, ಯೋಗಾಚಾರ ಇತ್ಯಾದಿಯಾಗಿ ಬೌದ್ಧಮತವು ಬಹುವಿಧವಾಗಿದೆ. 'ಬಹುವಿಧತ್ವೇऽಪಿ' ಎಂಬ ಟೀಕಾವಾಕ್ಯದಲ್ಲಿರುವ 'ಅಪಿ'ಶಬ್ದದಿಂದ 'ಮಾಧ್ಯಮಿಕ ಮತಗಳ ಅತಿವಿರೋಧವಿದ್ದರೂ' ಎಂಬುದನ್ನು ವಿವಕ್ಷಿಸಬೇಕು.

ಈ ಅಧಿಕರಣದಲ್ಲಿ ವಿಷ್ಣುವಿನ ಜಗಜ್ಜನ್ಮಾದಿಕರಣ ವಿಷಯದಲ್ಲಿ ಬೌದ್ಧಮತ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ಶ್ರೀಹರಿಯು ಜಗಜ್ಜನ್ಮಾದಿಕಾರಣನೆಂದು ಹೇಳಲಾಯಿತು. ಈ ಪ್ರಮೇಯಕ್ಕೆ ಬೌದ್ಧಮತದ ವಿರೋಧವು ಬರುವುದರಿಂದ ಇದು ಶ್ರೀಹರಿಯಲ್ಲಿ ಕೂಡದಿರಬೇಕಾದೀತು ಎಂಬ ಆಪತ್ತಿ ಬರುತ್ತದೆ. ಆದ್ದರಿಂದ ಬೌದ್ಧಮತವನ್ನು ನಿರಾಕರಣೆ ಮಾಡಲೇಬೇಕು.

೨) ವೈದಿಕರು ಎಂದು. ಅವೈದಿಕರು ನಮ್ಮ ಸಿದ್ಧಾಂತಕ್ಕೆ ಅತ್ಯಂತ ವಿರೋಧಿಗಳಾದ್ದರಿಂದ ಅವರ ನಿರಾಕರಣೆಯು ಮೊದಲು ಪ್ರಾಪ್ತವಾಗಿದೆ. ಅದರಲ್ಲೂ ಬೌದ್ಧ ಜೈನರ ನಡುವೆ ಬೌದ್ಧರೇ ಮೊದಲು ಪ್ರಾಪ್ತರಾಗಿದ್ದಾರೆ. ಆದ್ದರಿಂದ ಇವರ ನಿರಾಕರಣೆಯನ್ನು ಮಾಡುವುದೇ ಈಗ ಸಂಗತವಾಗಿದೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

**भावदीपः – ।। समुदाय उभयहेतुकेऽपि तदप्राप्तिः ।।१८।।** अत्रैतन्मतनिरासे परमाणुपुञ्जेतिपदप्रयोगसूचितां सङ्गतिं वक्तुमाह – **द्विविधेति ।।** प्रागुक्तद्विविधेत्यर्थः।

ವೈಶೇಷಿಕಮತದ ಅನಂತರ ಬೌದ್ಧಮತವನ್ನು ನಿರಾಕರಣೆ ಮಾಡಲು ಯಾವ ಸಂಗತಿಯಿದೆ ? ಎಂಬ ಪ್ರಶ್ನೆಗೆ ಪರಮಾಣುಪುಂಜ ಎಂಬ ಪದಪ್ರಯೋಗದಿಂದ ಟೀಕೆಯಲ್ಲಿ ಇದಕ್ಕೆ ಉತ್ತರವನ್ನು ನೀಡಿದ್ದಾರೆ. ಇದರಿಂದ ತಿಳಿಯುವ ಸಂಗತಿಯನ್ನು 'ದ್ವಿವಿಧ' ಇತ್ಯಾದಿ ಟೀಕಾವಾಕ್ಯವು ನಿರೂಪಣೆ ಮಾಡುತ್ತಿದೆ. ಹಿಂದೆ ಉಲ್ಲೇಖ ಮಾಡಿದ ಎರಡು ಬಗೆಯ ಸಮಯಗಳಲ್ಲಿ ಎಂದರ್ಥ.

ವಿವರಣೆ - ೧. ಗೌತಮ, ೨. ಕಾಣಾದ, ೩. ಸಾಂಖ್ಯ. ೪. ಯೋಗ ಎಂಬುದಾಗಿ ಹೈತುಕರು ನಾಕುವಿಧ. ಈ ಎಲ್ಲರ ಮತಗಳನ್ನು ಇಲ್ಲಿಯತನಕ ನಿರಾಕರಣೆ ಮಾಡಿದ್ದಾಯಿತು. ಇವರೆಲ್ಲರೂ ಹೈತುಕರ ಪಂಗಡದಲ್ಲಿ ಸೇರುತ್ತಾರೆ. ಮುಂದೆ ಪಾಷಂಡಿಗಳ ನಿರಾಕರಣೆಯನ್ನು ಮಾಡಲು ಹೊರಟಿದ್ದಾರೆ.

'ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ' ಎಂಬ ಮಾತಿನಂತೆ ಜಿನನೇ ಮೊದಲು ಹುಟ್ಟಿದನು. ಬುದ್ಧನು ಅನಂತರ ಹುಟ್ಟಿದವನು. ಆದರೂ ಕೂಡ ಶಿಶುರೂಪದಿಂದ ಬುದ್ಧನು ವೇದನಿಂದಾತ್ಮಕವಾದ ಪಾಷಂಡಮತವನ್ನು ಸ್ಥಾಪನೆ ಮಾಡಿದನು. ಅದರಲ್ಲಿ ಕೆಲವನ್ನು ಅಂಗೀಕರಿಸಿ ಪುನಃ ಜಿನನು ವೇದನಿಂದಾತ್ಮಕವಾದ ಮತ್ತೊಂದು ಮತವನ್ನು ಸ್ಥಾಪನೆ ಮಾಡಿದನು. ಆದ್ದರಿಂದ ಬುದ್ಧನನ್ನು ಇಲ್ಲಿ ಪ್ರಾಥಮಿಕನೆಂದು ಅಂಗೀಕರಿಸಲಾಗಿದೆ.

ವೈಭಾಷಿಕ ಸೌತ್ರಾಂತಿಕಮತ ನಿರಾಕರಣೆಗಾಗಿ ಈ ಅಧಿಕರಣ

**तत्वप्रकाशिका – बौद्धानां बहुविधत्वेऽपि परमाणुकारणताभ्युपगन्तृनिराकरणसङ्गत्या वैभाषिकसौत्रान्तिकमतमत्र निषिध्यत इति भावः ।**

ಬೌದ್ಧರು ಬಹುವಿಧರಾಗಿದ್ದಾರೆ. ಆದರೂ ಕೂಡ ಪರಮಾಣುಕಾರಣತ್ವವನ್ನು ಒಪ್ಪುವ ವೈಶೇಷಿಕರ ನಿರಾಕರಣೆಯನ್ನು ಈಗಾಗಲೇ ಮಾಡಿದ್ದರಿಂದ ಪ್ರಸಂಗಸಂಗತಿಯಿಂದ ಮೊದಲು ವೈಭಾಷಿಕ ಮತ್ತು ಸೌತ್ರಾಂತಿಕ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ.

**भावदीपः** – तामाह – **बौद्धानामिति ।। वैभाषिकेति ।।** तन्मतयोरनतिभिन्नार्थत्वादिति भावः।

ಪರಮಾಣುಪುಂಜವಾದಿಗಳ ಮತವನ್ನೇ 'ಬೌದ್ಧಾನಾಮ್' ಇತ್ಯಾದಿ ಗ್ರಂಥದಿಂದ ಉಲ್ಲೇಖ ಮಾಡುತ್ತಿದ್ದಾರೆ. ವೈಭಾಷಿಕರ ಹಾಗೂ ಸೌತ್ರಾಂತಿಕರ ಮತವನ್ನು ಈ ಒಂದೇ ಅಧಿಕರಣದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಏಕೆಂದರೆ ಈ ಎರಡು ಮತಗಳಲ್ಲಿ ಹೆಚ್ಚಿನ ವ್ಯತ್ಯಾಸ ಇರುವುದಿಲ್ಲ. ಇಬ್ಬರೂ ಕೂಡ ಬಾಹ್ಯಪದಾರ್ಥಗಳಿವೆ ಎಂದು ಅಂಗೀಕರಿಸಿದ್ದಾರೆ.

ವಿವರಣೆ - ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ, ಯೋಗಾಚಾರ ಇತ್ಯಾದಿಯಾಗಿ ಬೌದ್ಧಮತವು ಬಹುವಿಧವಾಗಿದೆ. 'ಬಹುವಿಧತ್ವೇಽಪಿ' ಎಂಬ ಟೀಕಾವಾಕ್ಯದಲ್ಲಿರುವ 'ಅಪಿ'ಶಬ್ದದಿಂದ 'ಮಾಧ್ಯಮಿಕ ಮತಗಳ ಅತಿವಿರೋಧವಿದ್ದರೂ' ಎಂಬುದನ್ನು ವಿವಕ್ಷಿಸಬೇಕು.

ಈ ಅಧಿಕರಣದಲ್ಲಿ ವಿಷ್ಣುವಿನ ಜಗಜ್ಜನ್ಮಾದಿಕರಣ ವಿಷಯದಲ್ಲಿ ಬೌದ್ಧಮತ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ಶ್ರೀಹರಿಯು ಜಗಜ್ಜನ್ಮಾದಿಕಾರಣನೆಂದು ಹೇಳಲಾಯಿತು. ಈ ಪ್ರಮೇಯಕ್ಕೆ ಬೌದ್ಧಮತದ ವಿರೋಧವು ಬರುವುದರಿಂದ ಇದು ಶ್ರೀಹರಿಯಲ್ಲಿ ಕೂಡದಿರಬೇಕಾದೀತು ಎಂಬ ಆಪತ್ತಿ ಬರುತ್ತದೆ. ಆದ್ದರಿಂದ ಬೌದ್ಧಮತವನ್ನು ನಿರಾಕರಣೆ ಮಾಡಲೇಬೇಕು.

ಈಶ್ವರನ ಜಗಜ್ಜನ್ಮಾದಿಕಾರಣತ್ವವು ಅಧಿಕರಣದ ವಿಷಯ. ಇದು ಈಶ್ವರನಲ್ಲಿ ಯುಕ್ತವೋ ಅಯುಕ್ತವೋ ? ಎಂದು ಸಂದೇಹ. ಮತಗಳಲ್ಲಿರುವ ವಿವಾದವು ಸಂದೇಹಕ್ಕೆ ಕಾರಣ.

೧) ಸೌತ್ರಾಂತಿಕರು - ಪರಮಾಣುಪುಂಜವಾದಿಗಳು. ಪರಮಾಣುಪುಂಜವೇ ಘಟ. ಆದರೂ ಕ್ಷಣಿಕವಾಗಿದೆ ಮತ್ತು ಪ್ರತ್ಯಕ್ಷಸಿದ್ಧವಾಗಿದೆ ಎನ್ನುತ್ತಾರೆ.

೨) ವೈಭಾಷಿಕರು - ಪರಮಾಣುಪುಂಜರೂಪವಾದ ಈ ಘಟಪಟಾದಿಗಳು ಪ್ರತ್ಯಕ್ಷ ಸಿದ್ಧವಲ್ಲ. ಅನುಮಾನದಿಂದ ಸಿದ್ಧವಾಗುತ್ತದೆಂದು ವೈಭಾಷಿಕರು ಹೇಳುತ್ತಾರೆ. ಆದ್ದರಿಂದ ಸೌತ್ರಾಂತಿಕರಿಗಿಂತ ವೈಭಾಷಿಕರು ಅತ್ಯಂತ ವಿರೋಧಿಗಳು.

೩) ಯೋಗಾಚಾರರು - ಜ್ಞಾನಕ್ಕಿಂತ ಅತಿರಿಕ್ತವಾದ ಬಾಹ್ಯಪದಾರ್ಥವೇ ಇರುವುದಿಲ್ಲ ಎನ್ನುತ್ತಾರೆ. ಇವರು ಸೌತ್ರಾಂತಿಕರು ಮತ್ತು ವೈಭಾಷಿಕರಿಗಿಂತ ಅತ್ಯಂತ ವಿರೋಧಿಗಳು. ಸಕಲ ಘಟ-ಪಟಾದಿ ಪದಾರ್ಥಗಳೆಲ್ಲವೂ ಶೂನ್ಯವಾಗಿವೆ ಎನ್ನುತ್ತಾರೆ.

೪) ಮಾಧ್ಯಮಿಕರು - ಇವರು ಹಿಂದಿನ ಮೂರು ಮತಗಳಿಗಿಂತ ಅತ್ಯಂತ ವಿಭಿನ್ನರು.

ಈ ಕ್ರಮದಲ್ಲಿಯೇ ಬೌದ್ಧಮತವನ್ನು ನಿರಾಕರಣೆ ಮಾಡಬೇಕು. ಮೊದಲು ಮಾಧ್ಯಮಿಕರನ್ನು, ಅನಂತರ ಯೋಗಾಚಾರರನ್ನು, ತದನಂತರ ವೈಭಾಷಿಕರನ್ನು ಕೊನೆಯಲ್ಲಿ ಸೌತ್ರಾಂತಿಕರನ್ನು ಕ್ರಮವಾಗಿ ನಿರಾಕರಣೆ ಮಾಡಬೇಕು. ಆದರೆ ಪ್ರಾರಂಭದಲ್ಲೇ ವೈಭಾಷಿಕರನ್ನು ಹಾಗೂ ಸೌತ್ರಾಂತಿಕರನ್ನು ನಿರಾಕರಣೆ ಮಾಡುತ್ತಿದ್ದಾರೆ. ಇದು ಅಸಂಗತವಲ್ಲವೆ?

ಈ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಈಗಾಗಲೇ ಹಿಂದಿನ ಅಧಿಕರಣದಲ್ಲಿ ಪರಮಾಣ್ವಾರಂಭವಾದವನ್ನು ನಿರಾಕರಣೆ ಮಾಡಿದ್ದರಿಂದ ಪರಮಾಣುಪುಂಜವನ್ನೇ ಘಟವೆಂದು ಹೇಳುವ ವೈಭಾಷಿಕರ ಮತ ಹಾಗೂ ಸೌತ್ರಾಂತಿಕಮತವು ಬುದ್ಧಿಯಲ್ಲಿ ಉಪಸ್ಥಿತವಾಗುತ್ತದೆ. ಆದ್ದರಿಂದ ಇವರನ್ನೇ ಇಲ್ಲಿ ಪ್ರಸಂಗಸಂಗತಿಯಿಂದ ನಿರಾಕರಣೆ ಮಾಡಿದ್ದಾರೆ.(ವಾಕ್ಯಾರ್ಥಮುಕ್ತಾವಳಿ)

## ಐದುಸ್ಕಂಧಗಳೇ ಜಗತ್ತು

**तत्वप्रकाशिका – न युक्तमिति पूर्वपक्षः । रूपविज्ञानवेदनासंज्ञासंस्कार रूपेणावस्थितं खलु जगत्परमार्थसत्, तदशेषं परमाणुसमुदायमात्रं न त्ववयवी नाम कश्चिदस्ति । परमाणुसमुदाय एव घटादिबुद्ध्युपपत्तौ परमाणुपरिणामस्य तदारब्धस्य वाऽवयविनोऽभ्युपगमस्य व्यर्थत्वात् ।**

ಈಶ್ವರನಿಗೆ ಜಗತ್ಕಾರಣತ್ವವು ಯುಕ್ತವಲ್ಲವೆಂಬುದು ಅಧಿಕರಣದ ಪೂರ್ವಪಕ್ಷ. ರೂಪಸ್ಕಂಧ ವಿಜ್ಞಾನಸ್ಕಂಧ, ವೇದನಾಸ್ಕಂಧ, ಸಂಜ್ಞಾಸ್ಕಂಧ, ಸಂಸ್ಕಾರಸ್ಕಂಧ ಈ ಐದು ರೂಪಗಳಿಂದ ಇರುವ ಜಗತ್ತು ಪಾರಮಾರ್ಥಿಕವಾಗಿ ಸತ್ಯವಾಗಿದೆ. ಇವೆಲ್ಲವೂ ಪರಮಾಣುರೂಪವೇ ಹೊರತು ಪ್ರತ್ಯೇಕವಾಗಿ ಅವಯವಿ ಎಂಬುದೇ ಇಲ್ಲ. ಪರಮಾಣುಸಮುದಾಯವೇ 'ಇದು ಘಟ' ಎಂಬ ಬುದ್ಧಿಗೆ ವಿಷಯವಾಗಿದೆ. ಪರಮಾಣುಗಳಿಗಿಂತ ಬೇರೆಯಾದ ಪರಿಣಾಮವನ್ನಾಗಲಿ ಪರಮಾಣು- ಗಳಿಂದ ಆರಬ್ಧವಾದ ಅವಯವಿಯನ್ನಾಗಲಿ ಅಂಗೀಕಾರಮಾಡುವುದು ವ್ಯರ್ಥವಾಗಿದೆ.

**भावदीपः –** आकाशे चेति सूत्रानुगुण्याय जगत्स्वरूपं व्यनक्ति॥ **रूपेति**।। विषयेन्द्रियाद्यात्मना स्थिताः रूपरसगन्धस्पर्शशब्दात्मकाः परमाणवो रूपस्कन्धः। निर्विकल्पकज्ञानं विज्ञानस्कन्धः। दुःखं वेदनास्कन्धः। सुखं च दुःखाभाव एव। सुखमपि वेदनास्कन्ध इत्येकदेशिनां मतम्। कुण्डली गौर्गच्छतीत्यादिसविकल्पकज्ञानं संज्ञास्कन्धः। तेषां वासना संस्कारस्कन्धः। इत्येवं रूपेणावस्थितमित्यर्थः। असति प्रतिज्ञेत्यादिसूत्रोपयोगायाह – **परमार्थसत् इति**।। अर्थक्रियाकारिरूप-पारमार्थिकमत्यमित्यर्थः। आद्यसूत्रनिरस्यमाह – **तदशेषमिति**।। वेदान्तिरीत्याऽऽह – **परिणामस्येति**।। वैशेषिकरीत्याऽऽह – **तदारब्धस्येति**।।

'ಆಕಾಶೇ ಚ' ಇತ್ಯಾದಿ ಸೂತ್ರಕ್ಕೆ ಅನುಗುಣವಾದ ಜಗತ್‌ಸ್ವರೂಪವನ್ನು 'ರೂಪ' ಇತ್ಯಾದಿ

ವಾಕ್ಯದಿಂದ ಪೂರ್ವಪಕ್ಷಕಾರರ ಪ್ರಕಾರ ನಿರೂಪಣೆ ಮಾಡುತ್ತಿದ್ದಾರೆ. ವಿಷಯ ಇಂದ್ರಿಯಾದಿಗಳ ಸ್ವರೂಪದಲ್ಲಿರುವ ರೂಪ, ರಸ, ಗಂಧ, ಸ್ಪರ್ಶ, ಶಬ್ದರೂಪವಾದ ಪರಮಾಣುಗಳು 'ರೂಪಸ್ಕಂಧ' ಎನಿಸುತ್ತವೆ. 'ವಿಜ್ಞಾನಸ್ಕಂಧ' ಎಂದರೆ 'ನಿರ್ವಿಕಲ್ಪಕಜ್ಞಾನ'. 'ವೇದನಸ್ಕಂಧ' ಎಂದರೆ 'ದುಃಖ'. ಸುಖವು ದುಃಖಾಭಾವರೂಪವೇ ಆಗಿದೆ. ಸುಖವೂ ಕೂಡ ವೇದನಾಸ್ಕಂಧವೆಂದು ಏಕದೇಶಿಗಳು ಹೇಳುತ್ತಾರೆ. 'ಕುಂಡಲೀ ಗೌರ್ಗಚ್ಛತಿ' ಇತ್ಯಾದಿ ಸವಿಕಲ್ಪಕಜ್ಞಾನವೇ ಸಂಜ್ಞಾಸ್ಕಂಧ. ಇವುಗಳ ವಾಸನಾ ಸಂಸ್ಕಾರಸ್ಕಂಧ ಎನಿಸುತ್ತದೆ. ಹೀಗೆ ಜಗತ್ತು ಐದು ಸ್ಕಂಧರೂಪವಾಗಿದೆ.

'ಅಸತಿಪ್ರತಿಜ್ಞಾ' ಇತ್ಯಾದಿ ಸೂತ್ರದಿಂದ ನಿರಾಸವಾಗುವ ವಿಷಯವನ್ನು 'ಪರಮಾರ್ಥಸತ್' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ. ಪಾರಮಾರ್ಥಿಕಸತ್ಯ ಎಂದರೆ ಅರ್ಥಕ್ರಿಯಾಕಾರಿಯಾಗಿರುವುದು ಎಂದರ್ಥ. ಪ್ರಥಮಸೂತ್ರದಿಂದ ಪರಿಹಾರವಾಗುವ ಅಂಶವನ್ನು 'ತದಶೇಷಮ್' ಎಂಬ ವಾಕ್ಯದಿಂದ ಉಲ್ಲೇಖ ಮಾಡಿದ್ದಾರೆ. ಬೌದ್ಧರು ನಿರಾಕರಿಸುವ ವೇದಾಂತಿಗಳ ಅಭಿಪ್ರಾಯವನ್ನು 'ಪರಿಣಾಮಸ್ಯ' ಎಂಬುದರಿಂದ ಉಲ್ಲೇಖ ಮಾಡಿದ್ದಾರೆ. ಬೌದ್ಧರು ಮಾಡುವ ವೈಶೇಷಿಕರ ನಿರಾಕರಣೆಯನ್ನು 'ತದಾರಬ್ಧಸ್ಯ' ಎಂಬುದರಿಂದ ಉಲ್ಲೇಖ ಮಾಡಿದ್ದಾರೆ.

ವಿವರಣೆ - ೧) ರೂಪಸ್ಕಂಧ - ರೂಪ, ರಸ, ಗಂಧ, ಸ್ಪರ್ಶ, ಶಬ್ದರೂಪವಾದ ಐದು ಪರಮಾಣಗಳೇ ರೂಪಸ್ಕಂಧ.

೨) ವಿಜ್ಞಾನಸ್ಕಂಧ - ಅಹಂ ಎಂಬ ಅಭಿಮಾನಾರೂಢವಾದ ನಿರ್ವಿಕಲ್ಪಕಜ್ಞಾನವು ವಿಜ್ಞಾನಸ್ಕಂಧ.

೩) ವೇದನಾಸ್ಕಂಧ - ದುಃಖವು ವೇದನಾಸ್ಕಂಧವೆನಿಸುತ್ತದೆ. ಸುಖವು ದುಃಖಾಭಾವ ರೂಪವಾಗಿದೆ. ಸುಖವೂ ಕೂಡ ವೇದನಾಸ್ಕಂಧವೆಂದು ಕೆಲವರು ಹೇಳುತ್ತಾರೆ.

೪) ಸಂಜ್ಞಾಸ್ಕಂಧ - ಕುಂಡಲವಿರುವ ಹಸು ಹೋಗುತ್ತದೆ. ಇತ್ಯಾದಿ ವಿಶೇಷಣ ಸಹಿತ ಜ್ಞಾನವು ಸಂಜ್ಞಾಸ್ಕಂಧ.

೫) ಸಂಸ್ಕಾರಸ್ಕಂಧ - ರಾಗ, ದ್ವೇಷ, ಮೋಹ, ಮೊದಲಾದ ಸ್ವರೂಪವುಳ್ಳ ಸಮನಂತರಪ್ರತ್ಯಯ, ಇವುಗಳ ವಾಸನೆ ಅಥವಾ ಸ್ಮೃತಿ ಇವುಗಳು ಸಂಸ್ಕಾರಸ್ಕಂಧ.

ಹೀಗೆ ಐದು ಸ್ಕಂಧಗಳೇ ಜಗದ್ರೂಪವಾಗಿ ಕಾಣಸುತ್ತಿವೆ.

ಕಾಲಕರ್ಮಗಳೇ ಸಾಕು ಈಶ್ವರನು ಬೇಡ

**तत्वप्रकाशिका – विद्यमानं च सर्वं क्षणिकमेव । एतदेव हि पदार्थानां सत्त्वम् यत्कालतः क्षणिकत्वं देशतः परमाणुत्वं । तच्चैतत्कार्यं कालकर्मनिमित्तेन भवति अतः किमीश्वरेण । न च तदनभ्युपगमे मानविरोधः । आगमप्रामाण्यानभ्युपगमात् । अतो न लक्षणं युक्तमित्येवं प्राप्ते सिद्धान्तयत्सूत्रमुपन्यस्य व्याचष्टे – समुदाय इति ।।**

ಇರುವ ಸಕಲಪದಾರ್ಥಗಳು ಕ್ಷಣಿಕವೇ ಆಗಿವೆ. ಪದಾರ್ಥಗಳಿಗೆ ಕಾಲತಃ ಸತ್ವವೆಂದರೆ ಕ್ಷಣಿಕತ್ವ. ದೇಶದಿಂದ ಪದಾರ್ಥಗಳು ಪರಮಾಣುರೂಪಗಳಾಗಿವೆ. ಈ ಕಾರ್ಯವು ಕಾಲ, ಕರ್ಮ ಎಂಬ ನಿಮಿತ್ತದಿಂದ ಉಂಟಾಗುತ್ತದೆ. ಈಶ್ವರನನ್ನು ಒಪ್ಪುವ ಅವಶ್ಯಕತೆಯಿಲ್ಲ. ಈಶ್ವರನನ್ನು ಒಪ್ಪದಿದ್ದರೆ ಯಾವುದೇ ಪ್ರಮಾಣಗಳ ವಿರೋಧಕ್ಕೂ ಅವಕಾಶವು ಇಲ್ಲ. ಏಕೆಂದರೆ ಆಗಮಪ್ರಾಮಾಣ್ಯವನ್ನು ನಾವು ಅಂಗೀಕಾರ ಮಾಡಿರುವುದಿಲ್ಲ. ಆದ್ದರಿಂದ ಜಗತ್ಕಾರಣತ್ವವು ಈಶ್ವರನ ಲಕ್ಷಣವಾಗಲು ಸಾಧ್ಯವಿಲ್ಲ. ಇಷ್ಟು ಈ ಅಧಿಕರಣದ ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ಸಮುದಾಯ ಉಭಯಹೇತುಕೇಽಪಿ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः –** द्वितीयादिसूत्रोपयोगायाऽऽह **– विद्यमानं चेति ।।** क्षणिकत्वे सत्वं न स्यादित्यत आह **– एतदेवेति ।।** ईश्वरवादस्य तद्विरोधं दर्शयितुमाह **– तच्चेति ।।** विप्रतिषेधाच्चासमञ्जसमित्याद्युक्तदोषोऽत्र मते नेत्याह **– न चेत्यादिना ।। अत इति ।।** ईश्वरस्यैवानुपयोगादित्यर्थः ।।

ದ್ವಿತೀಯಾದಿಸೂತ್ರಗಳಿಗೆ ಉಪಯೋಗವಾಗುವುದಕ್ಕಾಗಿ 'ವಿದ್ಯಮಾನಂ ಚ' ಇತ್ಯಾದಿ ಗ್ರಂಥಸಂದರ್ಭವು ಹೊರಟಿದೆ. ಕ್ಷಣಿಕವಾದಲ್ಲಿ ಸತ್ವವೇ ಬರುವುದಿಲ್ಲವಲ್ಲ ? ಎಂಬ ಪ್ರಶ್ನೆಗೆ 'ಏತದೇವ' ಎಂಬ ವಾಕ್ಯವು ಉತ್ತರಿಸುತ್ತಿದೆ. ಈಶ್ವರವಾದವು ಇದಕ್ಕೆ ವಿರುದ್ಧವಾಗಿದೆ ಎಂಬುದನ್ನು 'ತಚ್ಚ' ಎಂಬ ವಾಕ್ಯವು ಉಪಪಾದನೆ ಮಾಡಿದೆ. 'ವಿಪ್ರತಿಷೇಧಾಚ್ಚಾಸಮಂಜಸಮ್' ಇತ್ಯಾದಿ ಸೂತ್ರಗಳಿಂದ ಹೇಳಲ್ಪಟ್ಟ

ದೋಷವು ನಮಗೆ ಬರುವುದಿಲ್ಲ ಎಂಬುದನ್ನು 'ನ ಚ' ಇತ್ಯಾದಿ ವಾಕ್ಯವು ಉಪಪಾದನೆ ಮಾಡಿದೆ. 'ಅತಃ' ಎಂಬ ಪದಕ್ಕೆ ಈಶ್ವರನು ಅನುಪಯುಕ್ತನಾದ್ದರಿಂದ ಎಂದರ್ಥ.

ವಿವರಣೆ - ಪರಮಾಣುಗಳಿಗಿಂತ ಅತಿರಿಕ್ತವಾದ ಪರಿಣಾಮವೇ ಇಲ್ಲ. ಪರಮಾಣುರೂಪಗತವಾದ ಪದಾರ್ಥಗಳೆಲ್ಲವೂ ಕಾಲದಿಂದ ಕ್ಷಣಿಕವಾಗಿವೆ. ದೇಶದಿಂದ ಪರಮಾಣುರೂಪವಾಗಿವೆ. ಒಂದು ವೇಳೆ ಪರಮಾಣುಗಳು ಸ್ಥಾಯಿಯಾದರೆ ಒಂದೇ ಘಟದಿಂದ ಮನೆಯೆಲ್ಲವೂ ತುಂಬಿಕೊಳ್ಳಬೇಕಾಗುತ್ತದೆ. ಏಕೆಂದರೆ ಪರಮಾಣು ಸತ್ತಾಗಿದೆ ಎಂದರೆ ಅರ್ಥಕ್ರಿಯಾಕಾರಿಯಾಗಿದೆ ಎಂದರ್ಥ. ಆದರೆ ಪದಾರ್ಥವು ಕ್ಷಣಿಕ ಎಂದು ಹೇಳಿದಾಗ ಎರಡನೆಯ ಕ್ಷಣದಲ್ಲಿ ವಸ್ತುವೇ ಇಲ್ಲದ್ದರಿಂದ ಅರ್ಥಕ್ರಿಯಾಕಾರಿ ಆಗಲು ಹೇಗೆ ಸಾಧ್ಯ ? ಆದ್ದರಿಂದ ಒಂದು ಕ್ಷಣಿಕವಾದ ಘಟಪದಾರ್ಥವು ಮುಂದಿನ ಕ್ಷಣದಲ್ಲಿ ಹುಟ್ಟುವ ಕ್ಷಣಿಕವಾದ ಘಟರೂಪಪದಾರ್ಥಕ್ಕೆ ಆರಂಭಕವೆಂದೇ ಹೇಳಬೇಕು. ಇದನ್ನೇ ಅರ್ಥಕ್ರಿಯಾಕಾರಿತ್ವವೆಂದು ಕೂಡಿಸಬಹುದು.

ಯಾವುದು ಸತ್ಯಪದಾರ್ಥವೊ ಅದು ಕ್ಷಣಿಕವಾಗಿರುತ್ತದೆ. ಕ್ಷಣಿಕವಲ್ಲದಿದ್ದರೆ ಅದು ಸತ್ಯಪದಾರ್ಥ ಆಗಲು ಸಾಧ್ಯವಿಲ್ಲ. ಅದರಂತೆ ಯಾವುದು ಸತ್ಯಪದಾರ್ಥವೋ ಅದು ಪರಮಾಣುಪರಿಮಾಣವುಳ್ಳದ್ದಾಗಿರುತ್ತದೆ. ಇಲ್ಲದಿದ್ದರೆ ಪರಮಾಣುಪರಿಮಾಣವುಳ್ಳದ್ದಾಗಲೂ ಸಾಧ್ಯವಿಲ್ಲ. ಆದ್ದರಿಂದ ಘಟರೂಪಕಾರ್ಯವು ಕಾಲ ಹಾಗೂ ಕರ್ಮಗಳೆಂಬ ನಿಮಿತ್ತದಿಂದ ವ್ಯಾಪ್ತವಾಗಿದೆ. ಕಾಲಕರ್ಮಗಳಿಂದಲೇ ಎಲ್ಲವನ್ನು ಕೂಡಿಸಲು ಬರುತ್ತಿರುವಾಗ ಈಶ್ವರನು ಅನಾವಶ್ಯಕ ಎಂಬುದು ಬೌದ್ಧರ ಅಭಿಪ್ರಾಯ. (ವಾಕ್ಯಾರ್ಥಮಂಜರೀ)

ಅನ್ಯಥಾನುಮಿತ್ಯಧಿಕರಣವು ನಿರೀಶ್ವರಸಾಂಖ್ಯಮತದ ನಿರಾಕರಣೆಯನ್ನು ಮಾಡಿತ್ತು. ಅದರಲ್ಲಿ ಎರಡನೆಯ ಸೂತ್ರ 'ವಿಪ್ರತಿಷೇಧಾಚ್ಚಾಸಮಂಜಸಮ್' ಎಂಬುದು. ಒಂದು ವೇಳೆ ಈಶ್ವರನನ್ನು ಅಂಗೀಕಾರ ಮಾಡದಿದ್ದರೆ ಎಲ್ಲಾ ಬಗೆಯ ಶ್ರುತಿ, ಸ್ಮೃತಿ, ಯುಕ್ತಿಗಳ ವಿರೋಧ ಬರುತ್ತದೆ ಎಂಬುದು ಸೂತ್ರದ ಅಭಿಪ್ರಾಯ. ಪ್ರಕೃತ ಬೌದ್ಧರೂ ಕೂಡ ಈಶ್ವರನನ್ನು ಒಪ್ಪದೇ ಇರುವ ಕಾರಣ 'ವಿಪ್ರತಿಷೇಧಾಚ್ಚಾಸಮಂಜಸಮ್' ಎಂಬ ಸೂತ್ರದಲ್ಲಿ ಹೇಳಿದ ದೋಷವು ಇವರಿಗೂ ಕೂಡ ಸಮಾನವಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಇದಕ್ಕೆ 'ನ ಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಆಗಮಪ್ರಾಮಾಣ್ಯವನ್ನೇ ನಾವು ಒಪ್ಪುವುದಿಲ್ಲ. ಆದ್ದರಿಂದ ಅದರ ಭಯವೂ ಕೂಡ ನಮಗಿಲ್ಲ ಎಂಬುದು ಬೌದ್ಧರ ಅಭಿಪ್ರಾಯ.

ಪರಮಾಣುಪುಂಜ ಎಂದರೆ ಏನು ಅರ್ಥ ?

**तत्वप्रकाशिका – न विष्णोर्जगत्कारणत्वमयुक्तम् । बौद्धानामनुपपन्नभाषित्वेन तत्कल्पनाया दुष्टत्वात् । तथाहि । कालकर्मादिनिमित्तेन क्षणिकः परमाणुनिमित्तकः समुदायो भवति न त्ववयवी कश्चिदस्तीति यदुक्तं तत्र प्रष्टव्यम् । किमयं समुदाय एकपरमाणुहेतुकोऽनेकपरमाणुहेतुको वेति ।**

ವಿಷ್ಣುವಿನ ಜಗತ್ಕಾರಣತ್ವವು ಅಯುಕ್ತವಲ್ಲ. ಬೌದ್ಧರು ಅನುಪಪನ್ನಭಾಷಿಗಳಾದ್ದರಿಂದ ಅವರ ಕಲ್ಪನೆ ದುಷ್ಟವಾಗಿದೆ. ಅದು ಹೀಗೆ - ಕಾಲ, ಕರ್ಮ, ಇವುಗಳ ನಿಮಿತ್ತದಿಂದ ಪರಮಾಣುನಿಮಿತ್ತವಾದ ಕ್ಷಣಿಕವಾದ ಸಮುದಾಯವು ಉಂಟಾಗುತ್ತದೆ. ಪ್ರತ್ಯೇಕವಾದ ಅವಯವಿಯೇ ಇಲ್ಲ ಎಂದು ಪೂರ್ವಪಕ್ಷಿಗಳು ಹೇಳಿದರು. ಇವರನ್ನು ಕುರಿತು ನಾವು ಪ್ರಶ್ನಿಸುತ್ತೇವೆ. ಈ ಸಮುದಾಯವು ಒಂದೇ ಪರಮಾಣುವಿನಿಂದ ಉಂಟಾಗಿದೆಯೋ ಅಥವಾ ಅನೇಕ ಪರಮಾಣುಗಳಿಂದ ಉಂಟಾಗಿದೆಯೋ ? ಎಂದು.

**भावदीपः –** समुदायादिखण्डनस्य सङ्गतत्वद्योतनायाह – **न विष्णोरिति ।।** परमाणुनिमित्तकः समुदायो भवतीत्येतावदनुवादेनैव पूर्तौ कालकर्मेत्याद्युक्तिः सूत्रेषु वक्ष्यमाणदूषणज्ञानसौकर्यायेति ध्येयम्। सूत्रभाष्ययोरुभयशब्दोऽनेकपरो न द्विमात्रपर इति भावेन अनेकपरमाणुहेतुको वेति विकल्पः।

ಸಮುದಾಯವಾದದ ಖಂಡನೆಯು ಸಂಗತವಾಗಿದೆ ಎಂಬುದನ್ನು ತೋರಿಸುವುದಕ್ಕಾಗಿ 'ನ ವಿಷ್ಣೋಃ' ಎಂಬ ವಾಕ್ಯವು ಹೊರಟಿದೆ. 'ಕಾಲಕರ್ಮಾದಿನಿಮಿತ್ತೇನ' ಎಂಬ ವಾಕ್ಯದಲ್ಲಿ 'ಪರಮಾಣುನಿಮಿತ್ತಕಃ ಸಮುದಾಯೋಭವತಿ' ಎಂದಷ್ಟೇ ಸಾಕಾಗಿತ್ತು. 'ಕಾಲಕರ್ಮಾದಿನಿಮಿತ್ತೇನ ಕ್ಷಣಿಕಃ' ಎಂದು ಹೇಳುವ ಅವಶ್ಯಕತೆ ಇರಲಿಲ್ಲ. ಆದರೂ ಮುಂದೆ ಹೇಳುವ ದೋಷವು ಅರ್ಥವಾಗುವುದಕ್ಕಾಗಿ ಉಲ್ಲೇಖ ಮಾಡಲಾಗಿದೆ. ಸೂತ್ರ ಹಾಗೂ ಭಾಷ್ಯಗಳಲ್ಲಿ ಉಭಯಶಬ್ದವು ಅನೇಕ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಎರಡು ಎಂಬರ್ಥದಲ್ಲಿ ಪ್ರಯುಕ್ತವಾಗಿಲ್ಲ. ಈ ಅಭಿಪ್ರಾಯದಿಂದ 'ಅನೇಕಪರಮಾಣುಹೇತುಕಃ' ಎಂಬುದಾಗಿ ವಿಕಲ್ಪವನ್ನು ತೋರಿಸಿದ್ದಾರೆ.

ವಿವರಣೆ - ಬೌದ್ಧರು ಈಶ್ವರನೇ ಇಲ್ಲದ ಕಾರಣ ಅವನಲ್ಲಿ ಜಗತ್ಕಾರಣತ್ವವು ದೂರತೋಪಾಸ್ತ ಎಂದು ಆಕ್ಷೇಪ ಮಾಡಿದ್ದರು. ಈ ಸಮುದಾಯವಾದಿಗಳ ಖಂಡನೆಯು ಸಂಗತವಾಗಿದೆ ಎಂಬುದನ್ನು 'ನ ವಿಷ್ಣೋಃ' ಎಂಬ ವಾಕ್ಯವು ತೋರಿಸುತ್ತಿದೆ.

ಸೂತ್ರದಲ್ಲಿರುವ 'ಅಪಿ'ಶಬ್ದವು ಒಂದೇ ಪರಮಾಣುವಿನಿಂದ ಸಮುದಾಯವು ಉತ್ಪನ್ನವಾಗಿದೆ ಎಂಬುದನ್ನು ಸಮುಚ್ಚಯ ಮಾಡುತ್ತಿದೆ. ಆದ್ದರಿಂದಲೇ ಭಾಷ್ಯದಲ್ಲಿ 'ಸಮುದಾಯಸ್ಯ ಏಕಹೇತುಕತ್ವಮ್' ಎಂದು ಹೇಳಿದ್ದಾರೆ.

## ಸಮುದಾಯವಾದಿಗಳಿಗೆ ಅನ್ಯೋನ್ಯಾಶ್ರಯ

**तत्वप्रकाशिका – आद्यस्तावदनुपपन्नः एकस्मात् समुदाय इत्यस्य व्याहतेः । द्वितीयोऽपि किं मिलितानेकहेतुको वा विरलानेकहेतुको वा । नाद्यः। मिलितानेकतः समुदायः समुदाये सति मिलितत्वमित्यन्योन्याश्रयतया समुदायानुपपत्तेः ।**

ಸಮುದಾಯವು ಒಂದೇ ಪರಮಾಣುವಿನಿಂದ ಉಂಟಾಗಿದೆ ಎಂದು ಹೇಳಿದರೆ ವ್ಯಾಹತಿದೋಷ ಬರುತ್ತದೆ. ಎರಡನೆಯ ಪಕ್ಷದಲ್ಲೂ ಕೂಡ ಮಿಲಿತವಾದ ಅನೇಕ ಪರಮಾಣುಗಳಿಂದ ಸಮುದಾಯ ಉಂಟಾಗಿದೆಯೋ ಅಥವಾ ವಿರಳವಾದ ಅನೇಕ ಪರಮಾಣುಗಳಿಂದ ಸಮುದಾಯವು ಉಂಟಾಗಿದೆಯೋ? ಮೊದಲನೆಯ ಪಕ್ಷವು ತಪ್ಪು. ಮಿಲಿತವಾದ ಅನೇಕ ಪರಮಾಣುಗಳಿಂದ ಸಮುದಾಯವು ಉಂಟಾಗಿದೆ ಎಂದು ಹೇಳಿದರೆ ಸಮುದಾಯವು ಮೊದಲು ಸಿದ್ಧವಾದರೆ ಮಿಲಿತತ್ವವು ಸಿದ್ಧವಾಗುತ್ತದೆ. ಮಿಲಿತತ್ವವು ಸಿದ್ಧವಾದರೆ ಸಮುದಾಯವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುವುದರಿಂದ ಸಮುದಾಯವೇ ಅನುಪಪನ್ನವಾಯಿತು.

**भावदीपः –** भाष्यं व्याचष्टे॥ **आद्यस्तावदित्यादिना ।।** भाष्ये एतत्पक्षनिरासः सौत्रापिपदसूचित इति द्योतनाय तावदित्युक्तम्। भाष्ये समुदायशब्दप्रयोगादेव सूचितां युक्तिमाह – **एकस्मादिति ।।** सूत्रभाष्ययोरुभयशब्दः उभादुदात्तो नित्यमिति

सूत्रादवयवार्थे निष्पन्नत्वान्मिलितानेकपरमाणुपर इत्यभिप्रेत्य विकल्पमुखेन भाष्यं व्याचष्टे॥ **किं मिलितेति**॥ एतदेशस्थानेकहेतुको वेत्यर्थः।

'ಆದ್ಯಸ್ತಾವತ್' ಎಂಬುದರಿಂದ ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಈ ಪಕ್ಷದ ನಿರಾಸವನ್ನು ಸೂತ್ರದಲ್ಲಿರುವ 'ಅಪಿ' ಪದವು ಮಾಡುತ್ತಿದೆ ಇದನ್ನು ಭಾಷ್ಯಕಾರರು ತಿಳಿಸಿದ್ದಾರೆಂಬುದನ್ನು 'ತಾವತ್' ಎಂಬುದಾಗಿ ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯದಲ್ಲಿ ಸಮುದಾಯಶಬ್ದಪ್ರಯೋಗದಿಂದ ಸೂಚಿತವಾದ ಯುಕ್ತಿಯನ್ನು 'ಏಕಸ್ಮಾತ್' ಎಂಬ ವಾಕ್ಯದಿಂದ ತೋರಿಸಿದ್ದಾರೆ. ಸೂತ್ರ ಹಾಗೂ ಭಾಷ್ಯಗಳಲ್ಲಿರುವ ಉಭಯ ಶಬ್ದವು 'ಉಭಾದುದಾತ್ತೋ ನಿತ್ಯಂ' ಎಂಬ ಸೂತ್ರದ ಪ್ರಕಾರ ಅವಯವ ಎಂಬರ್ಥದಲ್ಲಷ್ಟೇ ಪ್ರಯುಕ್ತವಾಗಿದೆ. ಆದ್ದರಿಂದ ಮಿಲಿತವಾದ ಅನೇಕ ಪರಮಾಣು ಎಂಬರ್ಥವು ಇದರಿಂದ ತಿಳಿಯುತ್ತದೆ. ಹಾಗಾಗಿ ವಿಕಲ್ಪಮುಖದಿಂದ ಭಾಷ್ಯವನ್ನು 'ಕಿಂ ಮಿಲಿತ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಒಂದೇ ದೇಶದಲ್ಲಿರುವ ಅನೇಕ ಪರಮಾಣುಗಳು ಕಾರಣವಾಗಿವೆಯೋ ಎಂಬುದು 'ಕಿಂ ಮಿಲಿತ' ಇತ್ಯಾದಿ ವಿಕಲ್ಪದ ಅಭಿಪ್ರಾಯವಾಗಿದೆ.

ವಿವರಣೆ - ಸೂತ್ರದಲ್ಲಿರುವ ಉಭಯಹೇತುಕ ಎಂಬುದಕ್ಕೆ 'ಸಮುದಿತವಾದ ಅನೇಕ ಪರಮಾಣುಹೇತುಕವಾದರೆ' ಅಥವಾ 'ವಿರಳವಾದ ಅನೇಕ ಪರಮಾಣುಹೇತುಕವಾದರೆ' ಎಂಬ ಅರ್ಥದ್ವಯಗಳನ್ನು ವಿವಕ್ಷಿಸಬೇಕು. ಪ್ರಥಮಪಕ್ಷದಲ್ಲಿ ಅನ್ಯೋನ್ಯಾಶ್ರಯದೋಷ ಬರುತ್ತದೆ. ಎರಡನೆಯ ಪಕ್ಷದಲ್ಲಿ ವಿರಳವಾದ ಅನೇಕ ಪರಮಾಣುಗಳು ನಿರಂತರ ಇರುವುದರಿಂದ ಸಮುದಾಯವೂ ನಿರಂತರ ಇರಬೇಕಾದೀತು. ಆಗ ಪ್ರಳಯವೇ ಅಪ್ರಾಪ್ತವಾಗುತ್ತದೆ. ಈ ಎರಡು ಅರ್ಥಗಳನ್ನು ವಿವಕ್ಷಿಸಿ 'ಉಭಯಹೇತುಕೇಽಪಿ' ಇತ್ಯಾದಿ ಭಾಷ್ಯವು ಹೊರಟಿದೆ. ಇದನ್ನು ಟೀಕೆಯಲ್ಲಿ ವಿಕಲ್ಪಮುಖದಲ್ಲಿ 'ಕಿಮಯಂ' ಇತ್ಯಾದಿಯಾಗಿ ಪ್ರಶ್ನಿಸಿದ್ದಾರೆ.

ಸಮುದಾಯ ಎಂದರೆ ಪರಮಾಣುಗಳ ಸಂಯೋಗವೋ ? ಅಥವಾ ಅನೇಕತ್ವಸಂಖ್ಯೆಯೋ? ಅಥವಾ ಒಂದೇ ಪ್ರದೇಶದಲ್ಲಿ ಇರುವಿಕೆಯೋ ? ಅಥವಾ ಪರಮಾಣುಗಳಿಂದ ಆರಬ್ಧವಾದ ದ್ರವ್ಯಾಂತರವೋ? ಈ ನಾಕು ಪಕ್ಷಗಳಲ್ಲೂ ಕೂಡ ವ್ಯಾಹತಿಯು ಇದ್ದೇ ಇದೆ. ಇದನ್ನು ಟೀಕೆಯಲ್ಲಿ 'ವ್ಯಾಹತೇಃ' ಎಂಬುದರಿಂದ ಹೇಳಿದ್ದಾರೆ.

ಸಮುದಾಯವು ಮೊದಲು ಸಿದ್ಧವಾದರೆ ಅನೇಕ ಪರಮಾಣುಗಳಿಗೆ ಸಮುದಿತತ್ವವು

ಸಿದ್ಧವಾಗುತ್ತದೆ. ಸಮುದಿತತ್ವವು ಸಿದ್ಧವಾದರೆ ಅದರಿಂದ ಸಮುದಾಯವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ.

ಒಟ್ಟಿಗೆ ಇರದ ಪರಮಾಣುಗಳು ಯಾವುದಕ್ಕೂ ಕಾರಣವಲ್ಲ

**तत्वप्रकाशिका – नोत्तरः । अमिलितपरमाणूनां सदा सद्भावेन समुदायस्यापि सदातनत्वापत्त्या प्रलयाभ्युपगमविरोधापातादिति भावः । अत्रातिपीडायामनवस्थापि द्रष्टव्या ॥**

ವಿರಳವಾದ ಅನೇಕ ಪರಮಾಣುವಿನಿಂದ ಸಮುದಾಯವು ಉಂಟಾಗಿದೆ ಎಂಬ ಎರಡನೆಯಪಕ್ಷವೂ ಕೂಡ ತಪ್ಪು. ಏಕೆಂದರೆ ಮಿಲಿತವಲ್ಲದ ಪರಮಾಣುಗಳು ನಿರಂತರವಾಗಿ ಇದ್ದೇ ಇರುವುದರಿಂದ ಸಮುದಾಯವು ಕೂಡ ಯಾವಾಗಲೂ ಇದೆ ಎಂದು ಹೇಳಿದಂತಾಯಿತು. ಆಗ ಪ್ರಳಯವನ್ನು ಒಪ್ಪಿದ್ದು ವಿರುದ್ಧವಾಗುತ್ತದೆ. ಸಮುದಾಯಕ್ಕೆ ಕಾರಣವಾದ ಪರಮಾಣುಗಳ ಮೇಲನವು ಮತ್ತೊಂದು ಎಂದು ಹೇಳಿದರೆ ಒಂದು ಸಮುದಾಯದಿಂದ ಇನ್ನೊಂದು ಸಮುದಾಯ. ಆ ಸಮುದಾಯದಿಂದ ಇನ್ನೊಂದು ಸಮುದಾಯ, ಹೀಗೆ ಅತಿಪೀಡನ ಮಾಡಿದರೆ ಅನವಸ್ಥಾದೋಷವು ಬರುತ್ತದೆ.

**भावदीपः –** अन्यथेत्यादि व्याचष्टे॥ **नोत्तर इत्यादिना ॥ अतिपीडायामिति ॥** अन्योन्याश्रयपरिहाराय मेलनस्य मेलनान्तरेण सामीप्येन वा विशिष्टानेकहेतुकत्वे अनवस्थेत्यर्थः॥ १८ ॥

'ಅನ್ಯಥಾ' ಇತ್ಯಾದಿಯಾದ ಭಾಷ್ಯವನ್ನು 'ನೋತ್ತರ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಅತಿಪೀಡಾಯಾಮ್' ಎಂಬುದರ ಅಭಿಪ್ರಾಯ ಹೀಗಿದೆ - ಅನ್ಯೋನ್ಯಾಶ್ರಯ ಪರಿಹಾರಕ್ಕಾಗಿ ಮೇಲನಕ್ಕೆ ಮತ್ತೊಂದು ಮೇಲನವನ್ನು, ಅಥವಾ ಸಾಮೀಪ್ಯವನ್ನು ಅಂಗೀಕರಿಸಿ ವಿಶಿಷ್ಟವಾದ ಅನೇಕ ಪರಮಾಣುಗಳು ಕಾರಣವಾಗಿವೆ ಎಂದು ಹೇಳಿದರೆ ಅನವಸ್ಥಾದೋಷವು ಬರುತ್ತದೆಂದರ್ಥ.

ವಿವರಣೆ - ಮಿಲಿತವಾದ ಅನೇಕ ಪರಮಾಣುಗಳಿಂದ ಸಮುದಾಯ, ಆ ಪರಮಾಣುಗಳ ಮಿಲನವು ಬೇರೆ ಸಮುದಾಯದಿಂದ ಉಂಟಾಗುತ್ತದೆ. ಆದ್ದರಿಂದ

ಅನ್ಯೋನ್ಯಾಶ್ರಯದೋಷವು ಬರುವುದಿಲ್ಲ ಎಂದು ಉತ್ತರಿಸಿದರೆ ಅನವಸ್ಥಾದೋಷವು ಬರುತ್ತದೆ. ಯಾವ ಪರಮಾಣುಗಳ ಮೇಲನದಿಂದ ಸಮುದಾಯ ಉಂಟಾಗುತ್ತದೋ ಆ ಸಮುದಾಯಕ್ಕೆ ಕಾರಣವಾದ ಪರಮಾಣುಗಳ ಮೇಲನ ಮತ್ತೊಂದು ಸಮುದಾಯದಿಂದ ಉಂಟಾಗಿದೆ. ಆ ಸಮುದಾಯಕ್ಕೆ ಕಾರಣವಾದ ಪರಮಾಣುಗಳ ಮೇಲನವು ಮತ್ತೊಂದು ಸಮುದಾಯದಿಂದ ಉಂಟಾಗಿದೆ ಎಂದು ಹೇಳಿದರೆ ಅತಿಪೀಡನವಾಗುತ್ತದೆ.

## ಭಾವದೀಪದ ವೈಶಿಷ್ಟ್ಯ

* ಪರಮಾಣುಪುಂಜ ಎಂಬ ಪದಪ್ರಯೋಗದಿಂದಲೇ ಸಂಗತಿ ತೋರಿಸಿದ್ದಾರೆ.
* ಪಂಚಸ್ಕಂಧಗಳನ್ನು ವಿವರಿಸಿದ್ದಾರೆ.
* ನಿರೀಶ್ವರಸಾಂಖ್ಯರಿಗೂ, ಬೌದ್ಧರಿಗೂ ಇರುವ ವ್ಯತ್ಯಾಸವನ್ನು ತೋರಿಸಿದ್ದಾರೆ.
* ನಿರೀಶ್ವರಸಾಂಖ್ಯರು ಆಗಮಗಳಿಗೆ ಪ್ರಾಮಾಣ್ಯವನ್ನು ಒಪ್ಪುತ್ತಾರೆ, ಇವರು ಒಪ್ಪುವುದಿಲ್ಲ.
* ಸೂತ್ರದಲ್ಲಿರುವ ಉಭಯಶಬ್ದಕ್ಕೆ ಅನೇಕ ಎಂದರ್ಥ. ಕೇವಲ ಎರಡು ಎಂದರ್ಥವಲ್ಲ.
* 'ಅತಿಪೀಡಾಯಾಮ್' ಎಂಬುದಕ್ಕೆ ಅನ್ಯೋನ್ಯಾಶ್ರಯ ಪರಿಹಾರಕ್ಕಾಗಿ ಮತ್ತೊಂದು ಮೇಲನವನ್ನು ಅಂಗೀಕರಿಸುತ್ತಾ ಹೊರಟರೆ, ಅನವಸ್ಥಾ ಬರುತ್ತದೆಂಬ ಅರ್ಥವನ್ನು ಹೇಳಿರುತ್ತಾರೆ.

ಸಿದ್ಧವಾಗುತ್ತದೆ. ಸಮುದಿತತ್ವವು ಸಿದ್ಧವಾದರೆ ಅದರಿಂದ ಸಮುದಾಯವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ.

### ಒಟ್ಟಿಗೆ ಇರದ ಪರಮಾಣುಗಳು ಯಾವುದಕ್ಕೂ ಕಾರಣವಲ್ಲ

**ತತ್ವಪ್ರಕಾಶಿಕಾ – नोत्तरः । अमिलितपरमाणूनां सदा सद्भावेन समुदायस्यापि सदातनत्वापत्त्या प्रलयाभ्युपगमविरोधापातादिति भावः । अत्रातिपीडायामनवस्थापि द्रष्टव्या ।।**

ವಿರಳವಾದ ಅನೇಕ ಪರಮಾಣುವಿನಿಂದ ಸಮುದಾಯವು ಉಂಟಾಗಿದೆ ಎಂಬ ಎರಡನೆಯಪಕ್ಷವೂ ಕೂಡ ತಪ್ಪು. ಏಕೆಂದರೆ ಮಿಲಿತವಲ್ಲದ ಪರಮಾಣುಗಳು ನಿರಂತರವಾಗಿ ಇದ್ದೇ ಇರುವುದರಿಂದ ಸಮುದಾಯವು ಕೂಡ ಯಾವಾಗಲೂ ಇದೆ ಎಂದು ಹೇಳಿದಂತಾಯಿತು. ಆಗ ಪ್ರಳಯವನ್ನು ಒಪ್ಪಿದ್ದು ವಿರುದ್ಧವಾಗುತ್ತದೆ. ಸಮುದಾಯಕ್ಕೆ ಕಾರಣವಾದ ಪರಮಾಣುಗಳ ಮೇಲನವು ಮತ್ತೊಂದು ಎಂದು ಹೇಳಿದರೆ ಒಂದು ಸಮುದಾಯದಿಂದ ಇನ್ನೊಂದು ಸಮುದಾಯ. ಆ ಸಮುದಾಯದಿಂದ ಇನ್ನೊಂದು ಸಮುದಾಯ, ಹೀಗೆ ಅತಿಪೀಡನ ಮಾಡಿದರೆ ಅನವಸ್ಥಾದೋಷವು ಬರುತ್ತದೆ.

**ಭಾವದೀಪ: –** अन्यथेत्यादि व्याचष्टे।। **नोत्तर इत्यादिना ।। अतिपीडायामिति ।।** अन्योन्याश्रयपरिहाराय मेलनस्य मेलनान्तरेण सामीप्येन वा विशिष्टानेकहेतुकत्वे अनवस्थेत्यर्थः।। १८ ।।

'ಅನ್ಯಥಾ' ಇತ್ಯಾದಿಯಾದ ಭಾಷ್ಯವನ್ನು 'ನೋತ್ತರ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಅಪಿಪೀಡಾಯಾಮ್' ಎಂಬುದರ ಅಭಿಪ್ರಾಯ ಹೀಗಿದೆ - ಅನ್ಯೋನ್ಯಾಶ್ರಯ ಪರಿಹಾರಕ್ಕಾಗಿ ಮೇಲನಕ್ಕೆ ಮತ್ತೊಂದು ಮೇಲನವನ್ನು, ಅಥವಾ ಸಾಮೀಪ್ಯವನ್ನು ಅಂಗೀಕರಿಸಿ ವಿಶಿಷ್ಟವಾದ ಅನೇಕ ಪರಮಾಣುಗಳು ಕಾರಣವಾಗಿವೆ ಎಂದು ಹೇಳಿದರೆ ಅನವಸ್ಥಾದೋಷವು ಬರುತ್ತದೆಂದರ್ಥ.

ವಿವರಣೆ - ಮಿಲಿತವಾದ ಅನೇಕ ಪರಮಾಣುಗಳಿಂದ ಸಮುದಾಯ, ಆ ಪರಮಾಣುಗಳ ಮಿಲನವು ಬೇರೆ ಸಮುದಾಯದಿಂದ ಉಂಟಾಗುತ್ತದೆ. ಆದ್ದರಿಂದ

ಅನ್ಯೋನ್ಯಾಶ್ರಯದೋಷವು ಬರುವುದಿಲ್ಲ ಎಂದು ಉತ್ತರಿಸಿದರೆ ಅನವಸ್ಥಾದೋಷವು ಬರುತ್ತದೆ. ಯಾವ ಪರಮಾಣುಗಳ ಮೇಲನದಿಂದ ಸಮುದಾಯ ಉಂಟಾಗುತ್ತದೋ ಆ ಸಮುದಾಯಕ್ಕೆ ಕಾರಣವಾದ ಪರಮಾಣುಗಳ ಮೇಲನ ಮತ್ತೊಂದು ಸಮುದಾಯದಿಂದ ಉಂಟಾಗಿದೆ. ಆ ಸಮುದಾಯಕ್ಕೆ ಕಾರಣವಾದ ಪರಮಾಣುಗಳ ಮೇಲನವು ಮತ್ತೊಂದು ಸಮುದಾಯದಿಂದ ಉಂಟಾಗಿದೆ ಎಂದು ಹೇಳಿದರೆ ಅತಿಪೀಡನವಾಗುತ್ತದೆ.

## ಭಾವದೀಪದ ವೈಶಿಷ್ಟ್ಯ

* ಪರಮಾಣುಪುಂಜ ಎಂಬ ಪದಪ್ರಯೋಗದಿಂದಲೇ ಸಂಗತಿ ತೋರಿಸಿದ್ದಾರೆ.
* ಪಂಚಸ್ಕಂಧಗಳನ್ನು ವಿವರಿಸಿದ್ದಾರೆ.
* ನಿರೀಶ್ವರಸಾಂಖ್ಯರಿಗೂ, ಬೌದ್ಧರಿಗೂ ಇರುವ ವ್ಯತ್ಯಾಸವನ್ನು ತೋರಿಸಿದ್ದಾರೆ.
* ನಿರೀಶ್ವರಸಾಂಖ್ಯರು ಆಗಮಗಳಿಗೆ ಪ್ರಾಮಾಣ್ಯವನ್ನು ಒಪ್ಪುತ್ತಾರೆ, ಇವರು ಒಪ್ಪುವುದಿಲ್ಲ.
* ಸೂತ್ರದಲ್ಲಿರುವ ಉಭಯಶಬ್ದಕ್ಕೆ ಅನೇಕ ಎಂದರ್ಥ. ಕೇವಲ ಎರಡು ಎಂದರ್ಥವಲ್ಲ.
* 'ಅತಿಪೀಡಾಯಾಮ್' ಎಂಬುದಕ್ಕೆ ಅನ್ಯೋನ್ಯಾಶ್ರಯ ಪರಿಹಾರಕ್ಕಾಗಿ ಮತ್ತೊಂದು ಮೇಲನವನ್ನು ಅಂಗೀಕರಿಸುತ್ತಾ ಹೊರಟರೆ, ಅನವಸ್ಥಾ ಬರುತ್ತದೆಂಬ ಅರ್ಥವನ್ನು ಹೇಳಿರುತ್ತಾರೆ.

## ಬ್ರಹ್ಮಸೂತ್ರ

### 'ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್' ಎಂಬ ಸೂತ್ರದ ವ್ಯಾಖ್ಯಾನ

### ब्रह्मसूत्रम् – इतरेतरप्रत्ययत्वादिति चेन्नोत्पत्तिमात्रनिमित्तत्वात् ॥

ಅನೇಕ ಪರಮಾಣುಗಳಿಂದ ಸಮುದಾಯವು ಹುಟ್ಟುತ್ತದೆ. ಆದರೆ ಪ್ರಳಯಕಾಲದಲ್ಲಿ ಬೇರೆ ಬೇರೆ ಕಡೆಯಿರುವ ಪರಮಾಣುಗಳಿಂದ ಅಪೇಕ್ಷಾಬುದ್ಧಿಯು ಹುಟ್ಟುವುದಿಲ್ಲ. ಆದ್ದರಿಂದ ಅನೇಕತ್ವವೆಂಬ ಸಮುದಾಯವೂ ಕೂಡ ಆ ಸಂದರ್ಭದಲ್ಲಿ ಇರುವುದಿಲ್ಲ. ಹೀಗಿರುವಾಗ ಪ್ರಳಯಕಾಲದಲ್ಲಿ ಘಟ-ಪಟಾದಿ ಕಾರ್ಯಗಳು ಉಂಟಾಗಲಿ ಎಂದು ಹೇಗೆ ಆಕ್ಷೇಪಿಸುತ್ತೀರಿ? ಬೌದ್ಧರ ಈ ವಾದವು ಅಸಾಧುವಾಗಿದೆ. ಏಕೆಂದರೆ ಬೌದ್ಧಮತದಲ್ಲಿ ಎಲ್ಲವೂ ಕ್ಷಣಿಕವಾದ್ದರಿಂದ ಪರಮಾಣುಗಳೂ ಕೂಡ ಕ್ಷಣಿಕವೇ ಆಗಿವೆ. ಮೊದಲು ಅಣುಗಳ ಜ್ಞಾನವು ಬಂದು ಅನಂತರ ಅಪೇಕ್ಷಾಬುದ್ಧಿಯಿಂದ ಸಮುದಾಯಬುದ್ಧಿಯು ಬರಬೇಕಾದರೆ ಹಿಂದಿನ ಕ್ಷಣಗಳ ಅಣುಗಳೇ ಇರುವುದಿಲ್ಲ. ಅಪೇಕ್ಷಾಬುದ್ಧಿ ಬರುವ ಸಮಯದಲ್ಲಿ ಹಿಂದಿನ ಕ್ಷಣದ ಅಣುಗಳು ನಾಶವಾಗಿರುವುದರಿಂದ ಇವರ ಈ ಪರಿಹಾರವು ತಪ್ಪಾಗುತ್ತದೆ. ಮತ್ತು ವಿರಳವಾದ ಅಣುಗಳು ಸಮುದಾಯದ ಉತ್ಪತ್ತಿಗೆ ಮಾತ್ರ ಕಾರಣವಾಗುತ್ತವೆ ಹೊರತು, ಘಟ-ಪಟಾದಿ ವ್ಯವಹಾರಗಳಿಗೆ ಕಾರಣವಾಗುವುದಿಲ್ಲ.

ಅರ್ಥ -- ಪರಮಾಣುಗಳ ಪುಂಜವು ಯಾವಾಗಲೂ ಇರುತ್ತವೆ. ಆದರೂ ಪ್ರಳಯವೇ ಇಲ್ಲವೆಂಬ ಅನುಪಪತ್ತಿಯು ನಮ್ಮ ಪಕ್ಷದಲ್ಲಿ ಬರುವುದಿಲ್ಲ. ಏಕೆಂದರೆ ಇತರೇತರ ಪ್ರತ್ಯಯತ್ವಾತ್ = ಪರಸ್ಪರ, ಇದಮಿದಂ ಚ ಎಂಬುದಾಗಿ ಪರಮಾಣುಗಳ ಪರಸ್ಪರ ಅಪೇಕ್ಷಾಬುದ್ಧಿಯಿಂದ ಸಮುದಾಯದ ವ್ಯವಹಾರವು ನಡೆಯುತ್ತದೆ. ಆದ್ದರಿಂದ ಯಾವ ಕಾಲದಲ್ಲಿ ಅಂಥ ಅಪೇಕ್ಷಾಬುದ್ಧಿ ಇರುವುದಿಲ್ಲವೋ, ಅಂಥ ಪ್ರಳಯಕಾಲದಲ್ಲಿ ಸಮುದಾಯದ ವ್ಯವಹಾರವೂ ಕೂಡ ಇರುವುದಿಲ್ಲ. ಆದ್ದರಿಂದ ಪ್ರಳಯವು ಯುಕ್ತವಾಗುತ್ತದೆ. ಇತಿ ಚೇನ್ನ = ಇವರ ಈ ಉತ್ತರವು ಅಸಾಧುವಾಗಿದೆ. ಏಕೆಂದರೆ ಉತ್ಪತ್ತಿಮಾತ್ರನಿಮಿತ್ತತ್ವಾತ್ = ಪರಮಾಣುಗಳು ಸಮುದಾಯದ ಉತ್ಪತ್ತಿಗೆ ಮಾತ್ರ ನಿಮಿತ್ತವಾಗುತ್ತದೆ ಹೊರತು, ಅಪೇಕ್ಷಾಬುದ್ಧಿ ಉತ್ಪತ್ತಿಗೆ ಕಾರಣವಾಗುವುದಿಲ್ಲ. ಆದ್ದರಿಂದ ಅಪೇಕ್ಷಾಬುದ್ಧಿಯ ಕಾರಣದಿಂದ ವ್ಯವಹಾರಾದಿಗಳನ್ನು ಕ್ಷಣಿಕಮತದಲ್ಲಿ ಕೂಡಿಸಲು ಸಾಧ್ಯವಿಲ್ಲ.

## ಬ್ರಹ್ಮಸೂತ್ರಭಾಷ್ಯ

### ಪರಸ್ಪರ ಪ್ರತೀತಿಯಿಂದ ವ್ಯವಹಾರದ ಕಲ್ಪನೆ ಸರಿಯೆ ?

**ब्रह्मसूत्रभाष्यम् –।। इतरेतरप्रत्ययत्वादिति चेन्नोत्पत्तिमात्रनिमित्तत्वात् ।।२।।**

**सर्वदा विद्यमानोऽपि समुदायः परस्परापेक्षया व्यवह्रियत इति चेन्न । एकं कार्यमुत्पाद्य तस्य विनष्टत्वात् परस्परप्रत्ययस्तदपेक्षया व्यवहार इति न युज्यते ।**

ಅನುವಾದ - ಪರಮಾಣುಗಳ ಸಮುದಾಯವು ನಿರಂತರವಾಗಿ ಇರುವುದು ಸತ್ಯ; ಆದರೂ ಕೂಡ 'ಇದು ಘಟ' 'ಇದು ಪಟ' ಇತ್ಯಾದಿಯಾಗಿ ವ್ಯವಹಾರವು ಯುಕ್ತವಾಗಬೇಕಾದರೆ ಒಂದು ಅಣುವಿನ ಜೊತೆ ಮತ್ತೊಂದು ಅಣು ಕಾಣಿಸಿ ಕೊಳ್ಳಬೇಕು. ಈ ಸಮರ್ಥನೆಯೂ ಕೂಡ ತಪ್ಪು. ಏಕೆಂದರೆ ಒಂದು ಅಣುವು ಮತ್ತೊಂದು ಕಾರ್ಯವಸ್ತು ಹುಟ್ಟಿಸಿ ನಾಶವಾಗುತ್ತದೆ ಎಂಬುದು ಬೌದ್ಧಮತ. ಆದ್ದರಿಂದ ಜ್ಞಾನವು ಬರಬೇಕಾದರೆ ಒಂದರ ಜೊತೆ ಮತ್ತೊಂದು ಇರಬೇಕೆಂಬ ಕಲ್ಪನೆಯೇ ಇವರ ಮತದಲ್ಲಿ ಯುಕ್ತವಾಗುವುದಿಲ್ಲ.

ಪ್ರತಿಪದಾರ್ಥ -- ಹೀಗೆ ಹೇಳಿದ ಪ್ರಮೇಯವನ್ನು ಆಕ್ಷೇಪಮಾಡಿ ಮುಂದಿನ ಸೂತ್ರದಿಂದ ಉತ್ತರಿಸುತ್ತಿದ್ದಾರೆ. ಸರ್ವದಾ = ಯಾವಾಗಲೂ, ಸಮದಾಯಃ = ಪರಮಾಣುಗಳ ಸಮುದಾಯವು, ವಿದ್ಯಮಾನೋಽಪಿ = ಇರುವುದಾದರೂ, ಪರಸ್ಪರಾಪೇಕ್ಷಯಾ = ಒಂದರ ಜೊತೆ ಮತ್ತೊಂದು ಸೇರಿದಾಗ ಮಾತ್ರ, ವ್ಯವಹ್ರಿಯತೇ = 'ಘಟ' 'ಪಟ' ಮೊದಲಾದ ವ್ಯವಹಾರಗಳು ಯುಕ್ತವಾಗುತ್ತವೆ. ಇತಿ ಚೇನ್ನ = ಹೀಗೆ ಆಕ್ಷೇಪ ಮಾಡಬಾರದು. ಏಕಂ = ಒಂದುವಸ್ತುವಿನ, ಕಾರ್ಯಂ = ಕಾರ್ಯವನ್ನು, ಉತ್ಪಾದ್ಯ = ಹುಟ್ಟಿಸಿ, ತಸ್ಯ = ಆ ಸಮುದಾಯವು, ವಿನಷ್ಟತ್ವಾತ್ = ನಾಶವನ್ನು ಹೊಂದುವುದರಿಂದ, ಪರಸ್ಪರಪ್ರತ್ಯಯಃ = ಘಟಪಟಜ್ಞಾನಾದಿಗಳು ತದಪೇಕ್ಷಯಾ = ಒಂದರ ಜೊತೆ ಮತ್ತೊಂದು ಸೇರಿದಾಗ, ವ್ಯವಹಾರಃ = ಘಟಪಟ ಮೊದಲಾದ ವ್ಯವಹಾರವು, ಇತಿ = ಹೀಗೆ ಹೇಳುವುದು, ನ ಯುಜ್ಯತೇ = ಕೂಡುವುದೇ ಇಲ್ಲ.

## ಬ್ರಹ್ಮಸೂತ್ರ

### 'ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – इतरेतरप्रत्ययत्वादिति चेन्नोत्पत्तिमात्रनिमित्तत्वात् ।।**

ಅನೇಕ ಪರಮಾಣುಗಳಿಂದ ಸಮುದಾಯವು ಹುಟ್ಟುತ್ತದೆ. ಆದರೆ ಪ್ರಳಯಕಾಲದಲ್ಲಿ ಬೇರೆ ಬೇರೆ ಕಡೆಯಿರುವ ಪರಮಾಣುಗಳಿಂದ ಅಪೇಕ್ಷಾಬುದ್ಧಿಯು ಹುಟ್ಟುವುದಿಲ್ಲ. ಆದ್ದರಿಂದ ಅನೇಕತ್ವವೆಂಬ ಸಮುದಾಯವೂ ಕೂಡ ಆ ಸಂದರ್ಭದಲ್ಲಿ ಇರುವುದಿಲ್ಲ. ಹೀಗಿರುವಾಗ ಪ್ರಳಯಕಾಲದಲ್ಲಿ ಘಟ-ಪಟಾದಿ ಕಾರ್ಯಗಳು ಉಂಟಾಗಲಿ ಎಂದು ಹೇಗೆ ಆಕ್ಷೇಪಿಸುತ್ತೀರಿ? ಬೌದ್ಧರ ಈ ವಾದವು ಅಸಾಧುವಾಗಿದೆ. ಏಕೆಂದರೆ ಬೌದ್ಧಮತದಲ್ಲಿ ಎಲ್ಲವೂ ಕ್ಷಣಿಕವಾದ್ದರಿಂದ ಪರಮಾಣುಗಳೂ ಕೂಡ ಕ್ಷಣಿಕವೇ ಆಗಿವೆ. ಮೊದಲು ಅಣುಗಳ ಜ್ಞಾನವು ಬಂದು ಅನಂತರ ಅಪೇಕ್ಷಾಬುದ್ಧಿಯಿಂದ ಸಮುದಾಯಬುದ್ಧಿಯು ಬರಬೇಕಾದರೆ ಹಿಂದಿನ ಕ್ಷಣಗಳ ಅಣುಗಳೇ ಇರುವುದಿಲ್ಲ. ಅಪೇಕ್ಷಾಬುದ್ಧಿ ಬರುವ ಸಮಯದಲ್ಲಿ ಹಿಂದಿನ ಕ್ಷಣದ ಅಣುಗಳು ನಾಶವಾಗಿರುವುದರಿಂದ ಇವರ ಈ ಪರಿಹಾರವು ತಪ್ಪಾಗುತ್ತದೆ. ಮತ್ತು ವಿರಳವಾದ ಅಣುಗಳು ಸಮುದಾಯದ ಉತ್ಪತ್ತಿಗೆ ಮಾತ್ರ ಕಾರಣವಾಗುತ್ತವೆ ಹೊರತು, ಘಟ-ಪಟಾದಿ ವ್ಯವಹಾರಗಳಿಗೆ ಕಾರಣವಾಗುವುದಿಲ್ಲ.

ಅರ್ಥ -- ಪರಮಾಣುಗಳ ಪುಂಜವು ಯಾವಾಗಲೂ ಇರುತ್ತವೆ. ಆದರೂ ಪ್ರಳಯವೇ ಇಲ್ಲವೆಂಬ ಅನುಪಪತ್ತಿಯು ನಮ್ಮ ಪಕ್ಷದಲ್ಲಿ ಬರುವುದಿಲ್ಲ. ಏಕೆಂದರೆ ಇತರೇತರ ಪ್ರತ್ಯಯತ್ವಾತ್ = ಪರಸ್ಪರ, ಇದಮಿದಂ ಚ ಎಂಬುದಾಗಿ ಪರಮಾಣುಗಳ ಪರಸ್ಪರ ಅಪೇಕ್ಷಾಬುದ್ಧಿಯಿಂದ ಸಮುದಾಯದ ವ್ಯವಹಾರವು ನಡೆಯುತ್ತದೆ. ಆದ್ದರಿಂದ ಯಾವ ಕಾಲದಲ್ಲಿ ಅಂಥ ಅಪೇಕ್ಷಾಬುದ್ಧಿ ಇರುವುದಿಲ್ಲವೋ, ಅಂಥ ಪ್ರಳಯಕಾಲದಲ್ಲಿ ಸಮುದಾಯದ ವ್ಯವಹಾರವೂ ಕೂಡ ಇರುವುದಿಲ್ಲ. ಆದ್ದರಿಂದ ಪ್ರಳಯವು ಯುಕ್ತವಾಗುತ್ತದೆ. ಇತಿ ಚೇನ್ನ = ಇವರ ಈ ಉತ್ತರವು ಅಸಾಧುವಾಗಿದೆ. ಏಕೆಂದರೆ ಉತ್ಪತ್ತಿಮಾತ್ರನಿಮಿತ್ತತ್ವಾತ್ = ಪರಮಾಣುಗಳು ಸಮುದಾಯದ ಉತ್ಪತ್ತಿಗೆ ಮಾತ್ರ ನಿಮಿತ್ತವಾಗುತ್ತದೆ ಹೊರತು, ಅಪೇಕ್ಷಾಬುದ್ಧಿ ಉತ್ಪತ್ತಿಗೆ ಕಾರಣವಾಗುವುದಿಲ್ಲ. ಆದ್ದರಿಂದ ಅಪೇಕ್ಷಾಬುದ್ಧಿಯ ಕಾರಣದಿಂದ ವ್ಯವಹಾರಾದಿಗಳನ್ನು ಕ್ಷಣಿಕಮತದಲ್ಲಿ ಕೂಡಿಸಲು ಸಾಧ್ಯವಿಲ್ಲ.

## ಬ್ರಹ್ಮಸೂತ್ರಭಾಷ್ಯ

### ಪರಸ್ಪರ ಪ್ರತೀತಿಯಿಂದ ವ್ಯವಹಾರದ ಕಲ್ಪನೆ ಸರಿಯೆ ?

**ब्रह्मसूत्रभाष्यम् –।। इतरेतरप्रत्ययत्वादिति चेन्नोत्पत्तिमात्रनिमित्तत्वात् ।।२।।**

**सर्वदा विद्यमानोऽपि समुदायः परस्परापेक्षया व्यवह्रियत इति चेन्न । एकं कार्यमुत्पाद्य तस्य विनष्टत्वात् परस्परप्रत्ययस्तदपेक्षया व्यवहार इति न युज्यते ।**

ಅನುವಾದ - ಪರಮಾಣುಗಳ ಸಮುದಾಯವು ನಿರಂತರವಾಗಿ ಇರುವುದು ಸತ್ಯ; ಆದರೂ ಕೂಡ 'ಇದು ಘಟ' 'ಇದು ಪಟ' ಇತ್ಯಾದಿಯಾಗಿ ವ್ಯವಹಾರವು ಯುಕ್ತವಾಗಬೇಕಾದರೆ ಒಂದು ಅಣುವಿನ ಜೊತೆ ಮತ್ತೊಂದು ಅಣು ಕಾಣಿಸಿ ಕೊಳ್ಳಬೇಕು. ಈ ಸಮರ್ಥನೆಯೂ ಕೂಡ ತಪ್ಪು. ಏಕೆಂದರೆ ಒಂದು ಅಣುವು ಮತ್ತೊಂದು ಕಾರ್ಯವನ್ನು ಹುಟ್ಟಿಸಿ ನಾಶವಾಗುತ್ತದೆ ಎಂಬುದು ಬೌದ್ಧಮತ. ಆದ್ದರಿಂದ ಜ್ಞಾನವು ಬರಬೇಕಾದರೆ ಒಂದರ ಜೊತೆ ಮತ್ತೊಂದು ಇರಬೇಕೆಂಬ ಕಲ್ಪನೆಯೇ ಇವರ ಮತದಲ್ಲಿ ಯುಕ್ತವಾಗುವುದಿಲ್ಲ.

ಪ್ರತಿಪದಾರ್ಥ -- ಹೀಗೆ ಹೇಳಿದ ಪ್ರಮೇಯವನ್ನು ಆಕ್ಷೇಪಮಾಡಿ ಮುಂದಿನ ಸೂತ್ರದಿಂದ ಉತ್ತರಿಸುತ್ತಿದ್ದಾರೆ. ಸರ್ವದಾ = ಯಾವಾಗಲೂ, ಸಮುದಾಯಃ = ಪರಮಾಣುಗಳ ಸಮುದಾಯವು, ವಿದ್ಯಮಾನೋಽಪಿ = ಇರುವುದಾದರೂ, ಪರಸ್ಪರಾಪೇಕ್ಷಯಾ = ಒಂದರ ಜೊತೆ ಮತ್ತೊಂದು ಸೇರಿದಾಗ ಮಾತ್ರ, ವ್ಯವಹ್ರಿಯತೇ = 'ಘಟ' 'ಪಟ' ಮೊದಲಾದ ವ್ಯವಹಾರಗಳು ಯುಕ್ತವಾಗುತ್ತವೆ. ಇತಿ ಚೇನ್ನ = ಹೀಗೆ ಆಕ್ಷೇಪ ಮಾಡಬಾರದು. ಏಕಂ = ಒಂದುವಸ್ತುವಿನ, ಕಾರ್ಯಂ = ಕಾರ್ಯವನ್ನು, ಉತ್ಪಾದ್ಯ = ಹುಟ್ಟಿಸಿ, ತಸ್ಯ = ಆ ಸಮುದಾಯವು, ವಿನಷ್ಟತ್ವಾತ್ = ನಾಶವನ್ನು ಹೊಂದುವುದರಿಂದ, ಪರಸ್ಪರಪ್ರತ್ಯಯಃ = ಘಟಪಟಜ್ಞಾನಾದಿಗಳು ತದಪೇಕ್ಷಯಾ = ಒಂದರ ಜೊತೆ ಮತ್ತೊಂದು ಸೇರಿದಾಗ, ವ್ಯವಹಾರಃ = ಘಟಪಟ ಮೊದಲಾದ ವ್ಯವಹಾರವು, ಇತಿ = ಹೀಗೆ ಹೇಳುವುದು, ನ ಯುಜ್ಯತೇ = ಕೂಡುವುದೇ ಇಲ್ಲ.

ಕಾರಣವಿದ್ದ ಮೇಲೆ ಕಾರ್ಯವಾಗಲೇಬೇಕು

**ब्रह्मसूत्रभाष्यम् – कारणे सति कार्यं भवत्येवेति हि तस्य नियमः ।।२।।**

ಅನುವಾದ - ಕಾರಣವಿದ್ದರೆ ಕಾರ್ಯವು ಆಗಿಯೇ ತೀರುತ್ತದೆ ಎಂಬುದು ಬೌದ್ಧರ ನಿಯಮ.

ಪ್ರತಿಪದಾರ್ಥ -- ಕಾರಣೇ = ಕಾರಣವು, ಸತಿ = ಇದ್ದ ಮೇಲೆ, ಕಾರ್ಯಂ = ಕಾರ್ಯವು, ಭವತ್ಯೇವ = ಆಗಿಯೇ ತೀರುತ್ತದೆ, ಇತಿ ಹಿ = ಹೀಗೆ, ತಸ್ಯ = ಬೌದ್ಧರ, ನಿಯಮಃ = ನಿಯಮವಿದೆ.

ಸತ್ತರ್ಕದೀಪಾವಳಿ

ಬೌದ್ಧದರ್ಶನದಲ್ಲಿ ಕಾರಣತ್ವವನ್ನು ನಿರೂಪಿಸಲಾಗದು

**सत्तर्कदीपावळिः – समुदायो बहुत्वसापेक्षः विरलपरमाणुषु सन्ततिषु विद्यमानः समुदायः सृष्टिकाले परस्परसन्निहितैकैकपरमाण्वपेक्षया व्यवह्रियत इति नेतरेतराश्रयत्वमिति यद्युच्यते तदपि सर्वविरलपरमाणुभ्यः क्षणिकेभ्यो विरलपरमाणुषूत्पद्यमानेषु निबिडपरमाणुषु पुञ्जसम्भवात् । न कालकर्मवशादपि परमाणुपुञ्जसम्भवः न हि निष्कारणकः परमाणुपुञ्जव्यवहारः सम्भवति । तदाह । इतरेतरेत्यादिना ।**

ಸಮುದಾಯವು ಅನೇಕ ಪದಾರ್ಥಗಳನ್ನು ಅಪೇಕ್ಷೆ ಪಡುತ್ತದೆ. ವಿರಲ ಪರಮಾಣುಗಳ ಸಂತತಿಯಲ್ಲಿರುವ ಪರಮಾಣುವು ಸೃಷ್ಟಿಕಾಲದಲ್ಲಿ ಪರಸ್ಪರ ಸನ್ನಿಹಿತವಾದ ಒಂದೊಂದೇ ಪರಮಾಣುಗಳನ್ನು ಅಪೇಕ್ಷೆ ಪಟ್ಟು ವ್ಯವಹಾರಕ್ಕೆ ಯೋಗ್ಯವಾಗುತ್ತದೆ. ಪ್ರಳಯಕಾಲದಲ್ಲಿ ಬೇರೆ ಬೇರೆಯಾಗಿರುವ ಪರಮಾಣುಗಳನ್ನು ನೋಡಿ ಇದು ಮತ್ತು ಇದು ಎಂದು ಪರಸ್ಪರ ಸಾಪೇಕ್ಷವಾಗಿ ವ್ಯವಹರಿಸುವವರು ಯಾರೂ ಇರುವುದಿಲ್ಲ. ಆದ್ದರಿಂದ ಅನ್ಯೋನ್ಯಾಶ್ರಯ-ದೋಷಕ್ಕೆ ಅವಕಾಶವಿಲ್ಲ. ಹೀಗೆ ತಾರ್ಕಿಕರು ಹೇಳುತ್ತಾರೆ.

ಇದು ತಪ್ಪು. ಸೃಷ್ಟಿಕಾಲದಲ್ಲೂ ಕೂಡ ಇಂಥ ವ್ಯವಹಾರವು ಸಾಧ್ಯವೇ ಇಲ್ಲ. ಏಕೆಂದರೆ ಎಲ್ಲಾ ಪರಮಾಣುಗಳು ಕ್ಷಣಿಕವೆಂದು ಬೌದ್ಧರು ಹೇಳುತ್ತಾರೆ. ಸಮೂಹಜ್ಞಾನ ಬರಬೇಕಾದರೆ ಅನೇಕ ಕ್ಷಣಗಳಲ್ಲಿ ಅವುಗಳು ಇರಲೇಬೇಕು. ಆದ್ದರಿಂದ ಕ್ಷಣಿಕವಾದ ವಿರಳಪರಮಾಣುಗಳಲ್ಲಿ ನಿಬಿಡವಾದ ಪರಮಾಣುಗಳು ಹುಟ್ಟಲು ಸಾಧ್ಯವೇ ಇಲ್ಲ. ಕಾಲಕರ್ಮದ ಅಧೀನವಾಗಿದ್ದರೂ ಕೂಡ ಪರಮಾಣುಪುಂಜವು ಯುಕ್ತವಾಗುವುದಿಲ್ಲ. ಏಕೆಂದರೆ ಕಾರಣವಿಲ್ಲದೇ ಪರಮಾಣು-ಪುಂಜದ ವ್ಯವಹಾರವು ಅಯುಕ್ತವಾಗುತ್ತದೆ. ಬೌದ್ಧದರ್ಶನದಲ್ಲಿ ಕ್ಷಣಿಕವಾಗದೇ ಇರುವ ಸ್ಥಿರವಾದ ವಸ್ತುವೇ ಇಲ್ಲದ ಕಾರಣ ಯಾವುದಕ್ಕೂ ಕೂಡ ಕಾರಣತ್ವವೇ ಕೂಡುವುದಿಲ್ಲ. ಇದನ್ನು 'ಇತರೇತರೇ' ಇತ್ಯಾದಿ ಸೂತ್ರದಿಂದ ಉಪಪಾದನೆ ಮಾಡುತ್ತಿದ್ದಾರೆ.

## ತತ್ವಪ್ರದೀಪ

**तत्वप्रदीपः – इतरेतरप्रत्ययत्वादिति चेन्नोत्पत्तिमात्रनिमित्तत्वात् । अथापि स्यात् । नायं समुदायः कादाचित्कः । येनेतरेतराश्रयस्स्यात् । किन्तु नित्य एव । परमाणुसन्तानानां नित्यत्वात् । तथाऽपि पुरुषस्येदं चेदं चेति परस्परापेक्षया प्रतीयते । तथैव व्यवह्रियते च । एवं समुदायविषयोऽभिज्ञानादि-व्यवहारः परं चापरं च प्रत्येति विषयीकरोति । अतः समुदायव्यवहारस्येतरेतर-प्रत्ययत्वात् ब्यादिहेतुकत्वाविरोध इति चेत् ।**

ಬೌದ್ಧರ ಆಕ್ಷೇಪ - ಸಮುದಾಯವು ಕಾದಾಚಿತ್ಕವಲ್ಲ. ಹಾಗಾಗಿದ್ದಲ್ಲಿ ಅನ್ಯೋನ್ಯಾಶ್ರಯ-ದೋಷವು ಬರುತ್ತಿತ್ತು. ಪರಮಾಣುಗಳ ಸಂತಾನವು ನಿತ್ಯವೆಂದು ಅಂಗೀಕರಿಸುತ್ತೇವೆ. ಆದರೆ ಪುರುಷನಿಗೆ ಇದು ಮತ್ತು ಇದು ಎಂಬ ಸಾಪೇಕ್ಷಪ್ರತೀತಿಯು ಯಾವಾಗ ಬರುತ್ತದೋ, ಆಗ ವಸ್ತುಗಳ ಜ್ಞಾನವು ಪ್ರಾಪ್ತವಾಗುತ್ತದೆ. ಮತ್ತು ಅದರಂತೆ ವ್ಯವಹರಿಸುತ್ತಾನೆ. ಹೀಗೆ ಸಮುದಾಯವಿಷಯಕವಾದ ಪ್ರತೀತಿ ಹಾಗೂ ವ್ಯವಹಾರಗಳನ್ನು ಪರ ಮತ್ತು ಅಪರ ಎಂಬುದಾಗಿ ತಿಳಿಯುತ್ತಾನೆ. ಆದ್ದರಿಂದ ಸಮುದಾಯ ವ್ಯವಹಾರವು ಪರಸ್ಪರ ಸಾಪೇಕ್ಷವಾಗಿದೆ. ಇಂಥ ಸಮುದಾಯಕ್ಕೆ ಅನೇಕ ಪರಮಾಣುಗಳು ಕಾರಣವಾಗಿವೆ ಎಂದು ಹೇಳಿದರೆ ಯಾವುದೇ ವಿರೋಧವು ಬರುವುದಿಲ್ಲ.

**तत्वप्रदीपः – न एकं कार्यमुत्पाद्य तस्य क्षणिकस्य कारणस्य विनष्टत्वात्परस्परापेक्षः प्रत्ययस्तदपेक्षया व्यवहार इति च वक्तुमयुक्तेः । तथाहि, इदमिदमिति प्रथमतः पृथक्पृथक्प्रतीतानामिदं चेदं चेति परस्परापेक्षः समुदायविषयः प्रत्ययो जायते, पश्चाद्व्यवहारः । न च स्वरसभङ्गुराणां तेषां तावन्तं कालमवस्थातुमवसरः स्यात् । कारणे सति कार्यं भवत्येवेति हि तस्य क्षणिकवादिनो नियमः । तत्र प्रथमक्षण एव प्रथमकार्यमुत्पाद्य द्वितीयक्षणे यद्यवतिष्ठेत, तर्हि तदाऽपि कार्यान्तरोत्पत्तेरेकस्माद्धटाद्बहवो घटसन्ताना उपलभ्येरन् ।**

ಬೌದ್ಧರ ಆಕ್ಷೇಪವು ತಪ್ಪು. ಒಂದು ಕಾರ್ಯವನ್ನು ಹುಟ್ಟಿಸಿದ ಮೇಲೆ ಆ ಕ್ಷಣಿಕವಾದ ಕಾರಣವು ನಾಶವಾಗಿರುತ್ತದೆ. ಹೀಗಿರುವಾಗ ಒಂದು ಮತ್ತೊಂದನ್ನು ಅಪೇಕ್ಷಿಸುತ್ತದೆಂದಾಗಲೀ, ತದಪೇಕ್ಷೆಯಿಂದ ವ್ಯವಹಾರವನ್ನು ಮಾಡಬಹುದೆಂದಾಗಲೀ, ಬೌದ್ಧರಿಗೆ ಹೇಳಲಾಗದು. ಅದು ಹೀಗೆ - ಇದು ಮತ್ತು ಇದು ಎಂಬುದಾಗಿ ಮೊದಲು ಪ್ರತ್ಯೇಕ ಪ್ರತ್ಯೇಕವಾಗಿ ಅಣುಗಳು ಪ್ರತೀತವಾಗುತ್ತವೆ. ಇದು ಮತ್ತು ಇದು ಎಂಬುದಾಗಿ ಒಂದರ ಪಕ್ಕ ಮತ್ತೊಂದನ್ನು ಸಾಪೇಕ್ಷಿತವಾಗಿ ತಿಳಿಯಬೇಕು. ಆಗ ಸಮುದಾಯವಿಷಯಕವಾದ ಪ್ರತ್ಯಯವು ಹುಟ್ಟುತ್ತದೆ. ಇದಾದ ಮೇಲೆ ಇದು ಘಟ ಎಂಬುದಾಗಿ ವ್ಯವಹಾರವನ್ನು ಮಾಡಬೇಕು. ಆದರೆ ಪ್ರತಿಯೊಂದು ಪದಾರ್ಥಗಳು ಕ್ಷಣಿಕವೆಂದು ಬೌದ್ಧರು ಹೇಳುತ್ತಾರೆ. ಆದ್ದರಿಂದ ಅಷ್ಟುಕಾಲದ ತನಕ ಆ ಪದಾರ್ಥವು ಇರಲು ಸಾಧ್ಯವೇ ಇಲ್ಲ. ಕಾರಣವಿದ್ದರೆ ಕಾರ್ಯವು ಆಗುತ್ತದೆಂಬುದು ಕ್ಷಣಿಕವಾದುದರ ನಿಯಮ. ಮೊದಲನೆಯ ಕ್ಷಣದಲ್ಲೇ ಮೊದಲನೆಯ ಕಾರ್ಯವನ್ನು ಹುಟ್ಟಿಸಿ, ಎರಡನೆಯ ಕ್ಷಣದಲ್ಲಿ ಆ ಕಾರಣವು ಇದ್ದರೆ ಆಗ ಆ ಕ್ಷಣದಲ್ಲೂ ಕೂಡ ಮತ್ತೊಂದು ಕಾರ್ಯವನ್ನು ಹುಟ್ಟಿಸಬೇಕಾದೀತು. ಆಗ ಒಂದೇ ಘಟದಿಂದ ಅನೇಕ ಘಟಗಳು ಉತ್ಪತ್ತಿಯಾಗಬೇಕಾದೀತು.

ವಿವರಣೆ - ಎಲ್ಲಾ ಪದಾರ್ಥಗಳು ಕ್ಷಣಿಕವೆಂದು ಬೌದ್ಧರು ಹೇಳುತ್ತಾರೆ. ಒಂದು ವಸ್ತುವು ಒಂದೇ ಕ್ಷಣದಲ್ಲಿರುತ್ತದೆ. ಅದು ಸಾಯುವಾಗ ಇನ್ನೊಂದು ವಸ್ತುವಿಗೆ ಜನ್ಮವನ್ನು

ನೀಡುತ್ತದೆ. ಮತ್ತೊಂದು ವಸ್ತು ಹುಟ್ಟಿದ ಮೇಲೆ ತಾನಿರುವುದಿಲ್ಲ ಎಂಬುದು ಕ್ಷಣಿಕತ್ವದ ಅಭಿಪ್ರಾಯ. ಪ್ರಕೃತ ಸಮುದಾಯಜ್ಞಾನವು ಬರಬೇಕಾದರೆ, ಮೊದಲು ಅದರಲ್ಲಿ ಸೇರಿರುವ ಪದಾರ್ಥಗಳನ್ನು ಪ್ರತ್ಯೇಕವಾಗಿ ಕಾಣಬೇಕು. ಆಮೇಲೆ ಒಂದು ಮತ್ತೊಂದನ್ನು ಅಪೇಕ್ಷೆ ಪಡುತ್ತದೆಂದು ತಿಳಿಯಬೇಕು. ಅನಂತರ ಇದು ಘಟ, ಇದು ಪಟ ಇತ್ಯಾದಿಯಾಗಿ ಜ್ಞಾನವನ್ನು ಹೊಂದಲು ಸಾಧ್ಯವಾಗುತ್ತದೆ. ಅನಂತರ ಮತ್ತೊಬ್ಬರಿಗೆ ತಿಳಿಸಲು ವ್ಯವಹರಿಸಬೇಕು. ಇಲ್ಲಿಯ ತನಕ ಮೊದಲು ಇರುವ ಅಣುಗಳು ಉಳಿದಿರಲು ಸಾಧ್ಯವೇ ಇಲ್ಲ. ಎಲ್ಲಾ ಪದಾರ್ಥಗಳು ಕ್ಷಣಿಕವಾದ್ದರಿಂದ ಪ್ರಥಮಕ್ಷಣದಲ್ಲಿ ಇದ್ದು ನಾಶವಾಗಿರುತ್ತದೆ. ಆದ್ದರಿಂದ ನೋಡುವುದೇ ಒಂದನ್ನು, ಸಮುದಾಯಜ್ಞಾನ ಹೊಂದುವುದು ಮತ್ತೊಂದನ್ನು, ವ್ಯವಹರಿಸುವುದು ಇನ್ನೊಂದನ್ನು ಎಂಬುದಾಗಿ ಹೇಳಿದಂತಾಗುತ್ತದೆ. ಒಂದುವೇಳೆ ಅಣುಸಮುದಾಯರೂಪವಾದ ಸ್ಥೂಲವಸ್ತುಗಳು ಅನೇಕ ಕ್ಷಣ ಇರುತ್ತವೆ ಎಂದು ಹೇಳಿದರೆ ಆಗ ಕಾರಣರೂಪವಾದ ಅಣುವು ನಿರಂತರ ಕಾರ್ಯವನ್ನು ಹುಟ್ಟಿಸುತ್ತಲೇ ಇರಬೇಕು. ಆಗ ಒಂದೇ ಘಟಪರಮಾಣುವು ಅನಂತ ಘಟಗಳನ್ನು ಹುಟ್ಟಿಸಬೇಕಾದೀತು. 'ಕಾರಣೇಸತಿ ಕಾರ್ಯಂ ಭವತ್ಯೇವ' ಎಂಬುದು ಅವರು ಅಂಗೀಕಾರ ಮಾಡಿರುವ ನಿಯಮ. ಒಂದು ಕಾರಣವಿದ್ದ ಮೇಲೆ ಕಾರ್ಯವಾಗಲೇ ಬೇಕು.

### ವಿಸದೃಶಕಾರ್ಯೋತ್ಪತ್ತಿಯನ್ನು ಒಪ್ಪದಿದ್ದರೆ ಅನೇಕ ಬಾಧಕಗಳು

**तत्वप्रदीपः – सिद्धान्तभाष्यस्यन्योऽप्यर्थः । एकं सदृशं कार्यमुत्पाद्य तस्य विनष्टत्वान्न विसदृशकार्योत्पत्तिः । अतश्चासंयुक्तयोः परमाण्वोः न संयुक्तावुत्पद्येयाताम् । नचानिन्द्रियसंयोगिनः कारणादिन्द्रियसंयोगि कार्यमुत्पद्येत । न चाज्ञाताद्विज्ञातम् । न चाव्यवहारपदाद्व्यवहारपदम् । नचेन्द्रियादप्यसंयोगिनः - संयागी । न च तादृशादात्मनोऽन्यादृशः स्यात् । ज्ञानमेव न आत्मेति चेन्न । तर्ह्यतथाज्ञानात्तथाज्ञानं कुत एतत् ? कारणे सति कार्यं भवत्येवेति हि तस्य नियमः । न पुनर्विशेषकार्यमपीति । सदृशात्सदृशान्तरोत्पत्तिनियमाङ्गीकारादिति भावः । अनियमे घटादपि पट उत्पद्येत । न चादृष्टात्फलादातृणो दातृण उत्पत्तिः । अतो न विशेषकार्योत्पत्तिः।।**

ಸಿದ್ಧಾಂತಭಾಷ್ಯಕ್ಕೆ ಮತ್ತೊಂದು ವ್ಯಾಖ್ಯಾನ ಹೀಗಿದೆ - ಸದೃಶವಾದ ಒಂದು ಕಾರ್ಯವನ್ನು ಹುಟ್ಟಿಸಿದ ಮೇಲೆ ಆ ವಸ್ತು ನಾಶವಾಗುತ್ತದೆ. ಆದ್ದರಿಂದ ವಿಸದೃಶ ಕಾರ್ಯದ ಉತ್ಪತ್ತಿಯೇ ಸಾಧ್ಯವಾಗುವುದಿಲ್ಲ. ಆಗ ಅನೇಕ ಅನುಪಪತ್ತಿಗಳನ್ನು ಬೌದ್ಧರು ಎದುರಿಸಬೇಕಾಗುತ್ತದೆ.

೧. ಅಸಂಯುಕ್ತವಾದ ಪರಮಾಣುಗಳಿಂದ ಸಂಯುಕ್ತವಾದ ಪರಮಾಣುಗಳು ಹುಟ್ಟುತ್ತವೆಂದು ಬೌದ್ಧರು ಹೇಳುತ್ತಾರೆ. ವಿಸದೃಶವಾದ ಕಾರ್ಯವು ಹುಟ್ಟುವುದಿಲ್ಲವೆಂದು ಹೇಳಿದ್ದರಿಂದ ಈಗ ಇದೂ ಕೂಡ ಕೂಡುವುದಿಲ್ಲ.

೨. ಇಂದ್ರಿಯಸಂಯೋಗವಾಗದೇ ಇರುವ ಕಾರಣಗಳಿಂದ ಇಂದ್ರಿಯಸಂಯೋಗಿಯಾದ ಕಾರ್ಯವು ಹುಟ್ಟುವುದು ಕಾಣುತ್ತಿದೆ. ಇದೂ ಕೂಡ ಆಗದೇ ಇರಬೇಕಾದೀತು.

೩. ಅಜ್ಞಾತವಾದ ಪದಾರ್ಥದಿಂದ ವಿಜ್ಞಾತವಾದ ಪದಾರ್ಥವು ಹುಟ್ಟುವುದು ಅನುಭವಸಿದ್ಧವಾಗಿದೆ. ವಿಸದೃಶಕಾರ್ಯವು ಹುಟ್ಟುವುದಿಲ್ಲವೆಂದು ಹೇಳಿದರೆ ಇದೂ ಕೂಡ ತಪ್ಪಾದೀತು.

೪. ವ್ಯವಹಾರ ವಿಷಯವಾಗದೇ ಇರುವ ಪದಾರ್ಥದಿಂದ ವ್ಯವಹಾರ ವಿಷಯವಾಗುವ ಪದಾರ್ಥವು ಹುಟ್ಟದೇ ಇರಬೇಕಾದೀತು.

೫. ನಿಮ್ಮ ಪ್ರಕಾರ ವಿಸದೃಶಕಾರ್ಯವು ಹುಟ್ಟಲು ಸಾಧ್ಯವಿಲ್ಲದ್ದರಿಂದ ಅಸಂಯೋಗಿಯಾದ ಇಂದ್ರಿಯದಿಂದ ಸಂಯೋಗಿಯಾದ ಇಂದ್ರಿಯವು ಹುಟ್ಟದೇ ಇರಬೇಕಾದೀತು. ಆದರೆ ಅಸಂಯೋಗಿ ಇಂದ್ರಿಯದಿಂದ ಸಂಯೋಗಿ ಇಂದ್ರಿಯವು ಹುಟ್ಟುವುದು ಅನುಭವಸಿದ್ಧವಾಗಿದೆ. ಇದನ್ನು ಕೂಡಿಸುವುದಕ್ಕಾಗಿ ವಿಸದೃಶಕಾರ್ಯೋತ್ಪತ್ತಿಯನ್ನು ಅಂಗೀಕಾರ ಮಾಡಬೇಕು. ಆಗ ನಿಮ್ಮ ಕ್ಷಣಿಕತ್ವವಾದವು ಭಂಗವಾಗುತ್ತದೆ.

೬. ಆತ್ಮವು ಪ್ರತಿಕ್ಷಣವು ಹುಟ್ಟುತ್ತಿರುವುದರಿಂದ ಅಜ್ಞಾನಿಯಾದ ಆತ್ಮನಿಂದ ಜ್ಞಾನಿಯಾದ ಆತ್ಮನು ಹುಟ್ಟುತ್ತಾನೆಂದು ಬೌದ್ಧರು ಹೇಳಬೇಕು. ಈಗ ವಿಸದೃಶಕಾರ್ಯವು ಹುಟ್ಟುವುದಿಲ್ಲವೆಂದು ಹೇಳಿದರೆ ಅಜ್ಞಾನಿಯಾದ ಆತ್ಮನಿಂದ ಜ್ಞಾನಿಯಾದ ಆತ್ಮನು ಹುಟ್ಟದೇ ಇರಬೇಕಾದೀತು.

೭. ಆತ್ಮಾ ಎಂಬ ಪದಾರ್ಥವೇ ಇಲ್ಲ. ಆದ್ದರಿಂದ ಹುಟ್ಟುವುದು ಕೇವಲ ಜ್ಞಾನ. ಆತ್ಮನು ಹುಟ್ಟುವುದೇ ಇಲ್ಲ ಎಂದು ಬೌದ್ಧರು ಹೇಳಿದರೆ, ಇದೂ ಕೂಡ ತಪ್ಪು. ಹಾಗಾದರೆ ಘಟವನ್ನು ವಿಷಯೀಕರಿಸುವ ಜ್ಞಾನವು ಹುಟ್ಟದೇ ಇರಬೇಕಾದೀತು ಎಂದು ಆಪಾದನೆ ಮಾಡುತ್ತೇವೆ.

ಕಾರಣವಿದ್ದರೆ ಕಾರ್ಯವು ಆಗಲೇ ಬೇಕು. ಆದ್ದರಿಂದ ಮೇಲಿನ ಆಕ್ಷೇಪಗಳು ಅಯುಕ್ತವಾಗಿವೆ ಎಂದು ಪ್ರಶ್ನಿಸಬಾರದು. ಕಾರಣ ಇದ್ದರೆ ಕಾರ್ಯ ಆಗುತ್ತದೆಂದಷ್ಟೇ ನೀವು ಹೇಳುತ್ತೀರಿ. ಅಂದಮಾತ್ರಕ್ಕೆ ವಿಶೇಷಕಾರ್ಯವು ಆಗಬೇಕೆಂದೇನೂ ನಿಯಮವಿಲ್ಲ. ಏಕೆಂದರೆ ನೀವು ಸದೃಶವಾದ ಕಾರಣದಿಂದ ಸದೃಶವಾದ ಕಾರ್ಯವೇ ಹುಟ್ಟುತ್ತದೆಂದು ನಿಯಮವನ್ನು ಒಪ್ಪಿದ್ದೀರಿ. ಈ ನಿಯಮವನ್ನು ಒಪ್ಪದಿದ್ದರೆ ಘಟದಿಂದಲೂ ಕೂಡ ಪಟ ಹುಟ್ಟಬೇಕಾದೀತು ಎಂಬ ಅತಿಪ್ರಸಂಗ ಬರುತ್ತದೆ. ಫಲವನ್ನು ನೀಡದೇ ಇರುವ ಅದೃಷ್ಟದಿಂದ ಫಲವನ್ನು ಕೊಡುವ ಅದೃಷ್ಟವು ಹುಟ್ಟುವುದಿಲ್ಲ. ಈ ನಿಯಮವನ್ನು ಒಪ್ಪದಿದ್ದರೆ ಫಲವನ್ನು ಕೊಡದೇ ಇರುವ ಅದೃಷ್ಟದಿಂದ ಫಲವನ್ನುಕೊಡುವ ಅದೃಷ್ಟವೂ ಕೂಡ ಹುಟ್ಟಬೇಕಾಗುತ್ತದೆ. ಆದ್ದರಿಂದ ಅನಿವಾರ್ಯವಾಗಿ ಸದೃಶವಾದ ಕಾರಣದಿಂದ ಸದೃಶವಾದ ಕಾರ್ಯವೇ ಹುಟ್ಟುತ್ತದೆ ಎಂದು ನೀವು ಒಪ್ಪಬೇಕು. ಆಗ ವಿಸದೃಶವಾದ ಕಾರ್ಯವು ಹುಟ್ಟುವುದಿಲ್ಲ ಎಂದು ನೀವು ಒಪ್ಪಿದಂತಾಗುತ್ತದೆ. ವಿಸದೃಶಕಾರ್ಯವು ಹುಟ್ಟುವುದಿಲ್ಲವೆಂದು ಹೇಳಿದರೆ ಮೇಲಿನ ಎಲ್ಲಾ ಅನುಪಪತ್ತಿಗಳು ಬಂದೇ ಬರುತ್ತವೆ. ಅನುಪಪತ್ತಿಯನ್ನು ಪರಿಹರಿಸಿಕೊಳ್ಳಲು ವಿಸದೃಶ-ಕಾರ್ಯೋತ್ಪತ್ತಿಯನ್ನು ಒಪ್ಪಿದರೆ ಕ್ಷಣಿಕತ್ವವು ಭಂಗವಾಗುತ್ತದೆ. ಆಗ ವಿಜ್ಞಾನವಾದಿಗಳ ವಾದವು ಅಯುಕ್ತವಾಗಿದೆ.

## ತತ್ವಪ್ರಕಾಶಿಕಾ

### ಹಿಂದಿನ ಸೂತ್ರದ ಮೇಲೆ ಅಧಿಕಾಕ್ಷೇಪ

**तत्वप्रकाशिका – उक्तमाक्षिप्य समादधत्सूत्रमुपन्यस्याक्षेपांशं तावद् व्याचष्टे ।। इतरेति ।।**

ಪರಮಾಣುಸಮುದಾಯವು ಘಟಾದಿಕಾರ್ಯರೂಪವಾಗುವುದಿಲ್ಲ ಎಂಬುದನ್ನು ಆಕ್ಷೇಪ ಮಾಡಿ ಸಮಾಧಾನ ನೀಡುವ ಸೂತ್ರವನ್ನು 'ಇತರ' ಇತ್ಯಾದಿಯಾಗಿ ಪಠಿಸಿ ಆಕ್ಷೇಪಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

### ವಿರಳ ಪರಮಾಣುಗಳಿಂದಲೇ ಸಮುದಾಯವಾಗಲಿ

**तत्वप्रकाशिका – यदुक्तं समुदायस्य विरलानेकहेतुकत्वे सदातनत्वं स्यादिति तदङ्गीक्रियत एव। न चैवं प्रलयानुपपत्तिः । सदातनत्वेऽपि समुदायस्य वित्तिव्यवहाराभावेन प्रलयोपपत्तेः ।**

ಸಮುದಾಯವು ವಿರಳವಾದ ಅನೇಕ ಪರಮಾಣುಗಳಿಂದ ಉಂಟಾಗಿದೆ ಎಂದು ಹೇಳಿದರೆ ನಿತ್ಯವಾಗಬೇಕಾದೀತು ಎಂದು ಆಪತ್ತಿ ಮಾಡಿದರೆ ಬೌದ್ಧರು ಅದನ್ನು ಇಷ್ಟಪತ್ತಿ ಎನ್ನುತ್ತಾರೆ. ಅಂದಮಾತ್ರಕ್ಕೆ ಪ್ರಳಯವು ಅನುಪಪನ್ನವಾಗುವುದಿಲ್ಲ. ಕಾರ್ಯವು ನಿತ್ಯವಾದರೂ ಕೂಡ ಸಮುದಾಯವು ಅಪೇಕ್ಷಾಬುದ್ಧಿ ಹಾಗೂ ವ್ಯವಹಾರಗಳಿಲ್ಲದಿರುವುದರಿಂದ ಪ್ರಳಯವು ಉಪಪನ್ನವಾಗುತ್ತದೆ.

## ಭಾವದೀಪ

**भावदीपः– ।।इतरेतरप्रत्ययत्वादिति चेन्नोत्पत्तिमात्रनिमित्तत्वात् ।।१९।। तदङ्गीक्रियत एवेति।।** अनेकत्वसंख्याया एव समुदायत्वात्तस्य च विरलेष्वपि परमाणुषु सत्त्वेन सदातनत्वादिति भावः।। **वित्तीति।।** ज्ञप्तिव्यवहारयोरभावेनेत्यर्थः।।

'ತದಂಗೀಕ್ರಿಯತೇ ಏವ' ಎಂಬುದರ ಅಭಿಪ್ರಾಯ ಹೀಗಿದೆ - ಅನೇಕತ್ವಸಂಖ್ಯೆಯೇ ಸಮುದಾಯವಾಗುತ್ತದೆ. ಇದು ವಿರಳವಾದ ಪರಮಾಣುಗಳಲ್ಲೂ ಕೂಡ ಇರುತ್ತದೆ. ಆದ್ದರಿಂದ ಸಮುದಾಯವು ನಿತ್ಯ ಎಂದು ಆಗಬೇಕಾದೀತು.

'ನಿತ್ಯವ್ಯವಹಾರಾಭಾವೇನ' ಎಂಬಲ್ಲಿರುವ 'ವಿತ್ತಿ' ಎಂಬ ಶಬ್ದಕ್ಕೆ 'ಜ್ಞಪ್ತಿ' ಎಂದರ್ಥ. ಪ್ರತೀತಿ ಹಾಗೂ ವ್ಯವಹಾರಗಳು ಇದ್ದಾಗ ಮಾತ್ರ ಸೃಷ್ಟಿಯಾಗುತ್ತದೆ. ಪ್ರಳಯಕಾಲದಲ್ಲಿ ಎರಡೂ ಇಲ್ಲದ ಕಾರಣ ಪ್ರಳಯವಾಗುತ್ತದೆ ಎಂದು ತಿಳಿಯಬೇಕು.

ವಿವರಣೆ - ಸಮುದಾಯವೆಂದರೆ ಪರಮಾಣುಗಳ ಸಂಯೋಗವಲ್ಲ. ಹಾಗೆ ನಾವು ಅಂಗೀಕರಿಸಿಲ್ಲ. ದ್ರವ್ಯಾಂತರವೂ ಅಲ್ಲ. ಹಾಗಾದಲ್ಲಿ ಅದೇ ಅವಯವಿಯಾಗಬೇಕಾಗುತ್ತದೆ. ಕಿಂತು ಅನೇಕತ್ವಸಂಖ್ಯಾರೂಪವನ್ನೇ ಸಮುದಾಯ ಎನ್ನುತ್ತೇವೆ. ವಿರಳವಾದ ಪರಮಾಣುಗಳಲ್ಲೂ ಇದು ನಿರಂತರ ಇರುತ್ತದೆ. ಅನೇಕತ್ವಸಂಖ್ಯೆಯು ಅಪೇಕ್ಷಾಬುದ್ಧಿಯಿಂದ ವ್ಯಂಗ್ಯವಾದ್ದರಿಂದ ಅದರ ಪ್ರತೀತಿ ಮತ್ತು ವ್ಯವಹಾರಗಳು ಇದ್ದಾಗ ಮಾತ್ರ ಸೃಷ್ಟಿ. ಇಲ್ಲದಿದ್ದರೆ ಪ್ರಳಯ ಎಂಬುದು ಪೂರ್ವಪಕ್ಷಕಾರರ ಸಮರ್ಥನೆ.

## ಸಮುದಾಯವಾದಿಗಳ ಸೃಷ್ಟಿಪ್ರಳಯಗಳ ಕಲ್ಪನೆ

**तत्वप्रकाशिका – न च विद्यमानत्वे व्यवहारभावोऽपि कुत इति वाच्यम्। व्यवहारादेरिदं चेदं चेति परमाणुपरस्परापेक्षानिबन्धनत्वात् । परस्परापेक्षा च परमाणूनां सामीप्यापेक्षा । न चास्ति प्रलये तत्सामीप्यमतो नोक्तदोष इति भावः।**

ಸಮುದಾಯರೂಪವಾದ ಕಾರ್ಯವು ಇದ್ದರೂ ಕೂಡ ವ್ಯವಹಾರವು ಏಕೆ ಕೂಡುವುದಿಲ್ಲವೆಂದು ಪ್ರಶ್ನಿಸಬಾರದು ? ವ್ಯವಹಾರಾದಿಗಳು ಯಾವಾಗ ಕೂಡುತ್ತದೆ ಎಂದರೆ 'ಇದು' ಮತ್ತು 'ಇದು' ಎಂದು ಪರಮಾಣುಗಳಿಗೆ ಪರಸ್ಪರ ಅಪೇಕ್ಷಾಬುದ್ಧಿಯು ಉಂಟಾದಾಗ ಮಾತ್ರ ಪರಸ್ಪರ ಅಪೇಕ್ಷಾಬುದ್ಧಿಯಾದರೂ ಪರಮಾಣುಗಳ ಸಾಮೀಪ್ಯವಿದ್ದಾಗ ಯುಕ್ತವಾಗುತ್ತದೆ. ಪ್ರಳಯಕಾಲದಲ್ಲಿ ಪರಮಾಣುಗಳಿಗೆ ಸಾಮೀಪ್ಯವಿಲ್ಲದ್ದರಿಂದ ವ್ಯವಹಾರ ಮೊದಲಾದವುಗಳು ಯುಕ್ತವಾಗುವುದಿಲ್ಲ. ಈ ಆಕ್ಷೇಪಕ್ಕೆ ಪರಿಹಾರವನ್ನು 'ನ' ಇತ್ಯಾದಿಯಾದ ಭಾಷ್ಯದಲ್ಲಿ ಹೇಳುತ್ತಿದ್ದಾರೆ.

**भावदीपः – व्यवहारादेरिति ।।** अनेकत्वसंख्याया अपेक्षाबुद्धिव्यङ्ग्यत्वेन तत्प्रतीतिव्यवहारयोश्च 'इदं चेदं च' इत्यपेक्षाबुद्ध्यधीनत्वादित्यर्थः। इतरसहितमितरत् इतरेतरदितीतरेतर, इतिसौत्रविन्यासलब्धमाह – **सामीप्यापेक्षेति ।।** तच्च सामीप्यहेतुकमित्यनुभाष्योक्तेरिति भावः।

'ವ್ಯವಹಾರಾದೇಃ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಅನೇಕತ್ವಸಂಖ್ಯೆಯು ಅಪೇಕ್ಷಾಬುದ್ಧಿಯಿಂದ ಪ್ರಕಟವಾಗುತ್ತದೆ. ಅದರ ಪ್ರತೀತಿ ಹಾಗೂ ವ್ಯವಹಾರಗಳು 'ಇದಂ ಚ ಇದಂ ಚ' 'ಇದರ ಜೊತೆ ಇದು' ಎಂಬ ಅಪೇಕ್ಷಾಬುದ್ಧಿಯಿಂದ ಹುಟ್ಟುತ್ತವೆ ಎಂದು.

ಒಂದರಿಂದ ಮತ್ತೊಂದು ಯುಕ್ತವಾಗಿದೆ ಎಂಬುದಾಗಿ 'ಇತರ ಸಹಿತಂ ಇತರತ್' ಇತರೇತರದಿತಿ ಇತರೇತರಃ' ಎಂಬುದಾಗಿ ಸೂತ್ರದಲ್ಲಿರುವ ಶಬ್ದವಿನ್ಯಾಸದಿಂದ ದೊರೆಯುವ ಅರ್ಥವನ್ನು 'ಸಾಮೀಪ್ಯಾಪೇಕ್ಷಾ' ಎಂಬುದಾಗಿ ಹೇಳಿರುತ್ತಾರೆ. ಇದಕ್ಕೆ ಅನುವ್ಯಾಖ್ಯಾನದ 'ಸಾಮೀಪ್ಯಹೇತುಕಂ' ಎಂಬುದು ವ್ಯಾಖ್ಯೇಯವಾಗಿದೆ.

### ಎಲ್ಲವೂ ಕ್ಷಣಿಕವಾದರೆ ಬರುವ ದೋಷಗಳು

**तत्वप्रकाशिका – परिहारांशं व्याचष्टे – नेति ।। वित्तिव्यवहारयोः कादाचित्कतया समदायस्य सदातनत्वेऽपि न दोष इति न युक्तम् । तथा सति कदाऽपि समुदाये वित्तिव्यवहाराभावापातात् ।**

ಸಮುದಾಯವು ನಿರಂತರ ಇದ್ದರೂ ಅಪೇಕ್ಷಾಬುದ್ಧಿ ಹಾಗೂ ವ್ಯವಹಾರಗಳು ಕೆಲವೊಮ್ಮೆ ಮಾತ್ರ ಇರುತ್ತವೆ. ಆದ್ದರಿಂದ ಸಮುದಾಯವು ನಿತ್ಯವಾದರೂ ಕೂಡ ದೋಷವಿಲ್ಲ ಎಂಬ ಸಮರ್ಥನೆಯು ಅಯುಕ್ತವಾಗಿದೆ. ಹಾಗಾದರೆ ಸಮುದಾಯದಲ್ಲಿ ಅಪೇಕ್ಷಾಬುದ್ಧಿ ಹಾಗೂ ವ್ಯವಹಾರಗಳೇ ಇಲ್ಲದೆ ಇರಬೇಕಾಗುತ್ತದೆ.

**भावदीपः** – नञोऽन्वयायाऽह – **वित्तिव्यवहारयोरिति ।।** असाङ्गत्यनिरासाय मध्ये हेतुमध्याहृत्य तदुपपादकत्वेन भाष्यं व्याख्यातुमाह – **तथा सतीति ।।**

ಸೂತ್ರದಲ್ಲಿರುವ ನಞ್‌ಗೆ ಅನ್ವಯವನ್ನು ತೋರಿಸುವುದಕ್ಕಾಗಿ 'ವಿತ್ತಿವ್ಯವಹಾರಯೋಃ' ಎಂಬ ವಾಕ್ಯವು ಹೊರಟಿದೆ. ಅಸಾಂಗತ್ಯವನ್ನು ನಿರಾಕರಣೆ ಮಾಡುವುದಕ್ಕಾಗಿ ಮಧ್ಯದಲ್ಲಿ ಹೇತುವನ್ನು ಅಧ್ಯಾಹಾರ ಮಾಡಿಕೊಂಡು ಅದರ ಉಪಪಾದನೆಗಾಗಿ ಭಾಷ್ಯವನ್ನು ವ್ಯಾಖ್ಯಾನಿಸಲು 'ತಥಾ ಸತಿ' ಎಂಬ ಟೀಕಾವಾಕ್ಯವು ಹೊರಟಿದೆ.

ವಿವರಣೆ - ಮಿಲಿತವಾದ ಪರಮಾಣುಗಳು ಅನೇಕತ್ವಸಂಖ್ಯಾವಿಶಿಷ್ಟವಾದ ಪರಮಾಣುಗಳನ್ನು ಹುಟ್ಟಿಸುತ್ತವೆ. ಇದನ್ನು ಪುರುಷನು ನೋಡುತ್ತಾನೆ ಎಂದು ಸಮುದಾಯವಾದಿಗಳು ಹೇಳುತ್ತಿದ್ದಾರೆ. ಆದರೆ 'ಜ್ಞಾನವೇ ಪುರುಷ' ಎಂಬುದು ಸೌಗತರ ಮತ. ಹೀಗಿರುವಾಗ ಪುರುಷನಿಂದ ತಿಳಿಯಲ್ಪಡುತ್ತದೆ ಎಂಬುದು ಹೇಗೆ ಸರಿ?

ಉತ್ತರ ಹೀಗಿದೆ - ಜ್ಞಾನವು ಎರಡುವಿಧ - ೧. ಪ್ರವೃತ್ತಿಜ್ಞಾನ. ೨. ಆಲಯಜ್ಞಾನ. ಆಲಯಜ್ಞಾನವೇ ಪುರುಷ ಎಂದು ಕರೆಸಿಕೊಳ್ಳುತ್ತದೆ. ಪ್ರವೃತ್ತಿಜ್ಞಾನವು ಸಮುದಾಯ-ರೂಪವಾದ ಜ್ಞಾನ ಎನಿಸಿಕೊಳ್ಳುತ್ತದೆ. ಆದ್ದರಿಂದ 'ಪುರುಷನಿಗೆ ಜ್ಞಾನ ಬರುತ್ತದೆ' ಎಂದು ವ್ಯವಹರಿಸಲು ವಿರೋಧವಿಲ್ಲ.

**तत्वप्रकाशिका – विरला हि परमाणवो मिलितपरमाणूनुत्पादयन्ति । ते च पुरुषेण दृश्यन्ते । ते चैकैकं कार्यमुत्पाद्य नश्यन्त्येव । तेऽप्येवं । तथा च कथं द्रष्टुः परस्परापेक्षा ततो व्यवहारादि कथं घटेत । तर्ह्यन्यत्र दर्शनमन्यत्र परस्परापेक्षाऽन्यत्र व्यवहारादीति युज्यते । पुरुषस्यापि तथात्वमिति भावः ।**

ವಿರಳವಾದ ಪರಮಾಣುಗಳು ಮಿಲಿತವಾದ ಪರಮಾಣುಗಳಿಗೆ ಉತ್ಪಾದಕವಾಗಿವೆ. ಅವುಗಳನ್ನು ಪುರುಷನು ನೋಡುತ್ತಾನೆ. ಮಿಲಿತವಾದ ಪರಮಾಣುಗಳು ಒಂದೊಂದೇ ಘಟಾದಿಕಾರ್ಯಗಳನ್ನು ಹುಟ್ಟಿಸಿ ನಾಶವಾಗುತ್ತವೆ. ಪುರುಷನೂ ಕೂಡ ಘಟಪಟಾದಿ ಕಾರ್ಯಗಳಂತೆ ಕ್ಷಣಿಕನಾಗಿರುವುದರಿಂದ ನಾಶವಾಗುತ್ತಾನೆ. ಆದ್ದರಿಂದ ಹುಟ್ಟಿದ ವಸ್ತುವನ್ನು ನೋಡಿದ ಮೇಲೆ ದ್ರಷ್ಟುವಾದ ಪುರುಷನಿಗೆ ಅಪೇಕ್ಷಾಬುದ್ಧಿ ಬರಲು ಹೇಗೆ ಸಾಧ್ಯ ? ಇದರಿಂದ ವ್ಯವಹಾರಾದಿಗಳು ಕೂಡ ಹೇಗೆ ಕೂಡುತ್ತವೆ ? ಆದ್ದರಿಂದ ನೋಡುವವನು ಒಬ್ಬನು. ಪರಸ್ಪರ ಅಪೇಕ್ಷೆ ಇರುವುದು ಮತ್ತೊಬ್ಬನಿಗೆ; ವ್ಯವಹಾರ ಮಾಡುವವನು ಇನ್ನೊಬ್ಬನು. ವ್ಯವಹಾರಕ್ಕೆ ವಿಷಯವಾದ ವಸ್ತುಗಳು ಮಾತ್ರ ಬೇರೆ. ಇವೆಲ್ಲವೂ ಕೂಡ ಹೇಗೆ ಯುಕ್ತವಾಗುತ್ತವೆ.

**भावदीपः** – उत्पत्तिमात्रनिमित्तत्वादिति सूत्रशेषस्याणूनामेकैककार्योत्पत्तावेव निमित्तत्वात् द्वितीयक्षणवृत्त्यपेक्षाबुद्ध्यादावनिमित्तत्वादित्यर्थमुपेत्यैकं कार्यमित्यादि-भाष्यं व्याचष्टे – **ते चैकैकं कार्यमिति ।। नश्यंत्येवेति ।।** क्षणिकत्वादिति भावः ॥ **तेऽपीति ।।** मिलिताणुभ्यो जाता अन्येऽपीत्यर्थः । द्रष्टुर्दर्शनवतः पुंसः । यत्र दर्शनं तत्रैव दर्शनानन्तरभाविनी इदं चेदं चेति जायमानाऽपेक्षाबुद्धिः । तत्रैव तदनन्तरभाविनौ वित्तिव्यवहारौ च कथं भवेयुरित्यर्थः ॥ **पुरुषस्यापीति ।।** विषयवदात्मनोऽपि क्षणिकत्वमुपेत्य परमाणुदर्शनमपेक्षाबुद्धिः समुदायवित्तिव्यवहारौ इत्येतेषामेक-विषयत्वमिव एकाधिकरणत्वमपि न युक्तमित्यर्थः ॥

'ಉತ್ಪತ್ತಿಮಾತ್ರನಿಮಿತ್ತತ್ವಾತ್' ಎಂಬ ಸೂತ್ರದಲ್ಲಿರುವ ಸಿದ್ಧಾಂತ ಭಾಗಕ್ಕೆ ವ್ಯಾಖ್ಯಾನ ಮಾಡುತ್ತಿದ್ದಾರೆ. ಪರಮಾಣುಗಳು ಒಂದೊಂದೇ ಕಾರ್ಯಗಳ ಉತ್ಪತ್ತಿಯಲ್ಲಿ ನಿಮಿತ್ತವಾಗಿವೆ. ಎರಡನೆಯ ಕ್ಷಣದಲ್ಲಿರುವ ಅಪೇಕ್ಷಾಬುದ್ಧಿಗೆ ನಿಮಿತ್ತವಾಗಿರುವುದಿಲ್ಲ. ಈ ಅಭಿಪ್ರಾಯದಿಂದ ಏಕಂ ಕಾರ್ಯಂ ಉತ್ಪಾದ್ಯ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ತೇ ಚ' ಇತ್ಯಾದಿ ಟೀಕಾ ವಾಕ್ಯವು ಹೊರಟಿದೆ. 'ನಶ್ಯಂತ್ಯೇವ' ಎಂದರೆ ಕ್ಷಣಿಕವಾಗಿರುವುದರಿಂದ ಸರ್ವಥಾ ನಾಶವಾಗುತ್ತವೆ ಎಂದರ್ಥ. 'ತೇಽಪಿ' ಎಂಬುದಕ್ಕೆ ಮಿಲಿತವಾದ ಪರಮಾಣುಗಳಿಂದ ಹುಟ್ಟಿದ ಉಳಿದ ಪರಮಾಣುಗಳೂ ಕೂಡ ಎಂದರ್ಥ. ದ್ರಷ್ಟುಃ ಎಂಬುದಕ್ಕೆ ನೋಡುತ್ತಿರುವ ಪುರುಷನಿಗೆ ಎಂದರ್ಥ. ಎಲ್ಲಿ ಜ್ಞಾನವಿರುತ್ತದೋ, ಅಲ್ಲಿಯೇ ತದನಂತರ ಬರುವ 'ಇದಂ ಚ ಇದಂ ಚ' ಎಂಬುದಾಗಿ ಅಪೇಕ್ಷಾಬುದ್ಧಿಯು ಬರಬೇಕು. ಅಲ್ಲೇ ತದನಂತರ ಹುಟ್ಟುವ ಜ್ಞಾನ ಹಾಗೂ ವ್ಯವಹಾರಗಳೂ ಕೂಡ ಇರಬೇಕು. ಎಲ್ಲವೂ ಕ್ಷಣಿಕವಾದರೆ ಇದೆಲ್ಲನೆಲ್ಲಾ ಕೂಡಿಸುವುದು ಹೇಗೆ ಎಂದರ್ಥ ?

'ಪುರುಷಾ್ಯಪಿ ತಥಾತ್ವಮ್' ಎಂಬುದರ ಅಭಿಪ್ರಾಯ ಹೀಗಿದೆ - ವಿಷಯ ಹೇಗೆ ಕ್ಷಣಿಕವೋ, ಅದರಂತೆ ಪುರುಷನೂ ಕೂಡ ಕ್ಷಣಿಕನಾಗಿದ್ದಾನೆ. ಆದ್ದರಿಂದ ಪರಮಾಣುದರ್ಶನ, ಅಪೇಕ್ಷಾಬುದ್ಧಿ, ಸಮುದಾಯಜ್ಞಾನ, ಸಮುದಾಯ ವ್ಯವಹಾರ ಇವೆಲ್ಲದಕ್ಕೂ ಏಕವಿಷಯತ್ವವು ಹೇಗೆ ಕೂಡುವುದಿಲ್ಲವೋ, ಅದರಂತೆ ಒಂದೇ ಅಧಿಕರಣವೂ ಕೂಡ ಕೂಡುವುದಿಲ್ಲ ಎಂದರ್ಥ.

## ಕ್ಷಣಿಕತ್ವವನ್ನು ಒಪ್ಪಿದಾಗ ಬರುವ ಬಾಧಕ

**तत्वप्रकाशिका – अथ विरलपरमाणुभ्यो जाता मिलितपरमाणवः स्थायिनः अतो युक्तो व्यवहार इत्यत आह – कारणे सतीति ।। यदि परमाणवः स्थायिनस्तर्हि ते प्रतिक्षणं कार्यमुत्पादयेयुः । कारणे सति कार्यं भवत्येवेति । तन्नियमात् तथा चाल्पतरकालेऽप्यकस्माद् घटात्कुलालशालापूर्तिप्रसङ्ग इति भावः ।**

ವಿರಲಪರಮಾಣುಗಳಿಂದ ಸ್ಥಾಯಿಯಾದ ಮಿಲಿತಪರಮಾಣುಗಳು ಉತ್ಪನ್ನವಾಗಿವೆ. ಆದ್ದರಿಂದ ವ್ಯವಹಾರ ಮಾಡಬಹುದಲ್ಲವೆ ? ಎಂಬ ಪ್ರಶ್ನೆಗೆ 'ಕಾರಣೇ ಸತಿ' ಇತ್ಯಾದಿಯಾಗಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಒಂದುವೇಳೆ ಪರಮಾಣುಗಳು ಸ್ಥಾಯಿಯಾದರೆ ಆಗ ಅವುಗಳು ಪ್ರತಿಕ್ಷಣವು ಕಾರ್ಯವನ್ನು ಹುಟ್ಟಿಸುತ್ತಲೇ ಇರಬೇಕಾಗುತ್ತದೆ. ಕಾರಣವಿದ್ದಾಗ ಕಾರ್ಯವು ಆಗಲೇಬೇಕೆಂಬ ನಿಯಮವಿದೆ. ಆಗ ಅಲ್ಪಕಾಲದಲ್ಲಿ ಆಕಸ್ಮಿಕವಾಗಿ ಕುಲಾಲನ ಶಾಲೆಯು ಘಟಗಳಿಂದ ಪೂರ್ಣವಾಗುವ ಪರಿಸ್ಥಿತಿ ಬರುತ್ತದೆ.

## ಸ್ಥಾಯಿತ್ವವನ್ನು ಒಪ್ಪಿದರೆ ಆಗುವ ಹಾನಿ ಏನು ?

**तत्वप्रकाशिका – यद्यप्यत्र क्षणिकत्वहानिरेव वाच्या तथापि सैव तदभ्युपगमकारणप्रदर्शनेनोक्ता वेदितव्या ।।**

ವಾಸ್ತವಿಕವಾಗಿ ಇಲ್ಲಿ 'ಕ್ಷಣಿಕತ್ವವೇ ಹಾನಿಯಾಗುತ್ತದೆ' ಎಂದು ಹೇಳಬೇಕು. ಆದರೂ ಸ್ಥಾಯಿತ್ವವನ್ನು ಒಪ್ಪಿದಾಗ ಪ್ರತಿಕ್ಷಣವು ಕಾರ್ಯದ ಉತ್ಪತ್ತಿ ಇಲ್ಲದಿರುವುದರಿಂದ ಆ ನಿಯಮಕ್ಕೆ ಭಂಗ ಬಂದು ಕ್ಷಣಿಕತ್ವವೇ ನಾಶವಾಗುತ್ತದೆಂಬುದನ್ನು ತೋರಿಸಲು ಈ ಕ್ರಮವನ್ನು ಅನುಸರಿಸಲಾಗಿದೆ.

**भावदीपः – तदभ्युपगम इति ।।** क्षणिकत्वस्याभ्युपगमे कारणे सति कार्यं भवत्येव' इति नियमरूपकारणोपदर्शनेन क्षणिकत्वहानिरेवोक्तेत्यर्थः ।। १९ ।।

ಕ್ಷಣಿಕತ್ವವನ್ನು ಅಂಗೀಕಾರ ಮಾಡಿದರೆ, ಕಾರಣವಿದ್ದರೆ ಕಾರ್ಯವಾಗಲೇ ಬೇಕು ಎಂಬ ನಿಯಮವನ್ನು ಒಪ್ಪಿರುವುದರಿಂದ ಕ್ಷಣಿಕತ್ವವು ಹಾನಿಯಾಗುತ್ತದೆ. ಕಾರಣವಿರುವುದರಿಂದ ಕ್ಷಣಿಕತ್ವವು ನಾಶವಾಗುತ್ತದೆ ಎಂದಭಿಪ್ರಾಯ.

## ಭಾವದೀಪದ ವೈಶಿಷ್ಟ್ಯ

* 'ಇತರೇತರ ಪ್ರತ್ಯಯತ್ವಾತ್' ಎಂಬುದಕ್ಕೆ 'ಇತರಸಹಿತಂ ಇತರತ್' ಇತರೇತರದಿತಿ ಇತರೇತರ' 'ಇತರೇತರಮಿತಿ ಪ್ರತ್ಯಯ ಇತರೇತರ ಪ್ರತ್ಯಯಃ, ಇತರೇತರಪ್ರತ್ಯಯಸ್ಯ ಭಾವಃ ಇತರತೇತರ ಪ್ರತ್ಯಯತ್ವಂ ತಸ್ಮಾತ್ ಇತರೇತರಪ್ರತ್ಯಯತ್ವಾತ್' ಎಂಬುದಾಗಿ ನಿಷ್ಪತ್ತಿಯನ್ನು ತೋರಿಸಿದ್ದಾರೆ.
* ಸೂತ್ರದಲ್ಲಿರುವ 'ನಞ್'ಗೆ ಹೇಗೆ ಅನ್ವಯ ಮಾಡಬೇಕೆಂಬುದನ್ನು ಸ್ಪಷ್ಟಪಡಿಸಿದ್ದಾರೆ.
* 'ಏಕಂ ಕಾರ್ಯಮುತ್ಪಾದ್ಯ' ಎಂಬ ಭಾಷ್ಯದಲ್ಲಿರುವ ವಿಷಯವು ಅಸಂಗತವೆಂದು ಕಾಣಿಸುತ್ತದೆ. ಅದರ ಪರಿಹಾರಕ್ಕಾಗಿ ಟೀಕೆಯಲ್ಲಿ 'ತಥಾಸತಿ' ಎಂಬ ಹೊರಟಿದೆಯೆಂದು ವ್ಯಾಖ್ಯಾನ ಮಾಡಿರುತ್ತಾರೆ.
* ಎಲ್ಲವನ್ನೂ ಕ್ಷಣಿಕವೆಂದು ಹೇಳಿದರೆ ಪರಮಾಣು ಜ್ಞಾನ, ಅಪೇಕ್ಷಾಬುದ್ಧಿ, ಸಮುದಾಯಜ್ಞಾನ ಹಾಗೂ ಅದರ ವ್ಯವಹಾರ ಇವುಗಳಿಗೆ ಏಕವಿಷಯತ್ವವೇ ಕೂಡುವುದಿಲ್ಲ. ಅದರಂತೆ ಒಂದೇ ಅಧಿಕರಣವೂ ಕೂಡ ಕೂಡುವುದಿಲ್ಲ ಎಂಬ ದೋಷವನ್ನು ಬೌದ್ಧರಿಗೆ ಹೇಳಿರುತ್ತಾರೆ.

## ಬ್ರಹ್ಮಸೂತ್ರ

### 'ಉತ್ತರೋತ್ಪಾದೇ ಚ ಪೂರ್ವನಿರೋಧಾತ್' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – उत्तरोत्पादे च पूर्वनिरोधात् ।।**

ಮುಂದಿನ ಅಣುಸಮುದಾಯವು ಹುಟ್ಟುವಾಗ, ಹಿಂದಿನ ಅಣುಸಮುದಾಯವು ನಾಶವಾಗಿರುತ್ತದೆ. ಹೀಗೆ ಒಪ್ಪುವ ಬೌದ್ಧರಿಗೆ ವಿರಳವಾದ ಅಣುಗಳಿಂದ ಸಮುದಿತವಾದ ಅಣುಗಳು ಹುಟ್ಟುತ್ತವೆ ಎಂದು ಹೇಳಲು ಹೇಗೆ ಸಾಧ್ಯ ?

ಅರ್ಥ -- 'ಚ' ಶಬ್ದವು ಅವಧಾರಣಾರ್ಥದಲ್ಲಿ ಇರುತ್ತದೆ. ಅಥವಾ ಸಮುಚ್ಚಯಾರ್ಥದಲ್ಲಿಯೂ ವಿವಕ್ಷಿಸಬಹುದು. 'ನ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಸಾಮರ್ಥ್ಯಾತ್ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಆದ್ದರಿಂದ ಕ್ಷಣಿಕಮತದಲ್ಲಷ್ಟೇ ಸಮುದಾಯವ್ಯವಹಾರವು ಅನುಪಪನ್ನವಾಗಲಿ ಎಂಬುದು ಆಕ್ಷೇಪವಲ್ಲ. ಹೊರತಾಗಿ ವಿಶೇಷಕಾರ್ಯೋತ್ಪತ್ತಿಯೂ ಕೂಡ ಅಯುಕ್ತವಾಗಿದೆ. ಏಕೆಂದರೆ ಉತ್ತರೋತ್ಪಾದೇ ಚ = ಕಾರಣಕ್ಕೆ ಸದೃಶಕಾರ್ಯಜನನದಲ್ಲಿ ಶಕ್ತಿಯಿರುವುದರಿಂದ ಕಾರಣವು ಮೊದಲು ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸಿ, ಅನಂತರ ವಿಸದೃಶಕಾರ್ಯವನ್ನು ಹುಟ್ಟಿಸಲಿ ಏನು ದೋಷ ? ಎಂದು ಆಕ್ಷೇಪ ಮಾಡಿದರೆ, ಉತ್ತರೋತ್ಪಾದೇ ಚ = ತನಗೆ ಸದೃಶವಾದ ಕಾರ್ಯವನ್ನು ಉತ್ಪಾದನೆ ಮಾಡಿದ ಮೇಲೆ, ಪೂರ್ವನಿರೋಧಾತ್ = ಕಾರಣವು ನಾಶವಾಗುವುದರಿಂದ ವಿಸದೃಶಕಾರ್ಯವನ್ನು ವಿವಕ್ಷಿಸುವುದರಲ್ಲಿ ಸಾಮರ್ಥ್ಯವಿರುವುದಿಲ್ಲ..

## ಬ್ರಹ್ಮಸೂತ್ರಭಾಷ್ಯ

### ಕಾರಣ ಯಾವಾಗ ನಾಶವಾಗುತ್ತದೆ ?

**ब्रह्मसूत्रभाष्यम् – ।। उत्तरोत्पादे च पूर्वनिरोधात् ।।३।।**

**कार्योत्पत्तावेव कारणस्य विनाशाच्च न विशेषकार्योत्पत्तिः ।।३।।**

ಅನುವಾದ - ಕಾರಣವು ಕಾರ್ಯವನ್ನು ಹುಟ್ಟಿಸಿದ ಕೂಡಲೇ ನಾಶವನ್ನು ಹೊಂದುತ್ತದೆ. ಹೀಗಿರುವಾಗ ವಿರಳವಾದ ಅಣುಗಳು ಹುಟ್ಟಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಕಾರಣವು ಸದೃಶವಾದ ಕಾರ್ಯವನ್ನು ಹುಟ್ಟಿಸಲು ಸಮರ್ಥವಾದರೂ ಅನಂತರ ವೈಸಾದೃಶ್ಯವನ್ನು ಹುಟ್ಟಿಸುತ್ತದೆ. ಹೀಗೆ ಹೇಳುವ ಅವರ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ಕಾರ್ಯೋತ್ಪತ್ತಾವೇವ = ಕಾರಣವಾದುದು ಕಾರ್ಯವನ್ನು ಹುಟ್ಟಿಸಿದ ಕೂಡಲೆ, ಕಾರಣಸ್ಯ = ಕಾರಣವನ್ನು, ವಿನಾಶಾಚ್ಚ = ನಾಶವನ್ನು ಹೊಂದುವುದರಿಂದ, ನ ವಿಶೇಷಕಾರ್ಯೋತ್ಪತ್ತಿಃ = ಕಾರ್ಯದಲ್ಲಿ ವಿಶೇಷವನ್ನು ತಂದುಕೊಡುವ ಕಾರಣವಿಲ್ಲವೆಂದು ಹೇಳಿದಂತಾಗುತ್ತದೆ.

## ಸತ್ತರ್ಕದೀಪಾವಳಿ

**सत्तर्कदीपावळिः – एतदेव विवृणोति – उत्तरेत्यादिना ।**

ವಿರಳ ಪರಮಾಣುಗಳಿಂದ ಮಿಲಿತಪರಮಾಣುಗಳು ಹುಟ್ಟಲಾರವು ಎಂಬುದನ್ನು ವಿವರಿಸಲು 'ಉತ್ತರೋತ್ಪಾದೇ ಚ' ಎಂಬ ಸೂತ್ರವು ಹೊರಟಿದೆ.

## ತತ್ವಪ್ರದೀಪ

**तत्वप्रदीपः – उत्तरोत्पादे च पूर्वनिरोधात् । इतश्च न विशेषकार्योत्पत्तिः। यद्विनाशत्वरितं कारणं स्वतः कार्यमात्रोत्पादनपरम् । न च सहकार्यन्तर-संयोगस्यावसरं दद्यात् । येन विशेषकार्यसम्भवः ।**

ಮತ್ತೊಂದು ಕಾರಣದಿಂದಲೂ ವಿಶಿಷ್ಟವಾದ ಕಾರ್ಯ ಹುಟ್ಟಲು ಸಾಧ್ಯವಿಲ್ಲ ಎಂದು ಸಮರ್ಥಿಸುತ್ತಿದ್ದಾರೆ. ಯಾವ ಕಾರಣವು ವಿನಾಶಕ್ಕಾಗಿ ಅವಸರ ಪಡುತ್ತಿದೆಯೋ, ಅದು ಕಾರ್ಯವನ್ನು ಹುಟ್ಟಿಸಿದ ಕೂಡಲೇ ನಾಶವಾಗುತ್ತದೆ. ಮತ್ತೊಂದು ಸಹಕಾರ್ಯ ಸಂಯೋಗಕ್ಕೂ ಕೂಡ ಅವಕಾಶ ಅದಕ್ಕಿರುವುದಿಲ್ಲ. ಹಾಗಾಗಿದ್ದಲ್ಲಿ ಮೊದಲು ಕಾರ್ಯವನ್ನು ಹುಟ್ಟಿಸಿ, ಅನಂತರ ವಿಸದೃಶಕಾರ್ಯವನ್ನು ಹುಟ್ಟಿಸುತ್ತದೆಂದು ಹೇಳಬಹುದಿತ್ತು.

## ತತ್ವಪ್ರಕಾಶಿಕಾ

### ವಿಶೇಷಕಾರ್ಯದ ಉತ್ಪತ್ತಿಯು ಅನುಪಪನ್ನ

**तत्वप्रकाशिका – एवं विरलपरमाणुभ्यो मिलितपरमाणूत्पत्तिमभ्युपेत्य व्यवहाराद्यसम्भवो दर्शितः । अथ विशेषकार्योत्पत्तिमपि निराकुर्वत्सूत्रमुपन्यस्य व्याचष्टे – उत्तरेति।।**

ವಿರಳಪರಮಾಣುಗಳಿಂದ ಮಿಲಿತಪರಮಾಣುಗಳು ಉತ್ಪನ್ನವಾಗುತ್ತವೆಂದು ಅಂಗೀಕಾರ ಮಾಡಿ ವ್ಯವಹಾರ ಮುಂತಾದವುಗಳು ಅಸಂಭಾವಿತವಾಗುತ್ತವೆಂದು ತೋರಿಸಿದ್ದಾಯಿತು. ಈಗ ವಿಶೇಷಕಾರ್ಯದ ಉತ್ಪತ್ತಿಯನ್ನು ಕೂಡ ನಿರಾಕರಣೆ ಮಾಡುವ ಸೂತ್ರವನ್ನು 'ಉತ್ತರೋತ್ಪಾದೇ ಚ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಭಾವದೀಪ

**भावदीपः –।। उत्तरोत्पादे च पूर्वनिरोधात् ।।२०।। अथेति।।** अभ्युपगमाभावरूपार्थान्तरे अथशब्दः । विरलेभ्यो मिलिताणुरूपविशेष-कार्योत्पत्तिमपीत्यर्थः।

ಟೀಕೆಯಲ್ಲಿರುವ 'ಅಥ' ಶಬ್ದಕ್ಕೆ ಅಂಗೀಕಾರ ಮಾಡದೇ ಇರುವ ಪಕ್ಷಾಂತರದಲ್ಲಿ ಎಂದರ್ಥ. ವಿರಳವಾದ ಪರಮಾಣುಗಳಿಂದ ಮಿಲಿತವಾದ ಪರಮಾಣುಗಳು ಹುಟ್ಟುತ್ತವೆ ಎಂಬ ಕಾರ್ಯೋತ್ಪತ್ತಿಯನ್ನೂ ಕೂಡ ಈಗ ನಿರಾಕರಿಸುತ್ತಿದ್ದಾರೆ ಎಂದು ತಿಳಿಯಬೇಕು.

ವಿವರಣೆ - ಇಲ್ಲಿಯ ತನಕ ವಿಸದೃಶಕಾರ್ಯಜನಕತ್ವವನ್ನು ಅಂಗೀಕರಿಸಲಾಯಿತು. ಈಗ ಇದು ಸಾಧ್ಯವೇ ಇಲ್ಲ ಎಂಬುದನ್ನು ಸಮರ್ಥಿಸುತ್ತಿದ್ದಾರೆ. ಅದಕ್ಕಾಗಿ 'ಅಥ' ಎಂದಿದ್ದಾರೆ.

### ಸದೃಶವಾದದ್ದನ್ನೇ ಕಾರಣವು ಹುಟ್ಟಿಸಲು ಸಾಧ್ಯ

**तत्वप्रकाशिका – न क्षणिकमते विशेषकार्योत्पत्तिश्च युक्ता । कारणस्य स्वसदृशकार्यजनन एव सामर्थ्यात् । अन्यथा घटात्पटोत्पत्तिप्रसङ्गात् ।**

ಕ್ಷಣಿಕಮತದಲ್ಲಿ ವಿಶೇಷಕಾರ್ಯೋತ್ಪತ್ತಿಯೂ ಕೂಡ ಅನುಪಪನ್ನವಾಗಿದೆ. ಏಕೆಂದರೆ ಕಾರಣವು ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸುವುದರಲ್ಲಿ ಸಮರ್ಥವಾಗಿರುತ್ತದೆ. ಒಂದು ವೇಳೆ ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸದಿದ್ದರೆ ಘಟದಿಂದ ಪಟವು ಉತ್ಪತ್ತಿಯಾಗುವ ಪ್ರಸಂಗ ಬರುತ್ತದೆ.

**भावदीपः** – इति चेन्नेति सूत्रान्नञनुवृत्तिं मत्वा भाष्यस्थचकारस्यान्वयमाह – **न क्षणिकमते विशेषकार्योत्पत्तिश्चेति ।।** सौत्रश्चशब्दोऽवधारण इति मत्वा कार्ये त्यादिभाष्यं व्याचष्टे – **कारणस्येति ।।**

'ಇತಿ ಚೇನ್ನ' ಎಂಬುದಾಗಿ ಹಿಂದಿನ ಸೂತ್ರದಲ್ಲಿರುವ 'ನಞ್' ಎಂಬುದನ್ನು ಇಲ್ಲೂ ಕೂಡ ಅನುವೃತ್ತಿಮಾಡಿಕೊಳ್ಳಬೇಕು. ಈ ಅಭಿಪ್ರಾಯದಿಂದ ಭಾಷ್ಯದಲ್ಲಿ ಚಕಾರವಿರುತ್ತದೆ. ಇದಕ್ಕೆ ಅನ್ವಯಕ್ರಮವನ್ನು 'ನ ಕ್ಷಣಿಕಮತೇ' ಎಂಬುದಾಗಿ ತೋರಿಸುತ್ತಿದ್ದಾರೆ. ಸೂತ್ರದಲ್ಲಿರುವ 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಈ ಅಭಿಪ್ರಾಯದಿಂದ 'ಕಾರ್ಯ' ಇತ್ಯಾದಿ ಭಾಷ್ಯವು ಹೊರಟಿದೆ ಎಂಬುದನ್ನು 'ಕಾರಣಸ್ಯ' ಎಂಬ ಟೀಕಾವಾಕ್ಯವು ವ್ಯಾಖ್ಯಾನ ಮಾಡುತ್ತಿದೆ.

ವಿವರಣೆ - 'ಉತ್ತರೋತ್ಪಾದೇ' ಎಂಬ ಸೂತ್ರದಲ್ಲಿರುವ ಪದದ ಅನಂತರ 'ಇತಿ ಚೇನ್ನ' ಎಂಬುದನ್ನು ಅನುವೃತ್ತಿಮಾಡಿಕೊಳ್ಳಬೇಕು. ಮೊದಲು ಸದೃಶಕಾರ್ಯವನ್ನು ಹುಟ್ಟಿಸಿ, ಅನಂತರ ವಿಸದೃಶಕಾರಣವನ್ನು ಹುಟ್ಟಿಸುತ್ತದೆಂದು ಹೇಳಬಾರದು ಎಂಬ ಅರ್ಥವನ್ನು ಈಗ ಸೂತ್ರಕ್ಕೆ ವಿವಕ್ಷಿಸಿದಂತಾಗುತ್ತದೆ. ಮತ್ತು ಸೂತ್ರದಲ್ಲಿರುವ ಚಶಬ್ದವು ಅವಧಾರಣಾರ್ಥದಲ್ಲಿದೆ ಎಂಬುದನ್ನು 'ಕಾರ್ಯೋತ್ಪತ್ತಾವೈವ' ಎಂಬ ಭಾಷ್ಯವು ವಿವರಿಸುತ್ತಿದೆ.

ವಿಸದೃಶವಾದದ್ದು ಹುಟ್ಟಲು ಅದೃಷ್ಟ ಕಾರಣವಲ್ಲ

**तत्वप्रकाशिका – न च वाच्यं सदृशकार्योपजननसमर्थमपि कारणं कार्यमुत्पाद्य पश्चाद्वैसादृश्यमुत्पादयतीति । न चातिप्रसङ्गः । अदृष्टाधीनत्वादिति। सदृशमेकं कार्यमुत्पाद्यैव कारणस्य विनष्टत्वात् । अन्यथा क्षणिकत्वविरोध इति भावः ।।**

ಸದೃಶವಾದ ಕಾರ್ಯವನ್ನು ಹುಟ್ಟಿಸಲು ಸಮರ್ಥವಾಗಿದ್ದರೂ ಕೂಡ ಕಾರಣವು ಸದೃಶಕಾರ್ಯವನ್ನು ಹುಟ್ಟಿಸಿ ಅನಂತರ ಅದೃಷ್ಟದ ಅಧೀನವಾಗಿ ವಿಸದೃಶವಾದ ಕಾರ್ಯವನ್ನು ಹುಟ್ಟಿಸುತ್ತದೆ. ಹೀಗೆ ಹೇಳಿದ್ದರಿಂದ 'ಘಟದಿಂದ ಪಟವು ಹುಟ್ಟಲಿ' ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಏಕೆಂದರೆ ಇದು ಅದೃಷ್ಟದ ಅಧೀನವಾಗಿದೆ.

ಈ ವಾದವು ತಪ್ಪು. ಸದೃಶವಾದ ಒಂದು ಕಾರ್ಯವನ್ನು ಹುಟ್ಟಿಸಿ ಕಾರಣವು ನಾಶವಾಗಿದೆ. ಪುನಃ ಮತ್ತೊಂದು ವಿಸದೃಶಕಾರ್ಯವನ್ನು ಹುಟ್ಟಿಸಲು ಆ ಕಾರಣವೇ ಇರುವುದಿಲ್ಲ. ಒಂದು ವೇಳೆ ಕಾರಣವು ನಾಶವಾಗದಿದ್ದರೆ ಕ್ಷಣಿಕತ್ವಕ್ಕೆ ವಿರೋಧ ಬರುತ್ತದೆ.

**भावदीपः –** उत्पत्ताविति विषयसप्तमीं मत्वा सामर्थ्यादिति हेतुमध्याहृत्य एकां व्याख्यां कृत्वा अधुना उत्पत्तौ सत्यामेवेति सतिसप्तमीं मत्वा यथान्यासं व्याख्यातुं व्यावर्त्यशङ्कामाह – **न च वाच्यमिति**।। सूत्रमप्येवं द्वेधा योज्यम्। अन्यथा असङ्गतिप्रसङ्गादिति भावः।। **अन्यथेति**।। नन्वेवं स्वतः सदृशकार्यजनका अप्यणवोऽदृष्टसहकृता आदावेव विसदृशानुत्पादयेयुरिति चेन्न। तथात्वे स्वतः सदृशजनकोऽपि घटोऽदृष्टसहकृतः कदाचित्पटमपि जनयेदिति तात्पर्यात्।। २० ।।

'ಉತ್ಪತ್ತೌ' ಎಂಬ ಭಾಷ್ಯದಲ್ಲಿರುವ ಸಪ್ತಮೀ ವಿಭಕ್ತಿಯು ವಿಷಯಾರ್ಥಕವಾಗಿದೆ. ಈ ಅಭಿಪ್ರಾಯದಿಂದ 'ಸಾಮರ್ಥ್ಯಾತ್' ಎಂಬ ಹೇತುವನ್ನು ಅಧ್ಯಾಹಾರ ಮಾಡಿಕೊಂಡು ಇಲ್ಲಿಯ ತನಕ ಒಂದು ಬಗೆಯ ವ್ಯಾಖ್ಯಾನವನ್ನು ಮಾಡಿದ್ದಾಯಿತು. ಪ್ರಕೃತ 'ಉತ್ಪತ್ತೌ ಸತ್ಯಾಮೇವ' ಎಂಬುದಾಗಿ ಸತಿಸಪ್ತಮ್ಯರ್ಥದಲ್ಲಿ ವ್ಯಾಖ್ಯಾನ ಮಾಡುವುದಕ್ಕಾಗಿ ಇದರಿಂದ ವ್ಯಾವರ್ತ್ಯವಾಗುವ ಆಶಂಕೆಯನ್ನು 'ನ ಚ ವಾಚ್ಯಮ್' ಎಂಬುದರಿಂದ ವಿವರಿಸುತ್ತಿದ್ದಾರೆ.

ಸೂತ್ರವನ್ನೂ ಕೂಡ ಎರಡು ರೀತಿಯಲ್ಲಿ ಯೋಜನೆ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಅಸಂಗತವಾಗುತ್ತದೆ.

'ಅನ್ಯಥಾ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಸ್ವಾಭಾವಿಕವಾಗಿ ಅಣುಗಳು ಸದೃಶವಾದ ಕಾರ್ಯಕ್ಕೆ ಜನಕವಾಗುತ್ತವೆ. ಆದರೆ ಅದೃಷ್ಟದ ಸಹಕಾರವಿದ್ದಾಗ ಮೊದಲೇ ವಿಸದೃಶಕಾರ್ಯವನ್ನು

ಹುಟ್ಟಿಸುತ್ತವೆ. ಹೀಗೆ ಹೇಳಬಹುದಲ್ಲವೇ? ಎಂಬ ಪ್ರಶ್ನೆಯೂ ಕೂಡ ತಪ್ಪು. ಹಾಗಾದರೆ ಸದೃಶವಾದದ್ದಕ್ಕೆ ಜನಕವಾದ ಘಟವು ಅದೃಷ್ಟಸಹಕಾರದಿಂದ ಕೆಲವೊಮ್ಮೆ ಪಟವನ್ನೂ ಕೂಡ ಹುಟ್ಟಿಸಬೇಕಾದೀತು ಎಂಬ ಅತಿಪ್ರಸಂಗ ಬರುತ್ತದೆ.

ವಿವರಣೆ - ಸದೃಶವಾದ ಒಂದು ಕಾರ್ಯವನ್ನು ಹುಟ್ಟಿಸಿ ಕಾರಣವು ನಾಶವಾಗುತ್ತದೆ. ಹೀಗೆ ಸ್ವಸದೃಶವಾದ ಕಾರ್ಯವನ್ನು ಹುಟ್ಟಿಸಿದ ಮೊದಲನೆಯ ಕಾರಣವು ಕ್ಷಣಿಕವಾದ್ದರಿಂದ ನಾಶವಾಗಿದೆ. ಪುನಃ ಅದೇ ಕಾರ್ಯದಲ್ಲಿ ವಿಸದೃಶಕಾರ್ಯಜನಕತ್ವವು ಕೂಡುವುದಿಲ್ಲ. ಮುಂದಿನ ವೈಸಾದೃಶ್ಯವನ್ನು ಹುಟ್ಟಿಸಲು ಅಧಿಕರಣವಾದ ಮೊದಲಿನ ಕಾರ್ಯವೂ ಕೂಡ ಕ್ಷಣಿಕವಾದ್ದರಿಂದ ಅದೂ ನಾಶವಾಗಿರುವುದರಿಂದ ಅದರಲ್ಲೂ ಕೂಡ ವೈಸಾದೃಶ್ಯಜನಕತ್ವವು ಅನುಪಪನ್ನವಾಗುತ್ತದೆ. ಹೀಗೆ ಸೂತ್ರಾರ್ಥವನ್ನು ಸೂಚನೆ ಮಾಡಿದಂತಾಯಿತು. (ಗುರ್ವರ್ಥದೀಪಿಕಾ)

## ಭಾವದೀಪದ ವೈಶಿಷ್ಟ್ಯ

* ಹಿಂದಿನ ಸೂತ್ರದಿಂದ 'ಇತಿ ಚೇನ್ನ' ಎಂಬುದನ್ನು 'ಉತ್ತರೋತ್ಪಾದೇಚ' ಎಂಬಲ್ಲೂ ಕೂಡ ಅನುವೃತ್ತಿ ಮಾಡಬೇಕೆಂದು ತಿಳಿಸಿದ್ದಾರೆ.
* 'ಉತ್ತರೋತ್ಪಾದೇ' ಎಂಬುದು ವಿಷಯಸಪ್ತಮಿಯಾಗಿದೆ ಮತ್ತು ಸತಿಸಪ್ತಮಿಯಾಗಿದೆ ಎಂದು ಎರಡು ರೀತಿಯಲ್ಲಿ ವ್ಯಾಖ್ಯಾನ ಮಾಡಲಾಗಿದೆ.
* ಕಾರಣಗಳು ಮೊದಲು ಸದೃಶವಾದ ಕಾರ್ಯಗಳನ್ನು ಹುಟ್ಟಿಸಿ, ಅನಂತರ ವಿಸದೃಶವಾದ ಕಾರ್ಯಗಳನ್ನು ಹುಟ್ಟಿಸುತ್ತವೆಂದು ಹೇಳುವುದಿಲ್ಲ. ಒಂದೇ ಬಾರಿ ವಿಸದೃಶಕಾರ್ಯವನ್ನು ಹುಟ್ಟಿಸುತ್ತದೆ ಎಂದು ಹೇಳಬಹುದಲ್ಲವೇ? ಎಂಬ ಅಧಿಕಾಕ್ಷೇಪಕ್ಕೆ ತಂತುಗಳೂ ಕೂಡ ಪಟವನ್ನು ಹುಟ್ಟಿಸಬೇಕಾದೀತು ಎಂಬ ಅತಿಪ್ರಸಂಗವನ್ನು ತಿಳಿಸಿರುತ್ತಾರೆ.

## ಬ್ರಹ್ಮಸೂತ್ರ

'ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – असति प्रतिज्ञोपरोधो यौगपद्यमन्यथा ।।४।।**

ಕಾರಣವು ನಾಶವಾದ ಮೇಲೆ ಕಾರ್ಯವು ಹುಟ್ಟುವುದಾದರೆ, ಈ ವಸ್ತುವು ಇದರದ್ದೇ ಕಾರ್ಯ ಎಂಬ ಪ್ರತಿಜ್ಞೆ ತಪ್ಪಾಗುತ್ತದೆ. ಕಾರಣವಿದ್ದಾಗಲೂ ಕೂಡ ಕಾರ್ಯವು ಹುಟ್ಟುತ್ತದೆ ಎಂದು ಹೇಳಿದರೆ ಮುಂದಿನ ಎಲ್ಲಾ ಸ್ಥಳಗಳಲ್ಲಿಯೂ ಕೂಡ ಕಾರ್ಯವು ಹುಟ್ಟುತ್ತಲೇ ಇರಬೇಕು. ಆವಾಗ ಎಲ್ಲಾ ಕಾರ್ಯಗಳು ಒಂದೇ ಸ್ಥಳದಲ್ಲಿ ಇರಬೇಕು. ಅಥವಾ ಹಿಂದಿನ ವಸ್ತುಗಳು ನಾಶವಾದರೆ ಅವುಗಳ ಜೊತೆಯಲ್ಲಿಯೇ ಮುಂದಿನ ಕಾರ್ಯಗಳೆಲ್ಲವೂ ಹುಟ್ಟಬೇಕಾದೀತು.

ಅರ್ಥ -- ಕ್ಷಣಿಕಮತದಲ್ಲಿ ಪ್ರತಿಕ್ಷಣದಲ್ಲಿಯೂ ಕಾರ್ಯೋತ್ಪತ್ತಿ ಇರುತ್ತದೆಂದು ಹೇಳುತ್ತಾರೆ. ಇದೂ ಕೂಡ ತಪ್ಪು. ಏಕೆಂದರೆ ಅಸತಿ = ಕಾರಣವು ಇಲ್ಲದಿರುವಾಗ ಕಾರ್ಯವು ಹುಟ್ಟುತ್ತದೆಂದು ಹೇಳಿದರೆ ಪ್ರತಿಜ್ಞೋಪರೋಧಃ = ಈ ಕಾರ್ಯವು ಈ ಕಾರಣದ ಕಾರ್ಯ ಎಂಬ ಸಿದ್ಧಾಂತ ವ್ಯವಹಾರವು ನಾಶವಾಗಬೇಕಾದೀತು. ಅನ್ಯಥಾ = ಕಾರಣವಿದ್ದಾಗಲೇ ಕಾರ್ಯದ ಉತ್ಪತ್ತಿ ಆಗುತ್ತದೆಂದು ಹೇಳಿದರೆ, ಯೌಗಪದ್ಯಂ = ಕಾರಣದ ಜೊತೆಗೆ ಕಾರ್ಯವು ಇರುತ್ತದಾದ್ದರಿಂದ ಏಕಕಾಲದಲ್ಲಿಯೇ ಎಲ್ಲಾ ಕಾರಣಗಳು ಇರಬೇಕಾದ ಪ್ರಸಂಗ ಬರುತ್ತದೆ

## ಬ್ರಹ್ಮಸೂತ್ರಭಾಷ್ಯ

ಒಂದೇ ಕಾಲದಲ್ಲಿ ಎಷ್ಟು ಕಾರ್ಯಗಳಿರಲು ಸಾಧ್ಯ ?

**ब्रह्मसूत्रभाष्यम् – ।। असति प्रतिज्ञोपरोधो यौगपद्यमन्यथा ।।४।।**

**कारणे विनष्टे कार्यमुत्पद्यते चेत् तत्कार्यमिति प्रतिज्ञाहानिः । तत्काले कारणमस्ति चेद् विनाशकारणाभावाद् यौगपद्यं सर्वकार्याणाम् ।।४।।**

**ಅನುವಾದ - ಎಲ್ಲವೂ ಕ್ಷಣಿಕವಾದ್ದರಿಂದ ಕಾರಣವು ನಾಶವಾದ ಮೇಲೆ ಕಾರ್ಯವು ಹುಟ್ಟುತ್ತದೆ ಎಂದು ಬೌದ್ಧರು ಹೇಳುತ್ತಾರೆ. ಇದು ತಪ್ಪು. ಹಾಗೆ ಹೇಳಿದರೆ ಕಾರ್ಯ ಹುಟ್ಟುವ ಸಮಯದಲ್ಲೂ ಕಾರಣವಿದೆ ಎಂದು ಹೇಳಿದರೆ ಹಿಂದಿನ ವಸ್ತುವಿನ ನಾಶಕ್ಕೆ ಕಾರಣವೇ ಇಲ್ಲವಾದ್ದರಿಂದ ಒಂದೇ ಕಾಲದಲ್ಲಿ ಎಲ್ಲಾ ಕಾರ್ಯಗಳು ಇರಬೇಕಾದ ಪರಿಸ್ಥಿತಿ ಬರುತ್ತದೆ.**

ಪ್ರತಿಪದಾರ್ಥ -- ವಿಸದೃಶಕಾರ್ಯೋತ್ಪತ್ತಿಯನ್ನು ನಿರಾಕರಣೆ ಮಾಡಿ ಪ್ರತಿಕ್ಷಣವು ಕಾರ್ಯವು ಹುಟ್ಟುತ್ತದೆಂಬ ವಾದವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರ ಹೊರಟಿದೆ. ಕಾರಣೇ = ಕಾರಣವು, ವಿನಷ್ಟೇ = ನಾಶವಾಗುತ್ತಿರಲು, ಕಾರ್ಯಂ = ಕಾರ್ಯವು, ಉತ್ಪದ್ಯತೇ = ಹುಟ್ಟುತ್ತದೆ, ಚೇತ್ = ಹೀಗೆ ಹೇಳುವದು ತಪ್ಪು. ತತ್‌ಕಾರ್ಯಮ್ = ಅದು ಕಾರಣದ ಕಾರ್ಯವು, ಇತಿ = ಎಂಬ, ಪ್ರತಿಜ್ಞಾಹಾನಿಃ = ಪ್ರತಿಜ್ಞೆಗೆ ಹಾನಿ ಬರುತ್ತಿದೆ. ತತ್ಕಾಲೇ = ಕಾರ್ಯದ ಕಾಲದಲ್ಲಿ, ಕಾರಣಮಸ್ತಿ ಚೇದ್ = ಕಾರಣವು ಇರುವುದಾದರೆ, ವಿನಾಶಕಾರಣಾಭಾವಾತ್ = ಆ ಕಾರಣವು ನಾಶವಾಗಲು ಬೇರೆ ಕಾರಣವಿಲ್ಲದ್ದರಿಂದ, ಸರ್ವಕಾರ್ಯಾಣಾಮ್ = ಎಲ್ಲಾ ಕಾರಣಗಳಿಗೂ, ಯೌಗಪದ್ಯಂ = ಒಟ್ಟಿಗೆ ಇರುವಿಕೆಯು ಬರಬೇಕಾದೀತು.

## ಸತ್ತರ್ಕದೀಪಾವಳಿ

**सत्तर्कदीपावलिः – पूर्वपरमाणुसादृश्यकारणं यदभिप्रेतम् उत्तरपरमाणोः पूर्वपरमाण्वाहितसंस्कारत्वम् । तदनुपपन्नम् । उत्तरपरमाणुकाले पूर्वपरमाण्वभावात् । न ह्यविद्यमानोऽन्यत्र संस्कारमादधाति । सादृश्यकारणसंस्कारार्थमपि सादृश्यसंस्कारकारणसंस्कारापेक्षयाऽनवस्था-पत्तेश्चेत्यभिप्रायः ।**

ಹಿಂದಿನ ಪರಮಾಣುವಿನಲ್ಲಿರುವ ಧರ್ಮವೇ ಮುಂದಿನ ಪರಮಾಣುವಿನಲ್ಲೂ ಕೂಡ ಬರುತ್ತದೆ. ಮುಂದಿನ ಪರಮಾಣುವಿಗೆ ಹಿಂದಿನ ಪರಮಾಣುವು ಸದೃಶವಾಗಿರುತ್ತದೆ. ಮುಂದಿನ ಪರಮಾಣುವು ಹಿಂದಿನ ಪರಮಾಣುವಿನಲ್ಲಿರುವ ಸಂಸ್ಕಾರವನ್ನು ಪಡೆದಿರುತ್ತದೆ ಇತ್ಯಾದಿಯಾಗಿ ಬೌದ್ಧರು ನಿರೂಪಣೆ ಮಾಡುತ್ತಾರೆ. ಇದೆಲ್ಲವೂ ಕೂಡ ತಪ್ಪು. ಏಕೆಂದರೆ ಮುಂದಿನ ಪರಮಾಣು ಇರುವ ಕಾಲದಲ್ಲಿ ಹಿಂದಿನ ಪರಮಾಣು ಇರುವುದೇ ಇಲ್ಲ. ಇಲ್ಲದ ವಸ್ತು ಮತ್ತೊಂದೆಡೆ ಸಂಸ್ಕಾರವನ್ನು ಆದಾನ ಮಾಡಲು ಸಮರ್ಥವಾಗುವುದಿಲ್ಲ. ಮತ್ತು ಸಾದೃಶ್ಯ-ಕಾರಣಸಂಸ್ಕಾರವೂ ಕೂಡ ಸಾದೃಶ್ಯಸಂಸ್ಕಾರಕಾರಣದ ಸಂಸ್ಕಾರದ ಅಪೇಕ್ಷೆಯು ಬರುತ್ತದೆ.

ಅದಕ್ಕೆ ಮತ್ತೊಂದು ಸಂಸ್ಕಾರದ ಅಪೇಕ್ಷೆಯು ಬರುತ್ತದೆ. ಆದ್ದರಿಂದ ಅನವಸ್ಥಾದೋಷವು ಬರುತ್ತದೆ.

**सत्तर्कदीपावलिः – दूषणान्तरैरपि क्षणिकत्वं दूषयति – असतीत्यादिना। क्षणमेकं स्थित्वाभावः क्षणान्तरे परभावमुत्पादयति चेत्क्षणिको न स्यात् । पूर्वनाशान्तरमुत्तरो जायेत चेत्पूर्वभावादुत्तरो जायत इत्यभ्युपगमहानिः स्यात् । पूर्वभावक्षण एवोत्तरो जायेत चेदुत्तरोत्तरव्यक्तीनामेकक्षण एवावस्थानप्रसङ्गेन क्षणान्तरे घटो न दृश्येत इत्यर्थः ।**

ಕ್ಷಣಿಕತ್ವವಾದವನ್ನು ದೂಷಣೆ ಮಾಡುತ್ತಿದ್ದಾರೆ 'ಅಸತಿ' ಇತ್ಯಾದಿಯಾಗಿ. ಕಾರ್ಯವು ಮೊದಲನೆಯ ಕ್ಷಣ ಇರುತ್ತದೆ. ಎರಡನೆಯ ಕ್ಷಣದಲ್ಲಿ ಮತ್ತೊಂದು ಭಾವಪದಾರ್ಥವನ್ನು ಹುಟ್ಟಿಸುತ್ತದೆ ಎಂದು ಹೇಳಿದರೆ ಆಗ ಕ್ಷಣಿಕತ್ವವೇ ನಾಶವಾಗುತ್ತದೆ. ಒಂದು ವೇಳೆ ಹಿಂದಿನ ಭಾವಪದಾರ್ಥವು ನಾಶವಾಗಿ ಮುಂದಿನ ಭಾವಪದಾರ್ಥವು ಹುಟ್ಟುತ್ತದೆ ಎಂದು ಹೇಳಿದರೆ ಆಗ ಹಿಂದಿನ ಭಾವಪದಾರ್ಥದ ದೆಸೆಯಿಂದ ಮುಂದಿನ ಭಾವಪದಾರ್ಥವು ಹುಟ್ಟುತ್ತದೆಂಬ ನಿಮ್ಮ ಸಿದ್ಧಾಂತಕ್ಕೆ ಹಾನಿ ಬರುತ್ತದೆ. ಒಂದುವೇಳೆ ಹಿಂದಿನ ಭಾವಪದಾರ್ಥವಿರುವ ಕ್ಷಣದಲ್ಲೇ ಮುಂದಿನ ಭಾವಪದಾರ್ಥವು ಹುಟ್ಟುತ್ತದೆಂದು ಹೇಳಿದರೆ ಆಗ ಮುಂದಿನ ಎಲ್ಲಾ ಭಾವಪದಾರ್ಥಗಳು ಒಂದೇ ಕ್ಷಣದಲ್ಲಿ ಇವೆ ಎಂಬುದಾಗಿ ಅಂಗೀಕಾರ ಮಾಡಿದಂತಾಯಿತು. ಆಗ ಎರಡನೆಯ ಕ್ಷಣದಲ್ಲಿ ಘಟವೇ ಯಾರಿಗೂ ಕೂಡ ಕಾಣಿಸದೇ ಇರಬೇಕಾದೀತು. ಹೀಗೆ ಕ್ಷಣಿಕತ್ವವನ್ನು ಸಮರ್ಥಿಸಲು ಸಾಧ್ಯವಾಗುವುದಿಲ್ಲ.

### ತತ್ವಪ್ರದೀಪ

### ಪ್ರತಿಕ್ಷಣ ನಾಶವು ಅಯುಕ್ತ

**तत्वप्रदीपः – असति प्रतिज्ञोपरोधो यौगपद्यमन्यथा ।। इतश्चानुपपन्नो वैनाशिकवादः । तथाहि - कार्योत्पत्तिकाले कारणमस्ति वा न वा । न तावन्नास्ति । न हि लोके नष्टस्य वस्तुनः किञ्चित्कार्यमुत्पद्यमानं दृष्टम् ।**

**अतो विनष्टे कारणे जायमानं तत् कार्यमिति न प्रतिज्ञायेत । कार्योत्पत्तिकाले कारणमस्ति चेत्कार्योत्पत्तावविनाशिनः पश्चाद्विनाशकारणाभावात्कार्यकारणयो र्यौगपद्यम् । तत्कार्याणामपि तन्न्यायावतारात्सर्वकार्याणां युगपद्भावप्रसङ्गः ।।**

ಮತ್ತೊಂದು ಕಾರಣದಿಂದಲೂ ಪ್ರತಿಕ್ಷಣ ವಸ್ತುಗಳು ನಾಶವಾಗುತ್ತವೆಂಬ ಬೌದ್ಧರ ಮತವು ಅಯುಕ್ತವಾಗಿದೆ ಎಂಬುದನ್ನು ಈ ಸೂತ್ರದಲ್ಲಿ ಸಮರ್ಥನೆ ಮಾಡುತ್ತಿದ್ದಾರೆ. ಅದು ಹೀಗೆ- ಕಾರ್ಯವು ಹುಟ್ಟುವ ಕಾಲದಲ್ಲಿ ಕಾರಣವಿರುತ್ತದೋ, ಇಲ್ಲವೋ ? ಇರುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಲೋಕದಲ್ಲಿ ನಾಶವಾದ ಪದಾರ್ಥವು ಯಾವುದೇ ಒಂದು ಕಾರ್ಯವನ್ನು ಹುಟ್ಟಿಸಿರುವುದು ಕಂಡಿಲ್ಲ. ಆದ್ದರಿಂದ ಕಾರಣವು ನಾಶವಾದ ಮೇಲೆ ಹುಟ್ಟುವ ಪದಾರ್ಥವು ಅದರ ಕಾರ್ಯವೆಂದು ಹೇಳಲೂ ಕೂಡ ಸಾಧ್ಯವಾಗುವುದಿಲ್ಲ. ಇನ್ನು ಕಾರ್ಯವು ಹುಟ್ಟುವ ಸಂದರ್ಭದಲ್ಲಿ ಕಾರಣವಿದೆ ಎಂಬ ಮೊದಲನೆ ಪಕ್ಷವನ್ನು ಅಂಗೀಕಾರ ಮಾಡಬೇಕು. ಆಗ ಕಾರ್ಯವನ್ನು ಹುಟ್ಟಿಸಿದ ಮೇಲೂ ನಾಶವಾಗದೇ ಇರುವ ಕಾರಣಕ್ಕೆ ಅನಂತರ ಅದನ್ನು ನಾಶಪಡಿಸಲು ಮತ್ತೊಂದು ಕಾರಣವಿರುವುದಿಲ್ಲ. ಆಗ ಕಾರ್ಯಕಾರಣಗಳಿಗೆ ಸಾಮಾನಾಧಿಕರಣ್ಯವೇ ಬರುತ್ತದೆ. ಆ ಕಾರ್ಯಗಳೂ ಕೂಡ ಕಾರಣದ ಜೊತೆಗೆ ಇರುತ್ತವಾದ್ದರಿಂದ ಮುಂದಿನ ಎಲ್ಲಾ ಕಾರ್ಯಗಳು ಒಂದೇ ಕ್ಷಣದಲ್ಲಿ ಇರುತ್ತವೆಂದು ಅಂಗೀಕಾರ ಮಾಡಬೇಕಾಗುತ್ತದೆ.

### ತತ್ವಪ್ರಕಾಶಿಕಾ

### ಪ್ರತಿಕ್ಷಣವು ಕಾರ್ಯ ಹುಟ್ಟುತ್ತದೆಂಬುದರ ನಿರಾಕರಣೆ

**तत्वप्रकाशिका – एवं विसदृशकार्योत्पत्तिनिरासेन व्यवहारादिकं पराकृत्येदानीं प्रतिक्षणोत्पत्तिमेव च निराकुर्वत्सूत्रमुपन्यस्य व्याचष्टे ।। असतीति ।।**

ಹೀಗೆ ವಿಸದೃಶಕಾರ್ಯವು ಉತ್ಪತ್ತಿಯಾಗುತ್ತದೆಂಬುದನ್ನು ನಿರಾಕರಣೆ ಮಾಡಿದಂತಾಯಿತು. ತನ್ಮೂಲಕವಾಗಿ ವ್ಯವಹಾರಾದಿಗಳನ್ನು ನಿರಾಕರಣೆ ಮಾಡಿ ಪ್ರಕೃತ ಪ್ರತಿಕ್ಷಣವು ಕಾರ್ಯದ

ಉತ್ಪತ್ತಿಯನ್ನು ಹೇಳುವ ವಾದವನ್ನು ನಿರಾಕರಣೆ ಮಾಡುವುದಕ್ಕಾಗಿ 'ಅಸತಿ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಭಾವದೀಪ

**भावदीपः – ।। असति प्रतिज्ञोपरोधो यौगपद्यमन्यथा ।। २१ ।।** विशेषकार्योत्पत्तिनिरासस्य प्रकृतोपयोगं दर्शयन्ननुवदति – **एवमिति ।।** विरलाणुभ्यो मिलिताणूत्पत्त्ययोगे तद्विषयदर्शनसामीप्यहेतुकापेक्षाबुद्ध्यादेरयोगादिति भावः ।। **उत्पत्तिमेवेति ।।** दूरे वित्तिव्यवहारादिचिन्तेत्येवार्थः ।

ವಿಸದೃಶಕಾರ್ಯವು ಉತ್ಪನ್ನವಾಗುವುದಿಲ್ಲವೆಂದು ಹಿಂದಿನ ಸೂತ್ರದಲ್ಲಿ ಹೇಳಲಾಯಿತು. ಇದಕ್ಕೆ ಸಂಗತಿಯನ್ನು ತೋರಿಸುವ ಮುಖಾಂತರ 'ಏವಮ್' ಇತ್ಯಾದಿಯಾಗಿ ಅನುವಾದವನ್ನು ಮಾಡುತ್ತಿದ್ದಾರೆ. ವಿರಳ ಪರಮಾಣುಗಳಿಂದ ಮಿಲಿತವಾದ ಪರಮಾಣುಗಳು ಉತ್ಪನ್ನವಾಗುವುದಿಲ್ಲ. ಆದ್ದರಿಂದ ಮಿಲಿತಪರಮಾಣುಗಳಿಂದ ಲಬ್ಧವಾಗುವ ವಸ್ತುವಿನ ಜ್ಞಾನ ಹಾಗೂ ತತ್‌ಸಾಮೀಪ್ಯಹೇತುಕವಾದ ಅಪೇಕ್ಷಬುದ್ಧ್ಯಾದಿಗಳೇ ಹುಟ್ಟುವುದಿಲ್ಲ ಎಂಬುದು 'ಏವಂ' ಎಂಬ ಪದದ ಅಭಿಪ್ರಾಯವಾಗಿದೆ.

'ಉತ್ಪತ್ತಿಮೇವ' ಎಂಬಲ್ಲಿರುವ ಏವಕಾರದಿಂದ ವಸ್ತುವಿನ ಜ್ಞಾನ ಹಾಗೂ ವಸ್ತುವಿನ ವ್ಯವಹಾರಗಳ ವಿಚಾರವು ದೂರತೋಪಾಸ್ತವಾಯಿತು ಎಂಬುದನ್ನು ತಿಳಿಸಿದ್ದಾರೆ.

ವಿವರಣೆ – 'ವಿರಳಪರಮಾಣುಗಳಿಂದ ಮಿಲಿತಪರಮಾಣುಗಳು ಉತ್ಪನ್ನವಾಗಲಾರವು' ಎಂದು ಹಿಂದಿನ ಸೂತ್ರದಲ್ಲಿ ಸಮರ್ಥಿಸಿದ್ದಾಯಿತು. ಹಾಗಾದರೆ ಸಮುದಾಯವೇ ಅಸಂಭಾವಿತವಾದ್ದರಿಂದ ಅಪೇಕ್ಷಾಬುದ್ಧ್ಯಾದಿಗಳು ಅಸಂಭಾವಿತವಾಗುತ್ತವೆ.

ಪ್ರತಿಕ್ಷಣ ಕಾರ್ಯೋತ್ಪತ್ತಿಯೇ ಅಸಂಭಾವಿತವಾದ್ದರಿಂದ ಘಟ-ಪಟಾದಿಗಳ ಜ್ಞಾನ ತದ್ವಿಷಯಕವಾದ ವ್ಯವಹಾರಗಳೆಲ್ಲವೂ ದೂರತೋಪಾಸ್ತವಾಯಿತು ಎಂಬುದನ್ನೂ ಕೂಡ ಇಲ್ಲಿ ತಿಳಿಯಬೇಕು.

## ಕ್ಷಣಿಕ ಎಂದರೇನು ?

**तत्वप्रकाशिका – न प्रतिक्षणं कार्योत्पत्तिर्युक्ता । तथा हि । किं कारणे विनष्टे कार्यमुत्पद्यते विद्यमाने वा । नाद्यः । यस्मिन् विनष्टे यदुत्पद्यते तस्य तत्कार्यत्वेऽतिप्रसङ्गात् । न द्वितीयः । एकस्मिन् क्षणे स्वयमात्मानं लब्ध्वा कार्योत्पत्तिक्षणेऽपि तस्यावस्थाने कारणस्य द्विक्षणकत्वप्रसङ्गात् ।**

ಪ್ರತಿಕ್ಷಣವು ಕಾರ್ಯವು ಉತ್ಪನ್ನವಾಗುವುದಿಲ್ಲ. ಏಕೆಂದರೆ ಕಾರಣ ನಾಶವಾದಾಗ ಕಾರ್ಯವು ಹುಟ್ಟುತ್ತದೋ ಅಥವಾ ಕಾರಣವಿದ್ದಾಗ ಕಾರ್ಯವು ಹುಟ್ಟುತ್ತದೋ ? ಮೊದಲನೆಯ ಪಕ್ಷ ತಪ್ಪು. ಯಾವುದು ನಾಶವಾದಾಗ ಯಾವುದು ಹುಟ್ಟುತ್ತದೋ ಅದು ಅದರ ಕಾರ್ಯವಾಗಲು ಸಾಧ್ಯವಿಲ್ಲ. ಹಾಗೆ ಹೇಳುವುದಾದರೆ ಘಟ ನಾಶವಾದ ಮೇಲೆ ಹುಟ್ಟಿದ ಪಟಕ್ಕೆ ಘಟವು ಕಾರಣವಾಗಬೇಕಾಗುತ್ತದೆಂಬ ಅತಿಪ್ರಸಂಗ ಬರುತ್ತದೆ. ಎರಡನೆಯ ಪಕ್ಷವು ತಪ್ಪು. ಒಂದು ಕ್ಷಣದಲ್ಲಿ ತನ್ನ ಸ್ವರೂಪವನ್ನು ಪಡೆದು ಕಾರ್ಯದ ಉತ್ಪತ್ತಿಕ್ಷಣದಲ್ಲೂ ಕಾರಣವಿರುವುದಾದರೆ ಎರಡು ಕ್ಷಣದಲ್ಲಿ ಇರಬೇಕಾದ ಪ್ರಸಂಗ ಬರುತ್ತದೆ.

**भावदीपः** – असङ्गतिनिरासाय योग्यसाध्यमुक्त्वा तदुपपादकत्वेन भाष्यं योजयति – **न प्रतिक्षणमिति**।। अत्रापि पूर्वत्रेव नञनुवर्तते। उत्तरोत्पाद इति च प्रथमान्ततयेति भावः। कारणे नष्ट इति पराङ्गीकारादस्य पक्षस्य पूर्वं निर्देशः।

ಅಸಂಗತಿಯನ್ನು ಪರಿಹಾರ ಮಾಡುವುದಕ್ಕಾಗಿ ಯೋಗ್ಯವಾದ ಸಾಧ್ಯವನ್ನು ಅಧ್ಯಾಹಾರ ಮಾಡುವ ಮೂಲಕ ಭಾಷ್ಯವಾಕ್ಯವನ್ನು ಅರ್ಥಮಾಡಿಕೊಳ್ಳಬೇಕೆಂಬ 'ನ ಪ್ರತಿಕ್ಷಣಂ' ಎಂಬ ಟೀಕಾವಾಕ್ಯವು ವ್ಯಾಖ್ಯಾನ ಮಾಡುತ್ತಿದೆ. ಈ ಸೂತ್ರದಲ್ಲೂ ಕೂಡ ಹಿಂದಿನಂತೆ 'ನಞ್' ಎಂಬುದು ಅನುವೃತ್ತವಾಗುತ್ತದೆ. ಹಿಂದಿನ ಸೂತ್ರದಲ್ಲಿ 'ಉತ್ತರೋತ್ಪಾದೇ' ಎಂಬ ಪದವು ಸಪ್ತಮ್ಯಂತವಾಗಿದೆ. ಅದನ್ನು 'ಉತ್ತರೋತ್ಪಾದಃ' ಎಂಬುದಾಗಿ ಪ್ರಥಮಾಂತವಾಗಿ ಈ ಸೂತ್ರದಲ್ಲಿ ಅನುವೃತ್ತಿ ಮಾಡಬೇಕು. 'ಉತ್ತರ' ಶಬ್ದಕ್ಕೆ 'ಕಾರ್ಯ' ಎಂದರ್ಥ. 'ಉತ್ತರೋತ್ಪಾದಃ' ಎಂದರೆ 'ಪ್ರತಿಕ್ಷಣಂ ಕಾರ್ಯೋತ್ಪಾದಃ' ಎಂದರ್ಥ. ಇದು ಯುಕ್ತವಲ್ಲ

ಎಂಬುದು ಸೂತ್ರದ ಅರ್ಥ. 'ಪ್ರತಿಕ್ಷಣವು ಕಾರ್ಯವು ಹುಟ್ಟುತ್ತದೆಂಬುದು ಯುಕ್ತವಲ್ಲ' ಎಂಬುದು ಸೂತ್ರದಲ್ಲಿ ಮಾಡಿದ ಪ್ರತಿಜ್ಞೆ ಎಂದಂತಾಯಿತು.

'ಕಾರಣೇ ನಷ್ಟೇ ಕಾರ್ಯಮುತ್ಪದ್ಯತೇ' 'ಕಾರಣೇ ವಿದ್ಯಮಾನೇ ಕಾರ್ಯಮುತ್ಪದ್ಯತೇ' ಎಂಬುದಾಗಿ ಟೀಕೆಯಲ್ಲಿ ಎರಡು ವಿಕಲ್ಪಗಳನ್ನು ಮಾಡಿರುತ್ತಾರೆ. ಇವುಗಳಲ್ಲಿ ಮೊದಲನೆಯ ಪಕ್ಷವು ಪರಾಂಗೀಕೃತವಾದ್ದರಿಂದ ಮೊದಲು ನಿರ್ದೇಶ ಮಾಡಿದ್ದಾರೆ.

**भावदीपः** – कारणे सति कार्यमित्यत्र किं कारणं यस्मिन् क्षणे आत्मलाभः तदुत्तरस्मिन् कार्योत्पत्तिक्षणेऽपि स्थित्वा कार्यमुत्पादयतीत्यभिमतं उतात्मलाभक्षण एव कार्यमुत्पादयतीति हृदि विकल्प्य आद्ये भाष्यादौ यौगपद्यशब्देना- विच्छेदेनोत्पत्तिरभिमतेति भावेन तत्काल इत्यादिभाष्यं व्याचष्टे – **एकस्मिन् क्षण इति ।।**

ಟೀಕೆಯಲ್ಲಿ 'ಕಾರ್ಯಂ ವಿದ್ಯಮಾನೇ ವಾ ಕಾರ್ಯಂ ಉತ್ಪದ್ಯತೇ' ಎಂಬುದಾಗಿ ಎರಡನೆಯ ವಿಕಲ್ಪವನ್ನು ತಿಳಿಸಿದ್ದಾರೆ. ಇದರ ಅಭಿಪ್ರಾಯವೇನು ? ಕಾರಣವು ಯಾವ ಕ್ಷಣದಲ್ಲಿ ಇದೆಯೋ, (ಆತ್ಮಲಾಭವನ್ನು ಹೊಂದಿದೆಯೋ) ಅದರ ಮುಂದಿನ ಕ್ಷಣವಾದ ಕಾರ್ಯೋತ್ಪತ್ತಿ ಕ್ಷಣದಲ್ಲಿ ಆ ಕಾರಣವು ಅಸ್ತಿತ್ವವನ್ನು ಹೊಂದಿ, ಕಾರ್ಯವನ್ನು ಹುಟ್ಟಿಸುತ್ತದೋ, ಅಥವಾ ತಾನು ತನ್ನ ಸ್ವರೂಪಲಾಭವನ್ನು ಹೊಂದಿದ ಕ್ಷಣದಲ್ಲಿಯೇ ಕಾರ್ಯವನ್ನು ಹುಟ್ಟಿಸುತ್ತದೋ?

ಈ ಎರಡು ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಭಾಷ್ಯಾದಿಗಳಲ್ಲಿ 'ಯೌಗಪದ್ಯಂ' ಎಂಬ ಶಬ್ದವನ್ನು ಪ್ರಯೋಗ ಮಾಡಿದ್ದಾರೆ. 'ಯೌಗಪದ್ಯ' ಎಂದರೆ ವಿಚ್ಛೇದವಿಲ್ಲದೇ ಕಾರ್ಯಗಳ ಉತ್ಪತ್ತಿ ಎಂದರ್ಥ. ಈ ಅಭಿಪ್ರಾಯದಿಂದ 'ತತ್ಕಾಲ' ಇತ್ಯಾದಿ ಭಾಷ್ಯವನ್ನು 'ಏಕಸ್ಮಿನ್ ಕ್ಷಣೇ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಕ್ಷಣಿಕವಾದದ್ದು ಎರಡು ಕ್ಷಣ ಇರಲು ಸಾಧ್ಯವೇ ?

**तत्वप्रकाशिका – क्षणिकस्य च द्विक्षणावस्थाने तदुत्तरत्र विनाश-कारणाभावात्पुनस्तस्मात्कार्योत्पत्तयः स्युः । तेभ्यश्च तथेति सर्वकार्याणां यौगपद्यं स्यात् ।**

ಕ್ಷಣಿಕವಾದದ್ದು ಎರಡು ಕ್ಷಣದಲ್ಲಿ ಇರುವುದಾದರೆ ಮುಂದೆಯೂ ಕೂಡ ಅದರ ನಾಶಕ್ಕೆ ಕಾರಣವಿಲ್ಲದೆ ಇರುವುದರಿಂದ ಪುನಃ ಅದರಿಂದ ಅನೇಕ ಕಾರ್ಯಗಳು ಹುಟ್ಟಬೇಕಾಗುತ್ತದೆ. ಆ ಕಾರ್ಯಗಳು ಒಂದೇ ಕಾಲದಲ್ಲಿ ಇರಬೇಕಾಗುತ್ತದೆ.

### ಕ್ಷಣದಲ್ಲಿ ಭಾಗಗಳಿಲ್ಲ

**तत्वप्रकाशिका – तथा यस्मिन् क्षणे कारणं तस्मिन्नेव कार्यावस्थानप्रसङ्गात् तत्कार्याणां चैवमिति सर्वकार्याणां यौगपद्यं प्रसज्येत । न च क्षणार्धे समुत्पन्नं क्षणार्धे कार्यमुत्पादयतीति युक्तम् । क्षणस्य पूर्वमध्यापरकला विकलत्वाभिलापादिति भावः ।।**

ಅದರಂತೆ ಯಾವ ಕ್ಷಣದಲ್ಲಿ ಕಾರಣವು ಇರುತ್ತದೋ ಅದೇಕ್ಷಣದಲ್ಲಿ ಕಾರ್ಯವೂ ಕೂಡ ಇರಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಆ ಎಲ್ಲಾ ಕಾರ್ಯಗಳು ಒಂದೇ ಕಾಲದಲ್ಲಿ ಇರಬೇಕಾದೀತು.

ಕ್ಷಣಾರ್ಧದಲ್ಲಿಹುಟ್ಟಿ ಕಾರ್ಯವನ್ನು ಹುಟ್ಟಿಸುತ್ತದೆಂಬುದು ಅಯುಕ್ತ. ಕ್ಷಣಕ್ಕೆ ಪೂರ್ವ,ಮಧ್ಯ ಅಪರ ಎಂಬ ಮೂರು ಭಾಗಗಳು ಸರ್ವಥಾ ಇರುವುದಿಲ್ಲ.

ವಿವರಣೆ - ಕಾರಣ ಇದ್ದಾಗ ಕಾರ್ಯವು ಹುಟ್ಟುತ್ತದೆ ಎಂಬುದಕ್ಕೆ ಏನರ್ಥ. ಒಂದುಕ್ಷಣದಲ್ಲಿ ಸ್ವತಃ ತಾನಿದ್ದು ಕಾರ್ಯೋತ್ಪತ್ತಿಕ್ಷಣದಲ್ಲೂ ಕಾರಣವು ಇರುತ್ತದೆ ಎಂದರ್ಥವೋ ಅಥವಾ ಕಾರ್ಯವು ಕಾರಣಸತ್ತಾಸಮಾನಕಾಲೀನಸಮಸತ್ತಾಕವಾಗಿದೆಯೋ? ಎಂಬ ವಿಕಲ್ಪವನ್ನು ಮಾಡಿ ಮೊದಲನೆಯ ಪಕ್ಷಕ್ಕೆ ಉತ್ತರವನ್ನು ನೀಡಲು ಸಮಗ್ರ ಭಾಷ್ಯವನ್ನು 'ಯಸ್ಮಿನ್‌ಕ್ಷಣೇ' ಇತ್ಯಾದಿ ಟೀಕಾವಾಕ್ಯದಿಂದ ಯೋಜನೆ ಮಾಡುತ್ತಿದ್ದಾರೆ.

ಸ್ಥೂಲಕಾಲಾವಚ್ಛೇದೇನ ಯುಗಪದವಸ್ಥಾನವು ಯುಕ್ತವಾಗುತ್ತದೆ. ಆದ್ದರಿಂದ ಸ್ವಲ್ಪವೇ ಕಾಲದಲ್ಲಿ ಕುಂಭಾರನ ಶಾಲೆಯು ಪೂರ್ತಿಯಾಗುವ ಪ್ರಸಂಗ ಬರುತ್ತದೆ ಎಂಬುದು 'ಯಸ್ಮಿನ್ಕ್ಷಣೇ' ಇತ್ಯಾದಿ ವಾಕ್ಯದ ಅಭಿಪ್ರಾಯ.

ನಾವು ಕ್ಷಣದಲ್ಲಿ ಭಾಗವನ್ನು ಅಂಗೀಕರಿಸುತ್ತೇವೆ. ಬೇರೆ ಮತದಲ್ಲಿ ಇದಿಲ್ಲ. ಈ ಕಾರಣದಿಂದಲೇ ವಾಯುಸ್ತುತಿಯಲ್ಲಿ ಹೇಳಿದಂತೆ ಕ್ಷಣದಲ್ಲಿ ಬೆಟ್ಟವನ್ನು ಹೋಗಿ, ಕಿತ್ತು, ತಂದಿದ್ದು ಕೂಡಿಸಲು ಸಾಧ್ಯ.

**भावदीपः – तदुत्तरत्रेति ।।** तृतीयक्षण इत्यर्थः। यौगपद्यपदस्य सहावस्थानमर्थमुपेत्य अन्त्यपक्षदूषणपरतयापि भाष्यं व्याचष्टे॥

'ತದುತ್ತರತ್ರ' ಎಂದರೆ ತೃತೀಯಕ್ಷಣದಲ್ಲಿ ಎಂದರ್ಥ. ಯೌಗಪದ್ಯಪದಕ್ಕೆ ಒಟ್ಟಿಗೆ ಇರುವಿಕೆ ಎಂಬರ್ಥವನ್ನು ಅಂಗೀಕಾರ ಮಾಡಿ, ಕೊನೆಯ ಪಕ್ಷವನ್ನು ನಿರಾಕರಣೆ ಮಾಡುವ ಪರವಾಗಿ ಭಾಷ್ಯದ ವ್ಯಾಖ್ಯಾನವನ್ನು 'ಯೌಗಪದ್ಯಂ' ಎಂಬ ಟೀಕಾವಾಕ್ಯವು ಹೊರಟಿದೆ.

**भावदीपः – यौगपद्यमिति ।।** एकस्यापि विनाशकाभावात् एकक्षणवृत्तित्वरूपसहावस्थानं स्यादित्यर्थः। अस्मिन् पक्षे सव्येतरगोविषाणवत् कार्यकारणभावव्याघात इत्यपि ध्येयम् ॥ २१ ॥

ಒಂದಕ್ಕೂ ವಿನಾಶಕ ಇಲ್ಲದೇ ಇದ್ದಾಗ ಏಕಕ್ಷಣವೃತ್ತಿತ್ವರೂಪವಾದ ಏಕಕ್ಷಣದಲ್ಲಿ ಇರುವಿಕೆ ಎಂಬ ಸಹಾವಸ್ಥಾನವು ಬರಬೇಕಾದೀತು ಎಂಬುದು 'ಯೌಗಪದ್ಯಂ ಸ್ಯಾತ್' ಎಂಬುದರ ಅಭಿಪ್ರಾಯವಾಗಿದೆ. ಈ ಪಕ್ಷದಲ್ಲಿ ಹಸುವಿನ ಎಡಭಾಗದ ಕೊಂಬಿಗೂ, ಬಲಭಾಗದ ಕೊಂಬಿಗೂ ಹೇಗೆ ಕಾರ್ಯಕಾರಣ-ಭಾವವಿಲ್ಲವೋ, ಅದರಂತೆ ಕಾರ್ಯಕಾರಣಭಾವವನ್ನು ಹೇಳುವುದು ವ್ಯಾಘಾತಕರವಾಗಿದೆ ಎಂಬುದಾಗಿ ತಿಳಿಯಬೇಕು.

## ಬ್ರಹ್ಮಸೂತ್ರ

'ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् — प्रतिसङ्ख्याऽप्रतिसङ्ख्यानिरोधाप्राप्तिरविच्छेदात् ।।**

ವಿನಾಶವು ಎರಡು ವಿಧ. ಬುದ್ಧಿಪೂರ್ವಕವಾದ ನಾಶವನ್ನು ಪ್ರತಿಸಂಖ್ಯಾನಿರೋಧವೆಂದು, ಬುದ್ಧಿಪೂರ್ವಕವಲ್ಲದ ನಾಶವನ್ನು ಅಪ್ರತಿಸಂಖ್ಯಾನಿರೋಧವೆಂದು ಕರೆಯಲಾಗುತ್ತದೆ. ಈ ಎರಡುವಿಧ ನಾಶಗಳು ಬೌದ್ಧರ ಪಕ್ಷದಲ್ಲಿ ಅಯುಕ್ತವಾಗುತ್ತದೆ. ಏಕೆಂದರೆ ಕಾರಣವಿದ್ದಾಗ ಕಾರ್ಯವುಂಟಾಗಲೇಬೇಕು. ಇಂಥ ಕಾರಣವು ಯಾವಾಗಲೂ ಇರುವುದರಿಂದ ಪ್ರತಿಕ್ಷಣದಲ್ಲಿಯೂ ಕಾರ್ಯ ನಾಶವಾಗುವುದು ಹೇಗೆ ಸಾಧ್ಯ ? ಪ್ರತಿಸಂಖ್ಯಾನಿರೋಧವು ಅಸಾಧುವಾಗಿದೆ. ಕೊನೇ ಕ್ಷಣದಲ್ಲಿ ಕಾಣುವ ವಸ್ತು ಸತ್ತಾದ ಮೇಲೆ ಅದರಿಂದ ಪ್ರತಿರೂಪವು ಹುಟ್ಟಬೇಕು. ಹೀಗಿರುವಾಗ ಪ್ರತಿಸಂಖ್ಯಾನಿರೋಧವು ಹೇಗೆ ಯುಕ್ತವಾಗುತ್ತದೆ ?

ಅರ್ಥ -- ಇದರಂತೆ ಕ್ಷಣಿಕಮತದಲ್ಲಿ ಪ್ರತಿಸಂಖ್ಯಾನಿರೋಧ, ಅಪ್ರತಿಸಂಖ್ಯಾನಿರೋಧ = ಪ್ರತಿಕ್ಷಣ ವಿನಾಶ, ಸಂತಾನವಿನಾಶಗಳ ಅಪ್ರಾಪ್ತಿಃ = ಅನುಪಪತ್ತಿಯು ಏಕೆಂದರೆ ಅವಿಚ್ಛೇದಾತ್ = ಅದರಂತೆ ಕಾರ್ಯೋತ್ಪತ್ತಿಯು ಆಗುತ್ತಲೇ ಇರಬೇಕಾದ್ದರಿಂದ ಕ್ಷಣಿಕವಾದದಲ್ಲಿ ಸೃಷ್ಟಿಯ ಕ್ರಮವು ಅಸಾಧುವಾಗಿದೆ.

## ಬ್ರಹ್ಮಸೂತ್ರಭಾಷ್ಯ

ಕಾರಣವಿದ್ದರೆ ಕಾರ್ಯ ಸುತರಾಂ ನಡೆಯುತ್ತದೆ

**ब्रह्मसूत्रभाष्यम् — ।। प्रतिसङ्ख्याऽप्रतिसङ्ख्यानिरोधाप्राप्तिरविच्छेदात् ।।९।। कारणे सति कार्यं भवत्येवेति नियमान्निस्सन्तानः ससन्तानश्च विनाशो न युज्यते ।।९।।**

ಅನುವಾದ - ಕಾರಣವಿದ್ದರೆ ಕಾರ್ಯವು ಆಗಲೇ ಬೇಕು. ಹೀಗೆ ನಿಯಮವಿರುವುದರಿಂದ ಸಂತಾನವಿಲ್ಲದ ನಾಶ ಎಂಬ ಕಲ್ಪನೆಯು ತಪ್ಪಾಗುತ್ತದೆ.

ಪ್ರತಿಪದಾರ್ಥ -- ಇಲ್ಲಿಯ ತನಕ ಕ್ಷಣಿಕವಾದದಲ್ಲಿ ಕಾರ್ಯದ ಉತ್ಪತ್ತಿಕ್ರಿಯೆಯನ್ನು ನಿರಾಕರಣೆ ಮಾಡಿ ಕಾರ್ಯನಾಶವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರ ಹೊರಟಿದೆ. ಕಾರಣೇ ಸತಿ = ಕಾರ್ಯವು ಇದ್ದ ಮೇಲೆ, ಕಾರ್ಯಂ = ಕಾರ್ಯವು, ಭವತ್ಯೇವ = ಆಗಲೇ ಬೇಕು. ಇತಿ = ಹೀಗೆ, ನಿಯಮಾತ್ = ನಿಯಮವಿರುವುದರಿಂದ, ನಿಸ್ಸಂತಾನಶ್ಚ = ಸಂತಾನವಿಲ್ಲದ, ವಿನಾಶಃ = ವಿನಾಶವು, ನ ಯುಜ್ಯತೇ = ಕೂಡುವುದಿಲ್ಲ.

## ಸತ್ತರ್ಕದೀಪಾವಳಿ

**सत्तर्कदीपावळिः – प्रतिसङ्ख्यायते परिदृश्यत इति प्रतिसङ्ख्यानिरोधो मुद्गराभिहतघटनाशः सन्तानोच्छेदरूपः । अप्रतिसङ्ख्यानिरोधस्तु प्रतिक्षण घटनाशः सन्तत्युच्छेदरहितः । उभावपि नाशावनुपपनौ कारणे सति कार्यं भवत्येवेत्यभ्युपगमात् । कारणं कार्ये सत्येव भवति न तु तन्नाशानन्तरमिति पदार्थाविच्छेदापत्तेः । तदाह । प्रतिसङ्ख्येत्यादिना ।**

'ಪ್ರತಿಸಂಖ್ಯಾಯತೇ' ಎಂಬ ಪದಕ್ಕೆ 'ಕಣ್ಣಿಗೆ ಕಾಣಿಸುವ ಪದಾರ್ಥ' ಎಂದರ್ಥ. 'ಪ್ರತಿಸಂಖ್ಯಾನಿರೋಧ' ಎಂಬುದಕ್ಕೆ ದಂಡದಿಂದ ಉಂಟಾದ ಘಟನಾಶ ಎಂದರ್ಥ. ಇದು ಸಂತಾನೋಚ್ಛೇದರೂಪವಾಗಿದೆ. ಅಪ್ರತಿಸಂಖ್ಯಾದಿನಿರೋಧ ಎಂಬುದಕ್ಕೆ ಪ್ರತಿಕ್ಷಣ ನಡೆಯುವ ಘಟನಾಶ ಎಂದರ್ಥ. ಇದು ಸಸಂತಾನನಾಶ ಎನಿಸುತ್ತವೆ. ಈ ಎರಡೂ ನಾಶಗಳು ಅನುಪಪನ್ನವಾಗಿವೆ. ಕಾರಣವಿದ್ದಾಗ ಕಾರ್ಯವು ಉಂಟಾಗಲೇ ಬೇಕು ಎಂಬುದನ್ನು ನೀವೂ ಕೂಡ ಅಂಗೀಕರಿಸಿದ್ದೀರಿ. ಕಾರ್ಯ ಉಂಟಾದರೆ ಮಾತ್ರ ಕಾರಣವು ಕಾರಣ ಎಂದು ಕರೆಸಿಕೊಳ್ಳುತ್ತದೆ. ತಾನು ನಾಶವಾಗಿಬಿಟ್ಟರೆ ಕಾರ್ಯ ಹುಟ್ಟಲು ಸಾಧ್ಯವೇ ಇಲ್ಲ. ಹಾಗೇನಾದರೂ ಒಪ್ಪಿದರೆ ಪದಾರ್ಥಕ್ಕೆ ವಿಚ್ಛೇದವು ಉಂಟಾಗಬೇಕಾಗುತ್ತದೆ. ಇದನ್ನೇ ಪ್ರತಿಸಂಖ್ಯಾ ಇತ್ಯಾದಿ ಸೂತ್ರದಿಂದ ನಿರೂಪಣೆ ಮಾಡಿರುತ್ತಾರೆ.

**ವಿವರಣೆ** - 'ಪ್ರತಿಸಂಖ್ಯಾಯತೇ ಇತಿ ಪ್ರತಿಸಂಖ್ಯಾ' 'ಪ್ರತಿಸಂಖ್ಯಾಯಾಃ ನಿರೋಧಃ ಪ್ರತಿಸಂಖ್ಯಾನಿರೋಧಃ' ಎಂಬ ವಿಗ್ರಹದಿಂದ ಕಣ್ಣಿಗೆ ಕಾಣುವ ನಾಶವನ್ನೇ 'ಪ್ರತಿಸಂಖ್ಯಾ-ನಿರೋಧ' ಎಂದು ಬೌದ್ಧರು ಹೇಳುತ್ತಾರೆ. ದಂಡದಿಂದ ಘಟವನ್ನು ಒಡೆದರೆ ಅದು ನಾಶವಾಗುವುದು ಕಣ್ಣಿಗೆ ಕಾಣಿಸುತ್ತದೆ. ಇದಕ್ಕೆ 'ಪ್ರತಿಸಂಖ್ಯಾನಿರೋಧ' ಎಂದು ಹೆಸರು. ಮುಂದೆ ಘಟಪ್ರವಾಹವು ಇರುವುದಿಲ್ಲವಾದ್ದರಿಂದ 'ಸಂತಾನೋಚ್ಛೇದ' ಎಂದೂ ಕೂಡ ಇದನ್ನು ಕರೆಯುತ್ತಾರೆ.

ಕಣ್ಣಿಗೆ ಕಾಣಿಸದೇ ಇರುವ ನಾಶವನ್ನು ಅಪ್ರತಿಸಂಖ್ಯಾನಿರೋಧ ಎಂದು ಕರೆಯುತ್ತಾರೆ. ಘಟವು ಪ್ರತಿಕ್ಷಣದಲ್ಲೂ ಬೇರೆ ಬೇರೆಯಾಗಿರುತ್ತದೆ. ಆದರೆ ಹಿಂದಿನ ಕ್ಷಣದಲ್ಲಿರುವ ಘಟವನ್ನೇ ಮುಂದಿನ ಕ್ಷಣದಲ್ಲೂ ಕೂಡ ಇದೆ ಎಂಬುದಾಗಿ ನಾವು ತಿಳಿಯುತ್ತೇವೆ. ಆದರೆ ಆ ಘಟವು ಪ್ರತಿಕ್ಷಣವೂ ಉತ್ಪತ್ತಿನಾಶಗಳನ್ನು ಹೊಂದುತ್ತಿರುವುದರಿಂದ ಬೇರೆ ಬೇರೆಯಾಗಿರುತ್ತದೆ. ಇದು ಕಣ್ಣಿಗೆ ಕಾಣಿಸುವುದಿಲ್ಲ. ಇದನ್ನು ಅಪ್ರತಿಸಂಖ್ಯಾನಿರೋಧ ಎಂದು ಕರೆಯುತ್ತಾರೆ. ಇಲ್ಲಿ ಘಟವು ಪ್ರವಾಹತಃ ಇದ್ದೇ ಇರುತ್ತದೆ. ಇದನ್ನು ಸಸಂತಾನನಾಶ ಎಂದು ಕರೆಯುತ್ತಾರೆ. ಪ್ರಕೃತ ಈ ಎರಡೂ ಬಗೆಯ ನಾಶಗಳು ಅಯುಕ್ತವಾಗಿವೆ ಎಂಬುದಾಗಿ ಸಮರ್ಥಿಸುತ್ತಿದ್ದಾರೆ.

## ತತ್ವಪ್ರದೀಪ

### ಬೌದ್ಧರಿಗೆ ನಾಶವನ್ನೇ ಸಮರ್ಥಿಸಲಾಗದು

**तत्वप्रदीपः – न च कस्यापि विनाशस्तस्य युक्त इत्याह – प्रतिसङ्ख्याऽप्रतिसङ्ख्यानिरोधाप्राप्तिरविच्छेदात् । क्षणानां प्रतिसङ्ख्या निरोधो निस्सन्तानः सन्तानमन्तरेण विनाशः, स्वाभाविकः सदृशकार्यान्तरोत्पत्तिरूपः । अपरः ससन्तानो नैमित्तिको विसदृशकार्योत्पत्तिरूपः सर्वसम्मतः । एतौ द्वावपि विनाशौ न युज्येते । कारणे सति कार्यं भवत्येवेति नियमे पूर्वाविनाश एवापरोत्पत्त्यङ्गीकारादन्यस्य च विनाशकारणस्यानिरूपणात् ।**

ಯಾವುದೇ ಬಗೆಯ ವಿನಾಶವೂ ಕೂಡ ಬೌದ್ಧರ ಮತದ ಪ್ರಕಾರ ಯುಕ್ತವಾಗುವುದಿಲ್ಲ ಎಂಬುದನ್ನು ಸಮರ್ಥನೆ ಮಾಡಲು 'ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಪ್ರಾಪ್ತಿರವಿಚ್ಛೇದಾತ್' ಎಂಬ ಸೂತ್ರವು ಹೊರಟಿದೆ. ಪ್ರತಿಯೊಂದು ಕ್ಷಣಗಳಲ್ಲಿ ಕಣ್ಣಿಗೆ ಕಾಣಿಸುವ ಸಂತಾನಗಳ ನಾಶವನ್ನು 'ಪ್ರತಿಸಂಖ್ಯಾನಿರೋಧ' ಎಂದು ಕರೆಯಲಾಗುತ್ತದೆ. ಮುಂದೆ ಸಂತಾನವೇ ಇಲ್ಲದಂತೆ ನಾಶವಾಗುತ್ತದೆ. ಸ್ವಾಭಾವಿಕವಾಗಿ ಸದೃಶವಾದ ಮತ್ತೊಂದು ಕಾರ್ಯವನ್ನು ಹುಟ್ಟಿಸುವಿಕೆ ಎಂಬುದು ಪ್ರತಿಸಂಖ್ಯಾ ಎಂಬುದಾಗಿ ತಿಳಿಯಬೇಕು. ಇಂಥ ಕಾರ್ಯವು ಮುಂದೆ ಹುಟ್ಟುವುದಿಲ್ಲ. ಮತ್ತೊಂದು ಸಸಂತಾನ ನಾಶ. ಇದು ಸ್ವಾಭಾವಿಕವಾದದ್ದಲ್ಲ, ನೈಮಿತ್ತಿಕವು. ವಿಸದೃಶಕಾರ್ಯೋತ್ಪತ್ತಿರೂಪವಾದದ್ದು. ಮತ್ತು ಎಲ್ಲರಿಗೂ ಸಮ್ಮತವಾದದ್ದು. ಈ ಎರಡೂ ಬಗೆಯ ನಾಶಗಳು ಬೌದ್ಧರ ಪ್ರಕಾರ ಕೂಡುವುದಿಲ್ಲ. ಬೌದ್ಧರು ಕಾರಣವಿದ್ದರೆ ಕಾರ್ಯ ಆಗಲೇಬೇಕೆಂಬ ನಿಯಮವನ್ನು ಒಪ್ಪಿದ್ದಾರೆ. ಹೀಗೆ ಒಪ್ಪಿ ಹಿಂದಿನ ಪದಾರ್ಥವು ನಾಶವಾಗದೇ ಮತ್ತೊಂದು ಪದಾರ್ಥವು ಹುಟ್ಟುತ್ತದೆಂದು ಅಂಗೀಕಾರ ಮಾಡಿದರೆ ಆದರ ನಾಶಕ್ಕೆ ಬೇರೆ ಕಾರಣವೇ ಇರುವುದಿಲ್ಲ. ಅಂಥ ಕಾರಣದ ನಿರೂಪಣೆಯನ್ನೂ ಕೂಡ ಬೌದ್ಧರು ಮಾಡಿರುವುದಿಲ್ಲ.

ವಿವರಣೆ - ಬೌದ್ಧರು ಹೇಳುವ ಪ್ರತಿಸಂಖ್ಯಾನಿರೋಧ ಹಾಗೂ ಅಪ್ರತಿಸಂಖ್ಯಾ-ನಿರೋಧಗಳೆರಡೂ ಅಯುಕ್ತವಾಗಿವೆ. ಹಿಂದಿನ ವಸ್ತು ನಾಶವಾದ ಮೇಲೆ ಮುಂದಿನ ವಸ್ತು ಹುಟ್ಟುತ್ತದೋ, ಅಥವಾ ಮುಂದಿನ ವಸ್ತು ಹುಟ್ಟಿದಾಗಲೂ ಕೂಡ ಹಿಂದಿನ ವಸ್ತು ಹಾಗೆಯೇ ಇರುತ್ತದೋ, ಮೊದಲನೆಯ ಪಕ್ಷವನ್ನು ಅಂಗೀಕಾರ ಮಾಡಿದರೆ ಮುಂದಿನ ವಸ್ತುವಿಗೆ ಹಿಂದಿರುವ ವಸ್ತು ಕಾರಣ ಆಗಲು ಸಾಧ್ಯವಿಲ್ಲ. ತಾನೇ ಇಲ್ಲದಿದ್ದರೆ ಕಾರಣವಾಗುವುದಾದರೂ ಕೂಡ ಹೇಗೆ ಸಾಧ್ಯ ? ಆದ್ದರಿಂದ ಎರಡನೆಯ ಪಕ್ಷವೇ ಒಪ್ಪಬೇಕು. ಕಾರ್ಯ ಹುಟ್ಟಿದ ಕ್ಷಣದಲ್ಲಿ ಕಾರಣವು ಇರುತ್ತದೆಂದು ಹೇಳಿದರೆ ಎರಡು ಕ್ಷಣದಲ್ಲಿ ಕಾರಣವಿದೆ ಎಂದು ಹೇಳಿದಂತಾಯಿತು. ಮತ್ತು ಮುಂದಿನ ಕ್ಷಣದಲ್ಲಿ ಹುಟ್ಟುವ ವಸ್ತು ಹಿಂದಿನ ವಸ್ತುವಿಗೆ ನಾಶಕವಲ್ಲ ಎಂದೂ ಕೂಡ ಒಪ್ಪಿದಂತಾಯಿತು. ಹಾಗಾಗಿ ಬೇರೆ ನಾಶಕವೇ ಇಲ್ಲದ ಕಾರಣ ಹಿಂದಿರುವ ಕಾರಣಭೂತವಾದ ವಸ್ತು ಹಾಗೆಯೇ ಉಳಿಯಬೇಕಾದೀತು.

## ತತ್ವಪ್ರಕಾಶಿಕಾ

### ಕ್ಷಣಿಕವಾದಿಗಳ ಕಾರ್ಯವಿನಾಶದ ನಿರಾಕರಣೆ

**तत्वप्रकाशिका – एवं क्षणिकवादे कार्योत्पादं पराकृत्य विनाशं च पराकुर्वत्सूत्रं पठित्वा व्याचष्टे – प्रतिसंख्येति ॥**

ಇಲ್ಲಿಯ ತನಕ ಕ್ಷಣಿಕವಾದದಲ್ಲಿ ಕಾರ್ಯದ ಉತ್ಪತ್ತಿಯನ್ನು ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಕಾರ್ಯದ ನಾಶವನ್ನು ನಿರಾಕರಣೆ ಮಾಡುವ ಸೂತ್ರವನ್ನು ಪ್ರತಿಸಂಖ್ಯಾ ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಸಂತಾನನಾಶವಿಲ್ಲದೆ ಪ್ರತಿಕ್ಷಣ ನಾಶ ಹೇಳಿದರೆ

**तत्वप्रकाशिका – सन्तानमन्तरेण यः प्रतिक्षणं विनाशः यश्च सन्तानेन सह क्षणिकमते तयोरनुपपत्तिः । तथा हि प्रतिक्षणं कारणं कार्यं निर्वर्त्य नश्यतीति वक्तव्यम्। तत्र स्वकार्यवियोगकाले कारणं सदेवेति कार्यमुत्पादयेत्। कारणे सति कार्यं भवत्येवेति नियमाभ्युपगमात् । तदुत्पत्त्यनन्तरं चैवमिति कथं प्रतिक्षणं नाशो युज्येत ।**

ಸಂತಾನವಿಲ್ಲದೆ ಯಾವುದು ಪ್ರತಿಕ್ಷಣವು ನಾಶವಾಗುತ್ತದೋ ಯಾವುದು ಸಂತಾನದ ಜೊತೆ ನಾಶವಾಗುತ್ತದೋ ಇವೆರಡೂ ಕ್ಷಣಿಕಮತದಲ್ಲಿ ಅನುಪಪನ್ನವಾಗುತ್ತವೆ. ಅದು ಹೀಗೆ - ಪ್ರತಿಯೊಂದು ಕ್ಷಣದಲ್ಲೂ ಕಾರಣವು ಕಾರ್ಯವನ್ನು ಹುಟ್ಟಿಸಿ ನಾಶವಾಗುತ್ತದೆಂದು ಹೇಳಬೇಕು. ಹೀಗೆ ಹೇಳಿದಾಗ ತನ್ನ ಕಾರ್ಯವು ವಿಯೋಗವಾಗುವ ಕಾಲದಲ್ಲೂ ಕಾರಣವು ಇರಲೇಬೇಕು. ಏಕೆಂದರೆ ಕ್ಷಣಿಕಪದಾರ್ಥಕ್ಕೆ ಉತ್ಪತ್ತಿಕಾಲವೇ ವಿಯೋಗಕಾಲವಾಗಿದೆ. ಆದ್ದರಿಂದ ಆಗಲೂ ಕಾರ್ಯವನ್ನು ಹುಟ್ಟಿಸಬೇಕಾಗುತ್ತದೆ. ಕಾರಣವಿದ್ದಾಗ ಕಾರ್ಯವು ಆಗಲೇಬೇಕೆಂಬ ನಿಯಮವನ್ನು ಅಂಗೀಕಾರ ಮಾಡಿರುವುದರಿಂದ ಕಾರ್ಯವು ಉತ್ಪತ್ತಿಯಾದ ಮೇಲೆ ಪುನಃ ಇದೇ ರೀತಿಯಲ್ಲಿ ಕಾರ್ಯವು ಉತ್ಪತ್ತಿಯಾಗಬೇಕಾಗುತ್ತದೆ. ಆದ್ದರಿಂದ ಪ್ರತಿಕ್ಷಣದಲ್ಲಿ ನಾಶವನ್ನು ಹೇಳುವುದು ಹೇಗೆ ಸಮಂಜಸವಾಗುತ್ತದೆ ?

ವಿವರಣೆ - ವಿರಲಪರಮಾಣುಗಳು ನಿಬಿಡವಾಗಿ ಸಮುದಾಯವಾಗುತ್ತವೆ. ಆಗ ಕಾರ್ಯಸ್ವರೂಪವನ್ನು ತಾಳುತ್ತವೆ. ಇದೇ ಸಮುದಾಯರೂಪವಾದ ಕಾರ್ಯಜನಕವಾಗಿದೆ. ಇವುಗಳೇ ಪ್ರತಿಕ್ಷಣದಲ್ಲಿ ವಿರಳಭಾವವಾಗುತ್ತವೆ. ಪುನಃ ಸಮುದಾಯರೂಪವನ್ನು ತಾಳುತ್ತವೆ. ಈ ಪರಮಾಣುಗಳ ವಿರಳವಾಗುವಿಕೆಯೇ ನಾಶ, ಒಟ್ಟಿಗೆ ಸೇರುವಿಕೆಯೇ ಕಾರ್ಯದ ಉತ್ಪತ್ತಿ ಇದು ಬೌದ್ಧರ ಹೃದಯ.

ಇದು ತಪ್ಪು. ಇದೇ ಪರಮಾಣುಗಳು ನಾಶ ಮಾಡುವುದಕ್ಕಾಗಿ ತಮ್ಮ ಕಾರ್ಯದ ವಿಯೋಗಕಾಲದಲ್ಲಿ ಸತ್ವಭಾವವನ್ನು ಹೊಂದಿರುತ್ತವೆಂದು ಹೇಳಬೇಕು. ಇಲ್ಲದಿದ್ದರೆ ಕಾರ್ಯಕಾರಣಭಾವವೇ ಅಯುಕ್ತವಾಗುತ್ತದೆ. ಕಾರಣಕ್ಕೆ ನಿಬಿಡಪುಂಜೀಭಾವವೆಂಬ ಕಾರ್ಯ ಜನಕತ್ವದ ನಿಯಮವಿದೆ. ಆದ್ದರಿಂದ ಪುನಃ ಪುನಃ ಮತ್ತಷ್ಟು ನಿಬಿಡತ್ವವನ್ನೇ ಹೊಂದಬೇಕಾಗುತ್ತದೆ. ವಿರಳಭಾವವನ್ನು ಹೊಂದಲು ಅವಕಾಶವೇ ಇರುವುದಿಲ್ಲ. ಆದ್ದರಿಂದ ಸಂತಾನರಹಿತವಾಗಿ ನಾಶವಾಗಲು ಸಾಧ್ಯವಿಲ್ಲ. (ಗುರ್ವರ್ಥದೀಪಿಕಾ)

ಸಂತಾನನಾಶದ ಜೊತೆ ನಾಶ ಹೇಳಿದರೆ ?

**तत्वप्रकाशिका – नाप्यन्यः । सतो हि घटस्यात्यन्तिको नाशः । अतोऽसौ सत्वात्कार्यमुत्पादयेदेव। कारणे सति कार्यं भवत्येवेति नियमात् । तत्कार्यं चैवमिति कथं सन्तानोच्छेदावसर इति भावः ।**

ಸಂತಾನಸಹಿತವಾಗಿ ಸಂತಾನಿಯು ನಾಶವಾಗುತ್ತದೆಂಬ ಮತ್ತೊಂದು ಪಕ್ಷವು ಕೂಡುವುದಿಲ್ಲ. ಆದ್ದರಿಂದ ಆತ್ಯಂತಿಕಘಟನಾಶವು ದಂಡಾದಿಗಳಿಂದ ಆಗುತ್ತದೆಂದು ಹೇಳಬೇಕು. ಆದರೆ ಘಟವು ಸತ್ಯವಾಗಿದೆ ಎಂದು ಹೇಳಿದರೆ ಕಾರ್ಯವನ್ನು ಹುಟ್ಟಿಸಲೇಬೇಕು. ಕಾರಣವಿದ್ದಾಗ ಕಾರ್ಯವು ಆಗಲೇಬೇಕೆಂಬ ನಿಯಮವಿದೆ. ಆ ಕಾರ್ಯವೂ ಕೂಡ ಹೀಗೆ ಕಾರ್ಯವನ್ನು ಹುಟ್ಟಿಸಬೇಕು. ಹೀಗಿರುವಾಗ ಸಂತಾನಪರಂಪರೆಗೆ ಉಚ್ಛೇದ ಬರಲು ಅವಕಾಶವೇ ಇಲ್ಲ ಎಂದಭಿಪ್ರಾಯ.

## ಭಾವದೀಪ

### 'ಕಾರಣೇ ಸತಿ ಕಾರ್ಯಂ ಭವತ್ಯೇವ' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ

**भावदीपः– ।। प्रतिसंख्याऽप्रतिसंख्यानिरोधाप्राप्तिरविच्छेदात् ।।२२।।** सूत्रे प्रतिसङ्ख्याऽप्रतिसङ्ख्यानिरोधशब्देन बुद्धिपूर्वकाबुद्धिपूर्वकविनाशयोरुक्तावपि तौ काविति शङ्कापनुत्तये भाष्ये निस्सन्तानससन्तानविनाशपदेन व्यत्यासेन व्याख्यानं कृतम्। तदर्थं वदन् भाष्यं व्याचष्टे – **सन्तानमन्तरेणेति ।।** सन्तानः परम्परा। अविच्छेदादिति सौत्रहेत्वंशं विवरितुमाह – **प्रतिक्षणमिति ।। स्वकार्यवियोगेति ।।** कार्योत्पत्तिक्षणे कारणं तावत् सदेव। क्षणिकस्य उत्पत्तिकाल एव वियोगकाल इति वियोगकालेऽपि कारणं सदेवेति कार्यमुत्पादयेदित्यर्थः। तत्र भाष्योक्तं हेतुं योजयति –**कारणे सतीति ।।**

ಸೂತ್ರದಲ್ಲಿ ಪ್ರತಿಸಂಖ್ಯಾನಿರೋಧ ಹಾಗೂ ಅಪ್ರತಿಸಂಖ್ಯಾನಿರೋಧ ಎಂಬ ಶಬ್ದದಿಂದ ಬುದ್ಧಿಪೂರ್ವಕವಲ್ಲದ ನಾಶ ಹಾಗೂ ಬುದ್ಧಿಪೂರ್ವಕವಾದ ನಾಶಗಳನ್ನು ವಿವಕ್ಷಿಸಿದ್ದಾರೆ. ಆದರೂ ಕೂಡ ಈ ಎರಡು ನಾಶಗಳು ಯಾವುವು ಎಂಬ ಶಂಕೆ ಮೂಡುತ್ತದೆ. ಅದಕ್ಕಾಗಿ ಭಾಷ್ಯದಲ್ಲಿ ನಿಃಸಂತಾನನಾಶ ಸಸಂತಾನನಾಶ ಎಂಬುದಾಗಿ ಆ ಸೂತ್ರದಲ್ಲಿರುವ ಪದಗಳನ್ನು ವ್ಯತ್ಯಾಸ ಮಾಡುವ ಮೂಲಕ ವ್ಯಾಖ್ಯಾನ ಮಾಡಿರುತ್ತಾರೆ. ಇದರರ್ಥವನ್ನು ಹೇಳುತ್ತಾ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಸಂತಾನಮಂತರೇಣ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಸಂತಾನ' ಎಂಬ ಪದಕ್ಕೆ ಪರಂಪರೆ ಎಂದರ್ಥ. 'ಅವಿಚ್ಛೇದಾತ್' ಎಂಬ ಸೂತ್ರದಲ್ಲಿ ಹೇಳಿದ ಹೇತ್ವಂಶವನ್ನು ವಿವರಣೆ ಮಾಡುವುದಕ್ಕಾಗಿ 'ಪ್ರತಿಕ್ಷಣಂ' ಇತ್ಯಾದಿ ವಾಕ್ಯವು ಹೊರಟಿದೆ. 'ಸ್ವಕಾರ್ಯವಿಯೋಗಕಾಲೇ' ಎಂದರೆ ಕಾರ್ಯೋತ್ಪತ್ತಿಯಾಗುವ ಕ್ಷಣದಲ್ಲಿ ಕಾರಣವು ಇದ್ದೇ ಇರುತ್ತದೆ. ಕ್ಷಣಿಕಪದಾರ್ಥಕ್ಕೆ ಉತ್ಪತ್ತಿಕಾಲವೇ ನಾಶಕಾಲವಾಗಿದೆ. ನಾಶವಾಗುವ ಕಾಲದಲ್ಲೂ ಕಾರಣ ಇದ್ದು ಕಾರ್ಯವನ್ನು ಹುಟ್ಟಿಸಬೇಕು ಎಂಬುದು ಇದರ ಅರ್ಥ. ಈ ಸಂದರ್ಭದಲ್ಲಿ ಉಲ್ಲೇಖ ಮಾಡಿದ ಹೇತುವನ್ನು 'ಕಾರಣೇ ಸತಿ' ಇತ್ಯಾದಿಯಾಗಿ ಯೋಜನೆ ಮಾಡುತ್ತಿದ್ದಾರೆ.

ವಿವರಣೆ - ಪ್ರಥಮ ಕ್ಷಣದಲ್ಲಿ ಹುಟ್ಟಿ, ದ್ವಿತೀಯಕ್ಷಣದಲ್ಲಿ ತಾನು ಸಂತಾನವನ್ನು ಹುಟ್ಟಿಸಿ, ತೃತೀಯಕ್ಷಣದಲ್ಲಿ ಸಂತಾನದ ಜೊತೆ ತಾನು ನಾಶವಾಗುತ್ತದೆಂದು ಹೇಳಬೇಕು. ಇದನ್ನೇ ಆತ್ಯಂತಿಕನಾಶವೆಂದು ಟೀಕೆಯಲ್ಲಿ ಹೇಳಿದ್ದಾರೆ. (ವಾಕ್ಯಾರ್ಥವಿವರಣ)

ಸಂತಾನವು ನಿತ್ಯವೆಂದು ಹೇಳಿದರೆ ?

**तत्वप्रकाशिका – सन्तानो नित्य एवेति चेन्न । प्रलयानुपपत्तेः । विविक्ततया प्रलयोपपत्तिरिति निरस्तम् । सन्तानस्य नित्यत्वे क्षणिकत्वविरोधः । अवास्तवत्वान्नासौ क्षणिक इति चेन्न । सन्तानिनामपि तथात्वापातात् । न हि सन्ति सन्तानिनो न सन्तान इति युक्तम् ।**

ಸಂತಾನವು ನಿತ್ಯವೇ ಆಗಿದೆ ಎನ್ನಬಾರದು. ಹಾಗಾದಲ್ಲಿ ಪ್ರಳಯವು ಅನುಪಪನ್ನವಾಗುತ್ತದೆ. ವಿರಳವಾದಾಗ ಪ್ರಳಯವನ್ನು ಕೂಡಿಸಬಹುದಲ್ಲವೆ ? ಎಂಬುದನ್ನು ಈಗಾಗಲೇ ನಿರಾಕರಿಸಿದ್ದಾಗಿದೆ. ಸಂತಾನವು ನಿತ್ಯವಾದರೆ ಕ್ಷಣಿಕತ್ವದ ವಿರೋಧವು ಬರುತ್ತದೆ. ಅವಾಸ್ತವ-ವಾದ್ದರಿಂದ ಕ್ಷಣಿಕವಲ್ಲ ಎಂದು ಹೇಳಿದರೆ ಸಂತಾನಿಗಳೂ ಕೂಡ ಅವಾಸ್ತವವಾಗುತ್ತವೆ. ಸಂತಾನಿಗಳು ಇರುತ್ತವೆ, ಸಂತಾನವು ಇರುವುದಿಲ್ಲ ಎನ್ನುವುದು ಯುಕ್ತವಲ್ಲ.

**भावदीपः – विविक्ततयेति ।।** मिलिताणूनां विरलतयावस्थानं प्रलय इति निरस्तम्। तेभ्यो विसदृशमिलिताणूनामुत्पत्त्ययोगादेरुक्तत्वादिति भावः ।। २२ ।।

ಮಿಲಿತವಾದ ಅಣುಗಳು ವಿರಳವಾದ ಅವಸ್ಥೆಯನ್ನು ಹೊಂದುವಿಕೆಯೇ ಪ್ರಳಯ ಎಂಬುದಾಗಿ ಬೌದ್ಧರು ಹೇಳುತ್ತಾರೆ. ಇದನ್ನೂ ಕೂಡ ಈಗ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ವಿರಳವಾದ ಪರಮಾಣುಗಳಿಂದ ವಿಸದೃಶವಾದ ಮಿಲಿತವಾದ ಅಣುಗಳು ಉತ್ಪನ್ನವೇ ಆಗುವುದಿಲ್ಲ ಎಂಬುದಾಗಿ ಇಲ್ಲಿಯತನಕ ಸಮರ್ಥನೆ ಮಾಡಲಾಗಿದೆ.

ವಿವರಣೆ - ವಿರಳಪರಮಾಣುಗಳಿಂದ ನಿಬಿಡಪರಮಾಣುಗಳು ಹುಟ್ಟುವುದಿಲ್ಲ. ನಿಬಿಡಪರಮಾಣುಗಳಿಂದ ನಿಬಿಡಪರಮಾಣುಗಳೇ ಹುಟ್ಟುತ್ತವೆ. ಆದ್ದರಿಂದ ಪ್ರಳಯವೇ ಇಲ್ಲವೆಂದಾಗುತ್ತದೆಂಬುದು ಅಭಿಪ್ರಾಯ.

ಸಮುದಾಯವೂ ಸಹ ವಾಸ್ತವವಲ್ಲ

**तत्वप्रकाशिका – एतेन समुदायस्यावास्तवत्वं परास्तम् ।**

ಸಂತಾನವು ನಿತ್ಯವಾದರೆ ಕ್ಷಣಿಕತ್ವದಿಂದ ವಿರೋಧ ಬರುತ್ತದೆ. ಆದ್ದರಿಂದ ಸಂತಾನವನ್ನು ಅವಾಸ್ತವವೆಂದು ಅವರು ಉತ್ತರಿಸಬೇಕು. ಆಗ ಸಂತಾನಿಯು ಕೂಡ ಅವಾಸ್ತವವೇ ಆಗಬೇಕಾಗುತ್ತದೆ.

ಸಮುದಾಯವನ್ನು ಪ್ರತ್ಯೇಕವೆಂದು ಹೇಳಿದರೆ ?

**तत्वप्रकाशिका – समुदायोऽपि समुदायिमात्रं तदतिरिक्तो वा । नाद्यः विरोधात् । द्वितीये स एवावयवी । अवास्तवत्वे घटादिबुद्धीनां निरालम्बनत्वापातात् । परमाणव एवालम्बनमिति चेन्न । तेषामनेकत्वादतीन्द्रियत्वाच्चेति ।।**

ಸಮುದಾಯವು ಸಮುದಾಯಿಸ್ವರೂಪವೋ ಅಥವಾ ಅತಿರಿಕ್ತವೋ? ಸಮುದಾಯಿಸ್ವರೂಪ ಎಂದರೆ ವಿರೋಧ. ಅತಿರಿಕ್ತ ಎಂದರೆ ಸಮುದಾಯವೇ ಅವಯವಿ ಎಂದಂತಾಯಿತು. ಇದನ್ನು ಅವಾಸ್ತವವೆಂದರೆ ಘಟ ಮೊದಲಾದ ಬುದ್ಧಿಗೆ ವಿಷಯವೇ ಇಲ್ಲ ಎಂದಾಗುತ್ತದೆ. ಪರಮಾಣುಗಳೇ ವಿಷಯವಾಗುತ್ತವೆಂದು ಹೇಳಲಾಗದು. ಪರಮಾಣುಗಳು ಅನೇಕವಾಗಿವೆ. ಹಾಗೂ ಅತೀಂದ್ರಿಯವಾಗಿವೆ. ಆದ್ದರಿಂದ ಪರಮಾಣುಗಳು ವಿಷಯವಾಗುವುದಿಲ್ಲ.

## ಬ್ರಹ್ಮಸೂತ್ರ

'ಉಭಯಥಾ ಚ ದೋಷಾತ್' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – उभयथा च दोषात् ।।**

ಕಾರಣವಿದ್ದಾಗ ಕಾರ್ಯವಾಗಲೇ ಬೇಕು ಎಂಬ ನಿಯಮವನ್ನು ಒಪ್ಪಿದರೂ ಅಥವಾ ಒಪ್ಪದೇ ಇದ್ದರೂ ದೋಷವಿರುವ ಕಾರಣ ಬೌದ್ಧರ ಪಕ್ಷವು ಅಯುಕ್ತವಾಗಿದೆ.

ಅರ್ಥ -- ಉಭಯಥಾ = ಕಾರಣವಿದ್ದಾಗ ಕಾರ್ಯವಾಗಲೇ ಬೇಕು ಎಂಬ ನಿಯಮವನ್ನು ಒಪ್ಪಿದಲ್ಲಿ, ಅಥವಾ ಒಪ್ಪದಿದ್ದಲ್ಲಿ, ದೋಷಾತ್ = ಕಾರ್ಯಕಾರಣವಿಶೇಷಕಾರ್ಯಾನುತ್ಪತ್ತಿ ಎಂಬ ದೋಷವು ಬರುತ್ತದೆ. ಆದ್ದರಿಂದ ಒಂದು ಪಕ್ಷವನ್ನು ಅವಲಂಬಿಸಿ, ಅರ್ಥಾಪತ್ತಿಯಿಂದ ಕ್ಷಣಿಕತ್ವಪಕ್ಷವನ್ನು ಹೇಳುವುದು ಅಯುಕ್ತವಾಗುತ್ತದೆ.

## ಬ್ರಹ್ಮಸೂತ್ರಭಾಷ್ಯ

**ब्रह्मसूत्रभाष्यम् – ।। उभयथा च दोषात् ।।६।।**

**कारणे सति कार्यं भवत्येवेति नियमे सर्वदा कार्यभावान्न कार्यकारणविशेषः। अनियमे कार्यानुत्पत्तिः ।।६।।**

ಅನುವಾದ - ಕಾರಣವಿದ್ದ ಮೇಲೆ ಕಾರ್ಯವು ಆಗಲೇಬೇಕೆಂಬ ನಿಯಮವನ್ನು ಒಪ್ಪಿದರೆ ಯಾವಾಗಲೂ ಕಾರ್ಯವು ಆಗುವುದರಿಂದ ಕಾರ್ಯಕಾರಣಗಳ ಪೂರ್ವಾಪರಿಭಾವವು ಅಯುಕ್ತವಾಗುತ್ತದೆ. ನಿಯಮವಿಲ್ಲವೆಂದು ಹೇಳಿದರೆ ಕಾರ್ಯದ ಉತ್ಪತ್ತಿಯೇ ಆಗದಿರಬೇಕಾದೀತು.

ಪ್ರತಿಪದಾರ್ಥ -- ಕ್ಷಣಿಕತ್ವವನ್ನು ಒಪ್ಪಲೇ ಬೇಕೆಂಬ ಅಭಿಪ್ರಾಯವನ್ನು ಖಂಡನೆ ಮಾಡಲು ಮುಂದಿನಸೂತ್ರ ಹೊರಟದೆ. ಕಾರಣೇ ಸತಿ = ಕಾರ್ಯ ಇದ್ದಮೇಲೆ, ಕಾರ್ಯಂ = ಕಾರ್ಯವು, ಭವತ್ಯೇವ = ಆಗಲೇ ಬೇಕು. ಇತಿ = ಹೀಗೆ, ನಿಯಮೇ = ನಿಯಮ ಇರುವುದರಿಂದ, ಸರ್ವದಾ = ಯಾವಾಗಲೂ, ಕಾರ್ಯಭಾವಾತ್ = ಕಾರ್ಯವು ಇರುವುದರಿಂದ, ನ ಕಾರ್ಯಕಾರಣವಿಶೇಷಃ = ಕಾರ್ಯ ಹಾಗೂ ಕಾರಣವೆಂಬ ವ್ಯತ್ಯಾಸವೇ ಸರಿಯಲ್ಲ, ಅನಿಯಮೇ = ಈ ನಿಯಮವು ಇಲ್ಲವೆಂದು ಒಪ್ಪಿದರೆ, ಕಾರ್ಯಅನುತ್ಪತ್ತಿಃ = ಕಾರ್ಯದ ಉತ್ಪತ್ತಿಯೇ ಯಾವಾಗಲೂ ಆಗದಿರಬೇಕಾದೀತು.

## ಸತ್ತರ್ಕದೀಪಾವಳಿ

ಒಂದೇ ಕಾಲದಲ್ಲಿರುವ ಎರಡು ಪದಾರ್ಥಗಳಿಗೆ ಕಾರ್ಯಕಾರಣಭಾವ ಕೂಡುವುದಿಲ್ಲ

**सत्तर्कदीपावलिः –** कारणे सति कार्यं भवत्येवेत्यनेन कारणक्षण एव कार्यं भवतीत्युक्तत्वात् । कार्यकारणयोरेककालत्वेन गोभृङ्ग्योरिव न कार्यकारणभावः एकस्मिन् क्षणे शङ्कनीयः । निरंशत्वाभ्युपगमात् क्षणस्य । तदाह – उभयथेत्यादिना ।

ಕಾರಣವಿದ್ದರೆ ಕಾರ್ಯವಾಗಲೇ ಬೇಕು ಎಂಬ ನಿಯಮವನ್ನು ಬೌದ್ಧರು ಅಂಗೀಕರಿಸಿದ್ದಾರೆ. ಇದರಿಂದ ಕಾರಣವಿರುವ ಕ್ಷಣದಲ್ಲೇ ಕಾರ್ಯವೂ ಕೂಡ ಇರುತ್ತದೆಂದು ಹೇಳಿದಂತಾಗುತ್ತದೆ. ಕಾರ್ಯ ಹಾಗೂ ಕಾರಣಗಳು ಒಂದೇ ಕಾಲದಲ್ಲಿದ್ದಾಗ ಹಸುವಿನ ಎರಡು ಕೋಡುಗಳಿಗೆ ಹೇಗೆ ಪರಸ್ಪರ ಕಾರ್ಯಕಾರಣಭಾವವು ಇರುವುದಿಲ್ಲವೋ, ಅದರಂತೆ ಈ ಕಾರ್ಯಕಾರಣಗಳನ್ನೂ ಕೂಡ ಯಾವುದು ಕಾರ್ಯ, ಯಾವುದು ಕಾರಣ ಎಂದು ನಿರ್ಧಾರ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಒಂದೇ ಕ್ಷಣದಲ್ಲಿ ಕಾರ್ಯಕಾರಣಭಾವವನ್ನು ಹೇಳಲಾಗದು. ಕ್ಷಣವನ್ನು ನಿರಂಶವೆಂದು ಅಂಗೀಕಾರ ಮಾಡಿರುವುದರಿಂದ ಅದರಲ್ಲಿರುವ ಅವಾಂತರ ಪ್ರಭೇದದಿಂದದಲೂ ಕಾರ್ಯಕಾರಣಭಾವವನ್ನು ಉಪಪಾದನೆ ಮಾಡಲು ಬರುವುದಿಲ್ಲ. ಈ ವಿಷಯವನ್ನು 'ಉಭಯಥಾ' ಇತ್ಯಾದಿ ಭಾಷ್ಯದಿಂದ ಸಮರ್ಥನೆ ಮಾಡಿರುತ್ತಾರೆ.

## ತತ್ವಪ್ರದೀಪ

### ಕಾರ್ಯಕಾರಣಭಾವದ ಕಲ್ಪನೆ ತಪ್ಪು

**तत्वप्रदीपः – उभयथा च दोषात् । यदा कारणं भवति तदा कार्यं भवत्येवेति नियमे कारणकाले सर्वदाकार्यभावान्न कार्यकारणयोर्विशेषः । सव्येतरगोविषाणवद्युगपद्भावित्वात् । अथ नासौ नियमस्तर्हि कारणक्षणेऽनुत्पन्नं कार्यं नैवोत्पद्येत पश्चात्कारणाभावात् । नचैकस्मिन्नेव क्षणे पूर्वापरीभावः । पूर्वापरकालकलाविकलो हि क्षण इष्यते ।**

ಯಾವಾಗ ಕಾರಣವಿರುತ್ತದೋ, ಆಗ ಕಾರ್ಯ ಸರ್ವಥಾ ಆಗುತ್ತದೆ ಎಂಬ ನಿಯಮವನ್ನು ಬೌದ್ಧರು ಅಂಗೀಕಾರ ಮಾಡಿರುತ್ತಾರೆ. ಹೀಗೊಪ್ಪಿದರೆ ಕಾರಣವಿರುವ ಕಾಲದಲ್ಲಿ ಯಾವಾಗಲೂ ಕಾರ್ಯ ಇದ್ದೇ ಇರುತ್ತದೆಂದು ಹೇಳಿದಂತಾಯಿತು. ಆಗ ಕಾರ್ಯ ಹಾಗೂ ಕಾರಣಗಳಿಗೆ ಯಾವುದೇ ವ್ಯತ್ಯಾಸ ತೋರಿಸಿದಂತೆ ಆಗುವುದಿಲ್ಲ. ಹಸುವಿನ ಎಡ ಹಾಗೂ ಬಲ ಭಾಗದ ಕೋಡುಗಳಂತೆ ಒಟ್ಟಿಗೆ ಕಾರ್ಯಕಾರಣಗಳು ಇರುತ್ತವೆಂದು ಅಂಗೀಕರಿಸಿರುತ್ತಾರೆ.

ಈ ನಿಯಮವನ್ನು ಅಂಗೀಕರಿಸುವುದಿಲ್ಲವೆಂದು ಹೇಳಿದರೆ ಆಗ ಕಾರಣವಿರುವ ಕ್ಷಣದಲ್ಲಿ ಕಾರ್ಯವು ಹುಟ್ಟುವುದಿಲ್ಲ ಎಂದು ಹೇಳಿದಂತಾಯಿತು. ಆಗ ಎಂದೂ ಕೂಡ ಕಾರ್ಯವು ಹುಟ್ಟಲು ಸಾಧ್ಯವೇ ಆಗುವುದಿಲ್ಲ. ಏಕೆಂದರೆ ಅದಕ್ಕೆ ಯಾವುದೇ ಕಾರಣವೇ ಇರುವುದಿಲ್ಲ ಎಂದು ಒಂದೇ ಕ್ಷಣದಲ್ಲಿ ಪೌರ್ವಾಪರ್ಯಭಾವವನ್ನು ಅಂಗೀಕರಿಸಿ ಒಂದೇ ಕ್ಷಣದಲ್ಲಿ ಹಿಂದಿನ ಭಾಗ ಹಾಗೂ ಮುಂದಿನ ಭಾಗವೆಂಬ ಪ್ರಭೇದವನ್ನು ಅಂಗೀಕರಿಸಿ, ಕಾರ್ಯಕಾರಣಭಾವವನ್ನು ಉಪಪಾದನೆ ಮಾಡುತ್ತೇವೆ ಎನ್ನಬೇಕು. ಆದರೆ ಬೌದ್ಧರು 'ಪೂರ್ವಾಪರಕಾಲಕಲಾವಿಕಲೋ ಹಿ ಕ್ಷಣಃ' 'ಹಿಂದಿನ ಮುಂದಿನ ಭಾಗವಿಲ್ಲದ ಕಲೆಯೇ ಕ್ಷಣ' ಎಂದು ಕರೆಯುತ್ತಾರೆ.

ವಿವರಣೆ - 'ಕಾರಣವಿದ್ದರೆ ಕಾರ್ಯ ಆಗಲೇಬೇಕು' ಎಂಬ ನಿಯಮವನ್ನು ಈ ಸೂತ್ರದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಈ ನಿಯಮವನ್ನು ಒಪ್ಪಿದರೆ ಯಾವಾಗಲೂ ಕಾರ್ಯವು ಇರಬೇಕಾಗುತ್ತದೆ. ಈ ನಿಯಮ ಒಪ್ಪದಿದ್ದರೆ ಕಾರ್ಯದ ಉತ್ಪತ್ತಿಯೇ ಕೂಡುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ. ಹಿಂದೆ ಯಾವಾಗಲೂ ಕಾರ್ಯವು ಉತ್ಪನ್ನವೇ ಆಗುತ್ತಿರಲಿಲ್ಲ ಎಂಬುದಾಗಿ ಆಕ್ಷೇಪವನ್ನು ಮಾಡಲಾಗಿತ್ತು. ಈ ಆಕ್ಷೇಪಕ್ಕೆ ಬೌದ್ಧರು ಹೀಗೆ ಉತ್ತರಿಸುತ್ತಾರೆ - ಯಾವುದೇ ಒಂದು ವಸ್ತು ಮತ್ತೊಂದು ವಸ್ತುವನ್ನು ಹುಟ್ಟಿಸಿ, ತಾನು ನಾಶವಾಗಬೇಕು. ಇಲ್ಲದಿದ್ದರೆ ಆ ವಸ್ತು ಅರ್ಥಕ್ರಿಯಾಕಾರಿಯೇ ಆಗುವುದಿಲ್ಲ. ಮತ್ತು ಮೊದಲಿರುವ ವಸ್ತು ನಾಶವಾಗದೇ ಇದ್ದರೆ ಒಂದೇ ಘಟವೆಂಬ ಪದಾರ್ಥವು ಜಗತ್ತಿನಲ್ಲೆಲ್ಲಾ ತುಂಬಿ ಹೋಗಬೇಕಾಗುತ್ತದೆ. ಆದ್ದರಿಂದ ಪೂರ್ವವಸ್ತುವಿಗೆ ನಾಶವನ್ನೂ ಕೂಡ ಒಪ್ಪಬೇಕು ಎನ್ನುತ್ತಾರೆ.

ಇವರ ಈ ಕಲ್ಪನೆ ಅಯುಕ್ತವಾಗಿದೆ. ಅರ್ಥಕ್ರಿಯಾಕಾರಿತ್ವ ಎಂದರೆ ಮತ್ತೊಂದು ವಸ್ತುವನ್ನು ಹುಟ್ಟಿಸಬೇಕು, ಕಾರಣವಿದ್ದರೆ ಕಾರ್ಯವಾಗಲೇ ಬೇಕು. ಇತ್ಯಾದಿಯಾಗಿ ಬೌದ್ಧರ ಯಾವ ಕಲ್ಪನೆ ಇದೆಯೋ, ಇದು ಅಯುಕ್ತ. ಏಕೆಂದರೆ ಕಾರಣವು ಕ್ಷಣಿಕವಾಗಿದೆ. ಮೊದಲ ಕ್ಷಣದಲ್ಲಿ ಕಾರಣವಿದ್ದ ಮೇಲೆ ಎರಡನೆಯ ಕ್ಷಣದಲ್ಲಿ ಅದು ಇರಲು ಸಾಧ್ಯವೇ ಇಲ್ಲ. ಹೀಗೆ ಬೌದ್ಧರು ಅಂಗೀಕರಿಸಿದ್ದಾರೆ. ಈ ಸಂದರ್ಭದಲ್ಲಿ ಕಾರಣವಿದ್ದರೆ ಕಾರ್ಯ ಆಗಲೇಬೇಕೆಂಬ ನಿಯಮವನ್ನು ಒಪ್ಪಿದರೆ ಕಾರ್ಯವೂ ಕೂಡ ಕಾರಣವಿರುವ ಮೊದಲನೆಯ ಕ್ಷಣದಲ್ಲೇ ಇರಬೇಕಾಗುತ್ತದೆ. ಆಗ ಕಾರ್ಯಕಾರಣಗಳಿಗೆ ಒಂದೇ ಕಾಲದಲ್ಲಿರುವ ಸ್ಥಿತಿ ಬರುತ್ತದೆ. ಹಸುವಿನ ಎರಡು ಕೊಂಬುಗಳು ಒಟ್ಟಿಗೆ ಇವೆ. ಎಡಭಾಗದ ಕೊಂಬಿಗೆ ಬಲಭಾಗದ

ಕೊಂಬು ಕಾರಣ ಎಂದು ಯಾರೂ ಹೇಳುವುದಿಲ್ಲ. ಆದ್ದರಿಂದ ಕಾರಣವಿದ್ದರೆ ಕಾರ್ಯ ಆಗಲೇಬೇಕೆಂಬ ನಿಯಮವನ್ನು ಅನಿವಾರ್ಯವಾಗಿ ತ್ಯಾಗ ಮಾಡಬೇಕು. ಆಗ ಮೊದಲಿರುವ ವಸ್ತುವು ಮುಂದಿನ ಕ್ಷಣದಲ್ಲಿ ಮತ್ತೊಂದು ವಸ್ತುವನ್ನು ಉತ್ಪತ್ತಿ ಮಾಡುವುದಿಲ್ಲ. ಆಗ ಅರ್ಥಕ್ರಿಯಾಕಾರಿತ್ವರೂಪವಾದ ಸತ್ವವು ಮೊದಲ ಕ್ಷಣದಲ್ಲಿರುವ ವಸ್ತುವಿಗೆ ಪ್ರಾಪ್ತವಾಗುವುದಿಲ್ಲ. ಅರ್ಥಾತ್ ಆ ಕಾರಣಪದಾರ್ಥವು ಅಸತ್ ಎಂದು ಒಪ್ಪಿದಂತಾಯಿತು. ಇಂಥ ಅಸತ್ಯವಾದ ವಸ್ತುವಿನಿಂದ ಎಂದೂ ಕೂಡ ಕಾರ್ಯವು ಹುಟ್ಟುವುದಿಲ್ಲ. ಹೀಗೆ ಕಾರಣವು ಇನ್ನೊಂದು ಕ್ಷಣದಲ್ಲೂ ಇದ್ದರೆ ಕ್ಷಣಿಕತ್ವವೇ ಭಂಗವಾಗುತ್ತದೆ. ಒಂದೇ ಕ್ಷಣದಲ್ಲಿದ್ದರೆ, ಆ ಒಂದೇ ಕ್ಷಣದಲ್ಲಿ ಕಾರ್ಯವೂ ಕೂಡ ಇರಬೇಕಾಗುತ್ತದೆ. ಆಗ ಯಾವುದು ಕಾರಣವೆಂಬ ನಿರ್ಣಯವೇ ಅಸಾಧ್ಯವಾಗುತ್ತದೆ. ಈ ಕಾರಣದಿಂದ ಕ್ಷಣಿಕತ್ವದ ಸಮರ್ಥನೆಯನ್ನು ಬೌದ್ಧರಿಂದ ಮಾಡಲು ಸಾಧ್ಯವಾಗುವುದಿಲ್ಲ ಎಂದು ನಿರ್ಣಯವಾಗುತ್ತದೆ.

### ತತ್ವಪ್ರಕಾಶಿಕಾ

### ಅರ್ಥಕ್ರಿಯಾಕಾರಿತ್ವಕ್ಕೋಸ್ಕರವೇ ಕ್ಷಣಿಕತ್ವವನ್ನು ಒಪ್ಪಬೇಕು

**तत्वप्रकाशिका – तथापि न सतां भावानां क्षणिकता शक्या निषेद्धुम् । अर्थक्रियाकारित्वं खलु सत्त्वं नाम । न च तत्क्षणिकतामन्तरेणोपपन्नम् । यद्याद्यक्षणे घटो घटान्तरमुत्पाद्य न स्वयं नश्यति तदा घटान्तरमपि तथेत्यनन्तकार्यापत्तिः । अतोऽर्थक्रियाकारित्वसत्त्वसिद्ध्यै क्षणिकत्वमेष्टव्यं भावानामित्याशङ्कां परिहरत्सूत्रमुपन्यस्य व्याचष्टे – उभयथेति ।।**

ಆದರೂ ಕೂಡ ಸತ್ಯಭೂತವಾದ ಭಾವಪದಾರ್ಥಗಳಿಗೆ ಕ್ಷಣಿಕತ್ವವನ್ನು ನಿಷೇಧ ಮಾಡಲು ಸಾಧ್ಯವಿಲ್ಲ. ಸತ್ವವೆಂದರೆ ಅರ್ಥಕ್ರಿಯಾಕಾರಿತ್ವ ಎಂದರ್ಥ. ಕ್ಷಣಿಕತ್ವವಿಲ್ಲದೆ ಈ ಅರ್ಥಕ್ರಿಯಾಕಾರಿತ್ವವು ಯುಕ್ತವಾಗುವುದಿಲ್ಲ. ಒಂದುವೇಳೆ ಪ್ರಥಮಕ್ಷಣದಲ್ಲಿ ಘಟವು ಮತ್ತೊಂದು ಘಟವನ್ನು ಹುಟ್ಟಿಸಿ ನಾಶವಾಗದಿದ್ದರೆ ಆಗ ಘಟಾಂತರವೂ ಕೂಡ ಮತ್ತೊಂದು ಘಟವನ್ನು ಹುಟ್ಟಿಸಿ ನಾಶವಾಗದೆ ಇರುವುದರಿಂದ ಅನಂತ ಕಾರ್ಯಗಳು ಹಾಗೆಯೇ ಉಳಿಯುವ ಪ್ರಸಂಗ ಬರುತ್ತದೆ. ಆದ್ದರಿಂದ ಅರ್ಥಕ್ರಿಯಾಕಾರಿತ್ವದ ಸಿದ್ಧಗೋಸ್ಕರವೇ ಭಾವಪದಾರ್ಥಗಳಿಗೆ ಕ್ಷಣಿಕತ್ವವನ್ನು ಅಂಗೀಕಾರ ಮಾಡಬೇಕು.

ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಉಭಯಥಾ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಭಾವದೀಪ

**भावदीपः – ।। उभयथा च दोषात् ।। २३ ।।** अर्थापत्तिनिरासपरत्वं स्फोरयन् परिष्कृत्य भाष्यं व्याचष्टे॥ **अर्थक्रियाकारित्वं सत्त्वमिति ।।**

ಅರ್ಥಾಪತ್ತಿನಿರಾಸತ್ವವನ್ನು ಸ್ಪಷ್ಟ ಪಡಿಸುವ ಮೂಲಕ ಪರಿಷ್ಕಾರ ಮಾಡಿ ಭಾಷ್ಯವನ್ನೇ ವ್ಯಾಖ್ಯಾನ ಮಾಡಲು 'ಅರ್ಥಕ್ರಿಯಾಕಾರಿತ್ವಂ ಸತ್ತ್ವಮ್' ಎಂಬ ಟೀಕಾ ಪಂಕ್ತಿಯು ಹೊರಟಿದೆ.

ವಿವರಣೆ - 'ಜಗತ್ತು ಕ್ಷಣಿಕವಾಗಿದೆ' ಎಂಬ ವಿಷಯದಲ್ಲಿ ಅರ್ಥಾಪತ್ತಿಯನ್ನು 'ತಥಾಪಿ' ಇತ್ಯಾದಿಯಾಗಿ ಆಶಂಕಿಸುತ್ತಿದ್ದಾರೆ.

ಬೌದ್ಧರು ಹೇಳುವ ಅರ್ಥಕ್ರಿಯಾಕಾರಿತ್ವವೆಂದರೆ ಕುರ್ವದ್ರೂಪವೆಂದು ವಿವಕ್ಷಿಸಬೇಕು.

### ಅರ್ಥಕ್ರಿಯಾಕಾರಿತ್ವದ ಅನ್ಯಥಾನುಪಪತ್ತಿಯಿಂದ ಕ್ಷಣಿಕತ್ವವು ಸಿದ್ಧವಾಗುವುದಿಲ್ಲ

**तत्वप्रकाशिका – अर्थक्रियाकारित्वं सत्त्वं तदन्यथानुपपत्त्या क्षणिकत्वं भावानामिति वदन् प्रष्टव्यो जायते । कारणे सति कार्यं भवत्येवेति नियमोऽस्ति न वेति । यद्यस्ति तदा कार्यस्यापि यावत्कारणभावित्वाभावेना-सत्त्वापत्त्या न कदापि ततः कार्योत्पत्तिः स्यात् तथा च क्षणिकता व्याहन्यत इति भावः ।**

ಅರ್ಥಕ್ರಿಯಾಕಾರಿತ್ವವೇ ಸತ್ವವೆನಿಸುತ್ತದೆ. ಇದರ ಅನ್ಯಥಾನುಪಪತ್ತಿಯಿಂದ ಭಾವಪದಾರ್ಥಗಳಿಗೆ ಕ್ಷಣಿಕತ್ವವನ್ನು ಹೇಳುವ ಬೌದ್ಧರನ್ನು ಕುರಿತು ಪ್ರಶ್ನಿಸುತ್ತೇವೆ. ಕಾರಣವಿದ್ದಾಗ ಕಾರ್ಯವು ಇದ್ದೇ ಇರುತ್ತದೆ ಎಂಬ ನಿಯಮವನ್ನು ಒಪ್ಪುತ್ತಿಯೋ ಇಲ್ಲವೋ ? ಒಪ್ಪುವುದಾದರೆ ಆಗ ಕಾರ್ಯವೂ ಕೂಡ ಕಾರಣ ಇರುವಾಗಲೆಲ್ಲಾ ಇದ್ದೇ ಇರುತ್ತದೆಂದು ಹೇಳಿದಂತಾಯಿತು. ಆಗ ಅವುಗಳಿಗೆ ಕಾರ್ಯಕಾರಣಭಾವವು ಕೂಡುವುದಿಲ್ಲ. ಹಸುವಿನ ಎಡಕೊಂಬು ಹಾಗೂ

ಬಲ ಕೊಂಬುಗಳಿಗೆ ಹೇಗೆ ಕಾರ್ಯಕಾರಣಭಾವ ಇಲ್ಲವೋ ಅದರಂತೆ. ಒಂದು ವೇಳೆ ಈ ನಿಯಮವನ್ನು ಒಪ್ಪದಿದ್ದರೆ ಆಗ ಕಾರಣ ಇರುವ ಕಾಲದಲ್ಲೇ ಅರ್ಥಕ್ರಿಯಾಕಾರಿತ್ವವು ಇಲ್ಲ ಎಂದು ಹೇಳಿದಂತಾಗುವುದರಿಂದ ಅದು 'ಅಸತ್' ಆಗುತ್ತದೆ. ಆಗ ಯಾವಾಗಲೂ ಕೂಡ ಅದರಿಂದ ಉತ್ಪತ್ತಿಯೇ ಆಗದಿರುವ ಪರಿಸ್ಥಿತಿ ಬರುತ್ತದೆ. ಆದ್ದರಿಂದ ವಸ್ತುಗಳ ಕ್ಷಣಿಕತ್ವವು ವ್ಯಾಹತವಾಗಬೇಕಾಗುತ್ತದೆ.

**भावदीपः – तथा च क्षणिकतेति ।।** सत्वस्यैवाभावे सत्वरूप कल्पकक्षणिकत्वं कल्प्यम् कल्पकाभावादिति भावः ।। २३ ।।

'ತಥಾ ಚ ಕ್ಷಣಿಕತಾ' ಎಂದರೆ ಸತ್ವವೇ ಇಲ್ಲದಿದ್ದರೆ ಯಾವುದೇ ಕಲ್ಪಕವಿಲ್ಲದ್ದರಿಂದ ಕ್ಷಣಿಕತ್ವವೇ ವ್ಯಾಹತವಾಗಬೇಕಾಗುತ್ತದೆಂದು ಅಭಿಪ್ರಾಯ.

### ಘಟಾದಿಗಳು ಹೇಗೆ ಅರ್ಥಕ್ರಿಯಾಕಾರಿ ?

**तत्वप्रकाशिका – न च वाच्यं कथं तर्हि घटादिसत्त्वव्यवस्थेति । जलाहरणादियोग्यतयैव तदुपपत्तेः ।।**

ಹಾಗಾದರೆ ಘಟಾದಿಗಳ ಸತ್ವವ್ಯವಸ್ಥೆ ಹೇಗೆ ? ಎಂದು ಪ್ರಶ್ನಿಸಬಾರದು. ಜಲಾಹರಣಕ್ರಿಯೆ ಮೊದಲಾದ ಯೋಗ್ಯತೆ ಇರುವುದರಿಂದಲೇ ಘಟಾದಿಗಳ ಸತ್ವವ್ಯವಸ್ಥೆಯು ಯುಕ್ತವಾಗುತ್ತದೆ.

ವಿವರಣೆ - ಕುರ್ವದ್‌ರೂಪತ್ವ ಎಂಬ ಅರ್ಥಕ್ರಿಯಾಕಾರಿತ್ವವನ್ನು ಖಂಡನೆ ಮಾಡಿ ಅದನ್ನು ಅಂಗೀಕಾರ ಮಾಡದಿದ್ದರೆ 'ಜಲಾಹರಣಾದಿ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಆದ್ದರಿಂದ ಜಲಾಹರಣಾದಿಕಾರ್ಯದ ಸಮರ್ಥನೆಯೇ ಅರ್ಥಕ್ರಿಯಾಕಾರಿತ್ವ ಎಂದು ಹೇಳಿದಂತಾಯಿತು. ಇದರಿಂದಲೇ ಘಟಾದಿಗಳಲ್ಲಿ ಸತ್ವವು ಸಿದ್ಧವಾಗುತ್ತದೆ. ಆದ್ದರಿಂದ 'ಕುರ್ವದ್‌ರೂಪತ್ವ' ಎಂಬ ಅರ್ಥಕ್ರಿಯಾಕಾರಿತ್ವದಿಂದ ಘಟಾದಿಗಳ ಸತ್ವವು ಸಿದ್ಧವಾಗುವುದಿಲ್ಲ. ಕಾರ್ಯವು ಕಾರಣಸತ್ತಾಸಮಾನಕಾಲೀನಸತ್ತಾಕವಾಗಿರುತ್ತದೆ. ಆದ್ದರಿಂದ ಯಾವಾಗ ಕಾರಣವಿರುತ್ತದೋ ಆಗಲೇ ಕಾರ್ಯವೂ ಕೂಡ ಇರಬೇಕು. ಎಂಬುದು 'ಯಾವತ್‌ಕಾರಣಭಾವಿತ್ವ' ಎಂಬುದರ ಅಭಿಪ್ರಾಯವಾಗಿದೆ. (ವಾಕ್ಯಾರ್ಥವಿವರಣ)

## ಬ್ರಹ್ಮಸೂತ್ರ

### 'ಆಕಾಶೇ ಚಾವಿಶೇಷಾತ್' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – आकाशे चाविशेषात् ।।**

ಮೊದಲು ಇದ್ದ ದೀಪಜ್ವಾಲೆಯು ಚಿಕ್ಕದಾಗಿದೆ. ಈಗಿರುವ ಜ್ವಾಲೆಯು ದೊಡ್ಡದಾಗಿದೆ. ಆದ್ದರಿಂದ ದೀಪಜ್ವಾಲೆಯನ್ನು ಕ್ಷಣಿಕವೆಂದು ಹೇಳಬಹುದು. ಆದರೆ ಆಕಾಶವು ಯಾವಾಗಲೂ ಒಂದೇ ರೀತಿಯಾಗಿರುವುದರಿಂದ ಯಾವುದೇ ವಿಶೇಷವಿರುವುದಿಲ್ಲ. ಹೀಗಿರುವಾಗ ಕ್ಷಣಿಕವಾದ ದೀಪವನ್ನು ಉದಾಹರಣೆಯನ್ನಾಗಿಟ್ಟುಕೊಂಡು ಎಲ್ಲವನ್ನು ಕ್ಷಣಿಕವೆಂದು ಹೇಳುವಂತೆ ಆಕಾಶದ ದೃಷ್ಟಾಂತವನ್ನಿಟ್ಟುಕೊಂಡು, ಎಲ್ಲವನ್ನು ನಿತ್ಯವೆಂದು ಏಕೆ ಹೇಳಬಾರದು ?

ಅರ್ಥ -- ಚಶಬ್ದವು ಅಪ್ಯರ್ಥದಲ್ಲಿದೆ. ದೀಪದ ದೃಷ್ಟಾಂತದಿಂದ ಮತ್ತು ಸತ್ವಹೇತುವಿನಿಂದ ಜಗತ್ತಿನಲ್ಲಿ ಕ್ಷಣಿಕತ್ವವನ್ನು ಸಾಧನೆ ಮಾಡಿದರೆ, ಆಕಾಶದೃಷ್ಟಾಂತದಿಂದ ಅಕ್ಷಣಿಕವಾದದ್ದನ್ನೂ ಕೂಡ ಸಾಧನೆ ಮಾಡಬೇಕಾಗುತ್ತದೆ. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಆಕಾಶೇऽವಿಶೇಷಾತ್ = ಕ್ಷಣಿಕತ್ವಕ್ಕೆ ಸಾಧಕವಾಗಿ ಪರರು ಹೇಳಿದ ಪರಿಮಾಣದ ವಿಶೇಷವು ಕಾಣಿಸುತ್ತಿಲ್ಲ. ಆದ್ದರಿಂದ ಈ ಹೇತುವು ಸತ್ಪ್ರತಿಪಕ್ಷವಾಗಿದೆ. ಇದರಿಂದ ಕ್ಷಣಿಕತ್ವ ದ ಸಿದ್ಧಿಯು ಉಂಟಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

### ದೀಪದಂತೆ ಜಗತ್ತು ಕ್ಷಣಿಕವಾಗಲು ಸಾಧ್ಯವೆ?

**ब्रह्मसूत्रभाष्यम् –।। आकाशे चाविशेषात् ।।७।।**

**दीपादिषु विशेषदर्शनात् क्षणिकत्वेन अन्यत्रापि क्षणिकत्वमनुमीयते चेदाकाशादिष्वविशेषदर्शनादन्यत्रापि तदनुमीयेत ।।७।।**

ಅನುವಾದ - ದೀಪದ ಜ್ವಾಲೆ ದೀರ್ಘಕಾಲದಲ್ಲಿ ಇದ್ದಂತೆ ಕಂಡರೂ ಪ್ರತಿಕ್ಷಣವೂ ಬೇರೆ ಬೇರೆಯಾಗಿರುತ್ತದೆ. ಅದೇ ರೀತಿಯಾಗಿ ಪ್ರತಿಯೊಂದು ವಸ್ತುಗಳು ನಿರಂತರವಾಗಿ ಇವೆ ಎಂದು

ಕಂಡರೂ ಕ್ಷಣಿಕವಾಗಿರುತ್ತವೆ. ಹೀಗೆ ಬೌದ್ಧರು ಸಾಧನೆ ಮಾಡುತ್ತಾರೆ ಇದು ತಪ್ಪು. ಅನೇಕ ದಿನಗಳು ಕಳೆದರೂ ಆಕಾಶದಲ್ಲಿ ಯಾವ ವಿಶೇಷವು ಕಾಣಿಸುತ್ತಿಲ್ಲ. ಈ ದೃಷ್ಟಾಂತದಿಂದ ಬೇರೆ ಕಡೆಯಲ್ಲಿಯೂ ಕೂಡ ಸಕಲವಸ್ತುಗಳು ಸ್ಥಿರವಾಗಿವೆ ಎಂದು ಅನುಮಾನದಿಂದ ಸಾಧನೆ ಮಾಡಬಹುದು.

ಪ್ರತಿಪದಾರ್ಥ -- ಸತ್ಯವಾದ ಪದಾರ್ಥಗಳೆಲ್ಲವೂ ಕ್ಷಣಿಕವೆಂಬ ವಾದವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರ ಹೊರಟಿದೆ. ದೀಪಾದಿಷು = ದೀಪಾದಿಗಳಲ್ಲಿ, ವಿಶೇಷದರ್ಶನಾತ್ = ಪೂರ್ವೋತ್ತರ-ಕ್ಷಣಗಳಲ್ಲಿ ಪರಿಮಾಣದಲ್ಲಿ ವಿಶೇಷವು ಕಾಣಿಸುತ್ತಿರುವುದರಿಂದ, ಕ್ಷಣಿಕತ್ವೇನ = ಕ್ಷಣಕತ್ವವಿರುವುದು ಅನುಭವ ಸಿದ್ಧವಾಗಿದೆ. ಅನ್ಯತ್ರಾಪಿ = ಘಟಪಟಾದಿಗಳಲ್ಲಿ, ಕ್ಷಣಿಕತ್ವಮ್ = ಕ್ಷಣಿಕತ್ವವನ್ನು, ಅನುಮೀಯತೇ = ಅನುಮಾನ ಮಾಡುತ್ತೇವೆ. ಚೇತ್ = ಹೀಗೆ ಆಕ್ಷೇಪ ಮಾಡಿದರೆ, ಆಕಾಶಾದಿಷು = ಆಕಾಶಾದಿಗಳಲ್ಲಿ, ಅವಿಶೇಷದರ್ಶನಾತ್ = ಯಾವುದೇ ವಿಶೇಷವು ಕಾಣಿಸದ ಕಾರಣ, ಅನ್ಯತ್ರಾಪಿ = ಘಟಪಟಾದಿಗಳಲ್ಲಿ, ತದನುಮೀಯತೇ = ಸ್ಥಿರತ್ವವನ್ನು ಅನುಮಾನ ಮಾಡಬಹುದು.

## ಸತ್ತರ್ಕದೀಪಾವಳಿ

### ಕ್ಷಣಿಕತ್ವಕ್ಕೆ ಬಾಧ

**सत्तर्कदीपावळिः – यदि परिमाणभेदसिद्धक्षणिकत्वाद्दीपवत् सत्वहेतुना जगत्क्षणिकत्वं साध्येत । तर्हि तेनैव हेतुना आकाशवद्दीपादि-जगदक्षणिकत्वसाधनेन तत्क्षणिकत्वबाधः स्यात् ।**

ಒಂದು ವೇಳೆ ಪರಿಮಾಣಭೇದವು ಸಿದ್ಧವಾಗಿರುವ ಕ್ಷಣಿಕತ್ವವುಳ್ಳ ದೀಪದಂತೆ ಸತ್ವಹೇತುವಿನಿಂದ ಜಗತ್ತನ್ನು ಕ್ಷಣಿಕ ಎಂದು ಸಾಧನೆ ಮಾಡುವುದಾದರೆ ಆಗ ಇದೇ ಹೇತುವಿನಿಂದ ಆಕಾಶದಂತೆ ದೀಪ ಮೊದಲಾದ ಜಗತ್ತಿಗೆ ಸ್ಥಾಯಿತ್ವವನ್ನು ಸಾಧನೆ ಮಾಡಲು ಬರುತ್ತದೆ. ಆಗ ನಿಮ್ಮ ಜಗತ್‌ಕ್ಷಣಿಕತ್ವಕ್ಕೆ ಬಾಧವು ಬರುತ್ತದೆ.

## ತತ್ವಪ್ರದೀಪ

### ಕ್ಷಣಿಕವಾದ ದೀಪದಂತೆ ಜಗತ್ತೂ ಕೂಡ ಕ್ಷಣಿಕ ಎಂಬ ಬೌದ್ಧರ ವಾದ

**तत्वप्रदीपः – आकाशे चाविशेषात् । दीपादौ क्षणे क्षणे विशेषदर्शनमनुवर्णयन्तः क्षणिकत्वं सम्प्रतिपिपादायिषन्ति । ततस्तदृष्टान्तेन जगतः क्षणिकत्वमनुमिमते, यत्सत्तत्क्षणिकं यथा दीपादि, सच्च विवादास्पदीभूतमिति ।**

ದೀಪಾದಿಗಳಲ್ಲಿ ಪ್ರತಿಕ್ಷಣವು ಭೇದವು ಕಾಣಿಸುತ್ತಿದೆ ಎಂಬುದಾಗಿ ಬೌದ್ಧರು ತಮ್ಮ ಶಿಷ್ಯಂದಿರಿಗೆ ವರ್ಣನೆ ಮಾಡಿ ಹೇಳುತ್ತಾರೆ. ದೀಪಾದಿಗಳಲ್ಲಿ ಕ್ಷಣಿಕತ್ವವನ್ನು ಚೆನ್ನಾಗಿ ಪ್ರತಿಪಾದನೆ ಮಾಡಲು ಇಚ್ಛಿಸುತ್ತಾರೆ. ವಿಶೇಷದರ್ಶನದಿಂದ ದೀಪಾದಿಗಳು ಕ್ಷಣಿಕವಾಗಿವೆ. ಇಂಥ ದೀಪಾದಿಗಳಲ್ಲಿ ಸತ್ವವಿದೆ. ಇದೇ ಸತ್ವವು ಜಗತ್ತಿನಲ್ಲೂ ಕೂಡ ಇದೆ. ದೀಪದ ದೃಷ್ಟಾಂತದಿಂದ ಜಗತ್ತನ್ನು ಕ್ಷಣಿಕ ಎಂದು ಅನುಮಾನವನ್ನು ಮಾಡುತ್ತಾರೆ. ಅದು ಹೀಗೆ - 'ಯತ್ ಸತ್ ತತ್ ಕ್ಷಣಿಕಂ ಯಥಾ ದೀಪಾದಿಃ ಸಚ್ಚ ವಿವಾದಾಸ್ಪದೀಭೂತಮ್' ಯಾವುದು ಸತ್ ಆಗಿದೆಯೋ, ಅದು ಕ್ಷಣಿಕವಾಗಿದೆ. ಉದಾಹರಣೆ ದೀಪ. ಈ ಜಗತ್ತು ಸತ್ ಆಗಿದೆ. ಆದ್ದರಿಂದ ಕ್ಷಣಿಕವಾಗಲೇ ಬೇಕು.

ವಿವರಣೆ - ಭಾಷ್ಯದ ಮಾತುಗಳಿಗೆ ಸ್ಪಷ್ಟವಾಗಿ ಪಂಡಿತಾಚಾರ್ಯರು ವ್ಯಾಖ್ಯಾನ ಮಾಡುತ್ತಿದ್ದಾರೆ. ದೀಪದಲ್ಲಿ ಪ್ರತಿಕ್ಷಣವು ಭೇದವು ಕಾಣುತ್ತಿದೆ. ಇದೇ ದೀಪದಲ್ಲಿ ಸತ್ವವೂ ಇದೆ. ಭೇದದರ್ಶನದಿಂದ ಯಾವ ದೀಪದಲ್ಲಿ ಕ್ಷಣಿಕತ್ವವು ಸಿದ್ಧವಾಗಿದೆಯೋ, ಅದೇ ದೀಪದಲ್ಲಿ ಸತ್ವವು ಕಾಣಿಸುತ್ತಿದೆ. ಸತ್ವವಿರುವ ದೀಪದಲ್ಲಿ ಕ್ಷಣಿಕತ್ವವನ್ನು ಕಂಡು ಇದರ ದೃಷ್ಟಾಂತದಿಂದ ಜಗತ್ತಿನಲ್ಲೂ ಕೂಡ ಬೌದ್ಧನು ಕ್ಷಣಿಕತ್ವವನ್ನು ಅನುಮಾನ ಮಾಡುತ್ತಿದ್ದಾನೆ. ಯಾವ ಯಾವ ಪದಾರ್ಥವು ಸತ್ ಆಗಿದೆಯೋ, ಅದೆಲ್ಲವೂ ಕ್ಷಣಿಕವಾಗಿ ಇರುತ್ತದೆ. ಜಗತ್ತೂ ಕೂಡ ಸತ್ತಾಗಿರುವುದರಿಂದ ಕ್ಷಣಿಕವಾಗಲೇ ಬೇಕು. ಇಷ್ಟು ಭಾಷ್ಯವಾಕ್ಯದ ಅಭಿಪ್ರಾಯ.

ಸ್ಥಾಯಿಯಾದ ಆಕಾಶದ ಉದಾಹರಣೆಯಿಂದ ಜಗತ್ತೂ ಕೂಡ ಸ್ಥಾಯಿ ಆಗಲಿ

**तत्वप्रदीपः – तत्र प्रतिविधत्ते । एवं चेदाकाशदिगादिष्वविशेषदर्शनात्स्थिरत्वं निदर्शयान्यत्रापि तद्वत्तदनुमीयेत । न च दीपादिष्वपि प्रतिक्षणं विशेषो दृश्यते, येद क्षणिकत्वं निदिदर्शयियेषुः ।**

ಬೌದ್ಧರ ಈ ಅಭಿಪ್ರಾಯವನ್ನು ನಿರಾಕರಣೆ ಮಾಡುತ್ತಿದ್ದಾರೆ. ಸತ್ವವಿರುವ ದೀಪದಲ್ಲಿ ವಿಶೇಷದರ್ಶನದಿಂದ ಕ್ಷಣಿಕತ್ವವಿದೆ ಎಂದು ತಿಳಿದು ಇದರ ಉದಾಹರಣೆಯಿಂದ ಜಗತ್ತಿನಲ್ಲಿ ಕ್ಷಣಿಕತ್ವವನ್ನು ಸಾಧನೆ ಮಾಡುವುದಾದರೆ, ಆಕಾಶ, ದಿಕ್ ಮೊದಲಾದವುಗಳಲ್ಲಿ ಭೇದದರ್ಶನವು ಕಾಣಿಸುತ್ತಿಲ್ಲ. ಆದ್ದರಿಂದ ಇವುಗಳು ಸ್ಥಿರವಾದ ಪದಾರ್ಥಗಳಾಗಿವೆ. ಆದ್ದರಿಂದ ದೀಪದಂತೆ ಈ ಆಕಾಶ ದಿಗಾದಿಗಳಲ್ಲೂ ಸತ್ವವಿದೆ. ಇದೇ ಸತ್ವವೆಂಬ ಹೇತು ಜಗತ್ತಿನಲ್ಲೂ ಇರುವುದರಿಂದ ಆಕಾಶಾದಿಗಳಂತೆ ಜಗತ್ತು ಸ್ಥಿರವಾಗಿದೆ ಎಂದು ಅನುಮಾನ ಮಾಡಬೇಕಾದೀತು.

ವಿಚಾರ ಮಾಡಿದರೆ ದೀಪಾದಿಗಳಲ್ಲಿ ಪ್ರತಿಕ್ಷಣವು ಭೇದವು ಕಾಣಿಸುತ್ತಲೇ ಇಲ್ಲ. ಹಾಗೇ ಭೇದವು ಕಂಡಿದ್ದರೆ ಕ್ಷಣಿಕತ್ವವನ್ನು ಸಾಧನೆ ಮಾಡುವುದಕ್ಕಾಗಿ ಉದಾಹರಣೆಯನ್ನಾಗಿ ನೀಡಲು ಇಚ್ಛೆ ಪಡಬಹುದಿತ್ತು.

ವಿವರಣೆ - ಭೇದದರ್ಶನವಿರುವ ಪ್ರಯುಕ್ತ ದೀಪಾದಿಗಳಲ್ಲಿ ಕ್ಷಣಿಕತ್ವವಿದೆ. ದೀಪಾದಿಗಳಲ್ಲಿರುವ ಸತ್ವವೇ ಜಗತ್ತಿನಲ್ಲೂ ಇರುವುದರಿಂದ ಜಗತ್ತನ್ನು ದೀಪದ ದೃಷ್ಟಾಂತದಿಂದ ಕ್ಷಣಿಕವೆಂದು ಸಾಧನೆ ಮಾಡಿದರು. ಇದಕ್ಕೆ ತತ್ವವಾದಿಗಳು ಸತ್ಪ್ರತಿಪಕ್ಷವನ್ನು ಹೇಳುತ್ತಿದ್ದಾರೆ. ಆಕಾಶ, ದಿಕ್ ಮೊದಲಾದವುಗಳಲ್ಲಿ ಪ್ರತಿಕ್ಷಣವು ಭೇದವು ಕಾಣಿಸುತ್ತಿಲ್ಲ. ಆದ್ದರಿಂದ ಆಕಾಶಾದಿಗಳು ಸ್ಥಾಯಿಯಾದ ಪದಾರ್ಥಗಳಾಗಿವೆ ಎಂಬುದು ಅನುಭವಸಿದ್ಧವಾಗಿದೆ. ಈ ಆಕಾಶಾದಿಗಳಲ್ಲಿ ಸತ್ ಎಂಬ ಧರ್ಮವಿದೆ. ಇದೇ ಧರ್ಮವು ಜಗತ್ತಿನಲ್ಲೂ ಕೂಡ ಇರುವುದರಿಂದ ಆಕಾಶಾದಿಗಳಂತೆ ಜಗತ್ತು ಸ್ಥಿರವಾಗಿದೆ ಎಂದು ಸಾಧನೆ ಮಾಡಬೇಕಾದೀತು.

ಆಕಾಶವನ್ನು ಅಭಾವವೆಂದು ಒಪ್ಪಿದರೂ ಸತ್ಪ್ರತಿಪಕ್ಷದೋಷ ಇದ್ದೇ ಇದೆ

**तत्वप्रदीपः – यदि चाऽकाशादेरभावरूपत्वमिष्यते तर्ह्यभावस्य**

**स्थिरत्वमिष्टम् । स्थिरत्वधर्मस्य भावरूपस्यैव यावदाकाशभावित्वेनाक्षणिकत्वं चेष्यताम् ।**

ಒಂದು ವೇಳೆ ಆಕಾಶಾದಿಗಳನ್ನು ಅಭಾವರೂಪವೆಂದು ಅಂಗೀಕರಿಸಿದರೆ ಆಗ ಅಭಾವದಲ್ಲಿ ಸ್ಥಿರತ್ವವು ನಮಗೆ ಇಷ್ಟವೇ ಆಗಿದೆ. ಅಥವಾ ಆಕಾಶದಲ್ಲಿ ಸ್ಥಿರತ್ವವೆಂಬ ಧರ್ಮವಿದೆ. ಇದು ಭಾವರೂಪವಾಗಿದೆ. ಆಕಾಶವಿರುವ ತನಕವೂ ಇರುತ್ತದೆ. ಇದರ ದೃಷ್ಟಾಂತದಿಂದ ಜಗತ್ತಿನಲ್ಲಿ ಸ್ಥಿರತ್ವವನ್ನು ಸಾಧಿಸುತ್ತೇವೆ.

ವಿವರಣೆ - ಬೌದ್ಧರು ಆಕಾಶವನ್ನು ಅಭಾವರೂಪವೆಂದು ಹೇಳುತ್ತಾರೆ. ಆದ್ದರಿಂದ ಆಕಾಶದ ದೃಷ್ಟಾಂತದಿಂದ ಜಗತ್ತಿನಲ್ಲಿ ಸ್ಥಿರತ್ವವನ್ನು ಹೇಗೆ ಸಾಧಿಸುತ್ತೀರಿ ? ಎಂದು ಪ್ರಶ್ನಿಸಿದರೆ ತತ್ವವಾದಿಗಳು ಹೀಗೆ ಉತ್ತರಿಸುತ್ತಾರೆ. ಆಕಾಶವು ಅಭಾವವೇ ಆಗಲಿ. ಆದರೂ ಸ್ಥಾಯಿ ಎಂದು ಅಂಗೀಕರಿಸಿ, ಅದರಲ್ಲಿರುವ ಸತ್ವ ಎಂಬ ಧರ್ಮವನ್ನು ವಿವಕ್ಷಿಸಿ, ಇದರ ಉದಾಹರಣೆಯಿಂದ ಜಗತ್ತಿನಲ್ಲಿ ಸ್ಥಾಯಿತ್ವವನ್ನು ಸಮರ್ಥಿಸುತ್ತೇವೆ. ಅಥವಾ ಆಕಾಶವು ಅಭಾವವಾದರೂ ಕೂಡ ಅದರಲ್ಲಿ ಸ್ಥಿರತ್ವವೆಂಬ ಭಾವರೂಪವಾದ ಧರ್ಮವಿದೆ. ಇದು ಸ್ಥಾಯಿಯಾಗಿದೆ. ಅವಿಶೇಷದರ್ಶನದಿಂದ ಇದರಲ್ಲಿ ಸ್ಥಾಯಿತ್ವವು ಸಿದ್ಧವಾಗಿದೆ. ಇದರ ಉದಾಹರಣೆಯಿಂದ ಜಗತ್ತಿನಲ್ಲೂ ಕೂಡ ಸ್ಥಾಯಿತ್ವವನ್ನು ಅಂಗೀಕರಿಸಬೇಕಾದೀತು ಎಂಬುದಾಗಿ ಆಪಾದನೆ ಮಾಡುತ್ತೇವೆ.

ಗಮನಿಸಬೇಕಾದ ವಿಚಾರ - ಜಗತ್ತಿನಲ್ಲಿ ಸ್ಥಾಯಿತ್ವವನ್ನು ಸಮರ್ಥಿಸುವುದು ತತ್ವವಾದಿಗಳ ಅಭಿಪ್ರಾಯವಲ್ಲ. ಒಂದುವೇಳೆ ದೀಪದ ಉದಾಹರಣೆಯಿಂದ ಜಗತ್ತನ್ನು ಕ್ಷಣಿಕವೆಂದು ಹೇಳುವುದಾದರೆ, ಆಕಾಶದ ಉದಾಹರಣೆಯಿಂದ ಸ್ಥಾಯಿಯೆಂದು ಹೇಳಿರಿ ಎಂದಷ್ಟೇ ಆಪಾದನೆ ಮಾಡಲಾಗಿದೆ.

### ಮೂರ್ತದ್ರವ್ಯಾಭಾವವೇ ಆಕಾಶವೆಂದರೆ ಅನೇಕ ದೋಷಗಳು

**तत्वप्रदीपः – न च मूर्तद्रव्याभाव आकाश इति वाच्यम् । धर्म्याद्यभाने तद्भानात् यदि त्वयमभावः स्यात्तर्हि तद्भान एव तदतिरिक्तो भायात् । मूर्तद्रव्यमत्र नास्तीति चाभावभाने धर्मित्वेन भाताकाशस्तस्य कथमभावः स्यात् ।**

### ಸ್ಥಾಯಿಯಾದ ಆಕಾಶದ ಉದಾಹರಣೆಯಿಂದ ಜಗತ್ತೂ ಕೂಡ ಸ್ಥಾಯಿ ಆಗಲಿ

**तत्वप्रदीपः – तत्र प्रतिविधत्ते । एवं चेदाकाशदिगादिष्वविशेष-दर्शनात्स्थिरत्वं निदर्शान्यत्रापि तद्वत्तदनुमीयेत । न च दीपादिष्वपि प्रतिक्षणं विशेषो दृश्यते, येद क्षणिकत्वं निदिदर्शयियेषुः ।**

ಬೌದ್ಧರ ಈ ಅಭಿಪ್ರಾಯವನ್ನು ನಿರಾಕರಣೆ ಮಾಡುತ್ತಿದ್ದಾರೆ. ಸತ್ವವಿರುವ ದೀಪದಲ್ಲಿ ವಿಶೇಷದರ್ಶನದಿಂದ ಕ್ಷಣಿಕತ್ವವಿದೆ ಎಂದು ತಿಳಿದು ಇದರ ಉದಾಹರಣೆಯಿಂದ ಜಗತ್ತಿನಲ್ಲಿ ಕ್ಷಣಿಕತ್ವವನ್ನು ಸಾಧನೆ ಮಾಡುವುದಾದರೆ, ಆಕಾಶ, ದಿಕ್ ಮೊದಲಾದವುಗಳಲ್ಲಿ ಭೇದದರ್ಶನವು ಕಾಣಿಸುತ್ತಿಲ್ಲ. ಆದ್ದರಿಂದ ಇವುಗಳು ಸ್ಥಿರವಾದ ಪದಾರ್ಥಗಳಾಗಿವೆ. ಆದ್ದರಿಂದ ದೀಪದಂತೆ ಈ ಆಕಾಶ ದಿಗಾದಿಗಳಲ್ಲೂ ಸತ್ವವಿದೆ. ಇದೇ ಸತ್ವವೆಂಬ ಹೇತು ಜಗತ್ತಿನಲ್ಲೂ ಇರುವುದರಿಂದ ಆಕಾಶಾದಿಗಳಂತೆ ಜಗತ್ತು ಸ್ಥಿರವಾಗಿದೆ ಎಂದು ಅನುಮಾನ ಮಾಡಬೇಕಾದೀತು.

ವಿಚಾರ ಮಾಡಿದರೆ ದೀಪಾದಿಗಳಲ್ಲಿ ಪ್ರತಿಕ್ಷಣವು ಭೇದವು ಕಾಣಿಸುತ್ತಲೇ ಇಲ್ಲ. ಹಾಗೇ ಭೇದವು ಕಂಡಿದ್ದರೆ ಕ್ಷಣಿಕತ್ವವನ್ನು ಸಾಧನೆ ಮಾಡುವುದಕ್ಕಾಗಿ ಉದಾಹರಣೆಯನ್ನಾಗಿ ನೀಡಲು ಇಚ್ಛೆ ಪಡಬಹುದಿತ್ತು.

ವಿವರಣೆ - ಭೇದದರ್ಶನವಿರುವ ಪ್ರಯುಕ್ತ ದೀಪಾದಿಗಳಲ್ಲಿ ಕ್ಷಣಿಕತ್ವವಿದೆ. ದೀಪಾದಿಗಳಲ್ಲಿರುವ ಸತ್ವವೇ ಜಗತ್ತಿನಲ್ಲೂ ಇರುವುದರಿಂದ ಜಗತ್ತನ್ನು ದೀಪದ ದೃಷ್ಟಾಂತದಿಂದ ಕ್ಷಣಿಕವೆಂದು ಸಾಧನೆ ಮಾಡಿದರು. ಇದಕ್ಕೆ ತತ್ವವಾದಿಗಳು ಸತ್ಪ್ರತಿಪಕ್ಷವನ್ನು ಹೇಳುತ್ತಿದ್ದಾರೆ. ಆಕಾಶ, ದಿಕ್ ಮೊದಲಾದವುಗಳಲ್ಲಿ ಪ್ರತಿಕ್ಷಣವು ಭೇದವು ಕಾಣಿಸುತ್ತಿಲ್ಲ. ಆದ್ದರಿಂದ ಆಕಾಶಾದಿಗಳು ಸ್ಥಾಯಿಯಾದ ಪದಾರ್ಥಗಳಾಗಿವೆ ಎಂಬುದು ಅನುಭವ-ಸಿದ್ಧವಾಗಿದೆ. ಈ ಆಕಾಶಾದಿಗಳಲ್ಲಿ ಸತ್ ಎಂಬ ಧರ್ಮವಿದೆ. ಇದೇ ಧರ್ಮವು ಜಗತ್ತಿನಲ್ಲೂ ಕೂಡ ಇರುವುದರಿಂದ ಆಕಾಶಾದಿಗಳಂತೆ ಜಗತ್ತು ಸ್ಥಿರವಾಗಿದೆ ಎಂದು ಸಾಧನೆ ಮಾಡಬೇಕಾದೀತು.

### ಆಕಾಶವನ್ನು ಅಭಾವವೆಂದು ಒಪ್ಪಿದರೂ ಸತ್ಪ್ರತಿಪಕ್ಷದೋಷ ಇದ್ದೇ ಇದೆ

**तत्वप्रदीपः – यदि चाऽकाशादेरभावरूपत्वमिष्यते तर्ह्यभावस्य**

**स्थिरत्वमिष्टम् । स्थिरत्वधर्मस्य भावरूपस्यैव यावदाकाशभावित्वेनाक्षणिकत्वं चेष्यताम् ।**

ಒಂದು ವೇಳೆ ಆಕಾಶಾದಿಗಳನ್ನು ಅಭಾವರೂಪವೆಂದು ಅಂಗೀಕರಿಸಿದರೆ ಆಗ ಅಭಾವದಲ್ಲಿ ಸ್ಥಿರತ್ವವು ನಮಗೆ ಇಷ್ಟವೇ ಆಗಿದೆ. ಅಥವಾ ಆಕಾಶದಲ್ಲಿ ಸ್ಥಿರತ್ವವೆಂಬ ಧರ್ಮವಿದೆ. ಇದು ಭಾವರೂಪವಾಗಿದೆ. ಆಕಾಶವಿರುವ ತನಕವೂ ಇರುತ್ತದೆ. ಇದರ ದೃಷ್ಟಾಂತದಿಂದ ಜಗತ್ತಿನಲ್ಲಿ ಸ್ಥಿರತ್ವವನ್ನು ಸಾಧಿಸುತ್ತೇವೆ.

**ವಿವರಣೆ** - ಬೌದ್ಧರು ಆಕಾಶವನ್ನು ಅಭಾವರೂಪವೆಂದು ಹೇಳುತ್ತಾರೆ. ಆದ್ದರಿಂದ ಆಕಾಶದ ದೃಷ್ಟಾಂತದಿಂದ ಜಗತ್ತಿನಲ್ಲಿ ಸ್ಥಿರತ್ವವನ್ನು ಹೇಗೆ ಸಾಧಿಸುತ್ತೀರಿ ? ಎಂದು ಪ್ರಶ್ನಿಸಿದರೆ ತತ್ವವಾದಿಗಳು ಹೀಗೆ ಉತ್ತರಿಸುತ್ತಾರೆ. ಆಕಾಶವು ಅಭಾವವೇ ಆಗಲಿ. ಆದರೂ ಸ್ಥಾಯಿ ಎಂದು ಅಂಗೀಕರಿಸಿ, ಆದರಲ್ಲಿರುವ ಸತ್ವ ಎಂಬ ಧರ್ಮವನ್ನು ವಿವಕ್ಷಿಸಿ, ಇದರ ಉದಾಹರಣೆಯಿಂದ ಜಗತ್ತಿನಲ್ಲಿ ಸ್ಥಾಯಿತ್ವವನ್ನು ಸಮರ್ಥಿಸುತ್ತೇವೆ. ಅಥವಾ ಆಕಾಶವು ಅಭಾವವಾದರೂ ಕೂಡ ಆದರಲ್ಲಿ ಸ್ಥಿರತ್ವವೆಂಬ ಭಾವರೂಪವಾದ ಧರ್ಮವಿದೆ. ಇದು ಸ್ಥಾಯಿಯಾಗಿದೆ. ಅವಿಶೇಷದರ್ಶನದಿಂದ ಇದರಲ್ಲಿ ಸ್ಥಾಯಿತ್ವವು ಸಿದ್ಧವಾಗಿದೆ. ಇದರ ಉದಾಹರಣೆಯಿಂದ ಜಗತ್ತಿನಲ್ಲೂ ಕೂಡ ಸ್ಥಾಯಿತ್ವವನ್ನು ಅಂಗೀಕರಿಸಬೇಕಾದೀತು ಎಂಬುದಾಗಿ ಆಪಾದನೆ ಮಾಡುತ್ತೇವೆ.

ಗಮನಿಸಬೇಕಾದ ವಿಚಾರ - ಜಗತ್ತಿನಲ್ಲಿ ಸ್ಥಾಯಿತ್ವವನ್ನು ಸಮರ್ಥಿಸುವುದು ತತ್ವವಾದಿಗಳ ಅಭಿಪ್ರಾಯವಲ್ಲ. ಒಂದುವೇಳೆ ದೀಪದ ಉದಾಹರಣೆಯಿಂದ ಜಗತ್ತನ್ನು ಕ್ಷಣಿಕವೆಂದು ಹೇಳುವುದಾದರೆ, ಆಕಾಶದ ಉದಾಹರಣೆಯಿಂದ ಸ್ಥಾಯಿಯೆಂದು ಹೇಳಿರಿ ಎಂದಷ್ಟೇ ಆಪಾದನೆ ಮಾಡಲಾಗಿದೆ.

### ಮೂರ್ತದ್ರವ್ಯಾಭಾವವೇ ಆಕಾಶವೆಂದರೆ ಅನೇಕ ದೋಷಗಳು

**तत्वप्रदीपः – न च मूर्तद्रव्याभाव आकाश इति वाच्यम् । धर्म्याद्यभाने तद्भानात् यदि ह्ययमभावः स्यात्तर्हि तद्भान एव तदतिरिक्तो भायात् । मूर्तद्रव्यमत्र नास्तीति चाभावभाने धर्मित्वेन भाताकाशस्तस्य कथमभावः स्यात् ।**

ಮೂರ್ತದ್ರವ್ಯದ ಅಭಾವವೇ ಆಕಾಶವಾಗಿದೆಯಲ್ಲವೇ? ಹೀಗೆ ಹೇಳಬಾರದು. ಧರ್ಮಿ ಹಾಗೂ ಪ್ರತಿಯೋಗಿಗಳು ತೋರದೇ ಇದ್ದರೂ ಕೂಡ ಆಕಾಶವು ತೋರುತ್ತಿದೆ.

ಒಂದು ವೇಳೆ ಆಕಾಶವು ಅಭಾವವರೂಪವಾದರೆ ಆಗ ಧರ್ಮಿಪ್ರತಿಯೋಗಿಗಳ ಜೊತೆ ತದರಿಕ್ತವಾದ ಅಭಾವವು ತೋರುವಂತೆ ಆಕಾಶವೂ ಕೂಡ ತೋರಬೇಕಾದೀತು.

'ಮೂರ್ತದ್ರವ್ಯಂ ಅತ್ರ ನಾಸ್ತಿ' 'ಇಲ್ಲಿ ಮೂರ್ತದ್ರವ್ಯವಿಲ್ಲ' ಎಂಬುದಾಗಿ ಅಭಾವವು ತೋರುವಾಗ ಆಕಾಶವೇ ಧರ್ಮಿಯಾಗಿದೆ. ಇದು ಪುನಃ ಅಭಾವವಾಗಲು ಹೇಗೆ ಸಾಧ್ಯ ?

ವಿವರಣೆ - ೧. ಬೌದ್ಧರು ಹೇಳುವಂತೆ ಆಕಾಶವನ್ನು ಅಭಾವವೆನ್ನುವುದು ತಪ್ಪು. ಯಾವುದರ ಅಭಾವ ? ಎಂಬ ಪ್ರಶ್ನೆಗೆ ಮೂರ್ತದ್ರವ್ಯದ ಅಭಾವವೆಂದು ಹೇಳಿದರೆ ಅನೇಕ ಅನುಪಪತ್ತಿಗಳು ಪ್ರಾಪ್ತವಾಗುತ್ತವೆ. 'ಧರ್ಮಿಪ್ರತಿಯೋಗಿಭ್ಯಾಂ ಅಭಾವೋನಿರೂಪ್ಯತೇ' ಎಂಬ ನಿಯಮದ ಪ್ರಕಾರ ಅಭಾವವನ್ನು ತಿಳಿಯಬೇಕಾದರೆ ಧರ್ಮಿಜ್ಞಾನ ಹಾಗೂ ಪ್ರತಿಯೋಗಿಯ ಜ್ಞಾನ ಇರಲೇಬೇಕು. ಪ್ರಕೃತ ಆಕಾಶವನ್ನು ಅಭಾವರೂಪವೆಂದು ಹೇಳಿದರೆ ಧರ್ಮಿ ಹಾಗೂ ಪ್ರತಿಯೋಗಿಗಳ ಜ್ಞಾನವು ಜೊತೆಯಲ್ಲಿ ಇರಬೇಕಾಗುತ್ತದೆ. ಆದರೆ ಧರ್ಮಿ ಮತ್ತು ಪ್ರತಿಯೋಗಿಗಳ ಜ್ಞಾನವಿಲ್ಲದಿದ್ದರೂ ಕೂಡ ಆಕಾಶದ ಜ್ಞಾನವು ಬರುತ್ತಿದೆ. ಹೀಗೆ ಅಭಾವಜ್ಞಾನಕ್ಕಿಂತ ವಿಲಕ್ಷಣವಾಗಿ ಆಕಾಶದ ಜ್ಞಾನವು ಬರುತ್ತಿರುವುದರಿಂದ ಆಕಾಶವನ್ನು ಅಭಾವವೆಂದು ಹೇಳಲಾರರು.

೨. ಘಟಾಭಾವದ ಜ್ಞಾನವು ಬರುವಾಗ ಭೂತಳವೆಂಬ ಧರ್ಮಿ ಹಾಗೂ ಘಟವೆಂಬ ಪ್ರತಿಯೋಗಿಜ್ಞಾನಗಳ ಜೊತೆ ಅತಿರಿಕ್ತವಾದ ಅಭಾವದ ಜ್ಞಾನವು ಬರುವುದು ಅನುಭವಸಿದ್ಧವಾಗಿದೆ. ಪ್ರಕೃತ ಆಕಾಶವನ್ನು ಅಭಾವರೂಪವೆಂದು ಹೇಳಿದರೆ ಧರ್ಮಿಪ್ರತಿಯೋಗಿಗಳಿಗಿಂತ ಅತಿರಿಕ್ತವಾದ ಮತ್ತೊಂದರ ಭಾನವೇ ಇಲ್ಲಿ ಕಾಣಿಸುತ್ತಿಲ್ಲ.

೩. ಇಲ್ಲಿ ಮೂರ್ತದ್ರವ್ಯವಿಲ್ಲ ಎಂಬುದಾಗಿ ಜ್ಞಾನ ಬರುತ್ತದೆ. ಈ ಜ್ಞಾನದಲ್ಲಿ ಆಕಾಶವೇ ಅಧಿಕರಣವಾಗಿದೆ. ಧರ್ಮಿಭೂತವಾಗಿ ತೋರುತ್ತಿರುವ ಆಕಾಶವು ಆಧೇಯಭೂತವಾದ ಅಭಾವಸ್ವರೂಪವನ್ನು ತಾಳಲು ಹೇಗೆ ಸಾಧ್ಯವಾಗುತ್ತದೆ ? ಈ ಕಾರಣದಿಂದಲೂ ಕೂಡ ಆಕಾಶವನ್ನು ಅಭಾವರೂಪವೆಂದು ಹೇಳುವುದು ತಪ್ಪಾಗುತ್ತದೆ.

### ಆಕಾಶವು ಅಭಾವವಾಗಿದೆ ಎಂಬುದು ಅನುಭವವಿರುದ್ಧ

**तत्वप्रदीपः – न चायमभावस्य स्वगतत्वेन व्यपदेशः । यस्मिन्नियन्तं कालमेकाऽपि नासीत्तस्मिन्नेव प्रदेशे पश्योत्पत्य बलाका बद्धमालाः परिवलयन्त्यो लसन्तीति तदभावधर्मिण एव तद्भावेऽप्यनुभानात् । अत आकाशदृष्टान्तेन स्थिराः सर्वभावा इति सिद्धम् ॥**

ಅಭಾವವು ಸ್ವಗತವಾಗಿದೆ ಎಂಬುದರ ವ್ಯಪದೇಶವೇ 'ಮೂರ್ತದ್ರವ್ಯಂ ನಾಸ್ತಿ' ಎಂಬುದಾಗಿದೆ ಎಂದು ಹೇಳಿದರೆ ಏನು ತಪ್ಪು ?

ಹಾಗಾದರೆ ಯಾವ ಪ್ರದೇಶದಲ್ಲಿ ಇಷ್ಟರತನಕ ಒಂದೇ ಒಂದು ಕೊಕ್ಕರೆಗಳೂ ಕೂಡ ಬಂದಿಲ್ಲವೋ, ಆ ಪ್ರದೇಶವನ್ನು ತೋರಿಸಿ ನೋಡು ಕೊಕ್ಕರೆಪಕ್ಷಿಗಳು ಸಾಲುಕಟ್ಟಿಕೊಂಡು ಶೋಭಾಯಮಾನವಾಗಿ ಹಾರಿಹೋಗುತ್ತಿವೆ ಎಂಬುದಾಗಿ ಒಬ್ಬ ಹೇಳುತ್ತಾನೆ. ಇಲ್ಲಿ ಕೊಕ್ಕರೆಪಕ್ಷಿಗಳ ಅಭಾವಕ್ಕೆ ಧರ್ಮಿಯಾದ ಪ್ರದೇಶವೇ ಕೊಕ್ಕರೆಪಕ್ಷಿಗಳಿಗೆ ಅಧಿಕರಣವಾಗಿದೆ. ಆದ್ದರಿಂದ ಆಕಾಶದ ದೃಷ್ಟಾಂತದಿಂದ ಎಲ್ಲಾ ಭಾವಪದಾರ್ಥಗಳು ಸ್ಥಿರವಾಗಿದೆ ಎಂಬುದು ಸಿದ್ಧವಾಯಿತು.

ವಿವರಣೆ - ಆಕಾಶವು ಅಭಾವರೂಪವೇ ಆಗಿದೆ. ಅಂದಮಾತ್ರಕ್ಕೆ 'ಮೂರ್ತದ್ರವ್ಯಂ ಅತ್ರ ನಾಸ್ತಿ' ಇಲ್ಲಿ ಮೂರ್ತದ್ರವ್ಯವಿಲ್ಲ ಎಂಬ ಪ್ರಯೋಗಕ್ಕೆ ಯಾವುದೇ ಬಾಧಕವಿಲ್ಲ. ಏಕೆಂದರೆ ಅಭಾವವು ಸ್ವಗತವಾಗಿದೆ ಎಂಬುದಕ್ಕೆ ಇದು ಉದಾಹರಣೆಯಾಗುತ್ತದೆ. ಹೀಗೆ ಸ್ವಗತತ್ವವನ್ನು ಅಭಾವಕ್ಕೆ ಒಪ್ಪಿದರೆ ಯಾವುದೇ ಬಾಧಕಗಳು ಇರುವುದಿಲ್ಲ. ಹಾಗಾಗಿ ನೀವು ತೋರಿಸಿದ ಉದಾಹರಣೆಯಿಂದ ಆಕಾಶವನ್ನು ಭಾವಪದಾರ್ಥವೆಂದು ಒಪ್ಪುವ ಅವಶ್ಯಕತೆಯಿಲ್ಲ.

ಈ ಪೂರ್ವಪಕ್ಷವು ತಪ್ಪು. ಅಭಾವವು ಮೊದಲು ಭಾವಕ್ಕೆ ಅಧಿಕರಣವಾಗಿ ಅನಂತರದಲ್ಲಿ ಅಭಾವಕ್ಕೆ ಅಧಿಕರಣವಾಗಿರುವುದು ಅನುಭವವಿರುದ್ಧ. ಹಾಗೂ ಅಭಾವದಲ್ಲಿ ಹಕ್ಕಿಗಳು ಸಾಲುಕಟ್ಟಿಕೊಂಡು ಶೋಭಾಯಮಾನವಾಗಿ ಹಾರುವಿಕೆ ಮೊದಲಾದವೂ ಕೂಡ ಅನುಭವವಿರುದ್ಧ.

ಇಬ್ಬರು ಗೆಳೆಯರು ಸ್ವಲ್ಪಕಾಲ ಕುಳಿತಿರುತ್ತಾರೆ. ತಾವು ಕುಳಿತಾಗಿನಿಂದ ಆ ಪ್ರದೇಶದಲ್ಲಿ ಒಂದೇ ಒಂದು ಬಲಾಕಗಳು (ಕೊಕ್ಕರೆಪಕ್ಷಿಗಳು) ಬಂದಿರುವುದಿಲ್ಲ. ಆದರೆ ಇದ್ದಕ್ಕಿದ್ದಂತೆ ಒಮ್ಮೆಲೆ ನೂರಾರು ಬಲಾಕಗಳು ಸಾಲುಕಟ್ಟಿಕೊಂಡು ಹಾರುತ್ತಾ ಶೋಭಾಯಮಾನ-ವಾಗಿರುವುದನ್ನು ಒಬ್ಬನು ಕಾಣುತ್ತಾನೆ. ಮತ್ತೊಬ್ಬನನ್ನು ಕುರಿತು ಹೀಗೆ ವಾಕ್ಯಪ್ರಯೋಗವನ್ನು ಮಾಡುತ್ತಾನೆ. 'ಯಸ್ಮಿನ್ ಇಯಂತಂ ಕಾಲಂ ಏಕಾಽಪಿ ನಾಸೀತ್ ತಸ್ಮಿನ್ನೇವ ಪ್ರದೇಶೇ ಪಶ್ಯೋತ್ತತ್ಯ ಬಲಾಕಾ ಬದ್ಧಮಾಲಾಃ ಪರಿವಲಯಂತ್ಯೋ ಲಸಂತಿ' 'ಓ ಗೆಳೆಯನೇ ! ಯಾವ ಪ್ರದೇಶದಲ್ಲಿ ಇಷ್ಟು ಹೊತ್ತು ಒಂದೇ ಒಂದು ಬಲಾಕವೂ ಕೂಡ ಇರಲಿಲ್ಲವೋ, ಅದೇ ಪ್ರದೇಶದಲ್ಲಿ ನೋಡು ಬಲಾಕಗಳು ಮೇಲೆದ್ದು ಸಾಲುಕಟ್ಟಿಕೊಂಡು ಹಾರುವ ಮೂಲಕ ಶೋಭಿಸುತ್ತಿವೆ' ಎಂದು ಹೇಳುತ್ತಾನೆ. ನಿಮ್ಮ ಪ್ರಕಾರ ಆಕಾಶವು ಅಭಾವ ಎಂದಾದರೆ ಮೊದಲು ಬಲಾಕಗಳ ಅಭಾವಕ್ಕೆ ಧರ್ಮೀಭೂತವಾದ ಅಭಾವಪದಾರ್ಥವು, ಅನಂತರ ಭಾವಪದಾರ್ಥಕ್ಕೆ ಅಧಿಕರಣವಾಗುವುದು ಹೇಗೆ ಸಾಧ್ಯ ? ಲೋಕದಲ್ಲಿ ಯಾವುದೇ ಒಂದು ಅಭಾವವೇ ಆಗಲಿ ಅದು ಮೊದಲು ಅಭಾವಕ್ಕೆ ಅಧಿಕರಣವಾಗಿ ಅನಂತರ ಭಾವಕ್ಕೆ ಅಧಿಕರಣವಾಗಿರುವುದು ಕಂಡಿಲ್ಲ. ಮತ್ತು ಈ ವಾಕ್ಯಪ್ರಯೋಗದಲ್ಲಿ 'ಪ್ರದೇಶ' ಶಬ್ದವು ಕೇಳಿಸುತ್ತಿದೆ. ಪ್ರದೇಶಶಬ್ದಕ್ಕೆ ಅಭಾವ ಎಂಬರ್ಥವನ್ನು ವಿವಕ್ಷಿಸಿದರೆ, ಅಭಾವದಲ್ಲಿ ಬಲಾಕಗಳು ಹಾರಲು ಸಾಧ್ಯವಿಲ್ಲ, ಸಾಲುಕಟ್ಟಿಕೊಳ್ಳಲು ಸಾಧ್ಯವಿಲ್ಲ. ಶೋಭಾಯಮಾನವಾಗಲೂ ಕೂಡ ಸಾಧ್ಯವಿಲ್ಲ. ಇವೆಲ್ಲವೂ ಕೂಡ ಅನುಭವಕ್ಕೆ ತೀರಾ ವಿರುದ್ಧವಾಗಿದೆ. ಆದ್ದರಿಂದ ಅನುಭವವಿರುದ್ಧವಾಗಿ ಆಕಾಶವನ್ನು ಅಭಾವರೂಪವೆಂದು ಸರ್ವಥಾ ಹೇಳಬಾರದು.

ಆಕಾಶವು ಅಭಾವವೆಂಬ ಬೌದ್ಧರ ವಾದವು ಅಯುಕ್ತವಾದ ಕಾರಣ, ಭಾವಸ್ವರೂಪವೆಂದೇ ಸ್ಪಷ್ಟವಾಗುತ್ತದೆ. ಇಂಥ ಭಾವರೂಪವಾದ ಆಕಾಶವು ಸ್ಥಿರವಾಗಿರುವುದು ಸಿದ್ಧವಾಗಿದೆ. ಇದರಲ್ಲಿ ಇರುವ ಸತ್ವವೆಂಬ ಹೇತುವೇ ಜಗತ್ತಿನಲ್ಲೂ ಕೂಡ ಇರುತ್ತದೆ. ಈ ಆಕಾಶದ ದೃಷ್ಟಾಂತದಿಂದ ಘಟಪಟಾದಿ ಸಮಸ್ತಜಗತ್ತು ಸ್ಥಿರವಾಗಬೇಕಾದೀತು ಎಂಬ ನಮ್ಮ ಆಪಾದನೆಯು ಸುದೃಢವಾಯಿತು. ಬೌದ್ಧರ ಕ್ಷಣಿಕತ್ವವಾದವು ನಿರಸ್ತವಾಯಿತು.

## ತತ್ವಪ್ರಕಾಶಿಕಾ

### ಅನುಮಾನದಿಂದ ಕ್ಷಣಿಕತ್ವಸಾಧನೆ

**तत्वप्रकाशिका – मा भूदर्थापत्त्या क्षणिकत्वसिद्धिः 'यत्सत्तत्क्षणिकं, यथा दीपादि । सन्तश्चामी भावाः' इत्यनुमानेन सेत्स्यति । न च साध्यविकलता दृष्टान्तस्य । यद्विरुद्धधर्माधिकरणं तन्नाना, यथा घटपटौ, तथा चायं दीपः पूर्वोत्तरक्षणस्थोऽपि विरुद्धधर्माधिकरणं परिमाणविशेषदर्शनात् इत्याशङ्कां परिहरत्सूत्रमुपन्यस्य व्याचष्टे – आकाशे चेति ।।**

ಅರ್ಥಾಪತ್ತಿಪ್ರಮಾಣದಿಂದ ಕ್ಷಣಿಕತ್ವದ ಸಿದ್ಧಿ ಆಗುವುದು ಬೇಡ. ಆದರೆ ಯಾವುದು ಸತ್ಯವಾಗಿದೆಯೋ ಅದು ಕ್ಷಣಿಕವಾಗಿದೆ ದೀಪದಂತೆ. ಜಗತ್ತಿನಲ್ಲಿರುವ ಪದಾರ್ಥಗಳೆಲ್ಲವೂ ಸತ್ಯವಾದ್ದರಿಂದ ಕ್ಷಣಿಕವಾಗಿವೆ. ಹೀಗೆ ಅನುಮಾನದ ಮೂಲಕ ಕ್ಷಣಿಕತ್ವವು ಸಿದ್ಧವಾಗುತ್ತದೆ. ದೀಪವೆಂಬ ದೃಷ್ಟಾಂತದಲ್ಲಿ ಕ್ಷಣಿಕತ್ವವಿಲ್ಲವೆಂದು ಸಾಧ್ಯವೈಕಲ್ಯ ಬರುವುದಿಲ್ಲ. ಏಕೆಂದರೆ ಯಾವುವು ವಿರುದ್ಧಧರ್ಮಕ್ಕೆ ಅಧಿಕರಣವಾದವುಗಳೋ ಅವು ವಿಭಿನ್ನವಾಗಿರುತ್ತವೆ. ಉದಾಹರಣೆ - ಘಟಪಟಗಳು. ಆದ್ದರಿಂದ ಈ ದೀಪವೂ ಕೂಡ ಹಿಂದಿನ ಮುಂದಿನ ಕ್ಷಣದಲ್ಲಿ ವಿರುದ್ಧಧರ್ಮಕ್ಕೆ ಅಧಿಕರಣವಾಗಿದೆ. ಪರಿಮಾಣದಲ್ಲಿ ವ್ಯತ್ಯಾಸ ಕಾಣಿಸುತ್ತಿರುವುದರಿಂದ. ಈ ಆಕ್ಷೇಪವನ್ನು ಪರಿಹರಿಸಲು 'ಆಕಾಶೇಚೈತತ್' ಇತ್ಯಾದಿ ಭಾಷ್ಯದಿಂದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಭಾವದೀಪ

**भावदीपः –** **।। आकाशे चाविशेषात् ।।२४।।** शङ्कते **– माभूदिति ।।** दीपादिष्वित्यादिभाष्यं विवृण्वन् परीत्योदाहरणोपनयौ द्वावेवाह **–यत्सदिति ।।**

ಬೌದ್ಧರ ಆಕ್ಷೇಪವನ್ನು 'ಮಾಭೂತ್' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ. 'ದೀಪಾದಿಷು' ಇತ್ಯಾದಿ ಭಾಷ್ಯವನ್ನು ವಿವರಿಸುವ ಮೂಲಕ ಬೌದ್ಧರು ಅಂಗೀಕರಿಸುವ ಉದಾಹರಣ ಉಪನಯಗಳೆರಡನ್ನೇ 'ಯತ್ಸತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**ವಿವರಣೆ** - 'ದೀಪಾದಿಷು' ಎಂಬ ಭಾಷ್ಯವಾಕ್ಯವು ಪೂರ್ವಪಕ್ಷವನ್ನು ಅನುವಾದ ಮಾಡುತ್ತಿದೆ. ಪ್ರಕೃತ 'ಮಾಭೂತ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಬೌದ್ಧರು ಉದಾಹರಣೆ ಮತ್ತು ಉಪನಯ ಎರಡನ್ನು ಮಾತ್ರ ಅನುಮಾನದ ಅಂಗವೆನ್ನುತ್ತಾರೆ. ಅವರ ಮತಕ್ಕೆ ಅನುಗುಣವಾಗಿ ಟೀಕೆಯಲ್ಲಿ ಉದಾಹರಣೆ ಉಪನಯಗಳಷ್ಟೇ ಉಲ್ಲೇಖ ಮಾಡಿರುತ್ತಾರೆ.

'ಜಗತ್, ಕ್ಷಣಿಕಂ, ಸತ್ವಾತ್, ದೀಪವತ್, ಯತ್ ಸತ್ ತತ್‌ಕ್ಷಣಿಕಮ್', ಈ ಅನುಮಾನದಿಂದ ಜಗತ್ತಿನಲ್ಲಿ ಕ್ಷಣಿಕತ್ವವನ್ನು ಸಾಧನೆ ಮಾಡುತ್ತಿದ್ದಾರೆ. ದೃಷ್ಟಾಂತವೆನಿಸಿದ ದೀಪದಲ್ಲಿ ಕ್ಷಣಿಕತ್ವ ಇಲ್ಲವೆಂದು ಹೇಳಲಾಗದು. ದೀಪ ಹಚ್ಚುವಾಗ ಇರುವ ಬೆಳಕಿನಿಂದ ಮುಂದಿನ ಕ್ಷಣದಲ್ಲಿರುವ ಬೆಳಕಿನಲ್ಲಿ ಅಭಿವೃದ್ಧಿಯು ಕಾಣಿಸುತ್ತಿದೆ. ಹೀಗೆ ಪರಿಣಾಮ-ವಿಶೇಷದಿಂದ ಪ್ರತಿಕ್ಷಣದ ದೀಪವು ಬೇರೆಬೇರೆಯೇ ಆಗಿರುತ್ತದೆ ಎಂಬುದು ಬೌದ್ಧರ ಅಭಿಪ್ರಾಯ.

### ಬೌದ್ಧರಿಗೆ ಸತ್‌ಪ್ರತಿಪಕ್ಷ

**तत्वप्रकाशिका – न चोक्तानुमानेन भावानां क्षणिकत्वसिद्धिः । यत्सत् तदक्षणिकम् । यथा आकाशमित्यन्यत्राकाशदृष्टान्तेनाक्षणिकत्वस्यापि साधयितुं शक्यत्वात् । न चाकाशे साध्याभावः । विशेषदर्शनाभावेन क्षणिकत्वसाधकाभावादिति भावः ।**

ಪೂರ್ವಪಕ್ಷಕಾರರು ಹೇಳಿದ ಅನುಮಾನದಿಂದ ಜಗತ್ತಿನಲ್ಲಿರುವ ಭಾವಪದಾರ್ಥಗಳಿಗೆ ಕ್ಷಣಿಕತ್ವವು ಸಿದ್ಧವಾಗುವುದಿಲ್ಲ. ಏಕೆಂದರೆ 'ಯತ್ ಸತ್ ತತ್ ಅಕ್ಷಣಿಕಂ' 'ಯಾವುದು ಸತ್ಯವಾಗಿದೆಯೋ ಅದು ಕ್ಷಣಿಕವಾಗಿರುವುದಿಲ್ಲ' ಆಕಾಶದಂತೆ' ಎಂಬ ವ್ಯಾಪ್ತಿಯನ್ನು ಹೇಳಬಹುದಾದ್ದರಿಂದ ಆಕಾಶವೆಂಬ ದೃಷ್ಟಾಂತದಿಂದ ಜಗತ್ತಿನಲ್ಲಿ ಅಕ್ಷಣಿಕತ್ವವನ್ನು ಸುಲಭವಾಗಿ ಸಾಧಿಸಬಹುದು. ಆಕಾಶದಲ್ಲಿ 'ಅಕ್ಷಣಿಕತ್ವ' ಇಲ್ಲವೆಂದು ಸಾಧ್ಯವೈಕಲ್ಯ ಹೇಳಲಾಗದು. ಯಾವುದೇ ವಿಶೇಷ ಪ್ರಮಾಣವಿಲ್ಲದ ಕಾರಣ ಕ್ಷಣಿಕತ್ವಸಾಧಕವಾದ ಪ್ರಮಾಣವು ಇರುವುದಿಲ್ಲ.

**भावदीपः** – शङ्काभाष्यस्य प्रागेव विवृतत्वात् परिहारभाष्यं नञध्याहारेण व्याख्याति – **न चोक्तेति ।।**

ಬೌದ್ಧರ ಆಕ್ಷೇಪ - ಭಾಷ್ಯವನ್ನು ಈ ಹಿಂದೆಯೇ ವಿವರಿಸಿದ್ದಾಗಿದೆ. ಪ್ರಕೃತ ಪರಿಹಾರವನ್ನು ಮಾಡುವ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಚ ಉಕ್ತ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಭಾಷ್ಯದಲ್ಲಿ 'ಚೇತ್' ಎಂಬ ಪದದ ಅನಂತರ 'ನ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು ಎಂಬುದನ್ನೂ ಕೂಡ ಇದರಿಂದಲೇ ಸೂಚನೆ ಮಾಡಿದ್ದಾರೆ.

ವಿವರಣೆ - 'ಜಗತ್ ಕ್ಷಣಿಕಂ ಸತ್ವಾತ್ ದೀಪವತ್' ಎಂಬುದಾಗಿ ಬೌದ್ಧರು ಅನುಮಾನವನ್ನು ಮಾಡಿದರೆ ಸಿದ್ಧಾಂತಿಗಳಾದ ನಾವು 'ಜಗತ್ ಅಕ್ಷಣಿಕಂ ಸತ್ವಾತ್, ಆಕಾಶವತ್' ಎಂಬುದಾಗಿ ಪ್ರತಿಪಕ್ಷಾನುಮಾನವನ್ನು ಮಾಡುತ್ತಿದ್ದೇವೆ. ಬೌದ್ಧರು ಯಾವ ಹೇತುವನ್ನು ಹೇಳಿದರೋ ಅದೇ ಹೇತುವಿನಿಂದ ಅವರು ಹೇಳಿದ ಸಾಧ್ಯದ ಅಭಾವವನ್ನು ಸಾಧನೆ ಮಾಡುತ್ತಿರುವುದುರಿಂದ ಅವರ ಹೇತು ಸತ್‌ಪ್ರತಿಪಕ್ಷಿತವಾಯಿತು ಎಂಬುದು ಇದರ ಅಭಿಪ್ರಾಯ.

### ಕ್ಷಣಿಕತ್ವಸಾಧನೆಗೆ ಹೇತುವೇ ಇಲ್ಲ

**ತತ್ವಪ್रकाशिका – अथ हेत्वन्तरेण तत्र क्षणिकत्वसिद्धिरिति चेन्न । पञ्चस्कन्धातिरिक्तत्वेन तत्र तदनभ्युपगमात् । न चोत्पत्त्यनन्तरमेव मुसलाहतघटे व्यभिचारः । तत्रापि पूर्वमध्यापरकलाविकलकालवृत्तित्वाभावात्।**

ಸತ್ವಾತ್ ಎಂಬ ಹೇತುವಿಗಿಂತ ಭಿನ್ನವಾದ ಹೇತುವಿನಿಂದ ಕ್ಷಣಿಕತ್ವವನ್ನು ಸಾಧನೆ ಮಾಡುತ್ತೇವೆ ಎಂದೂ ಸಹ ಹೇಳಲಾಗದು. ಪಂಚಸ್ಕಂಧಗಳಿಗಿಂತ ಭಿನ್ನವಾಗಿರುವುದರಿಂದ ಕ್ಷಣಿಕತ್ವವನ್ನು ಅಲ್ಲಿ ಹೇಳಲಾಗದು. ಮತ್ತು ಯಾವುದು ಸತ್ಯವಾಗಿದೆಯೋ ಅದು ಅಕ್ಷಣಿಕವಾಗಿದೆ ಎಂಬ ವ್ಯಾಪ್ತಿಗೆ ವನಕೆಯಿಂದ ಹೊಡೆದು ನಾಶ ಮಾಡಲ್ಪಟ್ಟ ಘಟದಲ್ಲಿ ವ್ಯಭಿಚಾರ ಬರುತ್ತದಲ್ಲವೆ? ಎನ್ನಬಾರದು. ಏಕೆಂದರೆ ಅಲ್ಲೂ ಕೂಡ ಅಕ್ಷಣಿಕತ್ವವನ್ನು ಒಪ್ಪುತ್ತೇವೆ. ಪೂರ್ವ, ಮಧ್ಯ, ಅಪರ, ಎಂಬ ಮೂರು ಕಲೆಗಳಿಂದ ರಹಿತವಾದ ಕಾಲದಲ್ಲಿ ಇದು ಇರಲು ಸಾಧ್ಯವಿಲ್ಲ. ಹೀಗೆ ಅನೇಕ ಕ್ಷಣದಲ್ಲಿರುವುದರಿಂದ ವನಕೆಯಿಂದ ಹೊಡೆಯಲ್ಪಟ್ಟ ಘಟವೂ ಕೂಡ ಅಕ್ಷಣಿಕವೇ ಆಗಿದೆ.

**भावदीपः –** सर्वं क्षणिकं वदतापि बौद्धेन सेयं दिगित्त्यादिप्रत्यभिज्ञाया न भ्रान्तित्वं वाच्यम् । पञ्चस्कन्धेभ्योऽन्यत्वादित्यादितत्वनिर्णयोक्तमाह – **पञ्चस्कन्धातिरिक्तत्वेनेति ।।** उक्तं च तत्रैव टीकायम् । आकाशस्य प्रतिसंख्याऽप्रतिसंख्यानिरोधयोर्द्वयोर्विनाशयोश्च पञ्चस्कन्धेभ्योऽन्यत्वान्नित्यत्वमिति बौद्धसिद्धान्तः। यथोक्तम्। आकाशो द्वौ विनाशौ च नित्यं त्रयमसंस्कृतमित्यादि। भाष्ये सौत्राकाशपदलक्षणामुपेत्याकाशादिष्विति दिशाद्विविधविनाशय चादिपदेनोक्तावपि टीकायां यथासूत्रमाकाशमात्रोक्तिराकाशे साध्यसाधनयोरभावरूपास्वारस्यशङ्का-निरासाय। अत एव तत्र साध्यादिसमर्थनमिति ज्ञेयम् ॥ **तत्रापीति ।।** तादृशकालवृत्तित्वस्यैव त्वया क्षणिकत्वाङ्गीकारादिति भावः।

ಎಲ್ಲವೂ ಕೂಡ ಕ್ಷಣಿಕವಾಗಿದೆ ಎಂಬುದಾಗಿ ಬೌದ್ಧರು ಹೇಳುತ್ತಾರೆ. ಆದರೂ ಕೂಡ ಅವರು 'ಸೇಯಂ ದಿಕ್' 'ಈ ದಿಕ್ಕು ಅದೇ ಆಗಿದೆ' ಎಂಬ ಪ್ರತ್ಯಭಿಜ್ಞೆಯನ್ನು ಭ್ರಾಂತಿ ಎಂದು ಒಪ್ಪಲು ಸಾಧ್ಯವಿಲ್ಲ. ಪಂಚಸ್ಕಂಧಗಳನ್ನು ಮಾತ್ರ ಭ್ರಾಂತಿ ಎಂದು ವ್ಯವಹರಿಸಬಹುದು. ದಿಕ್ಕು ಪಂಚಸ್ಕಂಧಗಳಿಗಿಂತ ಅತಿರಿಕ್ತವಾಗಿದೆ ಎಂಬುದಾಗಿ ವಿಷ್ಣುತತ್ವವಿನಿರ್ಣಯದಲ್ಲಿ ಆಚಾರ್ಯರು ಹೇಳಿರುತ್ತಾರೆ. ಅದನ್ನೇ ಪ್ರಕೃತ ಟೀಕೆಯಲ್ಲಿ 'ಪಂಚಸ್ಕಂಧಾತಿರಿಕ್ತತ್ವೇನ' ಎಂಬ ಪದದಿಂದ ಹೇಳಿದ್ದಾರೆ. ಅದೇ ತತ್ವನಿರ್ಣಯ ಟೀಕೆಯಲ್ಲಿ ಹೀಗೆ ಹೇಳಿರುತ್ತಾರೆ - ಆಕಾಶ ಹಾಗೂ ಪ್ರತಿಸಂಖ್ಯಾನಿರೋಧ, ಅಪ್ರತಿಸಂಖ್ಯಾನಿರೋಧಗಳು, ಪಂಚಸ್ಕಂಧಗಳಿಗಿಂತ ಅತಿರಿಕ್ತವಾಗಿರುವುದರಿಂದ ನಿತ್ಯವಾಗಿವೆ ಎಂಬುದು ಬೌದ್ಧರ ಸಿದ್ಧಾಂತ. ಇದನ್ನೇ 'ಆಕಾಶೋ ದ್ವೌ ವಿನಾಶೌ ಚ ನಿತ್ಯಂ ತ್ರಯಮಸಂಸ್ಕೃತಂ' ಆಕಾಶ ಹಾಗೂ ಎರಡು ಬಗೆಯ ವಿನಾಶಗಳು ನಿತ್ಯವಾಗಿವೆ ಎಂದು ಆಚಾರ್ಯರು ಹೇಳಿರುತ್ತಾರೆ.

ಸೂತ್ರದಲ್ಲಿರುವ 'ಆಕಾಶ' ಎಂಬ ಪದವು ಉಪಲಕ್ಷಣವಾಗಿದೆ ಎಂಬುದಾಗಿ ಅಂಗೀಕರಿಸಿ ಭಾಷ್ಯದಲ್ಲಿ 'ಆಕಾಶಾದಿಷು' ಎಂದು ಹೇಳಿದ್ದಾರೆ. ಇಲ್ಲಿರುವ ಆದಿಪದದಿಂದ ಪ್ರತಿಸಂಖ್ಯಾನಿರೋಧ ಹಾಗೂ ಅಪ್ರತಿಸಂಖ್ಯಾನಿರೋಧ ಎಂಬ ಎರಡು ಬಗೆಯ ನಾಶಗಳನ್ನು ವಿವಕ್ಷಿಸಬೇಕು. ಹಾಗಿದ್ದರೂ ಕೂಡ ಟೀಕೆಯಲ್ಲಿ ಕೇವಲ ಸೂತ್ರಕ್ಕೆ ಅನುಗುಣವಾಗಿ ಆಕಾಶವನ್ನಷ್ಟೇ ಉಲ್ಲೇಖ ಮಾಡಿದ್ದಾರೆ. ಆದಿಪದೋಪಾತ್ತವಾದ ಎರಡು ಬಗೆಯ ನಾಶಗಳನ್ನು ವಿವಕ್ಷಿಸಿರುವುದಿಲ್ಲ. ಸಾಧ್ಯ ಹಾಗೂ ಸಾಧನಗಳಲ್ಲಿ

ಅಭಾವರೂಪವೆಂಬ ಅಸ್ವಾರಸ್ಯವನ್ನು ಪರಿಹರಿಸಿದಂತಾಯಿತು. ಆದ್ದರಿಂದಲೇ ಸಾಧ್ಯಾದಿ ಸಮರ್ಥನೆ ಯುಕ್ತವಾಗಿದೆ. 'ತತ್ರಾಪಿ' ಎಂದಿದ್ದಾರೆ. ಪೂರ್ವ, ಮಧ್ಯ, ಅಪರ ಕಾಲಗಳಲ್ಲಿ ಇರದಿದ್ದನ್ನಷ್ಟೇ ನೀನು ಕ್ಷಣಿಕ ಎಂದು ಅಂಗೀಕಾರ ಮಾಡಿರುವಿ.

ವಿವರಣೆ - ಘಟವು ಉತ್ಪತ್ತಿಯಾದ ಕೂಡಲೆ ವನಕೆಯಿಂದ ನಷ್ಟವಾಗಿದೆ. ಆ ಘಟದಲ್ಲಿ ಕ್ಷಣಿಕತ್ವ ಇರುತ್ತದೆಂದು ಸಿದ್ಧಾಂತಿಗಳೂ ಕೂಡ ಒಪ್ಪಬೇಕು. ಆಗ 'ಜಗತ್ ಅಕ್ಷಣಿಕಂ ಸತ್ವಾತ್' ಎಂಬ ಪ್ರಮಾಣಕ್ಕೆ ಇಲ್ಲಿ ವ್ಯಭಿಚಾರ ಬರುತ್ತದಲ್ಲವೆ ? ಎಂಬುದು ಪೂರ್ವಪಕ್ಷಿಗಳ ಆಕ್ಷೇಪ ಆದರೆ ಘಟದಲ್ಲೂ ಕೂಡ ಕ್ಷಣಿಕತ್ವ ಇಲ್ಲವೆಂಬುದೇ ನಮ್ಮ ಅಭಿಪ್ರಾಯ. ಏಕೆಂದರೆ ಮೂವತ್ತು ಫಳಗಳು ಸೇರಿದರೆ ಒಂದು ಕ್ಷಣ. ಇದಕ್ಕೆ ಪೂರ್ವ ಮಧ್ಯ ಅಪರ ಎಂಬ ಮೂರು ಭಾಗಗಳಿವೆ.

ಪೂರ್ವಪಕ್ಷಕಾರನಿಂದ ದೋಷ ಹೇಳಲು ಸಾಧ್ಯವಿಲ್ಲ

**तत्वप्रकाशिका – आकाशे न सत्त्वमिति चेत् । किमिदं सत्त्वं यदाकाशे न सम्प्रतिपन्नम् । अर्थक्रियाकारित्वं चेत्तर्हि त्वदनुमानेऽसिद्धिः साधनविकलता च निदर्शनस्य । अथ स्वरूपेण विद्यमानता भावरूपता वा साऽऽकाशे न नास्ति ।।**

ಆಕಾಶದಲ್ಲಿ ಸತ್ವವೆಂಬ ಹೇತುವಿಲ್ಲ ಎಂದು ಹೇಳಲಾಗದು. ಏಕೆಂದರೆ ಆಕಾಶದಲ್ಲಿ ಸಂಪ್ರತಿಪನ್ನವಾಗದ ಸತ್ವ ಎಂದರೆ ಏನು ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ಅರ್ಥಕ್ರಿಯಾಕಾರಿತ್ವವನ್ನೇ ಸತ್ವ ಎಂದು ಹೇಳಿದರೆ ನಿಮ್ಮ ಅನುಮಾನದಲ್ಲಿ ಅಸಿದ್ಧಿದೋಷ ಬರುತ್ತದೆ. ದೃಷ್ಟಾಂತದಲ್ಲಿ ಸಾಧನವೈಕಲ್ಯದೋಷವೂ ಕೂಡ ಬರುತ್ತದೆ. ಸ್ವರೂಪದಿಂದ ಇರುವಿಕೆಯನ್ನು ಅಥವಾ ಭಾವರೂಪದಿಂದ ಇರುವಿಕೆಯನ್ನು ಸತ್ವ ಎಂದು ಹೇಳಿದರೆ ಇದು ಆಕಾಶದಲ್ಲಿ ಇಲ್ಲವೆಂದು ಹೇಳಲಾಗದು.

**भावदीपः –** आकाश इति छेदो न त्वाकाशेनेति ॥ **त्वदनुमानेऽसिद्धिरिति ।।** अर्थक्रियाकारित्वं कदाचित्कार्यकरत्वं चेत् गगनेऽपि तस्य सत्त्वात् तत्र तन्नेति वदता त्वया प्रतिक्षणं कार्यकरत्वं सत्वमिति वाच्यम्। तच्च पक्षे प्रपञ्चे दृष्टान्ते दीपे च

नेत्यसिद्धिः साधनविकलता च दृष्टान्तस्येत्यर्थः ॥ **न नास्तीति ।।** किं त्वस्त्येव। ततश्च मदीयहेतौ त्वदुक्तं साधनवैकल्यं नेति शेषः ॥ २४ ॥

'ಆಕಾಶೇ ನ ಸತ್ವಂ' ಎಂದು ಪದಚ್ಛೇದ ಮಾಡಬೇಕು. 'ಆಕಾಶೇನ' ಎಂಬುದಾಗಿ ಪದಚ್ಛೇದ ಮಾಡಬಾರದು. 'ತ್ವದನುಮಾನೇಽಸಿದ್ಧಿಃ' ಎಂಬುದಕ್ಕೆ ಹೀಗರ್ಥ. ಅರ್ಥಕ್ರಿಯಕಾರಿತ್ವವನ್ನು ಕೆಲವೊಮ್ಮೆ ಮಾತ್ರ ಕಾರ್ಯಕಾರಿ ಎಂದು ಒಪ್ಪುವುದಾದರೆ ಆಕಾಶದಲ್ಲೂ ಕೂಡ ಇಂಥ ಅರ್ಥಕ್ರಿಯಕಾರಿತ್ವವು ಬರುತ್ತದೆ. ಆಗ ಆಕಾಶದಲ್ಲಿ ಅರ್ಥಕ್ರಿಯಾಕಾರಿತ್ವ ಇಲ್ಲ ಎಂದು ಹೇಳುವ ಪ್ರತಿಕ್ಷಣವು ಕಾರ್ಯವನ್ನು ಉಂಟುಮಾಡುವಿಕೆಯೇ ಸತ್ವವೆಂದು ಅಂಗೀಕಾರ ಮಾಡಬೇಕು. ಇಂಥ ಪ್ರತಿಕ್ಷಣ ಕಾರ್ಯಕಾರಿತ್ವವು ಪಕ್ಷವೆನಿಸಿದ ಪ್ರಪಂಚದಲ್ಲೂ ಇರುವುದಿಲ್ಲ. ದೃಷ್ಟಾಂತವಾದ ದೀಪದಲ್ಲೂ ಕೂಡ ಇರುವುದಿಲ್ಲ. ಆದ್ದರಿಂದ ಹೇತ್ವಸಿದ್ಧಿ ಮತ್ತು ದೃಷ್ಟಾಂತದಲ್ಲಿ ಸಾಧನವೈಕಲ್ಯದೋಷಗಳು ಬರುತ್ತದೆ.

'ನ ನಾಸ್ತಿ' ಎಂದು ಹೇಳಿದ್ದಾರೆ. ಆಕಾಶದಲ್ಲಿ ಸ್ವರೂಪೇನ ವಿದ್ಯಮಾನತ್ವವು ಇದ್ದೇ ಇರುತ್ತದೆಂಬುದು ಇದರ ಅರ್ಥ. ಆದ್ದರಿಂದ ನಮ್ಮ ಅನುಮಾನದಲ್ಲಿ ಹೇತುವಿಗೆ ನೀನು ಯಾವ ಸಾಧನವೈಕಲ್ಯವನ್ನು ಹೇಳಿದೆಯೋ, ಆ ದೋಷವು ಪ್ರಾಪ್ತವಾಗುವುದಿಲ್ಲ.

ವಿವರಣೆ - 'ಜಗತ್ ಅಕ್ಷಣಿಕಂ ಸತ್ವಾತ್ ಆಕಾಶವತ್' ಎಂಬುದಾಗಿ ಸಿದ್ಧಾಂತಿಗಳು ಮಾಡಿದ ಅನುಮಾನಪ್ರಯೋಗದಲ್ಲಿ ಸಾಧನವೈಕಲ್ಯವನ್ನು ಪೂರ್ವಪಕ್ಷಕಾರನು ಆಕ್ಷೇಪಿಸುತ್ತಿದ್ದಾನೆ. ಆದರೆ ಸತ್ವಶಬ್ದಕ್ಕೆ ಅರ್ಥಕ್ರಿಯಾಕಾರಿತ್ವ ಎಂಬ ಅರ್ಥವನ್ನು ಪೂರ್ವಪಕ್ಷಕಾರನು ವಿವಕ್ಷಿಸಿದರೆ ಅವನು ಪ್ರಯೋಗಿಸಿದ 'ಜಗತ್ ಕ್ಷಣಿಕಂ ಸತ್ವಾತ್' ಎಂಬ ಅನುಮಾನದಲ್ಲೂ ಅರ್ಥಕ್ರಿಯಾಕಾರಿತ್ವವನ್ನು ಸತ್ವ ಎಂದು ಹೇಳಿದಂತಾಯಿತು. ಇದನ್ನು ಅವನು ಪಕ್ಷದಲ್ಲಿ ಒಪ್ಪದ ಕಾರಣ ಅಸಿದ್ಧಿದೋಷ ಬರುತ್ತದೆ. ಅಷ್ಟೇ ಅಲ್ಲದೆ ದೃಷ್ಟಾಂತವಾದ ದೀಪದಲ್ಲೂ ಸಹ ಇದು ಇಲ್ಲದ ಕಾರಣ ಸಾಧನವೈಕಲ್ಯವು ಬರುತ್ತದೆ. ಆದ್ದರಿಂದ ಸ್ವರೂಪೇಣ ವಿದ್ಯಮಾನತ್ವವನ್ನೇ ಸತ್ವವೆನ್ನಬೇಕು. ಅಥವಾ ಭಾವರೂಪತ್ವವನ್ನು ಸತ್ವವೆನ್ನಬೇಕು. ಇಂಥ ಹೇತು ದೃಷ್ಟಾಂತವಾದ ಆಕಾಶದಲ್ಲಿ ಇದ್ದೇ ಇರುತ್ತದೆ. ಆದ್ದರಿಂದ ನಮ್ಮ ಅನುಮಾನದಲ್ಲಿ ಸಾಧನವೈಕಲ್ಯವನ್ನು ಪೂರ್ವಪಕ್ಷಕಾರನು ಹೇಳಲು ಸಮರ್ಥನಾಗುವುದಿಲ್ಲ.

## ಭಾವದೀಪದ ವೈಶಿಷ್ಟ್ಯ

* ಬೌದ್ಧರು ಉದಾಹರಣೆ ಉಪನಯನಗಳೆರಡನ್ನು ಮಾತ್ರ ಅನುಮಾನದ ಅಂಗವೆನ್ನುತ್ತಾರೆಂಬುದನ್ನು ಉಲ್ಲೇಖ ಮಾಡಿ, ಟೀಕೆಯಲ್ಲಿ ಅಷ್ಟನ್ನೇ ಹೇಳಿದ್ದಾರೆಂದು ತೋರಿಸಿದ್ದಾರೆ.
* ಬೌದ್ಧರು ಮೂರನ್ನು ಅವಿನಾಶಪದಾರ್ಥಗಳೆನ್ನುತ್ತಾರೆ ಎಂದು ತೋರಿಸಿದ್ದಾರೆ.
* ಸೂತ್ರದಲ್ಲಿರುವ ಆಕಾಶಪದವು ಉಪಲಕ್ಷಣವಾಗಿದೆ. ಆದರೂ ಟೀಕೆಯಲ್ಲಿ ಆಕಾಶಪದವನ್ನಷ್ಟೇ ಉಲ್ಲೇಖಿಸಲು ಏನು ಕಾರಣ? ಎಂಬುದನ್ನು ವಿಮರ್ಶಿಸಿದ್ದಾರೆ.
* ನಮ್ಮ ಅನುಮಾನದಲ್ಲಿ ಅಸಿದ್ಧಿ ಹಾಗೂ ಹೇತುವೈಕಲ್ಯವು ಇರುವುದಿಲ್ಲ. ಅವರ ಅನುಮಾನದಲ್ಲಿ ಹೇತ್ವಸಿದ್ಧಿ ಹಾಗೂ ಹೇತುವೈಕಲ್ಯಗಳಿರುತ್ತ-ವೆಂಬುದನ್ನು ತೋರಿಸಿದ್ದಾರೆ.

## ಬ್ರಹ್ಮಸೂತ್ರ

### 'ಅನುಸ್ಮೃತೇಶ್ಚ' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – अनुस्मृतेश्च ।।**

'ತದೇವೇದಂ' ಎಂಬುದಾಗಿ ಪ್ರತ್ಯಭಿಜ್ಞಾವಿರುವುದರಿಂದ ಬೌದ್ಧರ ಅನುಮಾನ ಪ್ರಮಾಣದಿಂದ ಎಲ್ಲವೂ ಕ್ಷಣಿಕವಾಗಿದೆ ಎಂದು ಸಾಧಿಸಲಾಗದು.

ಅರ್ಥ -- 'ತದೇವೇದಂ' ಎಂಬ ಪ್ರತ್ಯಭಿಜ್ಞಾವಿರೋಧ ಬರುವುದರಿಂದ ಸತ್ವವೆಂಬ ಹೇತುವು ಕ್ಷಣಿಕತ್ವಕ್ಕೆ ಸಾಧಕ ಎಂದು ಹೇಳುವುದು ಅತ್ಯಂತ ಅಸಮಂಜಸವಾಗಿದೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಸಮುದಾಯಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಪ್ರತ್ಯಭಿಜ್ಞೆಯೂ ಭ್ರಾಂತಿಯಲ್ಲ

**ब्रह्मसूत्रभाष्यम् – ।। अनुस्मृतेश्च ।।८।।**

**तदेवेदमिति प्रत्यभिज्ञानाच्च । प्रत्यभिज्ञाया भ्रान्तित्वे विशेषदर्शनस्यापि भ्रान्तित्वम् ।।८।।**

**।। इति श्रीमदानन्दतीर्थभगवत्पादाचार्यविरचिते
ब्रह्मसूत्रभाष्ये समुदायाधिकरणम् ।। ७ ।।**

ಅನುವಾದ - 'ತದೇವ ಇದಂ' ಅದೇ ಇದು ಎಂಬ ಪ್ರತ್ಯಭಿಜ್ಞಾನ ಬರುತ್ತಿರುವುದರಿಂದ ಸಕಲವಸ್ತುಗಳು ಸ್ಥಾಯಿಯಾಗಿವೆ. ಈ ಪ್ರತ್ಯಭಿಜ್ಞೆಯನ್ನು ಭ್ರಾಂತಿಯೆಂದು ಒಪ್ಪಿದರೆ ದೀಪಾದಿಗಳಲ್ಲಿರುವ ಪರಿಮಾಣದ ತಾರತಮ್ಯವೂ ಕೂಡ ಭ್ರಾಂತಿಯೆಂದು ಒಪ್ಪಬೇಕಾದೀತು.

ಪ್ರತಿಪದಾರ್ಥ -- ತದೇವೇದಮಿತಿ = ಅದೇ ಇದು ಎಂಬ, ಪ್ರತ್ಯಭಿಜ್ಞಾನಾಚ್ಚ = ಪ್ರತ್ಯಭಿಜ್ಞಾನ ಇರುವುದರಿಂದ ಘಟಪಟಾದಿಗಳು ಕ್ಷಣಿಕವಾಗುವುದಿಲ್ಲ. ಪ್ರತ್ಯಭಿಜ್ಞಾಯಾಃ = ಈ ಪ್ರತ್ಯಭಿಜ್ಞೆಯನ್ನು, ಭ್ರಾಂತಿತ್ವೇ = ಭ್ರಾಂತಿಯೆಂದು ಕರೆದರೆ, ವಿಶೇಷದರ್ಶನಸ್ಯಾಪಿ = ದೀಪಾದಿಗಳಲ್ಲಿರುವ ಪರಿಮಾಣದ ತಾರತಮ್ಯವನ್ನು ಕೂಡ, ಭ್ರಾಂತಿತ್ವಮ್ = ಭ್ರಾಂತಿ ಎಂದು ಒಪ್ಪಬೇಕಾದೀತು.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಸಮುದಾಯಾಧಿಕರಣವು ಸಮಾಪ್ತವಾಯಿತು ॥

****

## ಸತ್ತರ್ಕದೀಪಾವಳಿ

### ಜಗತ್‌ಕ್ಷಣಿಕತ್ವಾನುಮಾನಕ್ಕೆ ಸಾಧ್ಯವೈಕಲ್ಯ ದೋಷ

**सत्तर्कदीपावळिः – तदेवेदं दीपादिकमिति जगत्क्षणिकत्वं बाध्यते । बाधकाभावेऽपि यदीयं प्रत्यभिज्ञा बाध्येत, तर्हि दीपस्य क्षणिकत्वसाधक-परिमाणभेददर्शनमपि भ्रमः स्यात् । अविशेषात् । ततश्च जगत्क्षणिकत्व-साधकानुमानदृष्टान्तः साध्यविकलः स्यात् ।**

'ತದೇವೇದಂ ದೀಪಾದಿಕಂ' ಈ ದೀಪ ಅದೇ ಆಗಿದೆ' ಎಂಬುದಾಗಿ ಪ್ರತ್ಯಭಿಜ್ಞೆಯು ಬರುತ್ತದೆ. ಪ್ರತ್ಯಭಿಜ್ಞೆಯು ಬರಬೇಕೆಂದರೆ ಹಿಂದಿರುವ ದೀಪ, ಈಗಿರುವ ದೀಪ ಒಂದೇ

ಆಗಿರಬೇಕು. ಕ್ಷಣಿಕವಾಗಲು ಸಾಧ್ಯವಿಲ್ಲ. ಈ ಪ್ರತ್ಯಭಿಜ್ಞೆಯೇ ಕ್ಷಣಿಕತ್ವಕ್ಕೆ ಬಾಧಕವಾಗಿದೆ. ಈ ಪ್ರತ್ಯಭಿಜ್ಞೆಯನ್ನು ಭ್ರಾಂತಿ ಎಂದು ಹೇಳಬಾರದು. ಬಾಧಕವಿಲ್ಲದಿದ್ದರೂ ಕೂಡ ಭ್ರಾಂತಿ ಎಂದು ಹೇಳುವುದಾದರೆ ದೀಪದಲ್ಲಿ ಕ್ಷಣಿಕತ್ವವನ್ನು ಸಾಧಿಸುವ ಪರಿಮಾಣಭೇದದರ್ಶನವೂ ಕೂಡ ಭ್ರಮೆ ಎಂದಾಗಬೇಕಾದೀತು. ಏಕೆಂದರೆ ಎರಡೂ ಕಡೆ ಏನೂ ವ್ಯತ್ಯಾಸವಿಲ್ಲ. ಹಾಗಾಗಿ ಜಗತ್ ಕ್ಷಣಿಕತ್ವಸಾಧಕವಾದ ಅನುಮಾನದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವು ಪ್ರಾಪ್ತವಾಗುತ್ತದೆ.

**सत्तर्कदीपावळिः – न चाकाशस्यासत्वाङ्गीकाराज्जगदक्षिणकत्व-साधकानुमानदृष्टान्तः साध्यविकल इति वाच्यम् । घटोऽस्तीतिवदाकाशोऽस्तीति विधिमुखप्रत्ययवेद्यत्वेनाकाशसत्वसिद्धेः । अन्यथा घटसत्वमपि न स्यात् । न चात्मनः क्षणिकत्वं वदता जगतः क्षणिकत्वमनुमातुं शक्यते । व्याप्त्याद्यनुसन्धातुरभावात् । तदाह - आकाशेत्यादिना ।।**

ಆಕಾಶವು ಮಿಥ್ಯಾಭೂತವಾಗಿದೆ. ಹಾಗಾಗಿ ತತ್ವವಾದಿಗಳಾದ ನೀವು ಜಗತ್ತು ಕ್ಷಣಿಕವಲ್ಲ ಎನ್ನಲು ಯಾವ ಆಕಾಶದ ದೃಷ್ಟಾಂತವನ್ನು ನೀಡಿದಿರೋ, ಅದರಲ್ಲಿ ಸಾಧ್ಯವು ಬರದೇ ಇರುವುದರಿಂದ ನಿಮ್ಮ ಅನುಮಾನಕ್ಕೂ ಕೂಡ ಸಾಧ್ಯವೈಕಲ್ಯದೋಷವು ಬರುತ್ತದಲ್ಲವೇ?

ಈ ಆಕ್ಷೇಪ ತಪ್ಪು. 'ಘಟಃ ಅಸ್ತಿ' ಎಂಬ ವಿಧಿಮುಖ ಪ್ರತ್ಯಯದಂತೆ 'ಆಕಾಶಃ ಅಸ್ತಿ' ಎಂಬ ವಿಧಿಮುಖ ಪ್ರತ್ಯಯವೇದ್ಯತ್ವವು ಆಕಾಶದಲ್ಲಿ ಸಿದ್ಧವಾಗಿದೆ. ಹಾಗಾಗಿ ಮಿಥ್ಯಾಭೂತವೆಂದು ಹೇಳಲು ಸಾಧ್ಯವಿಲ್ಲ. ಹೀಗಿದ್ದರೂ ಆಕಾಶವನ್ನು ಮಿಥ್ಯಾಭೂತವೆಂದು ಹೇಳಿದರೆ ಘಟವೂ ಕೂಡ ಸತ್ಯ ಆಗದೇ ಇರಬೇಕಾದೀತು.

ಬೌದ್ಧರು ಆತ್ಮನನ್ನೂ ಕೂಡ ಕ್ಷಣಿಕನೆಂದು ಹೇಳುತ್ತಾರೆ. ಇಂಥವರಿಗೆ ಜಗತ್‌ಕ್ಷಣಿಕತ್ವವನ್ನು ಅನುಮಾನ ಮಾಡಲು ಸಾಧ್ಯವೇ ಆಗುವುದಿಲ್ಲ. ಏಕೆಂದರೆ ವ್ಯಾಪ್ತ್ಯಾದ್ಯನುಸಂಧಾನವೇ ಇರುವುದಿಲ್ಲ. ಇದನ್ನೇ ಆಕಾಶ ಇತ್ಯಾದಿ ಭಾಷ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

ವಿವರಣೆ - ಅನುಮಾನ ಮಾಡಬೇಕಾದರೆ ಮೊದಲು ವ್ಯಾಪ್ತಿಜ್ಞಾನ ಪರಾಮರ್ಶ ಮೊದಲಾದವುಗಳು ಇರಬೇಕು. ಆತ್ಮನು ಕ್ಷಣಿಕನಾದರೆ, ವ್ಯಾಪ್ತಿಜ್ಞಾನ ಬಂದಿರುವುದೇ

ಒಬ್ಬನಿಗೆ. ಅನುಮಾನ ಬರುತ್ತಿರುವುದೇ ಮತ್ತೊಬ್ಬನಿಗೆ ಎಂದಾಗುತ್ತದೆ. ಆಗ ಅನುಮಾನದಿಂದ ಜಗತ್‌ಕ್ಷಣಿಕತ್ವವನ್ನು ಸಮರ್ಥನೆ ಮಾಡಲೂ ಕೂಡ ಸಾಧ್ಯವಾಗುವುದಿಲ್ಲ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ ಸಮುದಾಯಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

## ತತ್ವಪ್ರದೀಪ

## ಪ್ರತ್ಯಭಿಜ್ಞಾ ಪ್ರಮಾಣದಿಂದ ಸ್ಥಾಯಿತ್ವಸಮರ್ಥನೆ

**तत्वप्रदीपः – अनुस्मृतेश्च ॥ यत्पूर्वदृष्टं तदेवेदमिति प्रत्यभिज्ञाप्रमाणाच्च न क्षणभङ्गिनो दृष्टाभावाः । सादृश्यनिबन्धना प्रत्यभिज्ञा भ्रान्तिः । तत्सदृशे तदैक्यप्रतीतिरूपत्वादिति चेत् ।**

ಮೊದಲು ಕಂಡ ವಸ್ತುವನ್ನೇ 'ತದೇವೇದಂ' ಎಂಬುದಾಗಿ ಪ್ರತ್ಯಭಿಜ್ಞೆಯು ವಿಷಯೀಕರಿಸುತ್ತಿರುವುದರಿಂದ, ಪ್ರತ್ಯಭಿಜ್ಞಾಪ್ರಮಾಣದ ಬಲದಿಂದ ಕಾಣಿಸುತ್ತಿರುವ ಭಾವಪದಾರ್ಥಗಳು ಕ್ಷಣಭಂಗಿಗಳಲ್ಲ ಎಂದು ತಿಳಿಯುತ್ತದೆ.

ಬೌದ್ಧರು - ಪ್ರತ್ಯಭಿಜ್ಞೆಯು ಸಾದೃಶ್ಯನಿಬಂಧನರೂಪವಾಗಿದೆ ಆದ್ದರಿಂದ ಇದು ಭ್ರಾಂತಿಯಾಗಿದೆ. ಈಗಿರುವ ಪದಾರ್ಥಕ್ಕೆ ಸದೃಶವಾದ ಪೂರ್ವವಸ್ತುವಿನಲ್ಲಿ ಈ ಪದಾರ್ಥದ ಐಕ್ಯವನ್ನು ವಿಷಯೀಕರಿಸುತ್ತಿರುವುದರಿಂದ ಈ ಪ್ರತ್ಯಭಿಜ್ಞೆಯು ಅಯಥಾರ್ಥವಾಗಿದೆ.

ವಿವರಣೆ - ಪ್ರತಿಯೊಂದು ಪದಾರ್ಥಗಳು ಸ್ಥಾಯಿಯಾಗಿವೆ ಎಂಬ ವಿಷಯದಲ್ಲಿ ಪ್ರತ್ಯಭಿಜ್ಞೆಯು ಪ್ರಮಾಣವಾಗಿದೆ. ಅದು ಹೀಗೆ - ಹಿಂದೆ ಘಟವನ್ನು ನೋಡಿರುತ್ತೇವೆ. ಅದೇ ಘಟವನ್ನು ಈಗ ನೋಡಿದಾಗ 'ಆ ಘಟವೇ ಇದು' ಎಂಬ ಪ್ರತ್ಯಭಿಜ್ಞೆಯು ಬರುತ್ತದೆ. ಈ ಪ್ರತ್ಯಭಿಜ್ಞಾರೂಪವಾದ ಜ್ಞಾನವು ಈಗಿರುವ ಘಟಕ್ಕೂ ಹಿಂದಿರುವ ಘಟಕ್ಕೂ ಐಕ್ಯವನ್ನು

ವಿಷಯೀಕರಿಸುತ್ತಿರುವುದರಿಂದ ಘಟರೂಪ ಪದಾರ್ಥಕ್ಕೆ ಸ್ಥಾಯಿತ್ವವು ಸಿದ್ಧವಾಗುತ್ತದೆ. ಕ್ಷಣಿಕತ್ವವು ಇರುವುದಿಲ್ಲವೆಂದು ತಿಳಿಯುತ್ತದೆ.

ಬೌದ್ಧರು ಪದಾರ್ಥಗಳಲ್ಲಿರುವ ಕ್ಷಣಿಕತ್ವವನ್ನು ಹೀಗೆ ಸಮರ್ಥಿಸುತ್ತಾರೆ - ನೀವು ಹೇಳಿದ ಪ್ರತ್ಯಭಿಜ್ಞೆಯು ಭ್ರಾಂತಿಯೇ ಹೊರತು, ಯಥಾರ್ಥವಲ್ಲ. ಸಾದೃಶ್ಯನಿಮಿತ್ತವಾಗಿ ಪ್ರತ್ಯಭಿಜ್ಞೆಯು 'ತದೇವೇದಂ' ಎಂದು ವಿಷಯೀಕರಿಸುತ್ತಿದೆ. ಸ್ಥಾಯಿತ್ವ ಕಾರಣದಿಂದ ಅಲ್ಲ. ಹಿಂದೆ ನೋಡಿದ ಘಟವೇ ಬೇರೆ, ಈಗ ನೋಡುತ್ತಿರುವ ಘಟವೇ ಬೇರೆ. ಈ ಎರಡೂ ಘಟಗಳಲ್ಲಿ ಸಾದೃಶ್ಯವಿದೆ. ಸ್ಥಾಯಿತ್ವ ಇರುವುದಿಲ್ಲ. ಸ್ಥಾಯಿತ್ವಾಭಾವವತಿ ಸ್ಥಾಯಿತ್ವ ಪ್ರಕಾರಕವಾದ ಜ್ಞಾನರೂಪವಾದ್ದರಿಂದ ಈ ಪ್ರತ್ಯಭಿಜ್ಞೆಯು ಅಯಥಾರ್ಥವಾಗಿದೆ. ಆದ್ದರಿಂದ ಪ್ರತ್ಯಭಿಜ್ಞಾಪ್ರಮಾಣದ ಬಲದಿಂದ ಸ್ಥಾಯಿತ್ವವನ್ನು ಸಮರ್ಥಿಸಲಾಗದು. ಈ ಪ್ರತ್ಯಭಿಜ್ಞೆಯಿಂದ ಸಾದೃಶ್ಯ ಮಾತ್ರ ತಿಳಿಯುತ್ತದೆ.

ಪ್ರತ್ಯಭಿಜ್ಞೆಯು ಭ್ರಾಂತಿಯಾದರೆ ವಿಶೇಷದರ್ಶನವೂ ಭ್ರಾಂತಿಯಾಗಲಿ

**तत्वप्रदीपः – मैवम् । अबाधितानुभवस्य भ्रान्तित्वकल्पनायुक्तेः अपरथा विशेषदर्शनस्यापि क्षणिकत्वसाधकस्य भ्रान्तित्वोक्तौ किमुत्तरं स्यात् ? विशेषदर्शनेन हि पूर्वोत्तरकालवर्तिवस्तुभेदकल्पनेन तत्सादृश्यनिबन्धना प्रत्यभिज्ञाभ्रान्तिः कल्प्यते ।**

ಇದು ತಪ್ಪು. ಅಬಾಧಿತವಾದ ಅನುಭವಕ್ಕೆ ಭ್ರಾಂತಿತ್ವವನ್ನು ಕಲ್ಪನೆ ಮಾಡುವುದೇ ತಪ್ಪು. ವಿನಾಕಾರಣ ಭ್ರಾಂತಿ ಎನ್ನುವುದಾದರೆ, ಕ್ಷಣಿಕತ್ವಸಾಧಕವಾದ ವಿಶೇಷದರ್ಶನಕ್ಕೂ ಕೂಡ ಭ್ರಾಂತಿತ್ವವನ್ನು ಹೇಳಬೇಕಾದೀತು ಎಂದರೆ ನಿಮ್ಮಿಂದ ಉತ್ತರವಿಲ್ಲ. ಪೂರ್ವಕಾಲೀನವಾದ ಹಾಗೂ ಉತ್ತರಕಾಲೀನವಾದ ವಸ್ತುಗಳಲ್ಲಿ ಭೇದವು ವಿಶೇಷದರ್ಶನನಿಮಿತ್ತಕವಾಗಿ ಇದೆಯೆಂದು ನೀವು ಕಲ್ಪನೆ ಮಾಡುತ್ತೀರಿ. ಆದ್ದರಿಂದ ಸಾದೃಶ್ಯನಿಬಂಧನವಾದ ಪ್ರತ್ಯಭಿಜ್ಞೆಯನ್ನು ಭ್ರಾಂತಿ ಎನ್ನುತ್ತೀರಿ. ಈ ವಿಶೇಷದರ್ಶನವೇ ಭ್ರಾಂತಿರೂಪವಾಗಿದೆ.

ವಿವರಣೆ - ಬೌದ್ಧರ ಈ ವಾದ ಅಯುಕ್ತ. ಪ್ರತಿಯೊಬ್ಬರಿಗೂ ಬರುತ್ತಿರುವ ಅನುಭವಗಳಿಗೆ ಎಂದೂ ಕೂಡ ಬಾಧವು ಬರುತ್ತಿಲ್ಲ. ಆದ್ದರಿಂದ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನು ಕಲ್ಪನೆ ಮಾಡುವುದು ಅಯುಕ್ತವಾಗುತ್ತದೆ. ಇಲ್ಲದಿದ್ದರೆ ಕ್ಷಣಿಕತ್ವಸಾಧಕವಾದ

ವಿಶೇಷದರ್ಶನಕ್ಕೂ (ಪರಿಣಾಮಬೇಧದರ್ಶನಕ್ಕೂ) ಭ್ರಾಂತಿತ್ವವನ್ನು ಹೇಳಿದರೆ ನಿಮ್ಮಿಂದ ಉತ್ತರಿಸಲು ಸಾಧ್ಯವಿಲ್ಲ. ಏಕೆಂದರೆ ನೀವು ಪೂರ್ವಕಾಲೀನ ವಸ್ತುವಿಗೂ, ಉತ್ತರಕಾಲೀನ ವಸ್ತುವಿಗೂ ವಿಶೇಷದರ್ಶನದಿಂದ ಬೇಧವನ್ನು ಕಲ್ಪನೆ ಮಾಡುತ್ತೀರಿ. ಈ ಕಾರಣದಿಂದ ಪ್ರತ್ಯಭಿಜ್ಞಾವನ್ನು ಭ್ರಾಂತಿಯೆಂದು ಕಲ್ಪನೆ ಮಾಡಿ, ಸಾದೃಶ್ಯನಿಬಂಧನರೂಪವಾಗಿದೆ ಎಂದು ಸಮರ್ಥಿಸುತ್ತೀರಿ. ಆದರೆ ಕ್ಷಣಿಕತ್ವಸಾಧಕವಾದ ಈ ವಿಶೇಷದರ್ಶನವನ್ನೇ ನಾವು ಭ್ರಾಂತಿ ಎಂದು ಹೇಳಿದರೆ ನಿಮ್ಮಿಂದ ಉತ್ತರಿಸಲಾಗದು.

### ವಿಶೇಷದರ್ಶನವೂ ಕೂಡ ಭ್ರಾಂತಿಯಾಗಲಿ

**तत्वप्रदीपः – अपि च पूर्वदृष्टस्य वस्तुन उत्तरकालेऽभावाद्धि तदेवेदमिति प्रत्यभिज्ञा भ्रान्तिः कल्प्यते । पूर्वद्रष्टुरुत्तरकालमभावे कथं तत्सदृशमिदमिति तत्सादृश्यप्रतीतिस्तदेवेदमिति भ्रान्तिश्च स्यात् । अप्रतीतौ सादृश्यस्य सादृश्यात्प्रत्यभिज्ञेति दुरुक्तं स्यात् ।**

ಮತ್ತೊಂದು ದೋಷ - ಮೊದಲು ನೋಡಲ್ಪಟ್ಟ ವಸ್ತು ಉತ್ತರಕಾಲದಲ್ಲಿ ಇರುವುದೇ ಇಲ್ಲ. ಆದ್ದರಿಂದ 'ತದೇವೇದಂ' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿಯಾಗಿದೆ ಎಂದು ನೀವು ಕಲ್ಪನೆ ಮಾಡುತ್ತೀರಿ. ಮೊದಲು ಯಾವ ವ್ಯಕ್ತಿಯು ಪದಾರ್ಥವನ್ನು ನೋಡಿರುತ್ತಾನೋ, ಅವರು ಪ್ರತ್ಯಭಿಜ್ಞೆ ಬರುವ ಕಾಲದಲ್ಲಿ ಇರುವುದೇ ಇಲ್ಲ. ಹೀಗಿರುವಾಗ 'ತತ್‌ಸದೃಶಮಿದಂ' ಎಂಬುದಾಗಿ ಸಾದೃಶ್ಯಪ್ರತೀತಿಯು ಹೇಗೆ ಬರುತ್ತದೆ ? 'ತದೇವೇದಂ' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿ ಹೇಗಾಗುತ್ತದೆ ? ಸಾದೃಶ್ಯಪ್ರತೀತಿಯು ಇವನಿಗೆ ಬರುವುದಿಲ್ಲವೆಂದರೆ ಸಾದೃಶ್ಯವು ಅಪ್ರತೀತವಾಗಿದೆ ಎಂದು ಹೇಳಿದರೆ ಸಾದೃಶ್ಯದಿಂದ ಪ್ರತ್ಯಭಿಜ್ಞೆ ಎಂಬ ಮಾತು ಅಯುಕ್ತವಾಗುತ್ತದೆ.

ವಿವರಣೆ - ಘಟಪಟಾದಿ ವಸ್ತುಗಳು ಕ್ಷಣಿಕವಾಗಿವೆ. ಅನುಭವಕಾಲದಲ್ಲಿರುವ ಘಟವೇ ಬೇರೆ. ಪ್ರತ್ಯಭಿಜ್ಞಾ ಬರುವ ಕಾಲದಲ್ಲಿರುವ ಘಟವೇ ಬೇರೆ ಎಂಬ ಬೌದ್ಧರ ಹೇಳಿಕೆಗೆ 'ವಿಶೇಷದರ್ಶನಸ್ಯಾಪಿ' ಎಂಬ ವಾಕ್ಯದಿಂದ ವಿಶೇಷದರ್ಶನವೂ ಕೂಡ ಭ್ರಾಂತಿಯಾಗಬೇಕಾದೀತು ಎಂಬ ದೋಷವನ್ನು ಹೇಳಿದ್ದಾಯಿತು. ಈಗ ದ್ರಷ್ಟ್ರುವು ಭಿನ್ನಭಿನ್ನವಾಗಿರುವುದರಿಂದ, ಅಥವಾ ಬೇರೆ ಬೇರೆಯಾಗಿರುವುದರಿಂದ ಮತ್ತೊಂದು ದೋಷವನ್ನು ಹೇಳುತ್ತಿದ್ದಾರೆ. ಅನುಭವಕಾಲದಲ್ಲಿ ಯಾವ ವ್ಯಕ್ತಿಯಿದ್ದಾನೋ, ಪ್ರತ್ಯಭಿಜ್ಞಾ

ಕಾಲದಲ್ಲಿ ಅವನು ಇರುವುದೇ ಇಲ್ಲ. ಆದ್ದರಿಂದ ಇದು ಅದಕ್ಕೆ ಸದೃಶವಾಗಿದೆ ಎಂಬ ಜ್ಞಾನ ಒಬ್ಬನಿಗೆ ಬರುವುದಿಲ್ಲ. ಆದ್ದರಿಂದ 'ತದೇವೇದಂ' ಎಂಬ ಪ್ರತ್ಯಭಿಜ್ಞೆಯು ಸಾದೃಶ್ಯವನ್ನು ವಿಷಯೀಕರಿಸಲೂ ಕೂಡ ಸಾಧ್ಯವಾಗುವುದಿಲ್ಲ. ಒಂದುವೇಳೆ ಇಷ್ಟಾಪತ್ತಿಯೆಂದರೆ ಪ್ರತ್ಯಭಿಜ್ಞೆಯು ಸಾದೃಶ್ಯನಿಬಂಧರೂಪವಾಗಿದೆ ಎಂದು ಹೇಳುವುದು ಅಯುಕ್ತವಾಗುತ್ತದೆ.

ಎಲ್ಲಾ ಜ್ಞಾನಗಳೂ ಕೂಡ ಭ್ರಾಂತಿಯಾಗಲಿ

**तत्वप्रदीपः – न च क्षणभङ्गुरः पुरुषः प्राच्यपाश्चात्यैक्यविषयं प्रत्यभिज्ञां भ्रान्तिं जानीयात् । तस्मात्तत्पक्षे विशेषेण सर्वदर्शनस्यापि भ्रान्तित्वं स्यात्।**

ಕ್ಷಣಿಕನಾದ ಪುರುಷನು ಮೊದಲಿನ ಹಾಗೂ ಅನಂತರದ ವಸ್ತುವಿಗೆ ಐಕ್ಯವನ್ನು ವಿಷಯೀಕರಿಸುವ ಪ್ರತ್ಯಭಿಜ್ಞೆಯನ್ನು ಭ್ರಾಂತಿಯೆಂದಾದರೂ ಕೂಡ ಹೇಗೆ ತಿಳಿಯಲು ಸಾಧ್ಯವಾಗುತ್ತಾನೆ ? ಆದ್ದರಿಂದ ಬೌದ್ಧದರ್ಶನದಲ್ಲಿ ಯಾವ ವಿಶೇಷದರ್ಶನದಿಂದ ಸಕಲಜ್ಞಾನಗಳೂ ಕೂಡ ಭ್ರಾಂತಿ ಎಂದು ಆಗಬೇಕಾದೀತು.

**तत्वप्रदीपः – कथं च भिन्नकालीनस्य कारणस्य संस्कारार्पकत्वं कार्ये स्यात् । येन सादृश्यसिद्धिराशास्यते । क्षणविनाशिनोऽसङ्ख्या भावास्तत्सादृश्यहेतवः संस्काराः तत्सन्तानाश्चेति गरीयसीयं कल्पना ।**

ಭಿನ್ನಕಾಲೀನವಾದ ಕಾರಣವು ಕಾರ್ಯದಲ್ಲಿ ಹೇಗೆ ತಾನೇ ಸಂಸ್ಕಾರವನ್ನು ಹುಟ್ಟಿಸುತ್ತದೆ ? ಹಾಗಾಗಿದ್ದಲ್ಲಿ ಸಾದೃಶ್ಯವು ಸಿದ್ಧವಾಗುತ್ತದೆಂದು ನೀನು ಅಪೇಕ್ಷಿಸಬಹುದಿತ್ತು. ಕ್ಷಣವಿನಾಶಿಯಾದ ಅಸಂಖ್ಯಾಕವಾದ ಭಾವಪದಾರ್ಥಗಳನ್ನು ಅವುಗಳ ಸಾದೃಶ್ಯಕ್ಕೆ ಕಾರಣೀಭೂತವಾದ ಅನಂತಸಂಸ್ಕಾರಗಳನ್ನು ಭಾವಪದಾರ್ಥಗಳ ಅನಂತ ಸಂತಾನ ಹಾಗೂ ಸಂಸ್ಕಾರಗಳ ಸಂತಾನಗಳನ್ನು ಕಲ್ಪನೆ ಮಾಡಬೇಕಾದೀತು. ಇದು ಅತ್ಯಂತ ಗುರುಭೂತವಾಗಿದೆ.

ವಿವರಣೆ - 'ತದೇವೇದಂ' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿಯಾಗಿದೆ. ವಸ್ತುಸ್ಥಾಯಿತ್ವ ನಿಮಿತ್ತಕವಲ್ಲ. ಸಾದೃಶ್ಯನಿಬಂಧನದಿಂದ ಪ್ರಾಪ್ತವಾಗಿದೆ ಎಂಬುದು ಬೌದ್ಧರ ವಾದ. ಆದರೆ ಪ್ರತ್ಯಭಿಜ್ಞಾ ಸಮರ್ಥಕವಾದ ಈ ಸಾದೃಶ್ಯವನ್ನೇ ಬೌದ್ಧರಿಂದ ಉಪಪಾದನೆ ಮಾಡಲು ಸಾಧ್ಯವಾಗುವುದಿಲ್ಲವೆಂದು ಈಗ ಹೇಳುತ್ತಿದ್ದಾರೆ. ಅದು ಹೀಗೆ - ಉತ್ತರ- ಪದಾರ್ಥದಲ್ಲಿ

ಪೂರ್ವಪದಾರ್ಥದ ಸಾದೃಶ್ಯವು ಹೇಗೆ ಪ್ರಾಪ್ತವಾಯಿತು ? ಎಂದರೆ ಸಂಸ್ಕಾರದಿಂದ ಪ್ರಾಪ್ತವಾಯಿತು ಎಂದು ಬೌದ್ಧರು ಹೇಳುತ್ತಾರೆ. ಆಗ ಪೂರ್ವಕ್ಷಣದಲ್ಲಿರುವ ಸಂಸ್ಕಾರವು ಉತ್ತರಪದಾರ್ಥದಲ್ಲಿದೆ ಎಂದು ಹೇಳಿದಂತಾಯಿತು. ಆದರೆ ಪೂರ್ವಕ್ಷಣ ವೃತ್ತಿಯಾದ ಪದಾರ್ಥವೇ ಬೇರೆ. ಉತ್ತರಕ್ಷಣವೃತ್ತಿಯಾದ ಪದಾರ್ಥವೇ ಬೇರೆ. ಭಿನ್ನಕಾಲೀನವಾದ ಕಾರಣಪದಾರ್ಥದಲ್ಲಿರುವ ಸಂಸ್ಕಾರವು ಉತ್ತರಕ್ಷಣದಲ್ಲಿರುವ ಪದಾರ್ಥದಲ್ಲಿ ಸಂಸ್ಕಾರವನ್ನು ಹೇಗೆ ತರುತ್ತದೆ ? ಯಾವ ಸಂಸ್ಕಾರಾರ್ಪಕತ್ವವು ಇರುವುದರಿಂದ ಸಾದೃಶ್ಯವು ಸಿದ್ಧವಾಗುತ್ತದೆ ಎಂದು ಇಚ್ಛಿಸುತ್ತಿದ್ದೀಯೋ, ಅಂಥ ಸಂಸ್ಕಾರಾರ್ಪಕತ್ವವೇ ಕಾರ್ಯದಲ್ಲಿ ಹೇಗೆ ಬರುತ್ತದೆ? ಎಂಬ ಪ್ರಶ್ನೆಗೆ ನಿಮ್ಮಲ್ಲಿ ಉತ್ತರವಿಲ್ಲ.

ಬೌದ್ಧದರ್ಶನದಲ್ಲಿ ಕ್ಷಣಿಕವಾದ ಅನಂತಭಾವಪದಾರ್ಥಗಳನ್ನು ಮೊದಲು ಅಂಗೀಕರಿಸಿದಿರಿ. ಅನಂತರ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನು ಸಮರ್ಥಿಸಲು ಅನಂತ ಸಾದೃಶ್ಯಗಳನ್ನು ಅದಕ್ಕೆ ಹೇತುವಾದ ಅನಂತ ಸಂಸ್ಕಾರಗಳನ್ನು ಕಲ್ಪನೆ ಮಾಡಿದಿರಿ. ಮತ್ತು ಅನಂತ ಭಾವಪದಾರ್ಥಗಳ ಸಂತಾನವನ್ನು, ಸಂಸ್ಕಾರಗಳ ಸಂತಾನವನ್ನು ಕಲ್ಪನೆ ಮಾಡಿದಂತಾಯಿತು. ಕ್ಷಣಿಕತ್ವವನ್ನು ತ್ಯಾಗ ಮಾಡಿ, ಸ್ಥಾಯಿತ್ವವನ್ನು ಅಂಗೀಕರಿಸುವುದರಿಂದಲೇ ಎಲ್ಲ ದೋಷವು ಪರಿಹಾರವಾಗುತ್ತಿರುವಾಗ ವಿನಾಕಾರಣ ಕ್ಷಣಿಕತ್ವವನ್ನು ಕಲ್ಪನೆ ಮಾಡುವುದು ಅಯುಕ್ತವಾಗಿದೆ.

### ಅನುಪದಕ್ಕೆ ಅಪೂರ್ವ ವ್ಯಾಖ್ಯಾನ

**ತत्वप्रदीपः – किञ्चैकसन्तानसंस्काराणां मिथस्सादृश्यमन्तरेण तन्निमित्तं वस्तुसादृश्यं नोत्पद्येत । अतिप्रसङ्गात् । संस्कारसादृश्यसिद्धावपि संस्कारान्तरापेक्षायामनवस्था । अनपेक्षायां वस्तुसादृश्यसिद्धावेव सा स्यात् ।**

ಒಂದೇ ವಸ್ತುವಿನ ಸಂತಾನ ಮತ್ತು ಸಂಸ್ಕಾರಗಳಲ್ಲಿ ಪರಸ್ಪರ ಸಾದೃಶ್ಯವು ಇಲ್ಲದಿದ್ದರೆ ತನ್ನಿಮಿತ್ತವಾದ ವಸ್ತುಸಾದೃಶ್ಯವು ಯುಕ್ತವಾಗುವುದಿಲ್ಲ. ಹಾಗಾದಲ್ಲಿ ಅಕಾರಣಕಾರ್ಯೋತ್ಪತ್ತಿ ಪ್ರಸಂಗವೆಂಬ ಅತಿಪ್ರಸಂಗವು ಬರುತ್ತದೆ. ಸಂಸ್ಕಾರದಲ್ಲಿ ಸಾದೃಶ್ಯವು ಸಿದ್ಧವಾಗುವುದಕ್ಕೆ ಮತ್ತೊಂದು ಸಂಸ್ಕಾರದ ಅಪೇಕ್ಷೆಯಿದೆ ಎಂದು ಹೇಳಿದರೆ ಅನವಸ್ಥಾದೋಷವು ಬರುತ್ತದೆ. ಮತ್ತೊಂದು ಸಂಸ್ಕಾರದ ಅಪೇಕ್ಷೆಯು ಇಲ್ಲವೆಂದು ಹೇಳಿದರೆ ವಸ್ತುಸಾದೃಶ್ಯದ ಸಿದ್ಧಿಯಲ್ಲೇ ಈ ಅನಪೇಕ್ಷತ್ವವನ್ನು ಅನುಸರಿಸಲು ಸಾಧ್ಯವಿದೆ. ಆದ್ದರಿಂದ ಬೌದ್ಧಮತದಲ್ಲಿ ಸಾದೃಶ್ಯವು

ಅಸಂಭಾವಿತವಾಯಿತು. 'ತದೇವೇದಂ' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿಯಲ್ಲ ಎಂದಾಯಿತು. ವಸ್ತುಗಳು ಸ್ಥಾಯಿಯೆಂದೇ ಸಿದ್ಧವಾದವು. ಈ ವಸ್ತುಸ್ಥಾಯಿತ್ವವೇ ಯಥಾರ್ಥವಾದ ವಿಚಾರ. ಇದನ್ನೇ ಸೂತ್ರಕಾರರು 'ಅನು' ಎಂಬ ಪದದಿಂದ ಹೇಳಿದ್ದಾರೆ.

ವಿವರಣೆ - ಪ್ರತಿಯೊಂದು ಕ್ಷಣದಲ್ಲಿರುವ ಘಟವು ಭಿನ್ನಭಿನ್ನವಾಗಿದೆ. ಒಂದೇ ಘಟದ ಸಂತಾನವು ಅನಂತವಾಗಿದೆ. ಈ ಘಟಸಂತಾನದಲ್ಲಿ ಸಾದೃಶ್ಯವು ಹೇಗೆ ಸಿದ್ಧವಾಯಿತು ? ಎಂಬುದಾಗಿ ಪ್ರಶ್ನೆಯು ಬಂದರೆ ಆ ಸಂತಾನಗಳಲ್ಲಿರುವ ಸಂಸ್ಕಾರವು ಕಾರಣವಾಗಿದೆ. ಈ ಸಂಸ್ಕಾರದಿಂದ ಘಟಸಂತಾನಗಳಲ್ಲಿ ಸಾದೃಶ್ಯವು ಸಿದ್ಧವಾಗಿವೆ ಎಂಬುದಾಗಿ ಬೌದ್ಧರು ಉತ್ತರಿಸುತ್ತಾರೆ. ಯಾವ ಸಂಸ್ಕಾರದ ಅಪೇಕ್ಷೆಯಿಂದ ಘಟಸಂತಾನಗಳಲ್ಲಿ ಸಾದೃಶ್ಯವನ್ನು ಸಮರ್ಥಿಸಿದರೋ, ಆ ಸಂಸ್ಕಾರವೂ ಕೂಡ ಒಂದೇ ಆಗಿರುವುದಿಲ್ಲ. ಅನಂತವಾಗಿವೆ. ಆ ಎಲ್ಲಾ ಸಂಸ್ಕಾರಗಳಲ್ಲಿ ಪರಸ್ಪರ ಸಾದೃಶ್ಯ ಇರಲೇಬೇಕು. ಇಲ್ಲದಿದ್ದರೆ 'ತದೇವೇದಂ' ಎಂಬ ಪ್ರತ್ಯಭಿಜ್ಞೆಯು ಅಯುಕ್ತವಾಗುತ್ತದೆ. ಸಂಸ್ಕಾರಗಳಲ್ಲಿ ಪರಸ್ಪರ ಸಾದೃಶ್ಯವಿಲ್ಲದಿದ್ದರೆ, ವಸ್ತುವಿನಲ್ಲಿ ಸಾದೃಶ್ಯ ಉಂಟಾಗುವುದಿಲ್ಲ. ಸಂಸ್ಕಾರದಲ್ಲಿ ಸಾದೃಶ್ಯವಿಲ್ಲದಿದ್ದರೂ ವಸ್ತುವಿನಲ್ಲಿ ಸಾದೃಶ್ಯವುಂಟಾಗುವುದಾದರೆ, ಅತಿಪ್ರಸಂಗ ಬರುತ್ತದೆ. ಘಟದಿಂದಲೂ ಪಟವು ಉತ್ಪತ್ತಿಯಾಗಲಿ ಎಂಬುದಾಗಿ ಅಕಾರಣದಿಂದ ಕಾರ್ಯೋತ್ಪತ್ತಿಯಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ವಸ್ತುಸಾದೃಶ್ಯಕ್ಕಾಗಿ ಸಂಸ್ಕಾರಸಾದೃಶ್ಯವನ್ನು ಒಪ್ಪಲೇ ಬೇಕು. ಆ ಸಂಸ್ಕಾರದ ಸಾದೃಶ್ಯವು ಸಿದ್ಧವಾಗುವುದಕ್ಕೆ ಮತ್ತೊಂದು ಸಂಸ್ಕಾರವನ್ನು ಅಪೇಕ್ಷೆ ಪಡಬೇಕು. ಅದರಲ್ಲಿ ಸಾದೃಶ್ಯವು ಸಿದ್ಧವಾಗುವುದಕ್ಕೆ ಮತ್ತೊಂದು ಸಂಸ್ಕಾರವನ್ನು ಅಪೇಕ್ಷಿಸಬೇಕು. ಹೀಗೆ ಅನವಸ್ಥಾದೋಷವು ಬರುತ್ತದೆ. ಒಂದು ವೇಳೆ ಸಂಸ್ಕಾರದಲ್ಲಿ ಸಾದೃಶ್ಯವು ಸಿದ್ಧವಾಗುವುದಕ್ಕೆ ಮತ್ತೊಂದು ಸಂಸ್ಕಾರವನ್ನು ಅಪೇಕ್ಷೆ ಪಡುವುದಿಲ್ಲ ಎಂದು ವಿವಕ್ಷಿಸುವುದಾರೆ, ವಸ್ತುವಿನಲ್ಲಿ ಸಾದೃಶ್ಯಸಿದ್ಧವಾಗುವುದಕ್ಕೂ ಕೂಡ ಸಂಸ್ಕಾರದ ಸಾದೃಶ್ಯವು ಅಪೇಕ್ಷಿತವಾಗುವುದಿಲ್ಲ. ಆದ್ದರಿಂದ ಸಾದೃಶ್ಯವೇ ಇವರ ಮತದಲ್ಲಿ ಯುಕ್ತವಾಗುವುದಿಲ್ಲ. ಪ್ರತ್ಯಭಿಜ್ಞೆಯನ್ನು ಭ್ರಾಂತಿಯೆಂದೂ ಕೂಡ ಸಮರ್ಥನೆ ಮಾಡಲು ಸಾಧ್ಯವಾಗವುದಿಲ್ಲ. ನಮ್ಮ ಸಿದ್ಧಾಂತದಂತೆ ವಸ್ತುಗಳಲ್ಲಿ ಸ್ಥಾಯಿತ್ವವೇ ಸಿದ್ಧವಾಗುತ್ತದೆ. ಸೂತ್ರದಲ್ಲಿ ಇರುವ 'ಅನು' ಎಂಬ ಪದವು ಈ ವಿಷಯವನ್ನು ತಿಳಿಸುತ್ತಿದೆ. 'ಅನು' ಶಬ್ದಕ್ಕೆ ಅನುರೂಪವಾದದ್ದು ಎಂದರ್ಥ. ವಸ್ತುವಿಗೆ

ಅನುರೂಪವಾದದ್ದೇ ಯಥಾರ್ಥವಾಗಿರುತ್ತದೆ. ವಸ್ತುಗಳಲ್ಲಿ ಇರುವ ಸ್ಥಾಯಿತ್ವವೇ ವಸ್ತುಗಳಿಗೆ ಅನುರೂಪವಾದದ್ದು. ಆದ್ದರಿಂದ ಅನು ಎಂಬ ಪದವು ವಸ್ತುಗಳಲ್ಲಿ ಯಥಾರ್ಥವಾಗಿರುವ ಸ್ಥಾಯಿತ್ವವನ್ನು ತಿಳಿಸುತ್ತಿದೆ.

### 'ಅನುಸ್ಮೃತೇಃ' ಎಂಬ ಸೂತ್ರರಚನೆಯ ಉದ್ದೇಶ

**तत्वप्रदीपः – अतस्साद्दश्यासम्भवेन प्रत्यभिज्ञाया अभ्रान्तित्वाद्वस्तूनां स्थायित्वसिद्धिः । तदेव च यथार्थत्वं सूत्रयामासानुपदेन। अनुस्मृतेरिति सूत्रयाम्बभूव, स्मृतिप्रमाण्यबलादपि वस्तुस्थायित्वसिद्धिं लिलम्भयिषन् यथार्थायाः स्मृतेः प्रामाण्ये कोऽतिप्रसङ्ग इति ।**

'ಅನುಸ್ಮೃತೇಃ' ಎಂಬುದಾಗಿ ಸೂತ್ರಕಾರರು ಸೂತ್ರವನ್ನು ರಚನೆ ಮಾಡಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಪ್ರತ್ಯಭಿಜ್ಞಾ ಬಲದಿಂದಲೂ ವಸ್ತುಸ್ಥಾಯಿತ್ವಸಿದ್ಧಿಯನ್ನು ಬೌದ್ಧರಿಗೆ ಅರ್ಥಮಾಡಿಸುವ ಉದ್ದೇಶದಿಂದ 'ಅನುಸ್ಮೃತೇಃ' ಯಥಾರ್ಥವಾದ ಶ್ರುತಿಯಲ್ಲಿ ಪ್ರಾಮಾಣ್ಯವನ್ನು ಅಂಗೀಕಾರ ಮಾಡಿದರೆ ಯಾವ ಅತಿಪ್ರಸಂಗ ಬರುತ್ತದೆ ?

ವಿವರಣೆ - ಡುಲಭಷ್ಪ್ರಾಪ್ತೌ ಎಂಬ ಧಾತು ಣಿಜಂತದಲ್ಲಿ ಲಂಬಯತಿ ಎಂಬ ರೂಪವನ್ನು ಹೊಂದುತ್ತದೆ. ಲಂಬಯಿತುಂ ಇಚ್ಛುರಿತಿ ಲೀಲಂಬ ಯಿಷನ್ ಕೊಳೆಯುವಂತೆ ಮಾಡಲು ಇಚ್ಛಿಸಿದವರಾಗಿ ಎಂಬುದು ಲೀಲಂಬಯಿಷನ್ ಎಂಬುದರ ಅರ್ಥ. ಬೌದ್ಧರಿಗೆ ವಸ್ತುಸ್ಥಾಯಿತ್ವವನ್ನು ಅರ್ಥಮಾಡಿಸಲು ಇಚ್ಛಿಸಿದವರಾಗಿ ಎಂಬುದು ತಾತ್ಪರ್ಯಾರ್ಥ.

ಸ್ಮೃತಿ ಎಂಬ ಪದಕ್ಕೆ ಪ್ರತ್ಯಭಿಜ್ಞಾ ಎಂದರ್ಥ. ಇದು ಪರಮಪ್ರಮಾಣವಾಗಿದೆ. ಇದರ ಬಲದಿಂದ ವಸ್ತುಗಳೆಲ್ಲವೂ ಕೂಡ ಸ್ಥಾಯಿಯಾಗಿದೆ ಎಂದು ಸಿದ್ಧವಾಗುತ್ತದೆ. 'ತದೇವೇದಂ' ಎಂಬ ಪ್ರತ್ಯಭಿಜ್ಞೆಯು ಯಥಾವಸ್ಥಿತವಾದ ಜ್ಞೇಯವನ್ನು ವಿಷಯೀಕರಿಸುತ್ತದೆ. ಹೀಗೆ ಯಥಾರ್ಥಭೂತವಾದ ಸ್ಮೃತಿಗೆ ಪ್ರಾಮಾಣ್ಯವನ್ನು ಅಂಗೀಕಾರ ಮಾಡುವುದರಿಂದ ಯಾವುದೇ ಅತಿಪ್ರಸಂಗವು ಇರುವುದಿಲ್ಲ. ಆದ್ದರಿಂದ ಈ ಸ್ಮೃತಿಯ ಆಧಾರದಲ್ಲಿ ವಸ್ತುಗಳನ್ನು ಸ್ಥಾಯಿ ಎಂದು ಅಂಗೀಕಾರ ಮಾಡಬೇಕು. ಹೀಗೆ ಬೌದ್ಧರಿಗೆ ತಿಳಿಸುವುದಕ್ಕಾಗಿ ಸೂತ್ರಕಾರರು 'ಅನುಸ್ಮೃತೇಃ' ಎಂಬುದಾಗಿ ಸೂತ್ರವನ್ನು ರಚನೆ ಮಾಡಿದ್ದಾರೆ.

'ಅನುಸ್ಮೃತೇಃ' ಎಂಬ ಸೂತ್ರಕ್ಕೆ ಹೀಗೆ ವಿಗ್ರಹ - 'ಅರ್ಥಸ್ಯ ಅನುರೂಪಾ ಅರ್ಥಾನುರೂಪಾ, ಅರ್ಥಾನುರೂಪಾ ಸ್ಮೃತಿಃ ಅನುಸ್ಮೃತಿಃ' ಎಂದು ಮಧ್ಯಮಪದಲೋಪಿ ಸಮಾಸವನ್ನು ಮಾಡಬೇಕು.

### ಪದಾರ್ಥಕ್ಷಣಿಕತ್ವಕ್ಕೆ ಪ್ರತ್ಯಭಿಜ್ಞಾಭ್ರಾಂತಿತ್ವವೇ ಬಾಧಕ

**तत्वप्रदीपः – सर्वप्रत्यभिज्ञाया भ्रान्तित्वे सन्तानप्रत्यभिज्ञाया भ्रान्तित्वप्रसङ्गः । न च दीपादिप्रत्यभिज्ञा भ्रान्तिरिति वाच्यम् । कदाचिद्विशेषदर्शनमात्रेण धारावाहिकप्रत्यभिज्ञानां भ्रान्तित्वकल्पनायोगात् । न च विशेषदर्शनमात्राद्विनाशसिद्धिः । अन्यथा सङ्कोचवति विकासिनि वा सिचये सन्तानभेदप्रसङ्गात्।**

ಎಲ್ಲಾ ಪ್ರತ್ಯಭಿಜ್ಞೆಗಳು ಭ್ರಾಂತಿಯಾಗುವುದಾದರೆ ಸಂತಾನಪ್ರತ್ಯಭಿಜ್ಞೆಯೂ ಕೂಡ ಭ್ರಾಂತಿಯಾಗಬೇಕಾದೀತು. ದೀಪಾದಿಪ್ರತ್ಯಭಿಜ್ಞೆಯು ಭ್ರಾಂತಿ ಎನ್ನಬಾರದು. ಕೆಲವೊಮ್ಮೆ ವಿಶೇಷದರ್ಶನವಾದ ಮಾತ್ರದಿಂದ ಧಾರಾವಾಹಿಕವಾದ ಪ್ರತ್ಯಭಿಜ್ಞೆಗಳೆಲ್ಲವನ್ನೂ ಭ್ರಾಂತಿ ಎಂದು ಕಲ್ಪನೆ ಮಾಡುವುದು ತಪ್ಪು. ಕೇವಲ ವಿಶೇಷದರ್ಶನದಿಂದ ವಿನಾಶವು ಸಿದ್ಧವಾಗವುದಿಲ್ಲ. ಹೀಗೊಪ್ಪದಿದ್ದರೆ ಸಂಕೋಚವುಳ್ಳ ಅಥವಾ ವಿಕಾಸವುಳ್ಳ ಬಟ್ಟೆಯಲ್ಲೂ ಸಂತಾನಭೇದವನ್ನು ಒಪ್ಪಬೇಕಾಗುತ್ತದೆ. ಆಗ ಸಂಕೋಚವುಳ್ಳ ಬಟ್ಟೆಯೇ ಬೇರೆ, ವಿಕಾಸವುಳ್ಳ ಬಟ್ಟೆಯೇ ಬೇರೆ ಇರಬೇಕಾಗುತ್ತದೆ.

ವಿವರಣೆ - ಬೌದ್ಧರು ಎಲ್ಲಾ ಬಗೆಯ ಪ್ರತ್ಯಭಿಜ್ಞೆಗಳನ್ನು ಭ್ರಾಂತಿಯೆನ್ನುತ್ತಾರೆ. ಸಂತಾನವಿಷಯಕವಾದ ಪ್ರತ್ಯಭಿಜ್ಞೆಯೂ ಕೂಡ ಭ್ರಾಂತಿ ಎಂಬುದೇ ಅವರ ಅಭಿಪ್ರಾಯ. ಆದರೆ ಸಂತಾನವಿಷಯಕವಾದ ಪ್ರತ್ಯಭಿಜ್ಞೆಯು ಭ್ರಾಂತಿಯಾಗುವುದಾದರೆ ಕ್ಷಣಿಕತ್ವವು ನಷ್ಟವಾಗುತ್ತದೆ. ಸಂತಾನವಿಷಯಕವಾದ ಪ್ರತ್ಯಭಿಜ್ಞೆಯು ಸತ್ಯವಾದರೆ ಮಾತ್ರ ಕ್ಷಣಿಕತ್ವವು ಸಿದ್ಧವಾಗುತ್ತದೆ. ಸತ್ಯ ಆಗದಿದ್ದರೆ ಕ್ಷಣಿಕತ್ವವೇ ಸಿದ್ಧವಾಗುವುದಿಲ್ಲ. ಆದ್ದರಿಂದ ಬೌದ್ಧರು ಅಂಗೀಕಾರ ಮಾಡುವ ಪದಾರ್ಥಕ್ಷಣಿಕತ್ವಕ್ಕೆ ಪ್ರತ್ಯಭಿಜ್ಞಾಭ್ರಾಂತಿತ್ವವೇ ಬಾಧಕವಾಗಿದೆ.

ಮತ್ತು ಬೌದ್ಧರು ದೀಪವಿಷಯಕವಾದ ಪ್ರತ್ಯಭಿಜ್ಞೆಯನ್ನೂ ಕೂಡ ಭ್ರಾಂತಿ ಎನ್ನುತ್ತಾರೆ. ಒಬ್ಬ ವ್ಯಕ್ತಿಯು ಒಂದು ಘಂಟೆಗಳ ಕಾಲ ದೀಪವನ್ನು ನೋಡುತ್ತಲೇ ಇರುತ್ತಾನೆ. ಅವನಿಗೆ

ನಿರಂತರವಾಗಿ 'ಸೋಽಯಂ ದೀಪಃ' ಎಂಬ ಧಾರಾವಾಹಿಕವಾದ ಪ್ರತ್ಯಭಿಜ್ಞಾ ಬರುತ್ತಲೇ ಇರುತ್ತದೆ. ಈ ಒಂದು ಘಂಟೆಯ ಕಾಲದಲ್ಲಿ ಕೆಲವು ಸಲ ಮಾತ್ರ ದೀಪದಲ್ಲಿ ಪರಿಣಾಮ ಉಂಟಾಗಿರುತ್ತದೆ. ಏತನ್ಮಾತ್ರದಿಂದ ಧಾರಾವಾಹಿಕವಾಗಿ ಬರುತ್ತಿರುವ ಎಲ್ಲಾ ಪ್ರತ್ಯಭಿಜ್ಞೆಗಳನ್ನು ಭ್ರಾಂತಿ ಎಂದು ಕಲ್ಪನೆ ಮಾಡುವುದು ತಪ್ಪು. ಕೆಲವೊಮ್ಮೆ ವಿಶೇಷದರ್ಶನ ಇರುವ ಮಾತ್ರಕ್ಕೆ ಎಲ್ಲಾ ಪ್ರತ್ಯಭಿಜ್ಞೆಗಳನ್ನು ಭ್ರಾಂತಿಯೆಂದು ಅಂಗೀಕರಿಸಿ, ಹಿಂದಿನ ಮುಂದಿನ ಪದಾರ್ಥಗಳಲ್ಲಿ ವಿನಾಶವನ್ನು ಅಂಗೀಕಾರ ಮಾಡಿದರೆ ಅತಿಪ್ರಸಂಗ ಬರುತ್ತದೆ. ಒಂದೇ ಬಟ್ಟೆಯು ಸಂಕುಚಿತವಾದಾಗ ಮಾತ್ರ, ವಿಕಾಸವನ್ನು ಹೊಂದಿದಾಗ ಬೇರೆ ಎಂದು ಹೇಳಬೇಕಾಗುತ್ತದೆ.

### ಪ್ರತ್ಯಭಿಜ್ಞಾಬಲದಿಂದ ವಸ್ತ್ವೈಕ್ಯ ಸಮರ್ಥನೆ

**तत्वप्रदीपः – सन्तानस्यावस्तुत्वाद्विषम उपन्यास इति चेन्न । वस्त्वभेदे तदपलापायोगात् । भेदे सत्त्वे क्षणिकत्वप्रसङ्गात् । अन्यथाऽपसिद्धान्तात् । असत्त्वे तदस्तित्वादिव्यवहारायुक्तेः । उभयवैलक्षण्यस्य पुरस्तान्निरस्तत्वात् । अतः प्रत्यभिज्ञाबलाद्वस्त्वेकत्वसिद्धिः । संस्कारसहिताक्षार्थसंयोग-जन्यत्वात्प्रत्यभिज्ञायाः ।**

ಸಂತಾನವು ವಸ್ತುವೇ ಅಲ್ಲ. ಆದ್ದರಿಂದ ನೀವು ಹೇಳಿದ್ದು ವಿಷಮವಾಗಿದೆ. ಹೀಗೆ ಪ್ರಶ್ನಿಸಬಾರದು. ಸಂತಾನಗಳಲ್ಲಿ ಐಕ್ಯವನ್ನು ಹೇಗೆ ಒಪ್ಪುತ್ತೀರೋ, ಅದರಂತೆ ವಸ್ತುವಿನಲ್ಲೂ ಕೂಡ ಐಕ್ಯವೇ ಇದೆ. ಇದನ್ನು ಅಪಲಾಪ ಮಾಡುವುದು ಅಯುಕ್ತವಾಗಿದೆ. ಮತ್ತು ಯಾವ ಒಂದೇ ವಸ್ತುವಿನಲ್ಲಿ ನೀವು ಭೇದವನ್ನು ಅಂಗೀಕರಿಸುತ್ತೀರೋ, ಅದು ಸತ್ಯವೋ, ಅಸತ್ಯವೋ, ಸದಸದ್ವಿಲಕ್ಷಣವೋ, ಸತ್ಯ ಎಂದರೆ ಕ್ಷಣಿಕವಾಗುತ್ತದೆ. ಸತ್ಯವಾಗಿದ್ದು ಕ್ಷಣಿಕವಾಗದಿದ್ದರೆ ಅಪಸಿದ್ಧಾಂತ ಪ್ರಾಪ್ತವಾಗುತ್ತದೆ. ಅಸತ್ಯ ಎಂದರೆ 'ಭೇದಃ ಅಸ್ತಿ' ಇತ್ಯಾದಿ ವ್ಯವಹಾರವು ತಪ್ಪಾಗುತ್ತದೆ. ಸದಸದ್ವೈಲಕ್ಷಣ್ಯವನ್ನು ಈಗಾಗಲೇ ಈ ಹಿಂದೆ ನಿರಾಕರಣೆ ಮಾಡಿದ್ದೇವೆ. ಆದ್ದರಿಂದ ಪ್ರತ್ಯಭಿಜ್ಞೆಯ ಆಧಾರದಿಂದ ವಸ್ತುವಿನಲ್ಲಿ ಐಕ್ಯವು ಸಿದ್ಧವಾಗುತ್ತದೆ. ಸಂಸ್ಕಾರದಿಂದ ಕೂಡಿದ ಇಂದ್ರಿಯಾರ್ಥಸಂಯೋಗದಿಂದ ಯಾವ ಪ್ರತ್ಯಭಿಜ್ಞೆ ಹುಟ್ಟುತ್ತದೋ, ಇದು ಪರಮಪ್ರಮಾಣವಾಗಿದೆ. ಇದರಿಂದ ಸಿದ್ಧವಾಗುವ ವಿಷಯವೂ ಕೂಡ ಯಥಾರ್ಥವಾಗಿದೆ.

ಆದ್ದರಿಂದ ಬೌದ್ಧರು ಯಾವ ಒಂದೇ ಘಟದಲ್ಲಿ ಭೇದವನ್ನು ಒಪ್ಪುತ್ತಾರೋ, ಅದು ಅಯುಕ್ತವೆಂದು ಸಿದ್ಧವಾಯಿತು. ಅವರ ಕ್ಷಣಿಕತ್ವವಾದವೂ ಕೂಡ ನಿರಸ್ತವಾಯಿತು.

**ವಿವರಣೆ** - ಪದಾರ್ಥಗಳಲ್ಲಿ ಭೇದವನ್ನು ಅಂಗೀಕಾರ ಮಾಡಬೇಕಾಗುತ್ತದೆ. ಸಂತಾನವು ಪದಾರ್ಥವೇ ಅಲ್ಲ. ಆದ್ದರಿಂದ ಬಟ್ಟೆಯಲ್ಲಿ ಸಂಕೋಚ ವಿಕಾಸವಿದ್ದರೆ ಅದರ ಸಂತಾನವು ವಿನಷ್ಟವಾಗುತ್ತದೆಂದು ಒಪ್ಪುವ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ನಿಮ್ಮ ಉಪನ್ಯಾಸವು ವಿಷಮವಾಗಿದೆ ಎಂಬುದಾಗಿ ಬೌದ್ಧರು ಆಕ್ಷೇಪ ಮಾಡಿದರೆ, ಸಮಾಧಾನವನ್ನು ಹೀಗೆ ತಿಳಿಯಬೇಕು. ಸಂತಾನವು ವಸ್ತು ಆಗಿರುವುದಿಲ್ಲ. ಘಟ-ಪಟಾದಿಗಳಷ್ಟೇ ವಸ್ತುಗಳಾಗಿದೆ. ಪ್ರತಿಕ್ಷಣ ವಿನಾಶವಿರುವುದು ವಸ್ತು ಎನಿಸಿದ ಘಟ-ಪಟಾದಿಗಳಲ್ಲಿ ಮಾತ್ರ ಎಂಬುದಾಗಿ ಹೇಳುತ್ತಿದ್ದೀರಿ. ಆದರೆ ಸಂತಾನಗಳಲ್ಲಿ ಐಕ್ಯವನ್ನು ಅಂಗೀಕಾರ ಮಾಡಿ, ವಸ್ತುಗಳಲ್ಲಿ ಮಾತ್ರ ಭೇದವನ್ನು ಅಂಗೀಕಾರ ಮಾಡುವುದು ತಪ್ಪು. ಹೇಗೆ ಸಂತಾನದಲ್ಲಿ ಐಕ್ಯವಿದೆಯೋ, ಅದರಂತೆ ವಸ್ತುವಿನಲ್ಲೂ ಕೂಡ ಐಕ್ಯವನ್ನು ಐಕ್ಯವನ್ನು ಒಪ್ಪುವುದೇ ಯುಕ್ತವಾಗಿದೆ. ವಸ್ತುವಿನಲ್ಲಿರುವ ಅಭೇದವನ್ನು ಅಪಲಾಪ ಮಾಡುವುದು ಅಯುಕ್ತವಾಗಿದೆ. ಮತ್ತು ಯತ್ ಸತ್ ತತ್‌ಕ್ಷಣಿಕಂ ಎಂಬ ನಿಯಮವನ್ನು ನೀವು ಒಪ್ಪಿರುವುದರಿಂದ ಭೇದವು ಸತ್ಯವಾದರೆ ಕ್ಷಣಿಕವಾಗುತ್ತದೆ. ಸತ್ಯವಾದರೂ ಕ್ಷಣಿಕವಲ್ಲ ಎಂದು ಹೇಳಿದರೆ ಯತ್‌ಸತ್ ತತ್‌ಕ್ಷಣಿಕಂ ಎಂಬ ನಿಮ್ಮ ಸಿದ್ಧಾಂತಕ್ಕೆ ವಿರುದ್ಧವಾಗುತ್ತದೆ. ಭೇದವು ಅಸತ್ಯ ಎಂದು ಹೇಳಿದರೆ 'ಭೇದಃ ಅಸ್ತಿ' ಇತ್ಯಾದಿ ವ್ಯವಹಾರವೇ ಅಯುಕ್ತವಾಗುತ್ತದೆ. ಮತ್ತು ಪ್ರತ್ಯಭಿಜ್ಞಾಬಲದಿಂದ ಹಿಂದಿನ ಮುಂದಿನ ಕ್ಷಣದಲ್ಲಿರುವ ವಸ್ತುವಿನಲ್ಲಿ ಐಕ್ಯವೇ ಸಿದ್ಧವಾಗುತ್ತದೆ. ಮೊದಲು ಘಟದ ಅನುಭವವು ಬಂದಿರುತ್ತದೆ. ಮತ್ತೊಮ್ಮೆ ಅದೇ ಘಟವನ್ನು ನೋಡಿದಾಗ ಸಂಸ್ಕಾರಸಹಿತವಾಗಿ ಇಂದ್ರಿಯಾರ್ಥಸಂಯೋಗದಿಂದ 'ಸೋಽಯಂ ಘಟಃ' ಎಂಬ ಪ್ರತ್ಯಭಿಜ್ಞೆಯು ಹುಟ್ಟುತ್ತದೆ. ಆದ್ದರಿಂದ ಈ ಪ್ರತ್ಯಭಿಜ್ಞೆಯು ಪರಮಪ್ರಮಾಣವಾಗಿದೆ. ಇದರ ಬಲದಿಂದ ಐಕ್ಯವನ್ನೇ ಅಂಗೀಕಾರ ಮಾಡಬೇಕು. ವಸ್ತುಗಳಲ್ಲಿ ಭೇದವನ್ನು ಸರ್ವಥಾ ಹೇಳಬಾರದು.

ಪ್ರಾಸಂಗಿಕವಾಗಿ ಪ್ರಾಭಾಕರರ ನಿರಾಕರಣೆ

**तत्वप्रदीपः – एतेनैतदप्यपास्तम् । यदाहुरनुभूतिं तत्साधनं वा प्रमाणं ब्रुवाणा अनुभूतविषयत्वान्न प्रमाणं स्मृतिरिति । अनुभूतविषयस्याप्रामाण्ये धारावाहिकप्रत्ययानां तथात्वप्रसङ्गः ।**

ಹೀಗೆ ಹೇಳಿದ್ದರಿಂದ ಪ್ರಾಭಾಕರರ ಮತವನ್ನು ನಿರಾಕರಣೆ ಮಾಡಿದಂತಾಯಿತು. ಪ್ರಾಭಾಕರರು ಹೀಗೆ ಹೇಳುತ್ತಾರೆ - ಅನುಭವ ಅಥವಾ ಅನುಭವಸಾಧನವಾದದ್ದು ಪ್ರಮಾಣವಾಗುತ್ತದೆ. ಸ್ಮೃತಿಯು ಅನುಭವದ ವಿಷಯವಾಗಿರುವುದರಿಂದ ಪ್ರಮಾಣವಲ್ಲ ಎಂದು.

ಇದು ತಪ್ಪು. ಅನುಭೂತವಿಷಯವಾದದ್ದು ಅಪ್ರಮಾಣವಾದರೆ ಧಾರಾವಾಹಿಕವಾದ ಜ್ಞಾನಗಳೂ ಕೂಡ ಅಪ್ರಮಾಣ ಆಗಬೇಕಾಗುತ್ತದೆ.

**ವಿವರಣೆ** - ಪ್ರಭಾಕರರು ಅನುಭವ ಅಥವಾ ಅನುಭವಸಾಧನ ಎರಡನ್ನು ಮಾತ್ರ ಪ್ರಮಾಣವೆನ್ನಬೇಕು ಎಂಬ ನಿಯಮವನ್ನು ಇಟ್ಟುಕೊಂಡಿದ್ದಾರೆ. ಸ್ಮೃತಿಯು ಅನುಭವರೂಪವೂ ಅಲ್ಲ, ಅನುಭವಸಾಧನವೂ ಅಲ್ಲ. ಅನುಭವಿಸಲ್ಪಟ್ಟ ವಿಷಯವನ್ನಷ್ಟೇ ಸ್ವೀಕರಿಸುತ್ತಿದೆ. ಆದ್ದರಿಂದ ಇದು ಪ್ರಮಾಣವಾಗುವುದಿಲ್ಲ. ಎಂಬುದು ಪ್ರಾಭಾಕರರ ಅಭಿಪ್ರಾಯ. ಆದರೆ ಇದು ಸರಿಯಲ್ಲ. ಅನುಭೂತವಿಷಯವಾಗಿದೆ ಎಂಬ ಮಾತ್ರಕ್ಕೆ ಅಪ್ರಮಾಣವಾಗುವುದಾದರೆ ಧಾರಾವಾಹಿಕ ಪ್ರತ್ಯಯವು ಅಪ್ರಮಾಣ ಆಗಬೇಕಾಗುತ್ತದೆ. ಒಬ್ಬನಿಗೆ ಅನೇಕ ಬಾರಿ ಒಂದೇ ವಸ್ತುವಿನ ಜೊತೆ ಧಾರಾವಾಹಿಕವಾದ ಜ್ಞಾನ ಬರುತ್ತದೆ. ಇದೂ ಕೂಡ ಅನುಭೂತವಾದದ್ದನ್ನೇ ವಿಷಯೀಕರಿಸುತ್ತದೆ. ಈ ಧಾರಾವಾಹಿಕವಾದ ಪ್ರತ್ಯಯವು ಅಪ್ರಮಾಣವೆಂಬುದು ಅನುಭವವಿರುದ್ಧ. ಆದರೆ ಪ್ರಾಭಾಕರರ ಪ್ರಕಾರ ವಿನಾಕಾರಣ ಧಾರಾವಾಹಿಕ ಪ್ರತ್ಯಯವನ್ನು ಅಪ್ರಮಾಣವೆನ್ನಬೇಕಾಗುತ್ತದೆ. ಏಕೆಂದರೆ ಇದು ಅನುಭವವೂ ಅಲ್ಲ. ಅನುಭವಸಾಧನವೂ ಕೂಡ ಆಗಿರುವುದಿಲ್ಲ.

ಹೀಗೆ ಅಪ್ರಾಮಾಣ್ಯ ಹೇಳಬಾರದು.

**तत्वप्रदीपः – न च सर्वथाऽनुभूतविषयत्वं स्मृतेः । अनुभूतत्वविशेषविषयत्वात् । तदनुभूतं मयेति हि स्मरन्ति । न चानुभूतत्वं पूर्वानुभूतम् । इदमहमनुभवामीति हि तदाऽनुभवो नातीतत्वविषयः । अभिहितं चैतत्सकलसामयिकसामन्तसार्वभौमेन सर्वं भगवता भाष्यकारेणानुभाष्ये- ''स्मृतिप्रमाणत्वमपि ह्यतीतत्वविशेषितम्'' इति ।**

ವಿಚಾರ ಮಾಡಿದರೆ ಸ್ಮೃತಿಗೆ ಸರ್ವಾತ್ಮನಾ ಅನುಭೂತವಿಷಯತ್ವವೇ ಇರುವುದಿಲ್ಲ. ಏಕೆಂದರೆ ಅನುಭೂತತ್ವವೆಂಬ ವಿಶೇಷವೂ ಕೂಡ ವಿಷಯವಾಗಿದೆ. ನಞ್‌ನಿಂದ ಇದು ಅನುಭೂತವಾಗಿದೆ ಎಂಬುದಾಗಿ ಸ್ಮರಿಸಿಕೊಳ್ಳುತ್ತಾರೆ. ಈ ಅನುಭೂತತ್ವದ ಅನುಭವ ಮೊದಲು ಬಂದೇ ಇಲ್ಲ. ಇದಮಹಮ್ ಅನುಭವಾಮಿ ಎಂಬುದಾಗಿ ಯಾವ ಅನುಭವವಿದೆಯೋ, ಅದು ಅತೀತ ವಿಷಯಕವಲ್ಲ. ಇದೆಲ್ಲವನ್ನು ಎಲ್ಲಾ ಸಮಯಿಗಳೆಂಬ ಸಾಮಂತರಿಗೆ ಸಾರ್ವಭೌಮರಾದ ಷಡ್ಗುಣೈಶ್ವರ್ಯ ಸಂಪನ್ನರಾದ ಭಾಷ್ಯಕಾರರೆನಿಸಿದ ಶ್ರೀ ಮಧ್ವಾಚಾರ್ಯರು ಅನುವ್ಯಾಖ್ಯಾನದಲ್ಲೇ ಹೇಳಿದ್ದಾರೆ - 'ಸ್ಮೃತಿಪ್ರಮಾಣತ್ವಮಪಿ ಹಿ ಅತೀತತ್ವವಿಶೇಷಿತಮ್' 'ಸ್ಮೃತಿಪ್ರಮಾಣವೂ ಕೂಡ ಅತೀತತ್ವವನ್ನು ವಿಷಯೀಕರಿಸುತ್ತಿದೆ' ಎಂದು.

ವಿವರಣೆ - ಪ್ರಾಭಾಕರರು ಅನುಭವವನ್ನಷ್ಟೇ ಪ್ರಮಾಣ ಎನ್ನುತ್ತಾರೆ. ಸ್ಮೃತಿಯು ಅನುಭೂತ ವಿಷಯವಾಗಿರುವುದರಿಂದ ಪ್ರಮಾಣವಲ್ಲ ಎಂಬುದು ಅವರ ಅಭಿಪ್ರಾಯ. ವಿಚಾರ ಮಾಡಿದರೆ ಸ್ಮೃತಿಯು ಸರ್ವಾತ್ಮನಾ ಅನುಭೂತವಿಷಯಕವೇ ಅಲ್ಲ. ಅನುಭವದಲ್ಲಿ ಎಷ್ಟು ವಿಷಯವಿದೆಯೋ, ಅಷ್ಟೇ ವಿಷಯವು ಸ್ಮೃತಿಯಲ್ಲಿ ಇದೆ ಎಂದು ಹೇಳಲಾಗದು. ಆದ್ದರಿಂದ ಸರ್ವಾತ್ಮನಾ ಅನುಭೂತವಿಷಯತ್ವವು ಸ್ಮೃತಿಯಲ್ಲಿದೆ ಎಂದು ಹೇಳಬಾರದು. ಆದ್ದರಿಂದ ಪ್ರಭಾಕರರ ಮತದಲ್ಲೂ ಕೂಡ ಸ್ಮೃತಿಯು ಅಪ್ರಮಾಣವೆನ್ನಲು ಸಾಧ್ಯವಿಲ್ಲ. ಸ್ಮೃತಿಯಲ್ಲಿ ಅನುಭೂತತ್ವವೆಂಬ ವಿಶೇಷವು ವಿಷಯವಾಗಿದೆ. 'ಅನುಭೂತತ್ವವಿಶೇಷ ವಿಷಯತ್ವಾತ್' ಎಂಬಲ್ಲಿ 'ಅನುಭೂತತ್ವರೂಪಃ ವಿಶೇಷಃ ಅನುಭೂತತ್ವರೂಪವಿಶೇಷಃ ಅನುಭೂತತ್ವರೂಪವಿಶೇಷಃ ವಿಷಯಃ' ಎಂಬುದಾಗಿ ಶಾಕಪಾರ್ಥಿವಶಬ್ದದಂತೆ ಸಮಾಸವನ್ನು ತಿಳಿಯಬೇಕು. ಅಭಿಪ್ರಾಯ ಹೀಗಿದೆ - ಸ್ಮರಣೆ ಬರಬೇಕಾದರೆ 'ಇದಂ ಮಯಾಅನುಭೂತಂ' ಎಂಬುದಾಗಿ ಅನುಭೂತತ್ವವನ್ನೂ ಕೂಡ ವಿಷಯೀಕರಿಸುತ್ತದೆ. ಅನುಭವದಲ್ಲಿ ಈ ಅನುಭೂತತ್ವವು ವಿಷಯವಾಗಿರುವುದಿಲ್ಲ. ಸ್ಮೃತಿಯಲ್ಲಿ ವಿಷಯವಾಗಿದೆ. ಆದ್ದರಿಂದ ನಿಮ್ಮ ಲಕ್ಷಣದ ಪ್ರಕಾರವೇ ಸರ್ವಾತ್ಮನಾ ಅನುಭೂತವಿಷಯತ್ವವು ಇಲ್ಲದ ಕಾರಣ ಅಪ್ರಾಮಾಣ್ಯವು ಪ್ರಾಪ್ತವಾಗಿದೆ.

### ಸ್ಮೃತಿಯೂ ಅಪ್ರಮಾಣವಾದರೆ ಅನುಭೂತವಿಷಯದಲ್ಲಿ ಪ್ರಮಾಣವೇ ಇಲ್ಲ

**तत्वप्रदीपः – न च स्मृत्यप्रामाण्यवादिनामनुभूते प्रमाणसिद्धिः । स्मर्यमाणत्वलिङ्गादनुभूतानुमानमिति चेन्मैवम् । तदनुभूतं स्मर्यमाणत्वादिति हि तत् । तत्र धर्मिग्राहकप्रमाणमनुमृग्यताम् । स्मृतेरप्रामाण्ये तस्य प्रथमतः प्रतिषेधो न प्राज्ञानां हर्षमावहति । परिलुप्यते चैतदपलापिनां प्रत्यक्षादिप्रमाणप्रवृत्तिः तत्पुरस्सरस्सर्वो व्यवहारश्च । यथार्थतामात्रेण च सर्वनिर्वाहो दुर्वचः । यथार्थस्याप्रामाण्ये कारणाभावात् ।**

ಯಾವ ವಾದಿಗಳು ಶ್ರುತಿಯನ್ನು ಅಪ್ರಮಾಣವೆಂದು ಹೇಳುತ್ತಾರೋ, ಅವರಿಗೆ ಅನುಭೂತವಾದ ವಿಷಯದಲ್ಲಿ ಪ್ರಮಾಣವನ್ನೇ ಹೇಳಲಾಗದು. ಸ್ಮರ್ಯಮಾಣತ್ವಲಿಂಗದಿಂದ ಅನುಭೂತವಾದದ್ದನ್ನು ಅನುಮಾನ ಮಾಡುತ್ತೇವೆ ಎಂದರೆ ಇದು ತಪ್ಪು. 'ತದನುಭೂತಂ ಸ್ಮರ್ಯಮಾಣತ್ವಾತ್' ಎಂಬ ಅನುಮಾನವನ್ನೇ ನೀವು ಹೇಳಬೇಕು. ಆಗ ಧರ್ಮಿಗ್ರಾಹಕಪ್ರಮಾಣ ಯಾವುದು ? ಎಂದು ಹುಡುಕಬೇಕಾಗುತ್ತದೆ. ಶ್ರುತಿಯು ಅಪ್ರಮಾಣವಾದ್ದರಿಂದ ಮೊದಲೇ ಅದನ್ನು ಪ್ರತಿಷೇಧ ಮಾಡುವುದು ಪ್ರಾಜ್ಞರಿಗೆ ಸಂತೋಷವನ್ನು ಉಂಟುಮಾಡುವುದಿಲ್ಲ. ಮತ್ತು ಸ್ಮೃತಿಯ ಪ್ರಾಮಾಣ್ಯವನ್ನು ಅಪಲಾಪಮಾಡುವವರಿಗೆ ಪ್ರತ್ಯಕ್ಷಾದಿಪ್ರಮಾಣಗಳ ಪ್ರವೃತ್ತಿ, ತತ್ಪುರಸ್ಸರವಾದ ವ್ಯವಹಾರ ಎಲ್ಲವೂ ಕೂಡ ಪರಿಲೋಪವಾಗಬೇಕಾಗುತ್ತದೆ. ಅಪ್ರಾಮಾಣ್ಯವಿದ್ದರೂ ಎಲ್ಲವನ್ನೂ ನಿರೋಧ ಮಾಡುತ್ತೇವೆ ಎಂಬುದು ಅಸತ್ಯವಾದ ಮಾತು. ಯಥಾರ್ಥವಾದದ್ದು ಅಪ್ರಮಾಣವಾಗಿದೆ ಎಂದು ಹೇಳಲು ಯಾವುದೇ ಕಾರಣವಿಲ್ಲ.

ವಿವರಣೆ - ಪ್ರಾಭಾಕರರು ಶ್ರುತಿಯನ್ನು ಅಪ್ರಮಾಣ ಎನ್ನುತ್ತಾರೆ. ಹಾಗಾದರೆ ಇದರ ಅನುಭವ ನನಗೆ ಬಂದಿದೆ ಎಂಬ ಅನುಭೂತವಿಷಯದಲ್ಲಿ ಯಾವುದೇ ಪ್ರಮಾಣ ಇಲ್ಲದಿರಬೇಕಾದೀತು. ಅನುಭವ ಬಂದ ವಿಷಯದಲ್ಲಿ ಶ್ರುತಿ ಒಂದನ್ನು ಮಾತ್ರ ಪ್ರಮಾಣವನ್ನಾಗಿ ಹೇಳಲು ಸಾಧ್ಯ. ಶ್ರುತಿಯನ್ನೇ ಅಪ್ರಮಾಣವೆಂದು ಹೇಳಿದರೆ ಅನುಭೂತವಿಷಯದಲ್ಲಿ ಪ್ರಮಾಣಸಾಮಾನ್ಯವನ್ನೇ ನಿಷೇಧ ಮಾಡಿದಂತಾಯಿತು.

ಸ್ಮರ್ಯಮಾಣತ್ವಲಿಂಗದಿಂದ ಅನುಭೂತವು ತಿಳಿಯುತ್ತದೆ ಎಂದು ಅವರು ಹೇಳುತ್ತಾರೆ. ಆ ಸ್ಮರ್ಯಮಾಣತ್ವ ಲಿಂಗಕವಾದ ಅನುಮಾನವು ಹೀಗಿದೆ - 'ತತ್

ಅನುಭೂತಂ ಸ್ಮರ್ಯಮಾಣತ್ವಾತ್' ಎಂದು. ಸ್ಮರಣೆಗೆ ವಿಷಯವಾಗಿರುವುದರಿಂದ ಆ ಪದಾರ್ಥವು ಅನುಭೂತವಾಗಿದೆ. ಈ ಅನುಮಾನದಲ್ಲಿ ತತ್ ಎಂಬ ಧರ್ಮಿಯನ್ನು ತಿಳಿಸುವ ಪ್ರಮಾಣ ಯಾವುದು ? ಎಂಬ ಪ್ರಶ್ನೆಗೆ ಪ್ರಾಭಾಕರರಿಗೆ ಉತ್ತರಿಸಲು ಸಾಧ್ಯವಿಲ್ಲ. ಹೇಳುವುದಾದರೆ ಸ್ಮೃತಿಯನ್ನೇ ಹೇಳಬೇಕು. ಅದನ್ನು ಅವರು ಅಪ್ರಮಾಣ ಎಂದು ಮೊದಲೇ ಪ್ರತಿಷೇಧ ಮಾಡುತ್ತಾರೆ. ಇದು ಯಾವ ಪ್ರಾಜ್ಞರಿಗೂ ಇಷ್ಟವಾದ ವಿಚಾರವಲ್ಲ. ಮತ್ತು ವಿನಾಕಾರಣ ಸ್ಮೃತಿಯನ್ನು ಪ್ರಮಾಣವಲ್ಲವೆಂದು ಅಪಲಾಪ ಮಾಡಿದರೆ, ಪ್ರತ್ಯಕ್ಷಾದಿ ಪ್ರಮಾಣಗಳನ್ನೂ ಕೂಡ ಇದರಂತೆ ಅಪಲಾಪ ಮಾಡಬೇಕಾಗುತ್ತದೆ. ಪ್ರತ್ಯಕ್ಷಾದಿ ಪ್ರಮಾಣಗಳ ಆಧಾರದಲ್ಲಿ ಮಾಡಲ್ಪಡುವ ವ್ಯವಹಾರಗಳೆಲ್ಲವೂ ಕೂಡ ಪರಿಲೋಪವಾಗಬೇಕಾಗುತ್ತದೆ.

ಅಪ್ರಮಾಣವಾದರೂ ಕೂಡ ಯಥಾರ್ಥವಾಗಿರುವುದರಿಂದ ಎಲ್ಲಾ ವ್ಯವಹಾರಗಳು ನಿರ್ವಾಹವಾಗುತ್ತವೆ ಎಂದು ಪ್ರಾಭಾಕರರು ಇದಕ್ಕೆ ಉತ್ತರಿಸಲು ಪ್ರಯತ್ನಿಸಬಹುದು. ಆದರೆ ಯಥಾರ್ಥವಾದರೆ ಪ್ರಮಾಣವಾಗಿಯೇ ಆಗುತ್ತದೆ. ಯಥಾರ್ಥವಾಗಿದ್ದು ಪ್ರಮಾಣವಲ್ಲ ಎನ್ನಲು ಯಾವುದೇ ಕಾರಣವಿಲ್ಲ.

**तत्वप्रदीपः – अनुवादस्याप्रामाण्ये चाभ्यासस्याप्रामाण्यकारणतापत्तिः । अप्राथमिकानां च तत्त्वमस्यादिवाक्यानामप्रामाण्यप्राप्तिः ।**

ಅನುವಾದವು ಅಪ್ರಮಾಣ ಆಗುವುದಾದರೆ, ಅಭ್ಯಾಸಕ್ಕೂ ಕೂಡ ಅಪ್ರಾಮಾಣ್ಯ ಬರಬೇಕಾಗುತ್ತದೆ. ಹಾಗೂ ಒಂಬತ್ತು ಬಾರಿ ಉಪದೇಶಿಸಲ್ಪಟ್ಟ ತತ್ತ್ವಮಸ್ಯಾದಿ ವಾಕ್ಯಗಳಲ್ಲಿ ಮೊದಲನೆಯದು ಬಿಟ್ಟು, ಉಳಿದವುಗಳಿಗೆ ಅಪ್ರಾಮಾಣ್ಯವು ಬರಬೇಕಾಗುತ್ತದೆ.

ವಿವರಣೆ - ಪ್ರಾಭಾಕರರು ಸ್ಮೃತಿಗೆ ಮಾತ್ರವಲ್ಲದೇ ಅನುವಾದಕ್ಕೂ ಕೂಡ ಅಪ್ರಾಮಾಣ್ಯವನ್ನು ಹೇಳುತ್ತಾರೆ. ಪ್ರಕೃತ ಅನುವಾದದ ಅಪ್ರಾಮಾಣ್ಯವನ್ನು ನಿರಾಕರಿಸುತ್ತಿದ್ದಾರೆ. ಅನುವಾದ ಎಂದರೆ ವಾಕ್ಯರೂಪವಾದದ್ದೆಂದು ತಿಳಿಯಬೇಕು. ಇಡೋ ಯಜತಿ, ಸಮಿಧೋ ಯಜತಿ, ಬರ್ಹಿರ್ಯಜತಿ ಇತ್ಯಾದಿ ವೈದಿಕವಾಕ್ಯಗಳಲ್ಲಿ ಅಧ್ಯಾಯವಿದೆ. ಅನುವಾದವು ಅಪ್ರಮಾಣ ಆಗುವುದಾದರೆ ಈ ಅಭ್ಯಾಸಗಳಿಗೆ ಅಪ್ರಾಮಾಣ್ಯವು ಬರಬೇಕಾಗುತ್ತದೆ. ಅಷ್ಟೇ ಅಲ್ಲದೇ ತತ್ತ್ವಮಸಿ ಎಂಬುದಾಗಿ ವೇದವಾಕ್ಯದಲ್ಲಿ ಒಂಬತ್ತು

ಬಾರಿ ಉಪದೇಶಿಸಲಾಗಿದೆ. ಅನುವಾದವು ಅಪ್ರಮಾಣ ಆಗುವುದಾದರೆ ಮೊದಲನೆಯ ತತ್ತ್ವಮಸಿ ಎಂಬುದಷ್ಟೇ ಪ್ರಮಾಣವೆಂದಾಗಿ ಎರಡರಿಂದ ಒಂಬತ್ತರ ತನಕ ಹೇಳಲ್ಪಟ್ಟ ತತ್ತ್ವಮಸಿ ಎಂಬ ಉಪದೇಶ ವಾಕ್ಯವು ಅಪ್ರಮಾಣ ಆಗಬೇಕಾಗುತ್ತದೆ. ಆದ್ದರಿಂದ ಅನುವಾದವನ್ನು ಅಪ್ರಮಾಣ ಎಂದು ಹೇಳಬಾರದು.

**तत्वप्रदीपः – न चाफलवत्तादप्रामाण्यम् । प्रत्यक्षादावपि क्वापि नैष्फल्यदर्शनात् । क्वचिदिहापि साफल्यदर्शनात् । तस्मात्स्मृतेः प्रत्यभिज्ञायाश्च विवक्षितप्रामाण्यसिद्धेर्वस्तुनः स्थायित्वसिद्धिः ।**

ಪ್ರಯೋಜನವಿಲ್ಲದ್ದರಿಂದ ಅನುವಾದವನ್ನು ಅಪ್ರಮಾಣವೆಂದು ಹೇಳಬಾರದು. ಪ್ರತ್ಯಕ್ಷಾದಿಗಳಲ್ಲೂ ಕೂಡ ಕೆಲವೊಮ್ಮೆ ಪ್ರಯೋಜನವಿಲ್ಲದಿರುವುದು ಕಾಣಿಸುತ್ತಿದೆ. ಮತ್ತು ಅನುವಾದ ವಾಕ್ಯದಲ್ಲೂ ಕೂಡ ಸಾರ್ಥಕ್ಯವಿರುವುದು ಕಾಣಿಸುತ್ತಿದೆ. ಆದ್ದರಿಂದ ಸ್ಮೃತಿ ಮತ್ತು ಪ್ರತ್ಯಭಿಜ್ಞಾದಿಗಳಿಗೆ ವಿವಕ್ಷಿತವಾದ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಹಾಗಾಗಿ ವಸ್ತುಗಳಿಗೆ ಕ್ಷಣಿಕತ್ವಸಿದ್ಧವಾಗದೇ, ಸ್ಥಾಯಿತ್ವವೇ ಸಿದ್ಧವಾಗುತ್ತದೆ.

**तत्वप्रदीपः – क्षणिकवादिनोरप्यनुमेयवादी प्रत्यक्षवादिनि वरिष्ठान्गुणानाधत्ते प्रामाणिकमखिलं परिहरन्परिगृह्णन्प्रामाणिकं गरीयसीं कल्पनामाश्रयन्निति । इति समुदायाधिकरणम् ।**

ಕ್ಷಣಿಕವಾದಿಯಾದ ಅನುಮೇಯವಾದಿಯಾದ ಬೌದ್ಧನು ಎಲ್ಲಾ ಪ್ರಾಮಾಣಿಕವಾದದ್ದನ್ನು ತ್ಯಾಗ ಮಾಡಿದ್ದಾನೆ. ಅಪ್ರಾಮಾಣಿಕವಾದದ್ದನ್ನೆಲ್ಲಾ ಸ್ವೀಕರಿಸಿದ್ದಾನೆ. ದೊಡ್ಡದಾದ ಕಲ್ಪನಾಗೌರವವನ್ನು ಆಶ್ರಯಿಸಿದ್ದಾನೆ. ಇಂಥವನು ಪ್ರತ್ಯಕ್ಷವಾದಿಗಳಿಗೆ ಶ್ರೇಷ್ಠಗುಣಗವನ್ನು ಆದಾನ ಮಾಡಿದ್ದಾನೆ.

ವಿವರಣೆ - ಬೌದ್ಧರಲ್ಲಿ ವೈಭಾಷಿಕರು ಹಾಗೂ ಸೌತ್ರಾಂತಿಕರು ಪರಮಾಣುಪುಂಜ-ವಾದಿಗಳಾಗಿದ್ದಾರೆ. ಇವರಿಬ್ಬರಲ್ಲಿ ವೈಭಾಷಿಕರು ಘಟ-ಪಟಾದಿ ಸಮಸ್ತ ಜಗತ್ತು ಪ್ರತ್ಯಕ್ಷಸಿದ್ಧ ಎಂದು ಒಪ್ಪಿದ್ದಾರೆ. ಸೌತ್ರಾಂತಿಕರು ಎಲ್ಲವನ್ನೂ ಕೂಡ ಅನುಮೇಯ ಎಂದು ಒಪ್ಪಿದ್ದಾರೆ. ಸರ್ವಪ್ರಪಂಚವು ಅನುಮೇಯ ಎಂಬುದಾಗಿ ಹೇಳುವ ಸೌತ್ರಾಂತಿಕನು ಎಲ್ಲವೂ ಪ್ರತ್ಯಕ್ಷ ಸಿದ್ಧವೆಂದು ಹೇಳುವ ವೈಭಾಷಿಕನಿಗೆ ತನ್ನಲ್ಲಿರುವ ಗುಣಗಳೆಲ್ಲವನ್ನೂ ಕೂಡ ಕೊಟ್ಟಿದ್ದಾನೆ.

ಏಕೆಂದರೆ ಪ್ರಾಮಾಣಿಕವಾದದ್ದನ್ನೆಲ್ಲಾ ಬಿಟ್ಟಿದ್ದಾನೆ. ಅಪ್ರಾಮಾಣಿಕವಾದ್ದನ್ನು ಸ್ವೀಕರಿಸಿದ್ದಾನೆ. ಗೌರವದೋಷವನ್ನು ಆಶ್ರಯಿಸಿದ್ದಾನೆ. ಇಷ್ಟೊಂದು ದೋಷ ಪ್ರತ್ಯಕ್ಷವಾದಿಯಲ್ಲಿ ಇರುವುದಿಲ್ಲ. ಅವನಿಗಿಂತ ಇವನು ಅತ್ಯಂತ ದುಷ್ಟನಾಗಿದ್ದಾನೆ ಎಂಬುದು ತಾತ್ಪರ್ಯಾರ್ಥ. ಅನುಮೇಯವಾದಿಯು ಪ್ರತ್ಯಕ್ಷವಾದಿಗಿಂತ ಹೆಚ್ಚಿನ ದೋಷವುಳ್ಳವನಾಗಿದ್ದಾನೆ ಎಂಬುದನ್ನು ಸಾಹಿತ್ಯಶೈಲಿಯಲ್ಲಿ ಪಂಡಿತಾಚಾರ್ಯರು ಹೀಗೆ ತಿಳಿಸಿದ್ದಾರೆ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ ಸಮುದಯಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

### ತತ್ವಪ್ರಕಾಶಿಕಾ

### ಪೂರ್ವಪಕ್ಷಿಗಳ ಅನುಮಾನಕ್ಕೆ ಬಾಧದೋಷ

**तत्वप्रकाशिका – एवं प्रतिपक्षेणानुमानं निरस्य बाधेनापि पराकुर्वत्सूत्रं पठित्वा व्याचष्टे – अनुस्मृतेश्चेति ॥**

ಹೀಗೆ ಪ್ರತಿಪಕ್ಷಾನುಮಾನದಿಂದ ಕ್ಷಣಿಕತ್ವ ಅನುಮಾನವನ್ನು ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಬಾಧ ಎಂಬ ದೋಷವನ್ನು ಹೇಳುವ ಮೂಲಕವೂ ಪೂರ್ವಪಕ್ಷಕಾರನ ಅನುಮಾನವನ್ನು ದೂಷಣೆ ಮಾಡುವ ಸೂತ್ರವನ್ನು 'ಅನುಸ್ಮೃತೇಶ್ಚ' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಭಾವದೀಪ

**भावदीपः – ॥ अनुस्मृतेश्च ॥ २५ ॥ बाधेनापीति ॥** तेन सूत्रभाष्ययोश्चशब्द समुच्चय इति न क्षणिकत्वं भावानामित्यनुषङ्ग इति च सूचितम्।

ಬಾಧದೋಷವನ್ನು ಹೇಳುವ ಮುಖಾಂತರವೂ ಕೂಡ ಪೂರ್ವಪಕ್ಷಕಾರರ ಅನುಮಾನವನ್ನು ನಿರಾಕರಣೆ ಮಾಡುತ್ತಿದ್ದಾರೆಂದು ಟೀಕೆಯಲ್ಲಿ ಹೇಳಿದ್ದಾರೆ. ಇದರಿಂದ ಸೂತ್ರ ಹಾಗೂ ಭಾಷ್ಯಗಳಲ್ಲಿರುವ

ಚಶಬ್ದವು ಬಾಧದೋಷಕ್ಕೆ ಸಮುಚ್ಚಾಯಕವಾಗಿದೆ. ಮತ್ತು ಕ್ಷಣಿಕತ್ವವನ್ನು ಭಾವಪದಾರ್ಥಗಳಿಗೆ ಹೇಳಬಾರದು ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು. ಇದನ್ನೂ ಕೂಡ ಸೂಚಿಸಿದ್ದಾರೆ.

### ಪ್ರತ್ಯಭಿಜ್ಞೆಯು ಭ್ರಾಂತಿಯಲ್ಲ

**तत्वप्रकाशिका – परिलूनपुनर्जातकुन्तलकलापप्रत्यभिज्ञावद्भ्रमोऽयमित्यत आह – प्रत्यभिज्ञाया इति ।। किं प्रत्यभिज्ञाया बाधितत्वेन भ्रान्तित्वं कल्प्यते बाधकमन्तरेण वा । नाद्यः । तदभावात् । द्वितीये दीपादिविशेषदर्शनस्य भ्रमत्वप्रसङ्ग इति भावः ।**

ಘಟಾದಿಗಳ ವಿಷಯದಲ್ಲಿ ಬರುವ ಪ್ರತ್ಯಭಿಜ್ಞೆಯು ಭ್ರಮವಾಗಿದೆ. ಕತ್ತರಿಸಿದ ಬಳಿಕ ಬೇರೆ ಕೂದಲು ಹುಟ್ಟುತ್ತದೆ. ಆದರೆ 'ಅದೇ ಕೂದಲು' ಎಂಬ ಪ್ರತ್ಯಭಿಜ್ಞೆ ಬಂದರೆ ಇದು ಹೇಗೆ ಭ್ರಾಂತಿಯೋ, ಅದರಂತೆ ಘಟಪ್ರತ್ಯಭಿಜ್ಞೆಯೂ ಕೂಡ ಭ್ರಾಂತಿಯಾಗಿದೆ. ಈ ಆಕ್ಷೇಪಕ್ಕೆ 'ಪ್ರತ್ಯಭಿಜ್ಞಾಯಾಃ' ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಬಾಧಕವಿರುವುದರಿಂದ ಪ್ರತ್ಯಭಿಜ್ಞೆಯನ್ನು ಭ್ರಾಂತಿ ಎನ್ನುತ್ತೀರೋ? ಬಾಧಕವಿಲ್ಲದೆ ಭ್ರಾಂತಿ ಎನ್ನುತ್ತೀರೋ? ಮೊದಲನೆಯ ಪಕ್ಷ ತಪ್ಪು. ಅಂಥ ಬಾಧಕಗಳು ಯಾವುದೂ ಇಲ್ಲ. ಎರಡನೆಯ ಪಕ್ಷದಲ್ಲಿ ದೀಪದಲ್ಲಿ ಕಾಣಿಸುವ ವಿಶೇಷದರ್ಶನವೂ ಕೂಡ ಭ್ರಾಂತಿಯಾಗ-ಬೇಕಾಗುತ್ತದೆ.

**भावदीपः** – भाष्यस्थापादनस्य निर्बीजतानिरासाय विकल्पमुखेनार्थमाह – **किमिति ।।**

ಭಾಷ್ಯದಲ್ಲಿರುವ ಆಪಾದನೆಯು ನಿರ್ಬೀಜವಾಗಿದೆ. ಇದರ ನಿರಾಕರಣೆಗಾಗಿ ವಿಕಲ್ಪವನ್ನು ಮಾಡುವ ಮೂಲಕ ಅರ್ಥವನ್ನು 'ಕಿಂ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**ವಿವರಣೆ** - 'ಅದೇ ಘಟ ಇದು' ಎಂಬುದಾಗಿ ಪ್ರತ್ಯಭಿಜ್ಞೆಯು ಬರುವುದರಿಂದ ಘಟಾದಿ ಪದಾರ್ಥಗಳು ಕ್ಷಣಿಕವಲ್ಲವೆಂದು ಹೇಳಬೇಕು. ಒಂದುವೇಳೆ ಕ್ಷಣಿಕವೆಂದು

ಹೇಳಿದರೆ ಈ ಪ್ರತ್ಯಭಿಜ್ಞೆಯಿಂದ ಬಾಧದೋಷವು ಬರುತ್ತದೆ ಎಂದು ಸಿದ್ಧಾಂತಿಗಳಾದ ನಾವು ಹೇಳಿದರೆ ಪೂರ್ವಪಕ್ಷಕಾರರು ಪ್ರತ್ಯಭಿಜ್ಞೆಯನ್ನೇ ಭ್ರಾಂತಿ ಎನ್ನುತ್ತಾರೆ. ಇಂಥವರನ್ನು ಕುರಿತು ಪ್ರಕೃತ ಪ್ರಶ್ನಿಸುತ್ತಿದ್ದಾರೆ.

ಬಾಧಕವಿಲ್ಲದಿದ್ದರೂ ಪ್ರತ್ಯಭಿಜ್ಞೆಯನ್ನು ಭ್ರಾಂತಿ ಎನ್ನುವುದಾದರೆ ದೀಪಾದಿ ವಿಶೇಷದರ್ಶನವೂ ಕೂಡ ಭ್ರಾಂತಿ ಎನ್ನಬೇಕಾದೀತು.

### ವಿರುದ್ಧಧರ್ಮವು ಬಾಧಕವಲ್ಲ

**ತತ್ವಪ್ರಕಾಶಿಕಾ – ವಿरुद्धधर्माध्यासो बाधकमिति चेन्न । तस्य कालादिभेदेनोपपत्तेः । न हि तादृशोऽन्यत्वमस्मत्सम्मतम् । अन्यथैकक्षणेऽपि भावभेदप्रसङ्गात् । एतेन प्रदीपोऽपि व्याख्यातः । घटोऽयं निरन्तरोत्तरक्षणवृत्ति-ध्वंसप्रतियोगी घटत्वात् मुसलाहतैकक्षणवृत्तिघटवदिति चोक्तरीत्या परास्तम् ।**

ವಿರುದ್ಧಧರ್ಮದ ಅಧ್ಯಾಸವೇ ಬಾಧಕವೆಂದು ಹೇಳಬಾರದು. ಆ ವಿರುದ್ಧಧರ್ಮವನ್ನು ಕಾಲಾದಿಭೇದದಿಂದಲೇ ಕೂಡಿಸಲು ಬರುತ್ತದೆ. ಕಾಲಭೇದದಿಂದ ವಿರುದ್ಧಧರ್ಮ ತೋರುವಲ್ಲಿ ಭೇದವನ್ನು ನಾವು ಒಪ್ಪಿರುವುದಿಲ್ಲ. ಇಲ್ಲದಿದ್ದರೆ ಒಂದೇ ಕ್ಷಣದಲ್ಲೂ ಕೂಡ ಪದಾರ್ಥದಲ್ಲಿ ಭೇದವನ್ನು ಒಪ್ಪಬೇಕಾಗುತ್ತದೆ. ಹೀಗೆ ಹೇಳಿದ್ದರಿಂದ ಪ್ರದೀಪದ ಬಗ್ಗೆ ವ್ಯಾಖ್ಯಾನ ಮಾಡಿದಂತಾಯಿತು.

'ಅಯಂ ಘಟಃ ನಿರಂತರೋತ್ತರಕ್ಷಣಧ್ವಂಸಪ್ರತಿಯೋಗೀ ಘಟತ್ವಾತ್ ಮುಸಲಾಹತೈಕ-ಕ್ಷಣವೃತ್ತಿಘಟವತ್' 'ವನಕೆಯಿಂದ ನಾಶ ಮಾಡಲ್ಪಟ್ಟ ಘಟದಲ್ಲಿ ಘಟತ್ವವಿದೆ. ಇದು ಉತ್ತರಕ್ಷಣವೃತ್ತಿಯಾದ ಧ್ವಂಸಕ್ಕೆ ಪ್ರತಿಯೋಗಿಯಾಗಿದೆ. ಅದರಂತೆ ಈ ಘಟವೂ ಕೂಡ ಘಟವಾಗಿರುವುದರಿಂದ ಮುಂದಿನ ಕ್ಷಣದಲ್ಲಿ ಹುಟ್ಟಿದ ಧ್ವಂಸಕ್ಕೆ ಪ್ರತಿಯೋಗೀ ಆಗಿರಲೇಬೇಕು' ಎಂಬ ಪೂರ್ವಪಕ್ಷಕಾರರ ಅನುಮಾನವನ್ನೂ ಕೂಡ ಈಗ ನಿರಾಕರಣೆ ಮಾಡಿದಂತಾಯಿತು.

**भावदीपः – विरुद्धधर्मेति ।।** आम्रफलादौ श्यामत्वाश्यामत्वादिविरुद्ध-धर्माध्यासस्तदेवेदमिति प्रत्यभिज्ञायाः प्रमात्वे बाधकमित्यर्थः । तस्य श्यामत्वादेरित्यर्थः ।

यद्यपि तार्किकाणां तत्रापि भेदस्तथापि तदेवेदमिति प्रत्यभिज्ञानान्न भेदोऽस्मत्सम्मत इत्याह – **न हीति**।। **अन्यथेति**।। अभेदे प्रमितेऽपि भेदश्चेदेकक्षणवर्तिनोर्घट-पटयोर्भेददर्शनात्तद्दृष्टान्तेनैकक्षणवर्तिनीपिघटस्य स्वस्माद्भेदः स्यादित्यर्थः। यद्वा एकक्षणवर्तिनोऽपि घटस्य पुरुषभेदेन ज्ञातत्वाज्ञातत्वयोर्दृष्टेर्भेदः स्यादित्यर्थः।। **एतेनेति**।। कालादिभेदेनोपपत्तिकथनेनेत्यर्थः। बालयुवशरीरवत् प्रदीपेऽत्यन्त-भेदाभावेऽपि कालादिभेदेन परिमाणभेद इति भावः।। **उक्तरीत्येति**।। तत्रापि पूर्वमध्या परकलाविकलकालवृत्तित्वादित्युक्तदिशा तादृशोत्तरक्षणाप्रसिद्ध्या दृष्टान्ते साध्यासंम तेरित्यर्थः। परनियमभञ्जनाय घटोऽयमित्यादि रूपेण त्र्यवयवोक्तिः।

'ವಿರುದ್ಧಧರ್ಮಾಧ್ಯಾಸಃ ಬಾಧಕಂ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಮಾವಿನ ಹಣ್ಣಿನಲ್ಲಿ ಶ್ಯಾಮತ್ವ ಹಾಗೂ ತದಭಾವಗಳೆಂಬ ವಿರುದ್ಧಧರ್ಮಾಧ್ಯಾಸವಿದೆ. ಇದು 'ತದೇವೇದಂ' ಎಂಬ ಪ್ರತ್ಯಭಿಜ್ಞೆಯು ಪ್ರಮಾ ಎನ್ನಲು ಬಾಧಕವಾಗಿದೆ ಎಂದರ್ಥ. 'ತಸ್ಯ' ಎಂಬ ಪದಕ್ಕೆ ಶ್ಯಾಮತ್ವಾದಿಗಳು ಎಂದರ್ಥ.

ವಾಸ್ತವಿಕವಾಗಿ ತಾರ್ಕಿಕರು ಅಂಥ ಮಾವಿನ ಹಣ್ಣಿನಲ್ಲೂ ಕೂಡ ಭೇದವನ್ನೇ ಹೇಳುತ್ತಾರೆ. ಆದರೆ 'ತದೇವೇದಂ' ಎಂಬ ಪ್ರತ್ಯಭಿಜ್ಞಾ ಇರುವುದರಿಂದ ಭೇದವು ನಮಗೆ ಸಮ್ಮತವಲ್ಲ. ಇದನ್ನು 'ನ ಹಿ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ಅನ್ಯಥಾ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಅಭೇದವು ಪ್ರಮಿತವಾಗಿದ್ದರೂ ಕೂಡ ಭೇದವನ್ನೇ ಒಪ್ಪುವುದಾದರೆ, ಒಂದೇ ಕ್ಷಣದಲ್ಲಿರುವ ಘಟ-ಪಟಗಳಿಗೆ ಭೇದವು ಕಾಣಸುತ್ತಿದೆ. ಇದರ ದೃಷ್ಟಾಂತದಿಂದ ಒಂದೇ ಕ್ಷಣದಲ್ಲಿರುವ ಘಟವು ತನಗಿಂತ ಭಿನ್ನ ಆಗಬೇಕಾದೀತು ಎಂದರ್ಥ. ಅಥವಾ ಒಂದೇ ಕ್ಷಣದಲ್ಲಿರುವ ಘಟವು ಒಬ್ಬ ಪುರುಷನಿಂದ ಜ್ಞಾತವಾಗುತ್ತದೆ. ಮತ್ತೊಬ್ಬ ಪುರುಷನಿಂದ ಅಜ್ಞಾತವಾಗುತ್ತದೆ. ಹೀಗೆ ಜ್ಞಾತತ್ವ, ಅಜ್ಞಾತತ್ವಗಳೆಂಬ ವಿರುದ್ಧ ಧರ್ಮಾಧಿಕರಣದಿಂದ ಭೇದವನ್ನು ಹೊಂದಬೇಕಾದೀತು ಎಂದರ್ಥ.

'ಏತೇನ' ಎಂಬ ಪದಕ್ಕೆ ಕೇವಲ ಕಾಲಭೇದದಿಂದ ವಿರುದ್ಧಧರ್ಮಾಧಿಕರಣತ್ವವನ್ನು ಉಪಪಾದಿದನೆ ಮಾಡಬಹುದಾದ್ದರಿಂದ ಎಂದರ್ಥ. ಬಾಲಕನ ಶರೀರ ಹಾಗೂ ಯುವಕನ ಶರೀರದಂತೆ ದೀಪದಲ್ಲಿ

ಅತ್ಯಂತ ಭೇದ ಇಲ್ಲದಿರಬಹುದು. ಆದರೆ ಕಾಲಾದಿ ಭೇದದಿಂದ ಪರಿಮಾಣದಲ್ಲಿ ಭೇದ ಇದ್ದೇ ಇದೆ ಎಂದು ತಿಳಿಯಬೇಕು.

'ಉಕ್ತರೀತ್ಯಾ' ಎಂಬುದರ ಅಭಿಪ್ರಾಯ ಹೀಗಿದೆ - ಅಲ್ಲೂ ಕೂಡ ಪೂರ್ವಕಾಲ, ಮಧ್ಯಕಾಲ, ಅಪರಕಾಲ ಎಂಬ ವಿಭಾಗ ಇಲ್ಲದ್ದರಿಂದ ಇತ್ಯಾದಿಯಾಗಿ ಹಿಂದೆ ಹೇಳಿದಂತೆ ಉತ್ತರಕ್ಷಣವೇ ಅಪ್ರಸಿದ್ಧವಾಗಿದೆ. ಹಾಗಾಗಿ ವನಕೆಯಿಂದ ನಾಶಮಾಡಲ್ಪಟ್ಟ ಏಕಕ್ಷಣವೃತ್ತಿಯಾದ ಘಟವೆಂಬ ದೃಷ್ಟಾಂತದಲ್ಲಿ ಸಾಧ್ಯವು ಅಸಮ್ಮತವಾಗಿದೆ ಎಂದು ತಿಳಿಯಬೇಕು.

ವಾಸ್ತವಿಕವಾಗಿ ಬೌದ್ಧರು ಅನುಮಾನಕ್ಕೆ ಎರಡೇ ಅಂಗಗಳನ್ನು ಹೇಳುತ್ತಾರೆ. ಆದರೆ ಪ್ರಕೃತ ಮೂರು ಅವಯವಗಳನ್ನು ಹೇಳಿದ್ದರಿಂದ ಅವರ ನಿಯಮವು ಅಸಾಧುವಾಗಿದೆ ಎಂದು ತಿಳಿಸಿದ್ದಾರೆ.

ವಿವರಣೆ - ದೃಷ್ಟಾಂತವಾದ ದೀಪದಲ್ಲಿ ವಿರುದ್ಧಧರ್ಮವಿದೆ. ದೀಪವು ಮೊದಲು ಸಣ್ಣದಾಗಿರುತ್ತದೆ ಅನಂತರ ದೊಡ್ಡದಾಗುತ್ತದೆ. ಹೀಗೆ ಉಚ್ಚತ್ವ, ನೀಚತ್ವವೆಂಬ ವಿರುದ್ಧಧರ್ಮಗಳು ತೋರುತ್ತಿರುವುದು ಸ್ಥಾಯಿತ್ವಕ್ಕೆ ಬಾಧಕವಾಗುತ್ತದೆ.

ಬೌದ್ಧರ ಈ ಅಭಿಪ್ರಾಯ ತಪ್ಪು. ಏಕೆಂದರೆ ದೀಪವು ಪ್ರತಿಕ್ಷಣದಲ್ಲಿ ಪರಿಣಾಮವನ್ನು ಹೊಂದುತ್ತದೆ. ಹೊರತು ನಾಶವನ್ನು ಹೊಂದುವುದಿಲ್ಲ. ಆದ್ದರಿಂದ ಒಂದೇ ದೀಪದಲ್ಲಿ ಕಾಲಭೇದದಿಂದ ವಿರುದ್ಧ ಧರ್ಮವನ್ನು ಒಪ್ಪಿದರೆ ಸಾಕು, ಪ್ರತಿಕ್ಷಣದಲ್ಲಿಯೂ ಧ್ವಂಸ ಮತ್ತು ಉತ್ಪತ್ತಿಗಳನ್ನು ಒಪ್ಪಿದರೆ ಕಲ್ಪನಾಗೌರವ ಬರುತ್ತದೆ. ಹೀಗೆ ಒಪ್ಪದಿದ್ದರೆ ಒಂದೇ ಘಟವು ಒಬ್ಬನಿಂದ ಜ್ಞಾತವಾಗುತ್ತದೆ. ಮತ್ತೊಬ್ಬನಿಂದ ಅಜ್ಞಾತವಾಗುತ್ತದೆ. ಆಗ ಜ್ಞಾತತ್ವ, ಅಜ್ಞಾತತ್ವ ಎಂಬ ವಿರುದ್ಧಧರ್ಮಕ್ಕೆ ಅಧಿಕರಣವಾದ್ದರಿಂದ ಒಂದೇ ಕ್ಷಣದಲ್ಲಿರುವ ಘಟವೂ ಕೂಡ ಭಿನ್ನ ಭಿನ್ನ ಎಂದು ಒಪ್ಪಬೇಕಾದ ಪರಿಸ್ಥಿತಿ ಬರುತ್ತದೆ. ವಿರುದ್ಧಧರ್ಮಾಧಿಕರಣತ್ವವನ್ನು ಕಾಲಭೇದದಿಂದಲೇ ಉಪಪಾದನೆ ಮಾಡಬಹುದಾದ್ದರಿಂದ ವಸ್ತುವಿನಲ್ಲಿ ಭೇದವನ್ನು ಒಪ್ಪಬೇಕಾಗಿಲ್ಲ. ಹಾಗಾಗಿ 'ಸೋಽಯಂ' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿ ಎಂದು ಒಪ್ಪಬೇಕಾಗಿಲ್ಲ ಎಂಬುದು ಸಿದ್ಧವಾಯಿತು.

ವೈಭಾಷಿಕ ಮತದ ಭಯ ನಮಗಿಲ್ಲ

**तत्वप्रकाशिका – घट इति च किं परमाणवः पक्षीक्रियन्ते समुदायो वा । नाद्यः। दृष्टान्ताभावात्। न द्वितीयः । तस्यावस्तुत्वात् । अतो वैभाषिकादिमतस्य अनुपपन्नत्वेनाविरोधकत्वाद्युक्तम् ईश्वरस्याशेषजगत्कारणत्वलक्षणमिति सिद्धम्।।**

'ಅಯಂ ಘಟಃ' ಇತ್ಯಾದಿ ಅನುಮಾನದಲ್ಲಿ ಪಕ್ಷೀಭೂತವಾದ ಘಟವು ಅನೇಕ ಪರಮಾಣುಗಳ ಸ್ವರೂಪವೋ, ಅಥವಾ ಸಮುದಾಯರೂಪವೋ, ಪರಮಾಣುಗಳೇ ಪಕ್ಷವೆಂದರೆ ದೃಷ್ಟಾಂತವೇ ಸಿಗುವುದಿಲ್ಲ. ಸಮುದಾಯವನ್ನು ಪಕ್ಷವೆಂದರೆ ಅದು ಒಂದು ವಸ್ತುವೇ ಅಲ್ಲ. ಹೀಗೆ ವೈಭಾಷಿಕ ಮೊದಲಾದವರ ಮತವು ಅತ್ಯಂತ ಅನುಪಪನ್ನವೇ ಆಗಿದೆ. ಇಂಥ ಮತದ ವಿರೋಧವು ನಮಗೆ ಬರುವುದಿಲ್ಲ. ಆದ್ದರಿಂದ ಈಶ್ವರನಿಗೆ ಹೇಳಲ್ಪಟ್ಟ ಅಶೇಷ ಜಗಜ್ಜನ್ಮಾದಿಕಾರಣತ್ವಲಕ್ಷಣವು ನಿರ್ದುಷ್ಟವೆಂದು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ ಸಮುದಾಯಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

**भावदीपः** – पक्षविकल्पेनापि दोषमाह – **घट इति चेति।। दृष्टान्ताभावादिति।।** मुसलाहतैकक्षणवृत्तिपरमाण्वात्मकघटरूपदृष्टान्तस्वरूपे तत्र साध्यसाधनयोश्चास्माकं विप्रतिपत्तेरित्यर्थः।। **अत इति।।** सृष्टिप्रलयादेरयुक्तत्वात् तदनुमानस्य बाधप्रतिरोधग्रस्तत्वाच्चेत्यर्थः।। २५ ।।

ಪಕ್ಷವನ್ನು ವಿಕಲ್ಪ ಮಾಡುವ ಮೂಲಕವೂ ಕೂಡ ದೋಷವನ್ನು 'ಘಟಃ ಇತಿ ಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ದೃಷ್ಟಾಂತಾಭಾವಾತ್' ಎಂಬುದಕ್ಕೆ ಹೀಗರ್ಥ - ಒನಕೆಯಿಂದ ನಾಶಮಾಡಲ್ಪಟ್ಟ ಏಕಕ್ಷಣವೃತ್ತಿಯಾದ ಪರಮಾಣುಸ್ವರೂಪಭೂತವಾದ ಘಟವೆಂಬ ದೃಷ್ಟಾಂತದಲ್ಲಿ ಸಾಧ್ಯ ಹಾಗೂ ಸಾಧನಗಳು ನಮ್ಮ ಪ್ರಕಾರ ವಿಪ್ರತಿಪನ್ನವಾಗಿದೆ ಆದ್ದರಿಂದ ಎಂದರ್ಥ. 'ಅತಃ' ಎಂಬ ಪದಕ್ಕೆ ಸೃಷ್ಟಿ ಹಾಗೂ

ಪ್ರಳಯಗಳು ಅಯುಕ್ತವಾದ್ದರಿಂದ ಮತ್ತು ಬೌದ್ಧರ ಅನುಮಾನವು ಬಾಧದೋಷ ಹಾಗೂ ಸತ್ ಪ್ರತಿಪಕ್ಷದೋಷದಿಂದ ಯುಕ್ತವಾಗಿರುವುದರಿಂದಲೂ ಅಯುಕ್ತವಾಗಿದೆ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಸಮುದಾಯಾಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

ವಿವರಣೆ - ಪರಮಾಣುಗಳನ್ನು ಪಕ್ಷವೆಂದು ಹೇಳಿದರೆ ವನಕೆಯಿಂದ ಹೊಡೆಯಲ್ಪಟ್ಟ ವಸ್ತುವು ಘಟವೇ ಅಲ್ಲ. ಏಕೆಂದರೆ ಪರಮಾಣುಗಳಲ್ಲಿ ಘಟತ್ವವೆಂಬ ಹೇತುವಿಲ್ಲ. ಮತ್ತು ಪೂರ್ವಾಪರಕಲಾರಹಿತವಾದ ಕಾಲದಲ್ಲಿರುವಿಕೆ ಎಂಬ ಕ್ಷಣಿಕಸ್ವರೂಪವಾದ ಸಾಧ್ಯವೂ ಕೂಡ ಇರುವುದಿಲ್ಲ. ಆದ್ದರಿಂದ ಸಾಧ್ಯಾಸಿದ್ಧಿದೋಷವು ಬರುತ್ತದೆ. ಹೀಗೆ ವೈಭಾಷಿಕರು ಹೇಳುವುದೆಲ್ಲವೂ ಅನುಪಪನ್ನವೇ ಆಗಿದೆ.

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## समुदायाधिकरणम् - ७

ವೈಭಾಷಿಕ ಸೌತ್ರಾಂತಿಕರ ನಿರಾಕರಣೆಗಾಗಿ ಸಮುದಾಯಾಧಿಕರಣ

।। समुदाय उभयहेतुकेऽपि तदप्राप्तिः ।।२-२-१८।।

एवं हैतुकान्निरस्य पाषण्डिषु परमाणुपुञ्जवादिनोर्वैभाषिकसौत्रान्तिकयोर्मतमत्र नये निरस्यते । उभयेत्यनेकोपलक्षणम् । अपिः एकहेतुकत्वपक्ष-निराससूचकः । कालकर्मादिनिमित्तेन क्षणिकोऽणुहेतुकः समुदायो भवति । न त्ववयवी कश्चिदस्तीति मते समुदायः किमेकाणुहेतुक उतानेकाणुहेतुकः। एकस्मात् समुदाय इत्यस्य व्याहत्यादेराद्योऽयुक्तः । अन्त्येऽपि उभयहेतुके मिलितानेकहेतुके समुदायेऽङ्गीकृते सति तदप्राप्तिस्तस्य समुदायस्याप्राप्तिरनुपपत्तिरित्यर्थः । अणूनां मेलने सति समुदायस्तस्मिन् सति मेलनमित्यन्योन्याश्रयादित्यर्थः । विरलानेकहेतुकत्वे तु तादृशाणूनां सदा सत्त्वात् समुदायोऽपि सदा स्यादिति लयायोगादिति भावः ।

ಹೈತುಕಮತವನ್ನು ನಿರಾಕರಣೆ ಮಾಡಿದ್ದಾಯಿತು. ಪರಮಾಣುಪುಂಜವಾದಿಗಳಾದ ವೈಭಾಷಿಕ ಹಾಗೂ ಸೌತ್ರಾಂತಿಕರ ಮತವನ್ನು ಈಗ ನಿರಾಕರಣೆ ಮಾಡುತ್ತಿದ್ದಾರೆ.

ಸೂತ್ರದಲ್ಲಿರುವ 'ಉಭಯ' ಎಂಬ ಪದವು ಅನೇಕಕ್ಕೆ ಉಪಲಕ್ಷಣವಾಗಿದೆ. 'ಅಪಿ'ಶಬ್ದವು ಒಂದೇ ಅಣುವು ಅನೇಕ ಅಣುಗಳ ಸಮುದಾಯಕ್ಕೆ ಕಾರಣವಾಗಿದೆ ಎಂಬ ಪಕ್ಷಕ್ಕೆ ನಿರಾಸಕ ಸೂಚಕವಾಗಿದೆ. ಕಾಲ, ಕರ್ಮ ಇವೇ ಮೊದಲಾದ ನಿಮಿತ್ತಕಾರಣಗಳಿಂದ ಕ್ಷಣಿಕವಾದ ಒಂದು ಸಮುದಾಯವು ಹುಟ್ಟುತ್ತದೆ. ಅವಯವಿ ಎಂಬ ಪ್ರತ್ಯೇಕ ಪದಾರ್ಥವೇ ಇರುವುದಿಲ್ಲ ಎಂಬುದು ಬೌದ್ಧರ ಮತ. ಇವರ ಮತದಲ್ಲಿ ಆ ಸಮುದಾಯವು ಒಂದೇ ಅಣುವಿನಿಂದ ಉಂಟಾಗಿದೆಯೋ, ಅಥವಾ ಅನೇಕ ಅಣುಗಳಿಂದ ಉಂಟಾಗಿದೆಯೋ, ಒಂದೇ ಪರಮಾಣುವಿನಿಂದ ಸಮುದಾಯವು ಹುಟ್ಟುತ್ತದೆ ಎಂದು ಹೇಳಿದರೆ ವ್ಯಾಹತಿ ದೋಷವು ಬರುತ್ತದೆ. ಆದ್ದರಿಂದ ಮೊದಲನೆಯ ಪಕ್ಷವು ತಪ್ಪು. ಎರಡನೆಯ ಪಕ್ಷದಲ್ಲೂ ಕೂಡ ಉಭಯಹೇತುಕೇ = ಮಿಲಿತವಾದ ಅನೇಕವಾದ ಪರಮಾಣುಗಳು ಕಾರಣವಾಗಿರುವ, ಸಮುದಾಯೇ = ಸಮುದಾಯವನ್ನು ಅಂಗೀಕಾರ ಮಾಡಿದರೆ, ತದಪ್ರಾಪ್ತಿಃ = ಆ ಸಮದಾಯಕ್ಕೆ ಅಪ್ರಾಪ್ತಿಯು ಬರುತ್ತದೆ. ಅನುಪಪನ್ನವಾಗುತ್ತದೆ ಎಂದರ್ಥ. ಅಣುಗಳು ಒಟ್ಟಿಗೆ ಸೇರಿದರೆ ಮಾತ್ರ ಸಮುದಾಯವು ಉಂಟಾಗುತ್ತದೆ. ಸಮುದಾಯ ಇದ್ದರೆ ಮಾತ್ರ ಅಣುಗಳು ಒಟ್ಟಿಗೆ ಸೇರುತ್ತವೆ. ಹೀಗೆ ಅನ್ಯೋನ್ಯಾಶ್ರಯದೋಷವು ಪ್ರಾಪ್ತವಾಗುತ್ತದೆ ಎಂದರ್ಥ. ವಿರಳವಾದ ಅನೇಕ ಪರಮಾಣುಗಳು ಅಣುಗಳ ಸಮುದಾಯಕ್ಕೆ ಕಾರಣವೆಂದು ಹೇಳಿದರೆ ಅಂಥ ವಿರಳವಾದ ಅಣುಗಳು ಯಾವಾಗಲೂ ಇರುವುದರಿಂದ ಸಮುದಾಯವೂ ಕೂಡ ಯಾವಾಗಲೂ ಇರುತ್ತದೆಂದು ಹೇಳಬೇಕಾದೀತು. ಅದರ ನಾಶವೇ ಉಂಟಾಗುವುದಿಲ್ಲ ಎಂದಭಿಪ್ರಾಯ.

'ಉಭಯಹೇತುಕೇऽಪಿ' ಎಂದೇಕೆ ಹೇಳಿದರು ?

**समुदाये अनेकहेतुकेऽपीति वाच्ये उभयेत्युक्तिः उभाववयवावस्य मेलनस्य तदुभयमिति समुदितानेकत्वरूपमिलितत्वरूपपक्षलाभाय ।**

ಸೂತ್ರದಲ್ಲಿ 'ಉಭಯಹೇತುಕೇऽಪಿ' ಎಂದು ಏಕೆ ಹೇಳಿದರು? 'ಅನೇಕಹೇತುಕೇऽಪಿ' ಎಂದು ಹೇಳಬಹುದಿತ್ತಲ್ಲವೇ? ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು - 'ಉಭೌ ಅವಯವೌ ಅಸ್ಯ' ಎಂಬ ವ್ಯುತ್ಪತ್ತಿಯ ಪ್ರಕಾರ ಎರಡು ಅವಯವಗಳ ಮೇಲನವು ಉಭಯ ಎಂದು ಕರೆಸಿಕೊಳ್ಳುತ್ತದೆ. ಮಿಲಿತವಾದ ಅನೇಕ ಅಣುಗಳ ಸಮುದಾಯಕ್ಕೆ ಕಾರಣವಾಗಿದೆ ಎಂಬ ಪಕ್ಷದ ಲಾಭಕ್ಕಾಗಿ 'ಅನೇಕಹೇತುಕೇऽಪಿ' ಎಂದು ಹೇಳಿರುವುದಿಲ್ಲ.

## ಉಭಯ ಶಬ್ದದ ನಿಷ್ಪತ್ತಿ

सङ्ख्याया अवयवे तयप् । द्वित्रिभ्यां तयस्ययज्वा। उभादुदात्तो नित्यमिति स्मृतेः । यद्वोभशब्दपर्यायः अत्रोभयशब्दः । सर्वादिसूत्रकैय्यटे उभादुदात्तो नित्यमिति नित्यग्रहणस्य समासादावुभशब्दस्योभयेत्येव-रूपमित्येतदर्थज्ञापकत्वोक्तेः । एवञ्चोभयहेतुकः समुदाय इत्यत्रापि मिलितोभयहेतुकः समुदायश्चेदन्योन्याश्रयात् तदप्राप्तिः। विरलोभयहेतुकश्चेत् समुदायः सदा स्यादित्यर्थः ।

'ಸಂಖ್ಯಾಯಾ ಅವಯವೇ ತಯಪ್' (೫-೨-೪೨)

'ದ್ವಿತ್ರಿಭ್ಯಾಂ ತಯಸ್ಯಯಜ್ವಾ' (೫-೨-೪೩) 'ಉಭಾದುದಾತ್ತೋ ನಿತ್ಯಮ್' (೫-೨-೪೪)

ಈ ಮೂರು ಸೂತ್ರಗಳಿಂದ ಸಂಖ್ಯಾವಾಚಕವಾದ ಉಭ ಶಬ್ದಕ್ಕೆ ಅವಯವಾರ್ಥದಲ್ಲಿ ತಯಪ್ ಪ್ರತ್ಯಯವು ಬರುತ್ತದೆ. ಅದಕ್ಕೆ ಅಯಚ್ ಎಂಬ ಆದೇಶವು ಬಂದರೆ ಉಭಯಾ ಎಂಬ ರೂಪವು ನಿಷ್ಪನ್ನವಾಗುತ್ತದೆ.

ಅಥವಾ ಉಭಯ ಶಬ್ದವು ಉಭಾ ಎಂಬ ಶಬ್ದದ ಪರ್ಯಾಯವಾಗಿದೆ. ಸರ್ವಾದಿಸೂತ್ರಕ್ಕೆ ಕೈಯ್ಯಟದಲ್ಲಿ ಹೀಗೆ ವ್ಯಾಖ್ಯಾನಿಸಲಾಗಿದೆ - 'ಉಭಾದುದಾತ್ತೋ ನಿತ್ಯಮ್' ಎಂಬಲ್ಲಿ ನಿತ್ಯಗ್ರಹಣವನ್ನು ಏಕೆ ಮಾಡಿದ್ದಾರೆ ? ಎಂದರೆ ಸಮಾಸಾದಿಗಳಲ್ಲಿ ಉಭಾ ಶಬ್ದದ ಸ್ಥಾನಗಳಲ್ಲಿ ಉಭಯವೆಂದೇ ಹೇಳಬೇಕು ಎಂಬುದನ್ನು ತಿಳಿಸುವುದಕ್ಕಾಗಿ. ಹೀಗೆ ಕೈಯ್ಯಟವ್ಯಾಖ್ಯಾನವು ಈ ವಿಷಯದಲ್ಲಿ ಜ್ಞಾಪಕವಾಗಿದೆ. ಆದ್ದರಿಂದ 'ಉಭಯಹೇತುಕಃ ಸಮುದಾಯಃ' ಎಂದು ಹೇಳಿದಾಗಲೂ ಮಿಲಿತವಾದ ಉಭಯಪರಮಾಣುಗಳು ಪರಮಾಣುಸಮುದಾಯಕ್ಕೆ ಕಾರಣವೆಂದು ಹೇಳಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಆದ್ದರಿಂದ ಬೌದ್ಧರು ಹೇಳುವ ಸಮುದಾಯವೇ ಅನುಪಪನ್ನವಾಗಿದೆ. ವಿರಳವಾದ ಉಭಯಪರಮಾಣುಗಳು ಸಮುದಾಯಕ್ಕೆ ಕಾರಣವೆಂದು ಹೇಳಿದರೆ ಆ ಸಮುದಾಯವು ಯಾವಾಗಲೂ ಇರಬೇಕಾದೀತು ಎಂದರ್ಥ.

ವಿವರಣೆ - 'ಸಂಖ್ಯಾಯಾ ಅವಯವೇ ತಯಪ್' ಎಂಬ ಸೂತ್ರವು ಸಂಖ್ಯಾವಾಚಕವಾದ ಶಬ್ದದ ಮುಂದೆ ಅವಯವಾರ್ಥದಲ್ಲಿ 'ತಯಪ್' ಪ್ರತ್ಯಯವನ್ನು ವಿಧಾನ ಮಾಡಿದೆ. ಇದರಿಂದ 'ಪಂಚತಯಃ' ಇತ್ಯಾದಿ ರೂಪಗಳು ನಿಷ್ಪನ್ನವಾಗುತ್ತದೆ. 'ದ್ವಿತ್ರಿಭ್ಯಾಂ ತಯಸ್ಯಯಜ್ವಾ' ಎಂಬ ಸೂತ್ರವು ದ್ವಿ, ತ್ರಿ ಶಬ್ದಗಳಿಗೆ ಅವಯವಾರ್ಥದಲ್ಲಿ ತಯಪ್ ಪ್ರತ್ಯಯಕ್ಕೆ ಅಯಜಾದೇಶವು ವಿಕಲ್ಪವಾಗಿ ಬರುತ್ತದೆ ಎಂದು ಹೇಳಿದೆ. ಇದರಿಂದ 'ದ್ವಯಂ ದ್ವಿತಯಂ ತ್ರಯಂ ತ್ರಿತಯಂ' ಇತ್ಯಾದಿ ರೂಪಗಳು ನಿಷ್ಪನ್ನವಾಗುತ್ತವೆ. 'ಉಭಾದುದಾತ್ತೋ ನಿತ್ಯಂ' ಎಂಬ ಸೂತ್ರವು ಉಭಾ ಶಬ್ದಕ್ಕೆ ತಯಪ್ ಸ್ಥಾನದಲ್ಲಿ ಅಯಜಾದೇಶವು ನಿತ್ಯವಾಗಿ ಬರುತ್ತದೆ. ಮತ್ತು ಆದ್ಯುದಾತ್ತವಾಗುತ್ತದೆಂದು ಹೇಳಿದೆ. ಇದರಿಂದ ಉಭಯ ಇತ್ಯಾದಿ ಶಬ್ದಗಳು ನಿಷ್ಪನ್ನವಾಗುತ್ತದೆ.

'ಉಭಯಹೇತುಕ ಸಮುದಾಯಃ' ಎಂಬ ಶಬ್ದಕ್ಕೆ ಹೀಗರ್ಥ - ಅವಯವಾರ್ಥವಾದ ತಯಪ್‌ಪ್ರತ್ಯಯಾಂತವಾದ ಶಬ್ದವನ್ನು ವಿವಕ್ಷಿಸಿದರೆ ಮಿಲಿತವಾದ ಅನೇಕ ಪರಮಾಣುಗಳು ಕಾರಣವಾಗಿರುವ ಸಮುದಾಯ ಎಂಬರ್ಥವು ದೊರೆಯುತ್ತದೆ. ವಿರಳವಾದ ಅನೇಕ ಪರಮಾಣುಗಳೇ ಕಾರಣವಾಗಿರುವ ಸಮುದಾಯ ಎಂಬರ್ಥವು ದೊರೆಯುವುದಿಲ್ಲ. ಒಂದು ವೇಳೆ ಉಭ ಶಬ್ದದ ಪರ್ಯಾಯ ಶಬ್ದವಾದ ಉಭಯಶಬ್ದವನ್ನು ವಿವಕ್ಷಿಸಿದರೆ 'ಉಭಯಹೇತುಕ' ಎಂಬುದಕ್ಕೆ 'ಅನೇಕಹೇತುಕ' ಎಂದಷ್ಟೇ ಅರ್ಥವಾಗುತ್ತದೆ.

### ಸಮುದಾಯದ ನಿರಾಕರಣೆ

**केचित्तु मिलिता विरलाश्चेत्युभये येऽणवस्तदुभयहेतुकेऽपि समुदाये तदप्रप्तिः । तदिति सन्निहितसमुदायो बुद्धिस्थलयश्चोच्यत इति पक्षद्वयस्यापि सूत्र एव निरास इत्यप्याहुः ।।**

ಕೆಲವರು ಮಿಲಿತ ಪರಮಾಣುಗಳು, ವಿರಳ ಪರಮಾಣುಗಳು ಎಂಬುದಾಗಿ ಎರಡು ಬಗೆಯ ಪರಮಾಣುಗಳನ್ನು ಅಂಗೀಕರಿಸುತ್ತಾರೆ. ಈ ಎರಡು ಬಗೆಯ ಪರಮಾಣುಗಳಲ್ಲಿ ಯಾವುದೇ ಒಂದನ್ನು ಸಮುದಾಯಕ್ಕೆ ಕಾರಣವೆಂದು ಒಪ್ಪಿದರೂ ಕೂಡ ಆ ಸಮುದಾಯವು ಅಯುಕ್ತವಾಗುತ್ತದೆ. ಸೂತ್ರದಲ್ಲಿ 'ತದಪ್ರಾಪ್ತಿಃ' ಎಂಬ ಪದವಿದೆ. ತತ್ ಎಂಬ ಪದಕ್ಕೆ ಸನ್ನಿಹಿತವಾದ ಸಮುದಾಯವನ್ನು ಬುದ್ಧಿಸನ್ನಿಹಿತವಾದ

ಲಯವನ್ನು ವಿವಕ್ಷಿಸಬೇಕು. ಆದ್ದರಿಂದ ಮೇಲಿನ ಎರಡು ಪಕ್ಷಗಳನ್ನು ಸೂತ್ರದಲ್ಲಿ ನಿರಾಕರಣೆ ಮಾಡಿದಂತಾಯಿತು.

ವಿವರಣೆ - ಮಿಲಿತ ಪರಮಾಣುಗಳು ಸಮುದಾಯಕ್ಕೆ ಕಾರಣವೋ? ವಿರಳ ಪರಮಾಣುಗಳು ಸಮುದಾಯಕ್ಕೆ ಕಾರಣವೋ? ಮೊದಲನೆಯ ಪಕ್ಷದಲ್ಲಿ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಎರಡನೆಯ ಪಕ್ಷದಲ್ಲಿ ಸಮುದಾಯವೇ ನಿರಂತರ ಇರಬೇಕಾಗುತ್ತಾದ್ದರಿಂದ ಲಯವೇ ಕೂಡುವುದಿಲ್ಲ. ಹೀಗೆ ಎರಡೂ ಪಕ್ಷಗಳ ನಿರಾಕರಣೆಯನ್ನು ತಿಳಿಯಬೇಕು.

### ಇತರೇತರ ಪ್ರತ್ಯಯತ್ವದ ನಿಷ್ಪತ್ತಿ

उक्तमाक्षिप्याह -

।। इतरेतरप्रत्ययत्वादिति चेन्नोत्पत्तिमात्रनिमित्तत्वात् ।।२-२-१९।।

इतरसहितमितरदितरेतरत् । तस्य प्रत्ययोऽपेक्षाबुद्धिर्यस्य व्यवहारादेस्तस्य भावस्तत्त्वं तस्मात् । यदुक्तं प्राक् लयायोगोऽन्योन्याश्रय इति च । तन्न । अणुगतानेकत्वसङ्ख्यारूपस्य मदभिमतसमुदायस्य सदा सत्त्वेऽपि तत्प्रतीतिव्यवहारयोरपेक्षाबुद्ध्यधीनत्वात् सामीप्यहेतुकापेक्षा-बुद्ध्यभावेन समुदायप्रतीत्यादेरभावाल्लयाद्युपपत्तिरिति चेन्न । विरलाणूनां मिलिताणुरूपसमुदायोत्पत्तिमात्रे निमित्तत्वादपेक्षाबुद्ध्यादौ निमित्तत्वाभावादित्यर्थः। क्षणिकवादे एकैककार्योत्पादनेनैवाणूनां नाशाददौ दर्शनं ततोऽपेक्षाबुद्धिस्ततस्तत्समुदायविषयप्रतीतिव्यवहारावेकत्र सर्वं न युक्तमिति कदापि समुदायप्रतीतिव्यवहारौ न स्यातामिति भावः । इतरेत्याद्युक्तिरपेक्षाबुद्धिस्वरूपोपदर्शनाय । तदप्यन्योन्यसाहित्यरूप-सामीप्यहेतुका सेति सूचयितुम् ।

ಇಲ್ಲಿಯ ತನಕ ಹೇಳಿದ ದೋಷಕ್ಕೆ ಆಕ್ಷೇಪವನ್ನು ಮಾಡಿ ಸಮಾಧಾನವನ್ನು ಈ ಸೂತ್ರವು ಹೇಳುತ್ತಿದೆ- 'ಇತರಸಹಿತಂ ಇತರತ್ ಇತರೇತರರತ್' ಎಂಬುದಾಗಿ ವಿಗ್ರಹವನ್ನು ತಿಳಿಯಬೇಕು. ಇತರಸಹಿತವಾದ 'ಇತರ' ಯಾವುದೋ, ಅದು 'ಇತರೇತರ' ಎಂದು ಕರೆಸಿಕೊಳ್ಳುತ್ತದೆ. ಪ್ರತ್ಯಯಶಬ್ದಕ್ಕೆ 'ಅಪೇಕ್ಷಾಬುದ್ಧಿ' ಎಂದರ್ಥ. 'ಇತರೇತರಸ್ಯ ಪ್ರತ್ಯಯಃ ಯಸ್ಯ ಸಃ ಇತರೇತರ ಪ್ರತ್ಯಯಃ ಇತರೇತರ ಪ್ರತ್ಯಯಸ್ಯ ಭಾವಃ ಇತರೇತರ ಪ್ರತ್ಯಯತ್ವಂ ತಸ್ಮಾತ್ ಇತರೇತರ ಪ್ರತ್ಯಯತ್ವಾತ್' ಎಂದು ವಿಗ್ರಹ. 'ಇತರೇತರ ಪ್ರತ್ಯಯತ್ವಾತ್' ಎಂಬುದಕ್ಕೆ ಪರಮಾಣು ಸಮುದಾಯ ವ್ಯವಹಾರವು ಅಪೇಕ್ಷಾಬುದ್ಧಿಯಿಂದ ಒಂದಾಗುವುದರಿಂದ ಎಂದರ್ಥ. ಹಿಂದಿನ ಸೂತ್ರದಲ್ಲಿ ಲಯವು ಯುಕ್ತವಾಗುವುದಿಲ್ಲ. ಅನ್ಯೋನ್ಯಾಶ್ರಯದೋಷವು ಬರುತ್ತದೆಂದು ಹೇಳಲಾಯಿತು. ಇದು ತಪ್ಪು. ಏಕೆಂದರೆ ಅಣುಗಳ ಸಮುದಾಯವೆಂದರೆ ಅನೇಕತ್ವ ಸಂಖ್ಯೆಯೇ ಆಗಿದೆ. ಇಂಥ ಸಮುದಾಯವು ನಿರಂತರ ಇದ್ದರೂ ಕೂಡ ಅದರ ಪ್ರತೀತಿ ಮತ್ತು ವ್ಯವಹಾರಗಳು ನಿರಂತರ ಇರುವುದಿಲ್ಲ. ಅಪೇಕ್ಷಾಬುದ್ಧಿಯಿದ್ದಾಗ ಮಾತ್ರ ಇರುತ್ತದೆ. ಪರಮಾಣುಗಳಲ್ಲಿ ಸಾಮೀಪ್ಯವಿದ್ದಾಗಷ್ಟೇ ಹುಟ್ಟುವ ಅಪೇಕ್ಷಾಬುದ್ಧಿಯು ಲಯಕಾಲದಲ್ಲಿ ಇರುವುದಿಲ್ಲ. ಆಗ ಅಣುಸಮುದಾಯದ ಪ್ರತೀತಿಯೂ ಬರುವುದಿಲ್ಲ. ವ್ಯವಹಾರವೂ ಕೂಡ ಬರುವುದಿಲ್ಲ. ಹಾಗಾಗಿ ಲಯವು ಉಪಪನ್ನವಾಗುತ್ತದೆ.

ಬೌದ್ಧರ ಈ ಸಮರ್ಥನೆಯು ಅಯುಕ್ತವಾಗಿದೆ. ಏಕೆಂದರೆ ವಿರಳ ಪರಮಾಣುಗಳು ಮಿಲಿತ ಪರಮಾಣುರೂಪವಾದ ಅಣುಸಮುದಾಯದ ಉತ್ಪತ್ತಿಗೆ ಕಾರಣವಾಗುತ್ತದೆ ಹೊರತು, ಅದರ ಅಪೇಕ್ಷಾಬುದ್ಧಿಗೆ ಕಾರಣವಾಗುವುದಿಲ್ಲ. ಕ್ಷಣಿಕವಾದದಲ್ಲಿ ಒಂದೊಂದು ಕಾರ್ಯವನ್ನು ಹುಟ್ಟಿಸಿದ ಕೂಡಲೇ ಅಣುಗಳು ನಾಶವಾಗುತ್ತವೆ. ಆದ್ದರಿಂದ ಮೊದಲು ಅವುಗಳ ನೋಡುವಿಕೆ, ಅನಂತರ ಅಪೇಕ್ಷಾಬುದ್ಧಿ, ಅನಂತರ ಆ ಸಮುದಾಯದ ಪ್ರತೀತಿ, ಅನಂತರ ಅದರ ವ್ಯವಹಾರ. ಇವೆಲ್ಲವೂ ಒಂದೇ ಅಣುವಿನ ವಿಷಯದಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ಅಣುಸಮುದಾಯದ ಪ್ರತೀತಿ ಮತ್ತು ವ್ಯವಹಾರಗಳು ಎಂದೂ ಕೂಡ ಉಂಟಾಗುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

ಸೂತ್ರದಲ್ಲಿ 'ಇತರೇತರ ಪ್ರತ್ಯಯತ್ವಾತ್' ಎಂದೇಕೆ ಹೇಳಿದ್ದಾರೆ? ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ಅಪೇಕ್ಷಾಬುದ್ಧಿಯ ಸ್ವರೂಪವನ್ನು ತಿಳಿಸುವುದಕ್ಕಾಗಿ ಇತರ ಪದವನ್ನು ಪ್ರಯೋಗಿಸಿದ್ದಾರೆ. ಸಾಮೀಪ್ಯ ಎಂದರೆ ಪರಸ್ಪರವಾಗಿ ಜೊತೆಗಿರುವಿಕೆ ಎಂದರ್ಥ. ಇದು ಅಪೇಕ್ಷಾಬುದ್ಧಿಗೆ ಕಾರಣವಾಗಿದೆ. ಇದನ್ನು ಸೂಚನೆ ಮಾಡುವುದಕ್ಕಾಗಿ ಅಪೇಕ್ಷಾಬುದ್ಧಿಯ ಸ್ವರೂಪವನ್ನು ಸೂತ್ರದಲ್ಲಿ 'ಇತರೇತರ' ಇತ್ಯಾದಿಯಾಗಿ ಹೇಳಿದ್ದಾರೆ.

### ಸೂತ್ರದ ಅರ್ಥ

अभ्युपेत्य चेदमुदितम् । वस्तुतो विरलाणुभ्यो मिलिताणुरूपासदृश-कार्यजननमेवायुक्तमित्याह -

।। उत्तरोत्पादे च पूर्वनिरोधात् ।।

नेत्यस्ति । चः समुच्चये । विसदृशकार्यजनिश्च न युक्तेत्यन्वेति । अवधारणेऽपि वा । उत्तरस्य स्वसदृशकार्यस्योत्पाद एव पूर्वस्य कारणस्य निरोधान्नाशादित्यर्थः ।

ಬೌದ್ಧರು ಹೇಳುವ ವಾದವನ್ನು ಅಂಗೀಕಾರ ಮಾಡಿ, ಇಲ್ಲಿಯತನಕ ದೋಷವನ್ನು ಹೇಳಲಾಯಿತು. ವಿಚಾರ ಮಾಡಿದರೆ ವಿರಳ ಪರಮಾಣುಗಳಿಂದ ಮಿಲಿತಪರಮಾಣುಗಳು ಹುಟ್ಟಲು ಸಾಧ್ಯವೇ ಇಲ್ಲ. ವಿಸದೃಶಕಾರ್ಯೋತ್ಪತ್ತಿಯು ಅಪ್ರಾಮಾಣಿಕವಾಗಿದೆ. ಇದನ್ನು ಸಮರ್ಥಿಸುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ -

'ಉತ್ತರೋತ್ಪಾದೇ ಚ ಪೂರ್ವನಿರೋಧಾತ್'

ನ ಎಂಬ ಪದವನ್ನು ಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಚ ಶಬ್ದವು ಸಮುಚ್ಚಯವನ್ನು ಹೇಳುತ್ತಿದೆ. ವಿಸದೃಶವಾದ ಕಾರ್ಯದ ಉತ್ಪತ್ತಿಯು ಯುಕ್ತವಲ್ಲ ಎಂದು ಅನ್ವಯ ಮಾಡಿಕೊಳ್ಳಬೇಕು. ಅಥವಾ ಚಶಬ್ದವು ಅವಧಾರಣವನ್ನೂ ಕೂಡ ಹೇಳುತ್ತಿದೆ.

ಸೂತ್ರಾರ್ಥ - ಉತ್ತರಸ್ಯ = ತನಗೆ ಸದೃಶವಾದ ಕಾರ್ಯದ ಉತ್ಪಾದೇಃ ಏವ = ಉತ್ಪಾದನೆಯಿಂದಲೇ, ಪೂರ್ವಸ್ಯ = ಕಾರಣದ, ನಿರೋಧಾತ್ = ನಾಶವಾಗುವುದರಿಂದ ಎಂದರ್ಥ.

### ವಿಸದೃಶಕಾರ್ಯೋತ್ಪತ್ತಿಯು ಅಸಾಧ್ಯ

क्षणिकवादे कारणस्य सदृशकार्यजनन एव सामर्थ्यात् तत्कार्यमुत्पाद्य पश्चाद्वैसादृश्यं जनयतीत्येतदप्ययुक्तमिति भावः।

ಇಲ್ಲಿಯ ತನಕ ಹೇಳಿದ ದೋಷಕ್ಕೆ ಆಕ್ಷೇಪವನ್ನು ಮಾಡಿ ಸಮಾಧಾನವನ್ನು ಈ ಸೂತ್ರವು ಹೇಳುತ್ತಿದೆ- 'ಇತರಸಹಿತಂ ಇತರತ್ ಇತರೇತರರತ್' ಎಂಬುದಾಗಿ ವಿಗ್ರಹವನ್ನು ತಿಳಿಯಬೇಕು. ಇತರಸಹಿತವಾದ 'ಇತರ' ಯಾವುದೋ, ಅದು 'ಇತರೇತರ' ಎಂದು ಕರೆಸಿಕೊಳ್ಳುತ್ತದೆ. ಪ್ರತ್ಯಯಶಬ್ದಕ್ಕೆ 'ಅಪೇಕ್ಷಾಬುದ್ಧಿ' ಎಂದರ್ಥ. 'ಇತರೇತರಸ್ಯ ಪ್ರತ್ಯಯಃ ಯಸ್ಯ ಸಃ ಇತರೇತರ ಪ್ರತ್ಯಯಃ ಇತರೇತರ ಪ್ರತ್ಯಯಸ್ಯ ಭಾವಃ ಇತರೇತರ ಪ್ರತ್ಯಯತ್ವಂ ತಸ್ಮಾತ್ ಇತರೇತರ ಪ್ರತ್ಯಯತ್ವಾತ್' ಎಂದು ವಿಗ್ರಹ. 'ಇತರೇತರ ಪ್ರತ್ಯಯತ್ವಾತ್' ಎಂಬುದಕ್ಕೆ ಪರಮಾಣು ಸಮುದಾಯ ವ್ಯವಹಾರವು ಅಪೇಕ್ಷಾಬುದ್ಧಿಯಿಂದ ಒಂದಾಗುವುದರಿಂದ ಎಂದರ್ಥ. ಹಿಂದಿನ ಸೂತ್ರದಲ್ಲಿ ಲಯವು ಯುಕ್ತವಾಗುವುದಿಲ್ಲ. ಅನ್ಯೋನ್ಯಾಶ್ರಯದೋಷವು ಬರುತ್ತದೆಂದು ಹೇಳಲಾಯಿತು. ಇದು ತಪ್ಪು. ಏಕೆಂದರೆ ಅಣುಗಳ ಸಮುದಾಯವೆಂದರೆ ಅನೇಕತ್ವ ಸಂಖ್ಯೆಯೇ ಆಗಿದೆ. ಇಂಥ ಸಮುದಾಯವು ನಿರಂತರ ಇದ್ದರೂ ಕೂಡ ಅದರ ಪ್ರತೀತಿ ಮತ್ತು ವ್ಯವಹಾರಗಳು ನಿರಂತರ ಇರುವುದಿಲ್ಲ. ಅಪೇಕ್ಷಾಬುದ್ಧಿಯಿದ್ದಾಗ ಮಾತ್ರ ಇರುತ್ತದೆ. ಪರಮಾಣುಗಳಲ್ಲಿ ಸಾಮೀಪ್ಯವಿದ್ದಾಗಷ್ಟೇ ಹುಟ್ಟುವ ಅಪೇಕ್ಷಾಬುದ್ಧಿಯು ಲಯಕಾಲದಲ್ಲಿ ಇರುವುದಿಲ್ಲ. ಆಗ ಅಣುಸಮುದಾಯದ ಪ್ರತೀತಿಯೂ ಬರುವುದಿಲ್ಲ. ವ್ಯವಹಾರವೂ ಕೂಡ ಬರುವುದಿಲ್ಲ. ಹಾಗಾಗಿ ಲಯವು ಉಪಪನ್ನವಾಗುತ್ತದೆ.

ಬೌದ್ಧರ ಈ ಸಮರ್ಥನೆಯು ಅಯುಕ್ತವಾಗಿದೆ. ಏಕೆಂದರೆ ವಿರಳ ಪರಮಾಣುಗಳು ಮಿಲಿತ ಪರಮಾಣುರೂಪವಾದ ಅಣುಸಮುದಾಯದ ಉತ್ಪತ್ತಿಗೆ ಕಾರಣವಾಗುತ್ತದೆ ಹೊರತು, ಅದರ ಅಪೇಕ್ಷಾಬುದ್ಧಿಗೆ ಕಾರಣವಾಗುವುದಿಲ್ಲ. ಕ್ಷಣಿಕವಾದದಲ್ಲಿ ಒಂದೊಂದು ಕಾರ್ಯವನ್ನು ಹುಟ್ಟಿಸಿದ ಕೂಡಲೇ ಅಣುಗಳು ನಾಶವಾಗುತ್ತವೆ. ಆದ್ದರಿಂದ ಮೊದಲು ಅವುಗಳ ನೋಡುವಿಕೆ, ಅನಂತರ ಅಪೇಕ್ಷಾಬುದ್ಧಿ, ಅನಂತರ ಆ ಸಮುದಾಯದ ಪ್ರತೀತಿ, ಅನಂತರ ಅದರ ವ್ಯವಹಾರ. ಇವೆಲ್ಲವೂ ಒಂದೇ ಅಣುವಿನ ವಿಷಯದಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ಅಣುಸಮುದಾಯದ ಪ್ರತೀತಿ ಮತ್ತು ವ್ಯವಹಾರಗಳು ಎಂದೂ ಕೂಡ ಉಂಟಾಗುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

ಸೂತ್ರದಲ್ಲಿ 'ಇತರೇತರ ಪ್ರತ್ಯಯತ್ವಾತ್' ಎಂದೇಕೆ ಹೇಳಿದ್ದಾರೆ? ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ಅಪೇಕ್ಷಾಬುದ್ಧಿಯ ಸ್ವರೂಪವನ್ನು ತಿಳಿಸುವುದಕ್ಕಾಗಿ ಇತರ ಪದವನ್ನು ಪ್ರಯೋಗಿಸಿದ್ದಾರೆ. ಸಾಮೀಪ್ಯ ಎಂದರೆ ಪರಸ್ಪರವಾಗಿ ಜೊತೆಗಿರುವಿಕೆ ಎಂದರ್ಥ. ಇದು ಅಪೇಕ್ಷಾಬುದ್ಧಿಗೆ ಕಾರಣವಾಗಿದೆ. ಇದನ್ನು ಸೂಚನೆ ಮಾಡುವುದಕ್ಕಾಗಿ ಅಪೇಕ್ಷಾಬುದ್ಧಿಯ ಸ್ವರೂಪವನ್ನು ಸೂತ್ರದಲ್ಲಿ 'ಇತರೇತರ' ಇತ್ಯಾದಿಯಾಗಿ ಹೇಳಿದ್ದಾರೆ.

### ಸೂತ್ರದ ಅರ್ಥ

अभ्युपेत्य चेदमुदितम् । वस्तुतो विरलाणुभ्यो मिलिताणुरूपासदृश-कार्यजननमेवायुक्तमित्याह -

।। उत्तरोत्पादे च पूर्वनिरोधात् ।।

नेत्यस्ति । चः समुच्चये । विसदृशकार्यजनिश्च न युक्तेत्यन्वेति । अवधारणेऽपि वा । उत्तरस्य स्वसदृशकार्यस्योत्पाद एव पूर्वस्य कारणस्य निरोधान्नाशादित्यर्थः ।

ಬೌದ್ಧರು ಹೇಳುವ ವಾದವನ್ನು ಅಂಗೀಕಾರ ಮಾಡಿ, ಇಲ್ಲಿಯತನಕ ದೋಷವನ್ನು ಹೇಳಲಾಯಿತು. ವಿಚಾರ ಮಾಡಿದರೆ ವಿರಳ ಪರಮಾಣುಗಳಿಂದ ಮಿಲಿತಪರಮಾಣುಗಳು ಹುಟ್ಟಲು ಸಾಧ್ಯವೇ ಇಲ್ಲ. ವಿಸದೃಶಕಾರ್ಯೋತ್ಪತ್ತಿಯು ಅಪ್ರಾಮಾಣಿಕವಾಗಿದೆ. ಇದನ್ನು ಸಮರ್ಥಿಸುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ -

'ಉತ್ತರೋತ್ಪಾದೇ ಚ ಪೂರ್ವನಿರೋಧಾತ್'

ನ ಎಂಬ ಪದವನ್ನು ಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಚ ಶಬ್ದವು ಸಮುಚ್ಚಯವನ್ನು ಹೇಳುತ್ತಿದೆ. ವಿಸದೃಶವಾದ ಕಾರ್ಯದ ಉತ್ಪತ್ತಿಯು ಯುಕ್ತವಲ್ಲ ಎಂದು ಅನ್ವಯ ಮಾಡಿಕೊಳ್ಳಬೇಕು. ಅಥವಾ ಚಶಬ್ದವು ಅವಧಾರಣವನ್ನೂ ಕೂಡ ಹೇಳುತ್ತಿದೆ.

ಸೂತ್ರಾರ್ಥ - ಉತ್ತರಸ್ಯ = ತನಗೆ ಸದೃಶವಾದ ಕಾರ್ಯದ ಉತ್ಪಾದೇಃ ಏವ = ಉತ್ಪಾದನೆಯಿಂದಲೇ, ಪೂರ್ವಸ್ಯ = ಕಾರಣದ, ನಿರೋಧಾತ್ = ನಾಶವಾಗುವುದರಿಂದ ಎಂದರ್ಥ.

### ವಿಸದೃಶಕಾರ್ಯೋತ್ಪತ್ತಿಯು ಅಸಾಧ್ಯ

क्षणिकवादे कारणस्य सदृशकार्यजनन एव सामर्थ्यात् तत्कार्यमुत्पाद्य पश्चाद्वैसादृश्यं जनयतीत्येतदप्ययुक्तमिति भावः।

ಕ್ಷಣಿಕವಾದದಲ್ಲಿ ಕಾರಣವು ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸುವುದರಲ್ಲೇ ಸಾಮರ್ಥ್ಯವನ್ನು ಹೊಂದಿರುತ್ತದೆ. ಅಂಥ ಕಾರ್ಯವನ್ನು ಹುಟ್ಟಿಸುವುದರಲ್ಲಿ ಸಮರ್ಥವಾಗಿರುವುದರಿಂದ ಮೊದಲು ಕಾರ್ಯವನ್ನು ಹುಟ್ಟಿಸಿ, ಅನಂತರ ವೈಸಾದೃಶ್ಯವನ್ನು ಹುಟ್ಟಿಸುತ್ತದೆ ಎಂಬ ವಾದವು ಅಯುಕ್ತವಾಗಿದೆ ಎಂಬುದು ಸೂತ್ರದ ಅಭಿಪ್ರಾಯ.

**ವಿವರಣೆ** - ಬೌದ್ಧರು ವಿರಳ ಪರಮಾಣುಗಳಿಂದ ಮಿಲಿತ ಪರಮಾಣುಗಳು ಹುಟ್ಟುತ್ತವೆಂದು ಹೇಳುತ್ತಾರೆ. ಆದರೆ ಕಾರಣವು ಸದೃಶವಾದ ಕಾರ್ಯಜನನದಲ್ಲೇ ಸಾಮರ್ಥ್ಯವನ್ನು ಪಡೆದಿರುತ್ತದೆಂದೂ ಕೂಡ ಹೇಳುತ್ತಾರೆ. ಹೀಗಿರುವಾಗ ಮಿಲಿತವಾದ ಪರಮಾಣುಗಳು ಸದೃಶಕಾರ್ಯಜನನದಲ್ಲೇ ಸಾಮರ್ಥ್ಯವನ್ನು ಪಡೆಯುತ್ತವೆ ಹೊರತು ವಿಸದೃಶವಾದ ಕಾರ್ಯವನ್ನು ಹುಟ್ಟಿಸಲು ಸಾಧ್ಯವೇ ಇಲ್ಲ. ಅರ್ಥಾತ್ ಸದೃಶಕಾರ್ಯವನ್ನು ಹುಟ್ಟಿಸಿ, ಅನಂತರ ವಿಸದೃಶಕಾರ್ಯವನ್ನು ಹುಟ್ಟಿಸುತ್ತವೆ ಎಂದು ಹೇಳುವುದು ತಪ್ಪು.

## ಸೂತ್ರಕ್ಕೆ ಮತ್ತೊಂದು ಅರ್ಥ

सुधायां तूत्पत्तिमात्र एव सदृशकार्योत्पाद एव निमित्तत्वाद्विसदृशकार्ये निमित्तत्वाभावादिति पूर्वसूत्रांशस्यार्थान्तरमुक्त्वोत्तरोत्पादे चेत्यस्य कार्योत्पाद एव पूर्वनाशान्न कार्ये संस्काराधायकत्वम् । तेनात्मादिक्षणिकत्ववादे व्याप्त्याद्यनुसन्धातुरेकस्याभावेऽपि पूर्वपूर्वात्मसंस्कारयोगिनामुत्तरात्मनामुत्पत्त्या तर्कादिव्यवहारो युक्त इति न युक्तमित्यर्थान्तरमुक्तम् ॥

ನ್ಯಾಯಸುಧಾದಲ್ಲಿ ಹೀಗೆ ಹೇಳಿದ್ದಾರೆ - ಹಿಂದಿನ ಸೂತ್ರದ 'ಉತ್ಪತ್ತಿ ಮಾತ್ರ ನಿಮಿತ್ತತ್ವಾತ್' ಎಂಬುದಕ್ಕೆ 'ಉತ್ಪತ್ತಿಮಾತ್ರ ಏವ ನಿಮಿತ್ತತ್ವಾತ್' ಎಂದರ್ಥ. ಕಾರಣವು ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸುವುದರಲ್ಲೇ ನಿಮಿತ್ತವಾಗಿರುತ್ತದೆ. ಆದ್ದರಿಂದ ತನಗೆ ವಿಸದೃಶವಾದ ಕಾರ್ಯಕ್ಕೆ ನಿಮಿತ್ತವಾಗಿರುವುದಿಲ್ಲ. ಹೀಗೆ ಹಿಂದಿನ ಸೂತ್ರದ ಒಂದು ಭಾಗಕ್ಕೆ ಒಂದು ಬಗೆಯಲ್ಲಿ ಅರ್ಥವನ್ನು ಹೇಳಿ, 'ಉತ್ತರೋತ್ಪಾದೇ ಚ' ಎಂಬ ಈ ಸೂತ್ರಕ್ಕೆ ಕಾರ್ಯವನ್ನು ಹುಟ್ಟಿಸಿದ ಕೂಡಲೇ ಕಾರಣವು

ನಾಶವಾಗುವುದರಿಂದ ಕಾರ್ಯದಲ್ಲಿ ಕಾರಣವು ಸಂಸ್ಕಾರವನ್ನು ಉಂಟುಮಾಡುವುದಿಲ್ಲ. ಆದ್ದರಿಂದ ಕ್ಷಣಿಕವಾದದಲ್ಲಿ ವ್ಯಾಪ್ತಿ ಮೊದಲಾದವುಗಳನ್ನು ಅನುಸಂಧಾನ ಮಾಡುವ ಒಬ್ಬನೇ ಆತ್ಮನು ಇರಲು ಸಾಧ್ಯವಿಲ್ಲ. ಆದರೆ ಹಿಂದಿನ ಹಿಂದಿನ ಆತ್ಮನ ಸಂಸ್ಕಾರವನ್ನು ಹೊಂದಿರುವ ಮುಂದು ಮುಂದಿನ ಆತ್ಮರು ಉತ್ಪನ್ನರಾಗುತ್ತಾರೆ. ಹಾಗಾಗಿ ತರ್ಕ ಮೊದಲಾದ ವ್ಯವಹಾರವು ಯುಕ್ತವಾಗುತ್ತದೆ ಎಂಬ ಬೌದ್ಧರ ವಾದವು ಸರಿಯಿಲ್ಲ. ಇದು ಸೂತ್ರಕ್ಕೆ ಮತ್ತೊಂದು ಅರ್ಥ.

### ಅಸತಿ ಪ್ರತಿಜ್ಞೋಪರೋಧ ಸೂತ್ರಕ್ಕೆ ಪ್ರಥಮ ವ್ಯಾಖ್ಯಾನ

प्रतिक्षणोत्पत्तिरेव नेत्याह -

।। असति प्रतिज्ञोपरोधो यौगपद्यमन्यथा ।।२-२-२१।।

नेत्यस्ति । उत्तरोत्पाद इति पूर्वेति च प्रतिक्षणमिति योग्यतयाऽन्वेति। न प्रतिक्षणं कार्योत्पत्तिर्युक्ता । कुतः? किं कारणे नष्टे कार्यमुत्पद्यते विद्यमाने वा । आद्ये असति पूर्वस्मिन्कारणेऽसति कार्योत्पत्तिरित्युक्ते तत्तस्य कार्यमिति प्रतिज्ञाया उपरोधो हानिरित्यर्थः । अतिप्रसङ्गादिति भावः । अन्यथा सति पूर्वस्मिन् उत्तरोत्पाद इत्यन्त्यपक्षे यौगपद्यमविच्छिन्नोत्पत्तिः । कार्याणामिति प्रकृतमन्वेति । स्यादिति शेषः। कारणस्य कार्यक्षणेऽप्यवस्थाने कारणस्य विनाशकाभावेन पुनस्तस्मात् कार्योत्पत्तयः स्युः तेभ्यस्तथेति सर्वकार्यजनिरविच्छिन्न स्यादिति भावः ।

ಪ್ರತಿಕ್ಷಣದಲ್ಲಿ ಕಾರ್ಯೋತ್ಪತ್ತಿ ಆಗುತ್ತದೆಂಬ ವಾದವೇ ತಪ್ಪು ಎಂಬುದನ್ನು ಸಮರ್ಥಿಸಲು 'ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ' ಎಂಬ ಸೂತ್ರವು ಪ್ರವೃತ್ತವಾಗಿವೆ. ಈ ಸೂತ್ರದಲ್ಲಿ 'ನ' ಎಂಬ ಪದವನ್ನು ಅನುವೃತ್ತ ಮಾಡಿಕೊಳ್ಳಬೇಕು. 'ಉತ್ತರೋತ್ಪಾದೇ' ಎಂಬ ಪದವನ್ನು ಮತ್ತು 'ಪೂರ್ವ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಅನ್ವಯ ಯೋಗ್ಯವಾದ್ದರಿಂದ ಪ್ರತಿಕ್ಷಣ ಎಂಬ ಪದವನ್ನೂ ಕೂಡ ಅನ್ವಯ ಮಾಡಿಕೊಳ್ಳಬೇಕು. ಪ್ರತಿಕ್ಷಣವೂ ಕಾರ್ಯೋತ್ಪತ್ತಿ ಆಗುತ್ತದೆಂಬುದು ಯುಕ್ತವಲ್ಲ. ಏಕೆಂದರೆ ಕಾರಣವು ನಷ್ಟವಾದ ಮೇಲೆ ಕಾರ್ಯವು ಉತ್ಪತ್ತಿಯಾಗುತ್ತದೋ? ಅಥವಾ

ಕಾರಣವು ಇರುವಾಗಲೇ ಕಾರ್ಯೋತ್ಪತ್ತಿಯಾಗುತ್ತದೋ? ಮೊದಲನೆಯ ಪಕ್ಷವು ತಪ್ಪು. ಅಸತಿ = ಕಾರಣವು ಇಲ್ಲದಿದ್ದರೂ ಕಾರ್ಯವು ಉತ್ಪತ್ತಿಯಾಗುತ್ತದೆಂದು ಹೇಳಿದರೆ, ಪ್ರತಿಜ್ಞಾ = ಅದು ಆ ಕಾರಣದ ಕಾರ್ಯ ಎಂಬ ಪ್ರತಿಜ್ಞೆಯ, ಉಪರೋಧಃ = ಹಾನಿಯು ಉಂಟಾಗುತ್ತದೆ ಎಂದರ್ಥ. ಕಾರಣವಿಲ್ಲದಿದ್ದರೂ ಕಾರ್ಯದ ಉತ್ಪತ್ತಿಯನ್ನು ಒಪ್ಪಿದರೆ ಅತಿಪ್ರಸಂಗ ಬರುತ್ತದೆಂದು ಅಭಿಪ್ರಾಯ. ಅನ್ಯಥಾ = ಕಾರಣವಿದ್ದಾಗಲೇ ಕಾರ್ಯದ ಉತ್ಪತ್ತಿ ಆಗುತ್ತದೆಂಬ ಎರಡನೆಯ ಪಕ್ಷವೂ ಕೂಡ ತಪ್ಪು. ಯೌಗಪದ್ಯಂ= ಅವಿಚ್ಛಿನ್ನವಾಗಿ ಕಾರ್ಯಗಳ ಉತ್ಪತ್ತಿಯು ಆಗಬೇಕಾದೀತು. ಸ್ಯಾತ್ ಎಂಬ ಪದವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಒಟ್ಟು ಸೂತ್ರದ ಅಭಿಪ್ರಾಯ ಹೀಗಿದೆ - ಕಾರಣಗಳು ಕಾರ್ಯಕ್ಷಣದಲ್ಲೂ ಕೂಡ ಅವಿಚ್ಛಿನ್ನವಾಗಿ ಇರುವುದಾದರೆ ಕಾರಣಕ್ಕೆ ವಿನಾಶಕವೇ ಇಲ್ಲ ಎಂದಾಯಿತು. ಆಗ ಪುನಃ ಆ ಕಾರಣದಿಂದ ಕಾರ್ಯಗಳು ಉತ್ಪತ್ತಿಯಾಗಬೇಕಾದೀತು. ಆ ಕಾರ್ಯಗಳಿಂದಲೂ ಕೂಡ ಮತ್ತಷ್ಟು ಕಾರ್ಯಗಳು ಉತ್ಪತ್ತಿಯಾಗಬೇಕಾದೀತು. ಹೀಗೆ ಅವಿಚ್ಛಿನ್ನವಾಗಿ ಎಲ್ಲಾ ಕಾರ್ಯಗಳ ಉತ್ಪತ್ತಿ ಆಗುತ್ತಲೇ ಇರಬೇಕಾದೀತು ಎಂದು.

'ಯೌಗಪದ್ಯಮನ್ಯಥಾ' ಎಂಬ ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ

**यद्वा यस्मिन् क्षणे कारणं तस्मिन्नेव कार्यावस्थानं तत्कार्याणां चैवमिति सर्वकार्याणां सहावस्थानरूपयौगपद्यं स्यादित्यर्थः । परामिमतत्वादसत्पक्षस्य पूर्वनिर्देशः ।**

ಅಥವಾ ಯಾವ ಕ್ಷಣದಲ್ಲಿ ಕಾರಣವಿರುತ್ತದೋ, ಅದೇ ಕ್ಷಣದಲ್ಲಿ ಕಾರ್ಯವೂ ಕೂಡ ಇರುತ್ತದೆ. ಆಕಾರ್ಯದ ಕಾರ್ಯಗಳೂ ಕೂಡ ಅದೇ ಕ್ಷಣದಲ್ಲಿ ಇರುತ್ತವೆ. ಕಾರಣವು ನಾಶವಾದ ಮೇಲೆ ಕಾರ್ಯವು ಹುಟ್ಟುತ್ತದೆಂಬ ಅಸತ್‌ಪಕ್ಷವು ಬೌದ್ಧರಿಗೆ ಅಭಿಮತವೇ ಆಗಿದೆ. ಆದ್ದರಿಂದ ಇದನ್ನು ಸೂತ್ರದಲ್ಲಿ ನಿರ್ದೇಶ ಮಾಡಿದ್ದಾರೆ.

ಕ್ಷಣಿಕ ನಾಶದ ನಿರಾಕರಣೆ

**एवं क्षणिकवादे कार्योत्पत्तिं निरस्य विनाशं च निरस्यति -**

**।। प्रतिसङ्ख्याप्रतिसङ्ख्यानिरोधाप्राप्तिरविच्छेदात् ।।**

प्रतिसङ्ख्या बुद्धिः । तदभावोऽप्रतिसङ्ख्या । बुद्धिपूर्वाबुद्धिपूर्वविनाशौ प्रतिसङ्ख्याप्रतिसङ्ख्यानिरोधौ । तावेव ससन्तानविनाशप्रतिक्षण-विनाशावुच्येते । तयोरप्राप्तिरनुपपत्तिः । कुतः? अविच्छेदात् । कार्यजनीनामिति वा कार्याणामिति वा प्रकृतमन्वेति । कारणे सति कार्यं भवत्येवेति नियमाभ्युपगमात् प्रतिक्षणं कार्यमुत्पाद्य नश्यतीति वाच्ये उत्पत्तिक्षणस्यैव कार्यवियोगक्षणत्वात् कार्यवियोगकाले कारणं सदेवेति कार्यमुत्पादयेत् । तदुत्पत्त्यनन्तरं चैवमिति कथं त्वदङ्गीकृतप्रतिक्षणाविनाशः स्यात् । तथा सतो हि घटस्यान्तिको नाशः । अतोऽसौ सत्त्वात्कार्यमुत्पादयेदेव । तत्कार्यं चैवमिति कथं त्वदङ्गीकृतसन्तानोच्छेदः स्यादिति भावः ।

ಹೀಗೆ ಕ್ಷಣಿಕವಾದದಲ್ಲಿ ಕಾರ್ಯಗಳ ಉತ್ಪತ್ತಿಯನ್ನು ನಿರಾಕರಣೆ ಮಾಡಿದ್ದಾಯಿತು. ಕಾರ್ಯಗಳ ನಾಶವನ್ನೂ ಕೂಡ ನಿರಾಕರಣೆ ಮಾಡುತ್ತಿದ್ದಾರೆ. 'ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಾಪ್ರಾಪ್ತಿರ-ವಿಚ್ಛೇದಾತ್'

ಪ್ರತಿಸಂಖ್ಯಾ = ಬುದ್ಧಿ, ಅಪ್ರತಿಸಂಖ್ಯಾ = ಬುದ್ಧಿಯ ಅಭಾವ, ಪ್ರತಿಸಂಖ್ಯಾನಿರೋಧ = ಬುದ್ಧಿಪೂರ್ವಕವಾದ ವಿನಾಶ. ಅಪ್ರತಿಸಂಖ್ಯಾನಿರೋಧ = ಬುದ್ಧಿಪೂರ್ವಕವಲ್ಲದ ನಾಶ. ಈ ನಾಶಗಳನ್ನೇ ಬೌದ್ಧಮತಗಳಲ್ಲಿ 'ಸಸಂತಾನ ನಾಶ ಪ್ರತಿಕ್ಷಣವಿನಾಶ' ಎಂದು ಕರೆಯುತ್ತಾರೆ. ಇಂಥ ವಿನಾಶಗಳಿಗೆ ಅಪ್ರಾಪ್ತಿಃ = ಅನುಪಪತ್ತಿಯು ಬರುತ್ತದೆ. ಏಕೆಂದರೆ ಅವಿಚ್ಛೇದಾತ್ = ಕಾರಣವಿದ್ದರೆ ಕಾರ್ಯವು ಆಗಿಯೇ ಆಗುತ್ತದೆಂದು ನಿಯಮವನ್ನು ಬೌದ್ಧರು ಒಪ್ಪಿದ್ದಾರೆ. ಪ್ರಕೃತ ಪ್ರತಿಕ್ಷಣವೂ ಕಾರ್ಯವನ್ನು ಹುಟ್ಟಿಸಿ, ಕಾರಣವು ನಾಶವಾಗುತ್ತಿದೆ ಎಂದು ಹೇಳಿದರೆ ಕಾರ್ಯದ ಉತ್ಪತ್ತಿಕ್ಷಣವೇ ಕಾರ್ಯದ ವಿನಾಶಕ್ಷಣ ಎಂದು ಹೇಳಿದಂತಾಯಿತು. ಆದ್ದರಿಂದ ಕಾರ್ಯನಾಶ ಕ್ಷಣದಲ್ಲಿ ಇನ್ನೊಂದು ಕಾರ್ಯ ಹುಟ್ಟಲು ಆವಶ್ಯಕವಾದ ಕಾರಣ ಇರುತ್ತದೆಂದು ಹೇಳಿದಂತಾಯಿತು. ಕಾರಣವಿದ್ದ ಮೇಲೆ ಕಾರ್ಯವನ್ನು ಹುಟ್ಟಿಸಲೇ ಬೇಕಾದ್ದರಿಂದ ಮತ್ತೊಂದು ಕಾರಣವನ್ನು ಅದು ಹುಟ್ಟಿಸಬೇಕಾದೀತು. ಆ ಕಾರ್ಯವು ಹುಟ್ಟಿದ ಅನಂತರ ಕಾರಣವು ಇರುವುದರಿಂದ ಪುನಃ ಮತ್ತೊಂದು ಕಾರ್ಯ ಹುಟ್ಟಬೇಕಾದೀತು. ಆದ್ದರಿಂದ ನೀನು ಅಂಗೀಕಾರ ಮಾಡಿರುವ ಪ್ರತಿಕ್ಷಣ ವಿನಾಶವು ಹೇಗೆ ತಾನೇ ಯುಕ್ತವಾಗುತ್ತದೆ ?

ಆದರಂತೆ ಸತ್ತಾದ ಘಟಕ್ಕೆ ಆತ್ಯಂತಿಕವಿನಾಶವೂ ಕೂಡ ಆಗಬೇಕಾಗುತ್ತದೆ. ಹಾಗಾಗಿ ಘಟವು ಸತ್ತಾಗಿರುವುದರಿಂದ ಕಾರ್ಯವನ್ನು ಉತ್ಪತ್ತಿ ಮಾಡಲೇ ಬೇಕು. ಉತ್ಪನ್ನವಾದ ಆ ಕಾರ್ಯವು ಇರುವುದರಿಂದ ತನ್ನ ಕಾರ್ಯವನ್ನು ಹುಟ್ಟಿಸಲೇ ಬೇಕು. ಹೀಗಿರುವಾಗ ಸಸಂತಾನವನ್ನು ಹೇಗೆ ತಾನೇ ಸಮರ್ಥನೆ ಮಾಡಲು ಸಾಧ್ಯ ? ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ - ದಂಡಪ್ರಹಾರದಿಂದ ಮಡಿಕೆಯು ನಾಶವಾದರೆ ಸಸಂತಾನನಾಶ ಎಂದು ಕರೆಸಿಕೊಳ್ಳುತ್ತದೆ. ಇದು ಬುದ್ಧಿಪೂರ್ವಕ ನಾಶವಾದ್ದರಿಂದ ಪ್ರತಿಸಂಖ್ಯಾನಿರೋಧವೆಂದು ಕರೆಸಿಕೊಳ್ಳುತ್ತದೆ. ಬೌದ್ಧಮತದವರು ಹೇಳುವ ಕಾರ್ಯಗಳ ಪ್ರತಿಕ್ಷಣನಾಶವು ಸಂತಾನನಾಶವಾಗದೇ ಇರುವುದರಿಂದ ನಿಃಸಂತಾನನಾಶವೆಂದು ಕರೆಸಿಕೊಳ್ಳುತ್ತದೆ. ಇದು ಬುದ್ಧಿಪೂರ್ವಕನಾಶವುಳ್ಳದ್ದರಿಂದ ಅಪ್ರತಿಸಂಖ್ಯಾನಿರೋಧವೆಂದು ಕರೆಸಿಕೊಳ್ಳುತ್ತದೆ. ಈ ಎರಡೂ ಬಗೆಯ ನಾಶಗಳು ಅಯುಕ್ತವೆಂದು ಈ ಸೂತ್ರದಲ್ಲಿ ಪ್ರತಿಪಾದನೆ ಮಾಡಲಾಗಿದೆ.

## 'ಉಭಯಥಾ ಚ' ಇತ್ಯಾದಿ ಸೂತ್ರದ ವ್ಯಾಖ್ಯಾನ

अर्थक्रियाकारित्वरूपसत्त्वान्यथानुपपत्त्या क्षणिकत्वं भावानामुपेयमित्यत आह -

।। उभयथा च दोषात् ।।२-२-२३।।

कारणे सति कार्यं भवत्येवेति नियमेऽनियमे चोभयथापि दोषादित्यर्थः। आद्ये कारणस्यापि यावत्कार्यभावित्वात् सव्येतरगोशृङ्गवत् न कार्यकारणभावः । अन्त्ये तत्कालेऽर्थक्रियाभावेनाऽसत्त्वापत्त्या न कदापि ततः कार्यजनिरिति भावः । जलाहरणादियोग्यतयैव सत्त्वोपपत्तिरिति हृदयम् ।

ಅರ್ಥಕ್ರಿಯಾಕಾರಿತ್ವದ ಅನ್ಯಥಾನುಪಪತ್ತಿಯಿಂದ ಭಾವಪದಾರ್ಥಗಳಿಗೆ ಕ್ಷಣಿಕತ್ವವನ್ನು ಅಂಗೀಕರಿಸಬೇಕಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ಉಭಯಥಾ ಚ ದೋಷಾತ್' ಎಂದು.

ಕಾರಣವಿದ್ದರೆ ಕಾರ್ಯವು ಆಗಲೇ ಬೇಕು ಎಂಬ ನಿಯಮವನ್ನು ಅಂಗೀಕರಿಸಿದರೂ, ಅಂಗೀಕರಿಸದೇ ಇದ್ದರೂ ದೋಷವು ಬರುತ್ತದೆಂಬುದು 'ಉಭಯಥಾ ಚ ದೋಷಾತ್' ಎಂಬುದಕ್ಕೆ ಅರ್ಥ - ಅದು ಹೀಗೆ - ಕಾರಣವು ಕಾರ್ಯವಿರುವಷ್ಟು ಕಾಲ ಇರುತ್ತದೆ. ಹಸುವಿನ ಬಲಭಾಗದ ಕೊಂಬಿಗೂ, ಎಡಭಾಗದ ಕೊಂಬಿಗೂ ಪರಸ್ಪರ ಕಾರ್ಯಕಾರಣಭಾವವು ಇರುವುದಿಲ್ಲ. ಆದ್ದರಿಂದ ಕಾರಣವಿದ್ದ ಮಾತ್ರಕ್ಕೆ ಕಾರ್ಯವು ಆಗಲೇಬೇಕೆಂಬ ನಿಯಮವು ತಪ್ಪು. ಈ ನಿಯಮವನ್ನು ಒಪ್ಪುವುದಿಲ್ಲ ಎಂಬ ಎರಡನೆಯ ಪಕ್ಷದಲ್ಲೂ ಕೂಡ ಬೌದ್ಧರಿಗೆ ದೋಷವಿದೆ. ಕಾರಣವಿದ್ದಾಗ ಕಾರ್ಯವು ಉತ್ಪತ್ತಿ ಆಗದೇ ಇರುವುದರಿಂದ ಕಾರಣಕ್ಕೆ ಅರ್ಥಕ್ರಿಯಾಕಾರಿತ್ವರೂಪವಾದ ಸತ್ವವೇ ಇಲ್ಲ ಎಂದಾಗುತ್ತದೆ. ಎಂದೂ ಕೂಡ ಆ ಕಾರಣದಿಂದ ಕಾರ್ಯವು ಹುಟ್ಟುವುದೇ ಇಲ್ಲ ಎಂದು ಹೇಳಿದಂತಾಗುತ್ತದೆ. ಜಲಾಹರಣಾದಿ ಯೋಗ್ಯತೆಯಿರುವುದರಿಂದ ಘಟದಲ್ಲಿ ಸತ್ವವಿದೆ. ಮತ್ತೊಂದು ಪದಾರ್ಥವನ್ನು ಹುಟ್ಟಿಸುವುದರಿಂದ ಸತ್ವವಿದೆ ಎಂದು ಹೇಳಬಾರದು ಇಷ್ಟು ಸೂತ್ರಕಾರರ ಹೃದಯ.

### ಪೂರ್ವಪಕ್ಷಾನುಮಾನಕ್ಕೆ ಪ್ರಕರಣಸಮದೋಷ

ननु यत्सत् तत्क्षणिकं यथा दीपादीत्यनुमानात् क्षणिकत्वं भावानामस्त्वित्यत आह -

।। अकाशे चाविशेषात् ।।२-२-२४।।

दीप इवाकाशे च परिमाणविशेषाभावादित्यर्थः । आकाशे परिमाणविशेषादर्शनेन तस्याक्षणिकत्वं सिद्धमिति तद्दृष्टान्तेन सत्त्वहेतुनैव सर्वस्य क्षणिकत्वं ससाधनमिति प्रकरणसमं त्वदनुमानमिति भावः ।

ಯಾವುದು ಸತ್ಯವಾಗಿದೆಯೋ ಅದು ಕ್ಷಣಿಕವಾಗಿದೆ. ಉದಾಹರಣೆ ದೀಪ. ಈ ಅನುಮಾನದಿಂದ ಭಾವಪದಾರ್ಥಗಳಿಗೆ ಕ್ಷಣಿಕತ್ವವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - 'ಆಕಾಶೇ ಚಾವಿಶೇಷಾತ್' ಎಂದು. ದೀಪದಲ್ಲಿ ಪರಿಮಾಣವಿಶೇಷವಿದೆ. ಆದರಂತೆ ಆಕಾಶದಲ್ಲಿ ಪರಿಮಾಣವಿಶೇಷವು ಇರುವುದಿಲ್ಲ ಎಂಬುದು ಸೂತ್ರದ ಅರ್ಥ. ಆಕಾಶದಲ್ಲಿ ಪರಿಮಾಣವಿಶೇಷವು ಕಾಣಿಸದೇ ಇರುವುದರಿಂದ ಅಕ್ಷಣಿಕತ್ವವು ಆಕಾಶದಲ್ಲಿ ಸಿದ್ಧವಾಗುತ್ತದೆ. ಇದರ ದೃಷ್ಟಾಂತದಿಂದ ಸತ್ವಹೇತುವು ಆಕಾಶದಂತೆ ಬೇರೆ

ಪದಾರ್ಥಗಳಲ್ಲೂ ಇರುವ ಕಾರಣ ಎಲ್ಲಾ ಪದಾರ್ಥಗಳು ಅಕ್ಷಣಿಕವೆಂದು ಸುಲಭವಾಗಿ ಸಾಧನೆ ಮಾಡಬಹುದು. ಆದ್ದರಿಂದ 'ಸರ್ವಂ ಕ್ಷಣಿಕಂ ಸತ್ವಾತ್' ಎಂಬ ಪೂರ್ವಪಕ್ಷದ ಅನುಮಾನಕ್ಕೆ ಪ್ರಕರಣಸಮ ದೋಷವು ಪ್ರಾಪ್ತವಾಗುತ್ತದೆ.

ಎಂಬ ಸೂತ್ರದ ವ್ಯಾಖ್ಯಾನ

**बाधितत्वेनाप्यनुमानं निराह -**

**।। अनुस्मृतेश्च ।।२-२-१५।।**

**तदेवेदमिति प्रत्यभिज्ञानाच्च नानुमानात् क्षणिकत्वं सिद्धमिति भावः ।।७।।**

ಬಾಧದೋಷವಿರುವುದರಿಂದಲೂ ಕ್ಷಣಿಕತ್ವಸಾಧಕವಾದ ಅನುಮಾನವು ಅಯುಕ್ತವಾಗಿದೆ ಎಂದು ನಿರಾಕರಣೆ ಮಾಡುತ್ತಿದ್ದಾರೆ 'ಅನುಸ್ಮೃತೇಶ್ಚ' ಎಂದು. 'ತದೇವ ಇದಂ' 'ಅದೇ ಇದು' ಎಂಬ ಪ್ರತ್ಯಭಿಜ್ಞಾನವು ಇರುವುದರಿಂದ ಅನುಮಾನದಿಂದ ಕ್ಷಣಿಕತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಸಮುದಾಯವಾದಿಗಳ ಮತವು ಅಯುಕ್ತವೆಂದು ನಿರ್ಣಯವಾಯಿತು.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಸಮುದಾಯಾಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಅಸದಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

### ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಅಸದಧಿಕರಣ

## ಬ್ರಹ್ಮಸೂತ್ರ

'ನಾಸತೋऽದೃಷ್ಟತ್ವಾತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – नासतोऽदृष्टत्वात् ।।**

ಶೂನ್ಯಕ್ಕೆ ಜಗತ್‌ಕರ್ತೃತ್ವವು ಕೂಡುವುದಿಲ್ಲ. ಈ ವಿಷಯದಲ್ಲಿ ಯಾವುದೇ ಪ್ರಮಾಣವು ಇರುವುದಿಲ್ಲ. ಏಕೆಂದರೆ ಜಗತ್ತಿನಲ್ಲಿ ಎಲ್ಲಿಯೂ ಕೂಡ ಶೂನ್ಯಕ್ಕೆ ಕಾರಣತ್ವವಿರುವುದು ಪ್ರತ್ಯಕ್ಷವಾಗಿ ಕಂಡಿರುವುದಿಲ್ಲ. ಆದ್ದರಿಂದಲೇ ಅನುಮಾನವು ಆಧಾರವಲ್ಲ, ಆಗಮವೂ ಕೂಡ ಇರುವುದಿಲ್ಲ.

ಅಸತಃ = ಶೂನ್ಯಕ್ಕೆ, ನ = ಜಗತ್‌ಕಾರಣತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ಯಾವುದೇ ಪ್ರಮಾಣಗಳು ಇರುವುದಿಲ್ಲ. ಪ್ರಮಾಣವೇಕೆ ಇರುವುದಿಲ್ಲ ಎಂದರೆ, ಅದೃಷ್ಟತ್ವಾತ್ = ಶೂನ್ಯಕ್ಕೆ ಕಾರಣತ್ವವಿರುವುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ಆದ್ದರಿಂದಲೇ ಅನುಮಾನವು ಪ್ರಮಾಣವಾಗುವುದಿಲ್ಲ. ಆಗಮವೂ ಕೂಡ ಇರುವುದಿಲ್ಲ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ಶೂನ್ಯವು ಜಗತ್ತಿಗೆ ಕಾರಣವಾಗಲು ಸಾಧ್ಯವೆ?

**ब्रह्मसूत्रभाष्यम् – शून्यवादमपाकरोति –**

**।। नासतोऽदृष्टत्वात् ।।१।।**

**अदृष्टत्वान्नासतः कारणत्वं युज्यते ।।१।।**

ಅನುವಾದ - ಶೂನ್ಯವೇ ಜಗತ್ತಿಗೆ ಕಾರಣವೆಂದು ಹೇಳುವ ಮಾಧ್ಯಮಿಕವಾದವನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಅಸತ್ತಿಗೆ ಕಾರಣತ್ವವು ಎಲ್ಲೂ ಕೂಡ ಕಂಡಿರುವುದಿಲ್ಲ. ಆದ್ದರಿಂದ ಶೂನ್ಯವು ಜಗತ್ತಿಗೆ ಕಾರಣ ಎನ್ನುವುದು ಅಯುಕ್ತವಾಗಿದೆ.

ಪ್ರತಿಪದಾರ್ಥ -- ಬೌದ್ಧರ ಏಕದೇಶಿಗಳಾದ ಮಾಧ್ಯಮಿಕ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ಶೂನ್ಯವಾದಮ್ = ಶೂನ್ಯವೇ ಜಗತ್ತಿಗೆ ಕಾರಣವೆನ್ನುವ ವಾದವನ್ನು, ಅಪಾಕರೋತಿ = ಸೂತ್ರಕಾರರು ನಿರಾಕರಿಸುತ್ತಿದ್ದಾರೆ. ಅಸತಃ = ಶೂನ್ಯಕ್ಕೆ, ಕಾರಣತ್ವಂ = ಕಾರಣತ್ವವು, ಅದೃಷ್ಟತ್ವಾತ್ = ಎಲ್ಲಿಯೂ ಕಂಡಿಲ್ಲವಾದ್ದರಿಂದ, ನಯುಜ್ಯತೇ = ಯುಕ್ತವಲ್ಲ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

**सत्तर्कदीपावळिः –**

**क्षणिकपरमाणुपुञ्जवादान्निराकृत्य जगच्छून्यवादमुपक्षिप्य दूषयति । शून्यवादमित्यादिना । न च शून्याज्जगदुदितमिति वक्तुं शक्यते दृष्टान्ताभावात्।**

ಕ್ಷಣಿಕವಾದ ಪರಮಾಣುಪುಂಜವೇ ಘಟಪಟಾದಿ ಜಗತ್ತಾಗಿದೆ ಎಂಬುದನ್ನು ಯಾವ ಬೌದ್ಧರು ಹೇಳುತ್ತಾರೋ, ಅವರ ಮತವನ್ನು ಹಿಂದಿನ ಸಮುದಾಯಾಧಿಕರಣದಲ್ಲಿ ನಿರಾಕರಣೆ ಮಾಡಿದ್ದಾಯಿತು. ಈ ಅಧಿಕರಣದಲ್ಲಿ ಜಗತ್ತು ಶೂನ್ಯದಿಂದಲೇ ಉತ್ಪನ್ನವಾಗಿದೆ ಎಂದು ಹೇಳುವ ಬೌದ್ಧೈಕದೇಶಿಗಳ ಮತವನ್ನು ಅನುವಾದ ಮಾಡಿ, ನಿರಾಕರಣೆ ಮಾಡುತ್ತಿದ್ದಾರೆ. ಅದಕ್ಕಾಗಿ 'ಶೂನ್ಯವಾದಂ ಅಪಾಕರೋತಿ' ಇತ್ಯಾದಿ ಭಾಷ್ಯವು ಹೊರಟಿದೆ. ಶೂನ್ಯದಿಂದ ಜಗತ್ತು ಹುಟ್ಟುತ್ತದೆಂದು ಹೇಳಲು ಸಾಧ್ಯವೇ ಇಲ್ಲ. ಹಾಗೇ ಹೇಳಲು ದೃಷ್ಟಾಂತವೇ ಇರುವುದಿಲ್ಲ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

ಶೂನ್ಯಸ್ವರೂಪ ನಿರೂಪಣೆ ಮತ್ತು ನಿರಾಕರಣೆ

**तत्वप्रदीपः – नित्यं निर्विशेषमद्वितीयं स्वयम्प्रकाशमपास्तगुणदोषं वाङ्मनसागोचरं शून्यं जगत्कारणं माध्यमिका मन्यन्ते । तत्संवृत्याः प्रत्ययमात्रविनिवेशिन्या विलासरूपोऽयं भेदप्रपञ्चो न तत्त्वतो विद्यते । तद्दृष्टिरपि विकल्परूपा यावत्संवृति संव्यवहारमात्रनिर्वहणी निर्वर्तते ।**

**स्वप्नवदेव शून्यात्मप्रतिबोधे समूलं समुपशाम्यतीत्येतन्मतमपाकरोति । नासतोऽदृष्टत्वात् । असतो जगत्कारणत्वं न युज्यतेऽदृष्टत्वात् । न हि क्वाप्यदृश्यस्य कारणत्वं वा साधनीयम् । दृश्यत्वेऽपसिद्धान्तः । न चासतो जगत्कारणत्वं प्रमाणेन दृष्टम् । नह्यसतः कारणत्वं क्वापि दृष्टम् । न च तादृशं शून्यं प्रमाणदृष्टम् ।**

ಮಾಧ್ಯಮಿಕರು ಶೂನ್ಯವೇ ಜಗತ್ಕಾರಣ ಎಂದು ತಿಳಿದಿದ್ದರೆ. ಈ ಶೂನ್ಯವು ಮಾತು ಮತ್ತು ಮನಸ್ಸುಗಳಿಗೆ ಅಗೋಚರವಾಗಿದೆ. ಇದರಲ್ಲಿ ಯಾವುದೇ ಗುಣವಾಗಲೀ ದೋಷವಾಗಲೀ ಇರುವುದಿಲ್ಲ. ಆದರೆ ಸ್ವಪ್ರಕಾಶವಾಗಿದೆ. ಮತ್ತು ಅದ್ವಿತೀಯವಾಗಿ ಜಗತ್ತಿಗೆ ಕಾರಣವಾಗಿದೆ. ಯಾವುದೇ ಧರ್ಮಗಳಿಲ್ಲದ್ದರಿಂದ ನಿರ್ವಿಶೇಷವಾಗಿದೆ. ನಿತ್ಯವಾಗಿದೆ. ಈ ಶೂನ್ಯದ ಸಂವೃತಿಯಿಂದ (ಅಜ್ಞಾನದಿಂದ) ಈ ಭೇದಪ್ರಪಂಚವು ವಿಲಾಸರೂಪವಾಗಿ ಜ್ಞಾನದಲ್ಲಿ ವಿಷಯವಾಗುತ್ತಿದೆ. ವಾಸ್ತವಿಕವಾಗಿ ಭೇದಪ್ರಪಂಚವೇ ಇರುವುದಿಲ್ಲ. ಈ ಜಗತ್ತಿನ ಪ್ರತ್ಯಕ್ಷ ಜ್ಞಾನರೂಪವಾಗಿದೆ. ಸಂವೃತಿ ಇರುವ ತನಕ ಮಾತ್ರ ಗೋಚರವಾಗುತ್ತದೆ. ಮತ್ತು ವ್ಯವಹಾರ ಮಾತ್ರ ನಿರ್ವಾಹಕವಾಗಿ ನಿವೃತಿತ ಆಗುತ್ತದೆ. ಯಾವಾಗ ಶೂನ್ಯದ ಸಾಕ್ಷಾತ್ಕಾರವಾಗುತ್ತದೋ, ಆಗ ಸಂಪೂರ್ಣವಾಗಿ ಜಗತ್ತಿನ ಭೇದಜ್ಞಾನವು ಉಪಶಮನವಾಗುತ್ತದೆ. ಜಾಗ್ರತ್ಕಾಲದಲ್ಲಿ ಹೇಗೆ ಸ್ವಪ್ನವು ಸಂಪೂರ್ಣವಾಗಿ ಭ್ರಾಂತಿಯೆಂದು ತಿಳಿಯುತ್ತದೋ, ಅದರಂತೆ ಈ ಭೇದಪ್ರಪಂಚವೂ ಕೂಡ ಭ್ರಾಂತಿ ಎಂದು ತಿಳಿಯುತ್ತದೆ. ಇಷ್ಟು ಮಾಧ್ಯಮಿಕರ ಅಭಿಪ್ರಾಯ. ಇವರನ್ನು ನಿರಾಕರಣೆ ಮಾಡುವುದಕ್ಕಾಗಿ 'ನಾಸತೋಽದೃಷ್ಟತ್ವಾತ್' ಎಂಬ ಸೂತ್ರವು ಹೊರಟಿದೆ.

ಅಸತ್‌ಪದಾರ್ಥವಾದ ಶೂನ್ಯವು ಜಗತ್ತಿಗೆ ಕಾರಣವಾಗಲು ಸಾಧ್ಯವೇ ಇಲ್ಲ. ಅಸತ್ತು ಕಾರಣವಾಗಿರುವುದು ಎಲ್ಲೂ ಕಂಡಿಲ್ಲ. ಎಲ್ಲೂ ಕಾಣದೇ ಇರುವುದಕ್ಕೆ ಕಾರಣತ್ವವನ್ನು ಸಾಧಿಸಬಾರದು. ಅಸತ್ತಿಗೆ ಕಾರಣತ್ವವು ಕಂಡಿದೆ ಎಂಬುದು ಅಪಸಿದ್ಧಾಂತಗ್ರಸ್ತವಾಗಿದೆ. ಅಸತ್ತಿಗೆ ಜಗತ್ಕಾರಣತ್ವವು ಪ್ರಮಾಣದಿಂದ ದೃಷ್ಟವಾಗಿಲ್ಲ. ಅಂಥ ಅಸದ್‌ಭೂತವಾದ ಶೂನ್ಯವೂ ಕೂಡ ಪ್ರಮಾಣಸಿದ್ಧವಾಗಿಲ್ಲ.

**ವಿವರಣೆ** - ಮಾಯಾವಾದಿಗಳು ಬ್ರಹ್ಮನನ್ನು ಹೇಗೆ ಹೇಳುತ್ತಾರೋ, ಅದರಂತೆ ಈ ವಿಜ್ಞಾನವಾದಿಗಳು ಶೂನ್ಯತತ್ವವನ್ನು ಪ್ರತಿಪಾದನೆ ಮಾಡುತ್ತಾರೆ. ವಾಸ್ತವಿಕವಾಗಿ ಮಾಧ್ಯಮಿಕರ ಈ ಶೂನ್ಯತತ್ವಕ್ಕೆ ಮಾಯಾವಾದಿಗಳು ಬ್ರಹ್ಮ ಎಂಬ ಹೆಸರನ್ನಿಟ್ಟು ತಮ್ಮ ಸಿದ್ಧಾಂತವನ್ನು ಸಮರ್ಥಿಸಿಕೊಂಡಿದ್ದಾರೆ. ಯಾವುದೇ ಧರ್ಮಗಳಿಲ್ಲದ ಶೂನ್ಯದಿಂದಲೇ ಜಗತ್ತು ಹುಟ್ಟುತ್ತದೆ ಎಂಬ ಈ ಮಾಧ್ಯಮಿಕರ ಅಭಿಪ್ರಾಯ ತಪ್ಪು. ಯಾವುದೇ ಧರ್ಮಗಳಿಲ್ಲದ ಒಂದು ವಸ್ತು ಕಾರಣವಾಗಲು ಸಾಧ್ಯವೇ ಇಲ್ಲ.

ಭಾಷ್ಯದಲ್ಲಿರುವ 'ಅದೃಷ್ಟತ್ವಾತ್' ಎಂಬ ಪದಕ್ಕೆ ಪ್ರಮಾಣ ಇಲ್ಲದಿರುವುದರಿಂದ ಎಂದರ್ಥ. ಕಾಣದಿರುವುದರಿಂದ ಎಂಬರ್ಥವನ್ನು ಹೇಳಿದರೆ ಬ್ರಹ್ಮನು ಜಗತ್ತಿಗೆ ಕಾರಣನಾಗಿದ್ದಾನೆ ಎಂಬ ಮತದಲ್ಲೂ ಕೂಡ ಅದೃಷ್ಟತ್ವವಿದೆ. ಆದ್ದರಿಂದ ಬ್ರಹ್ಮನೂ ಕೂಡ ಕಾರಣನಾಗದೇ ಇರಬೇಕಾದೀತು. ಅದಕ್ಕಾಗಿ ಪ್ರಮಾಣದಿಂದ ಗೋಚರವಾಗುತ್ತಿಲ್ಲ ಎಂದು ತಿಳಿಯಬೇಕು.

### ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

### ಶೂನ್ಯಮತವಿರೋಧಪರಿಹಾರಕ್ಕಾಗಿ ಅಸದಧಿಕರಣ

**अधिकरणार्थं दर्शयति ।। शून्येति ।। अत्र हरेर्जगत्कारणत्वे शून्यमतविरोधपरिहारादस्ति शास्त्रादिसङ्गतिः ।**

ಅಸದಧಿಕರಣದ ಪ್ರಮೇಯವನ್ನು 'ಶೂನ್ಯವಾದ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಈ ಅಧಿಕರಣದಲ್ಲಿ ಶ್ರೀಹರಿಯ ಜಗತ್ಕಾರಣತ್ವವಿಷಯದಲ್ಲಿ ಶೂನ್ಯಮತವಿರೋಧವನ್ನು ಪರಿಹರಿಸುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ವಿವರಣೆ - ಶೂನ್ಯಮತವಿರೋಧವನ್ನು ಈ ಅಧಿಕರಣದಲ್ಲಿ ಪರಿಹಾರ ಮಾಡುತ್ತಿರುವುದರಿಂದ ಬ್ರಹ್ಮಮೀಮಾಂಸಶಾಸ್ತ್ರಕ್ಕೆ ಸಂಗತವಾಗಿದೆ. ಆದ್ದರಿಂದ ಶಾಸ್ತ್ರಸಂಗತಿ ಇರುತ್ತದೆ. ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಅವಿರೋಧಾಧ್ಯಾಯದಿಂದ ಸಂಗತವಾಗಿದೆ. ಸಮಯವಿರೋಧವನ್ನು ಪರಿಹರಿಸುತ್ತಿರುವುದರಿಂದ ಪಾದದಲ್ಲಿ ಅಂತರ್ಭಾವ ಸಂಗತಿಯನ್ನು ಹೊಂದಿದೆ.

ಪಂಚಸ್ಕಂಧಾತ್ಮವಾದ ಪ್ರಪಂಚಕ್ಕೆ ಸತ್ವವೇ ಇಲ್ಲ. ಹೀಗಿರುವಾಗ ಕ್ಷಣಿಕತ್ವಾದಿವಿಚಾರವು ಹೇಗೆ ಯುಕ್ತವಾಗುತ್ತದೆ ? ಎಂಬುದಾಗಿ ಪೂರ್ವಪಕ್ಷವು ಹುಟ್ಟುತ್ತಿರುವುದರಿಂದ ಅಧಿಕರಣ ಸಂಗತಿಯು ಇರುತ್ತದೆ. (ವಾಕ್ಯಾರ್ಥಮುಕ್ತಾವಳಿ)

ಜಗತ್ತು ಶೂನ್ಯವಾದರೆ ಇದರ ಸೃಷ್ಟಿ ಹೇಗೆ ಸಾಧ್ಯ ?

**तत्वप्रकाशिका – जगत्कारणमीश्वर इत्युक्तम् । तत्र शून्यसमयविरोधेऽभाव बुद्धिः स्यादित्यतोऽसौ निराकर्तव्य एव । परमेश्वरस्य जगत्कारणत्वं विषयः । युक्तमयुक्तं वेति सन्देहः । मतविमतिः सन्देहबीजम्।**

**जगत्कारणमीश्वर इत्युक्तम् । तत्र शून्यसमयविरोधेऽभावबुद्धिः स्यादित्यतोऽसौ निराकर्तव्य एव । परमेश्वरस्य जगत्कारणत्वं विषयः। युक्तमयुक्तं वेति सन्देहः । मतविमतिः सन्देहबीजम् ।**

ಜಗತ್ಕಾರಣನಾದವನು ಈಶ್ವರನೆಂದು ಹೇಳಲಾಯಿತು. ಈ ವಿಷಯದಲ್ಲಿ ಶೂನ್ಯಮತದ ವಿರೋಧವು ಪ್ರಾಪ್ತವಾದರೆ ಜಗತ್ಕಾರಣತ್ವವು ಈಶ್ವರನಲ್ಲಿ ಯುಕ್ತವಾಗುವುದಿಲ್ಲ ಎಂಬ ಬುದ್ಧಿಯು ಪ್ರಾಪ್ತವಾಗುತ್ತದೆ. ಆದ್ದರಿಂದ ಇದನ್ನು ನಿರಾಕರಣೆ ಮಾಡಲೇ ಬೇಕು.

ಪರಮೇಶ್ವರನ ಜಗತ್ಕಾರಣತ್ವವು ಈ ಅಧಿಕರಣದ ವಿಷಯ. ಈ ಜಗತ್ಕಾರಣತ್ವವು ಪರಮೇಶ್ವರನಿಗೆ ಯುಕ್ತವೋ ಅಯುಕ್ತವೋ ? ಎಂಬುದು ಸಂದೇಹ. ಮತಗಳಲ್ಲಿರುವ ವಿವಾದವು ಸಂದೇಹಬೀಜ.

### ಸಂವೃತಿ ಸಂಬಂಧದಿಂದ ಶೂನ್ಯಕ್ಕೆ ಜಗತ್ಕಾರಣತ್ವ

**तत्वप्रकाशिका – न युक्तमिति पूर्वः पक्षः । एकं शून्यमेव खल्वन्तत्रयविरहितं परमार्थतो विद्यमानं तस्मादेवैतदशेषं जगदुदेति । न च तस्यासङ्गस्य जगत्कारणत्वानुपपत्तिः। संवृतिसम्बन्धेनोपपत्तेः ।**

ವಿಷ್ಣುವಿನಲ್ಲಿ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು. ಅಧಿಕರಣದ ಪೂರ್ವಪಕ್ಷ. ಶೂನ್ಯವೆಂಬ ಒಂದೇ ತತ್ವವು ದೇಶತಃ, ಕಾಲತಃ, ವಸ್ತುತಃ ಕೊನೆ ಇಲ್ಲದ್ದಾಗಿದೆ ಮತ್ತು ಪಾರಮಾರ್ಥಿಕವಾಗಿ ಸತ್ಯವಾಗಿದೆ. ಇಂಥ ಶೂನ್ಯದಿಂದಲೇ ಸಮಸ್ತ ಜಗತ್ತು ಹುಟ್ಟುತ್ತದೆ.

ಆ ಶೂನ್ಯವು ಅಸಂಗವಾಗಿರುವುದರಿಂದ ಜಗತ್ಕಾರಣತ್ವವು ಅನುಪಪನ್ನವಾಗುತ್ತದಲ್ಲವೆ ಎನ್ನಬಾರದು. ಸಂವೃತಿಯ ಸಂಬಂಧ ಇರುವುದರಿಂದ ಜಗತ್ಕಾರಣತ್ವವನ್ನು ಹೊಂದುತ್ತದೆ.

### ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
## ಭಾವದೀಪ

**भावदीपः – ।। नासतोऽदृष्टत्वात् ।।२६।।** अपरः शून्यमखिलमित्याद्यनुभाष्यं हृदि कृत्वा आद्यसूत्रनिरस्यमाह – **एकं शून्यमेवेति ।।** एवं चोभयहेतुकेऽपीत्युक्तदोषोऽत्र नेति भावः। नाभावः वैधर्म्याच्चेति सूत्रनिरस्योक्तिः एवेति। क्षणिकत्वपक्षोक्तदोषश्च नेति भावेनोक्तमन्तत्रयेति। देशतः कालतो वस्तुतोऽन्तत्रयशब्दिताणुत्वानित्यत्वभेदै रहितमित्यर्थः। शून्यं चेन्निस्स्वरूपं किमित्यत उक्तम् – **परमार्थत इति ।।** सर्वधर्मोज्झितत्वाच्छून्यमिति नामेतिभावः।। **संवृतीति ।।** संवृतिरज्ञानम्।

'ಅಪರಃ ಶೂನ್ಯಮ್ ಅಖಿಲಮ್' ಎಂಬ ಅನುವ್ಯಾಖ್ಯಾನವನ್ನು ಮನಸ್ಸಿನಲ್ಲಿಟ್ಟುಕೊಂಡು ಮೊದಲನೆಯ ಸೂತ್ರದಿಂದ ಪರಿಹಾರವಾಗುವ ಆಕ್ಷೇಪವನ್ನು 'ಏಕಂ ಶೂನ್ಯಮೇವ' ಎಂಬುದರಿಂದ ಉಪಸ್ಥಾಪನೆ ಮಾಡಿರುತ್ತಾರೆ. 'ಉಭಯಹೇತುಕೇಽಪಿ' ಎಂಬ ಸೂತ್ರದಿಂದ ಯಾವ ದೋಷವನ್ನು ಇಲ್ಲಿ ಹೇಳಲಾಗಿತ್ತೋ, ಆ ದೋಷವು ಈ ಶೂನ್ಯವಾದಿಗಳಿಗೆ ಬರುವುದಿಲ್ಲ ಎಂಬುದನ್ನೂ ಕೂಡ ಶೂನ್ಯಮೇವ' ಎಂಬುದರಿಂದ ತಿಳಿಸಿರುತ್ತಾರೆ. 'ನಾ ಭಾವ ಉಪಲಬ್ಧೇಃ' ಎಂಬ ಸೂತ್ರದಿಂದ ಹಾಗೂ 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಎಂಬ ಸೂತ್ರದಿಂದ ಪರಿಹಾರವಾಗುವ ಆಕ್ಷೇಪವನ್ನೂ ಕೂಡ ಏವಕಾರದಿಂದಲೇ ಉಪಸ್ಥಾಪನೆ ಮಾಡಿದ್ದಾರೆ. ಕ್ಷಣಿಕತ್ವವಾದಿಗಳಿಗೆ ಯಾವ ದೋಷವು ಪ್ರಾಪ್ತವಾಗಿತ್ತೋ, ಆ ದೋಷವು ಈ ಶೂನ್ಯವಾದಿಗಳಿಗೆ ಪ್ರಾಪ್ತವಾಗುವುದಿಲ್ಲ ಎಂಬುದನ್ನು ತಿಳಿಸುವುದಕ್ಕಾಗಿ 'ಅಂತತ್ರಯವಿರಹಿತಮ್' ಎಂಬುದಾಗಿ ಹೇಳಿರುತ್ತಾರೆ. ದೇಶತಃ ಕೊನೆಯಿರುವ ಅಣುತ್ವದಿಂದ ರಹಿತವಾಗಿದೆ. ಕಾಲತಃ ಕೊನೆಯಿರುವ ಅನಿತ್ಯತ್ವದಿಂದ ರಹಿತವಾಗಿದೆ. ವಸ್ತುತಃ ಕೊನೆಯಿರುವ ಭೇದದಿಂದ ರಹಿತವಾಗಿದೆ ಎಂಬುದು 'ಅಂತತ್ರಯವಿರಹಿತಮ್' ಎಂಬ ಶಬ್ದದ ಅರ್ಥ. ಶೂನ್ಯ ಎಂದರೆ ನಿಸ್ವರೂಪ ಎಂದರ್ಥವಲ್ಲವೇ? ಎಂಬ ಪ್ರಶ್ನೆಗೆ 'ಪರಮಾರ್ಥತಃ' ಎಂದು ಉತ್ತರಿಸಿದ್ದಾರೆ. ಎಲ್ಲಾ ಧರ್ಮಗಳಿಂದ ರಹಿತವಾದದ್ದು, 'ಶೂನ್ಯ' ಎಂದು ಕರೆಸಿಕೊಳ್ಳುತ್ತದೆ ಎಂದು ಇದರ ಅಭಿಪ್ರಾಯ. 'ಸಂವೃತಿ' ಎಂದರೆ ಅಜ್ಞಾನ ಎಂದರ್ಥ.

ವಿವರಣೆ - ಯಾವುದೇ ಧರ್ಮಗಳಿಲ್ಲದ್ದು ಗುಣದೋಷಗಳಿಂದ ರಹಿತವಾದದ್ದು ವಾಕ್ ಮತ್ತು ಮನಸ್ಸುಗಳಿಗೆ ಅಗೋಚರವಾದದ್ದು ನಿರ್ವಿಶೇಷವಾದ ಒಂದೇ ಒಂದು ತತ್ವವೆಂದರೆ ಅದೇ ಶೂನ್ಯ ಎಂಬುದಾಗಿ ಶೂನ್ಯವಾದಿಗಳು ಹೇಳುತ್ತಾರೆ. ಪಾರಮಾರ್ಥಿಕವಾಗಿ ಸತ್ಯಭೂತವಾದ ವಸ್ತುವೆಂದರೆ ಶೂನ್ಯಮಾತ್ರ. ಬೇರೆ ಎಲ್ಲವೂ ಕೂಡ ಮಿಥ್ಯಾಭೂತವಾಗಿದೆ ಎಂಬುದು ಇವರ ಅಭಿಪ್ರಾಯ. ಇಂಥ ಶೂನ್ಯವು ಅಸಂಗವಾಗಿದ್ದರೂ ಸಂವೃತಿಯು ಸಂಬಂಧವನ್ನು ಹೊಂದಿದೆ. 'ಸಂವ್ರೀಯತೇ ಅನೇನ ಸಂವೃತಿಃ' ಎಂಬ ನಿಷ್ಪತ್ತಿಯಂತೆ ಯಾವುದರಿಂದ ಮುಚ್ಚಲ್ಪಟಿದೆಯೋ ಅಂಥ ಅವಿದ್ಯೆಯು ಸಂವೃತಿಯೆಂದು ಕರೆಸಿಕೊಳ್ಳುತ್ತದೆ. ಇಂಥ ಅವಿದ್ಯೆಯಿಂದ ಸಂಬಂಧವನ್ನು ಹೊಂದಿರುವ ಕಾರಣ ಶೂನ್ಯವು ಜಗದುತ್ಪತ್ತಿಗೆ ಕಾರಣವಾಗುತ್ತದೆ. ಈ ಶೂನ್ಯವು ದೇಶತಃ ಕಾಲತಃ ಹಾಗೂ ವಸ್ತುತಃ ಅಪರಿಮಿತವಾಗಿದೆ. ಇಷ್ಟು ಶೂನ್ಯವಾದಿಗಳ ಅಭಿಪ್ರಾಯ.

ಹಿಂದೆ 'ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ' ಎಂಬ ಸೂತ್ರದಿಂದ ಯಾವ ಬೌದ್ಧರು ಪರಮಾಣುಗಳ ಸಮುದಾಯವೇ ಸಕಲಪದಾರ್ಥಗಳಾಗಿವೆ ಎಂದು ಹೇಳುತ್ತಾರೋ, ಅವರಿಗೆ ವಿರಳವಾದ ಪರಮಾಣುಗಳಿಂದ ಸಮುದಾಯ ಹುಟ್ಟುತ್ತದೋ, ಮಿಲಿತವಾದ ಪರಮಾಣುಗಳಿಂದ ಸಮುದಾಯ ಹುಟ್ಟುತ್ತದೋ, ಎರಡೂ ಪಕ್ಷಗಳೂ ಕೂಡ ಅಯುಕ್ತವಾಗಿದೆ ಎಂಬ ದೋಷವನ್ನು ಹೇಳಲಾಗಿತ್ತು. ಈ ದೋಷವು ಪ್ರಕೃತ ಶೂನ್ಯವಾದಿಗಳಿಗೆ ಪ್ರಾಪ್ತವಾಗುವುದಿಲ್ಲ. ಏಕೆಂದರೆ ಪರಮಾಣುಗಳ ಸಮೂಹವೇ ಸಕಲ ಪದಾರ್ಥಗಳೆಂದು ಇವರು ಅಂಗೀಕಾರ ಮಾಡುವುದಿಲ್ಲ.

'ನ ಭಾವೋಽನುಪಲಬ್ಧೇಃ' ಎಂಬ ಸೂತ್ರದಲ್ಲಿ ಜಗತ್ತು ಶೂನ್ಯದಲ್ಲಿ ಆರೋಪಿತವೆಂದು ಹೇಳುತ್ತಿದ್ದೀರಿ. ಆದರೆ ಅನುಭವದ ಪ್ರಕಾರ ಸತ್ಯವಾಗಿದೆ ಎಂದು ಹೇಳುತ್ತಾರೆ. ಮತ್ತು ಮುಂದಿನ 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಎಂಬ ಸೂತ್ರದಲ್ಲಿ ಸ್ವಾಪ್ನ ಪದಾರ್ಥದಂತೆ ಜಗತ್ತನ್ನು ಇಲ್ಲವೆಂದು ಹೇಳಬಾರದು ಎಂಬುದಾಗಿ ಸಮರ್ಥಿಸಿದ್ದಾರೆ. ಈ ಎರಡು ಸೂತ್ರಗಳಿಂದ ಪರಿಹಾರವಾಗುವ ಅಂಶವನ್ನು 'ಶೂನ್ಯಮೇವ' ಎಂಬಲ್ಲಿರುವ 'ಏವಕಾರದಿಂದ ಸೂಚನೆ ಮಾಡಿದ್ದಾರೆ. ಮತ್ತು ಜಗತ್ತನ್ನು ಕ್ಷಣಿಕವೆಂದು ಯಾವ ಬೌದ್ಧರು ಹೇಳುತ್ತಾರೋ, ಅವರಿಗೂ ಬರುವ ದೋಷವು ಶೂನ್ಯವಾದಿಗಳಿಗೆ ಬರುವುದಿಲ್ಲ ಎಂಬುದನ್ನು ತಿಳಿಸುವುದಕ್ಕಾಗಿ ಇಂಥ ಶೂನ್ಯವು ಅಂತರ್ಭಯರಹಿತವಾಗಿದೆ ಎಂದು ತಿಳಿಸಿರುತ್ತಾರೆ.

### ಜಗತ್ತು ಶೂನ್ಯದಿಂದಲೇ ಸೃಷ್ಟವಾಗುತ್ತದೆ

**तत्वप्रकाशिका – न च श्रुतिविरोधः । तत्प्रामाण्यानभ्युपगमात् । अतः शून्यादेव जगदुदयसम्भवादीश्वरेणोपयोगाभावात्सुतरामयुक्तं लक्षणमिति प्राप्ते सिद्धान्तयत्सूत्रमुपन्यस्य व्याचष्टे – नेति ।।**

'ಯತೋ ವಾ ಇಮಾನಿ ಜಾಯಂತೇ' ಇತ್ಯಾದಿ ಶ್ರುತಿವಿರೋಧಕ್ಕೂ ಅವಕಾಶವಿಲ್ಲ. ಆ ಶ್ರುತಿಗಳಿಗೆ ಪ್ರಾಮಾಣ್ಯವನ್ನೇ ನಾವು ಒಪ್ಪುವುದಿಲ್ಲ. ಆದ್ದರಿಂದ ಶೂನ್ಯದಿಂದಲೇ ಜಗತ್ತಿನ ಉತ್ಪತ್ತಿಯು ಸಂಭಾವಿತವಾಗುತ್ತದೆ. ಈಶ್ವರನ ಅವಶ್ಯಕತೆ ಇರುವುದೇ ಇಲ್ಲ. ಆದ್ದರಿಂದ ಈಶ್ವರನ ಜಗತ್ಕಾರಣತ್ವಲಕ್ಷಣವು ಅಯುಕ್ತವಾಗಿದೆ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ನಾಸತೋ ಅದೃಷ್ಟತ್ವಾತ್' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – विप्रतिषेधाच्चासमञ्जसमित्यादिदोषश्च नेत्याह – **तत्प्रामाण्येति** ।। **अत इति** ।। अप्रमाणतया श्रुत्यादिविरोधाभावादित्यर्थः।

'ವಿಪ್ರತಿಷೇಧಾಚ್ಚ ಅಸಮಂಜಸಮ್' ಇತ್ಯಾದಿ ಸೂತ್ರದಿಂದ ಯಾವ ದೋಷವನ್ನು ಹೇಳಿದಿರೋ, ಅದೂ ಕೂಡ ನಮಗೆ ಬರುವುದಿಲ್ಲ ಎಂಬುದನ್ನು 'ತತ್ಪ್ರಾಮಾಣ್ಯಾನಭ್ಯುಗಪಮಾತ್' ಎಂಬ ವಾಕ್ಯದಿಂದ ತಿಳಿಸಿರುತ್ತಾರೆ. 'ಅತಃ' ಎಂಬ ಪದಕ್ಕೆ ಅಪ್ರಮಾಣವಾಗಿರುವುದರಿಂದ ಶ್ರುತ್ಯಾದಿ ವಿರೋಧಗಳು ಬಾರದ ಕಾರಣ ಎಂದರ್ಥ.

ಶೂನ್ಯವು ಜಗತ್ಕಾರಣವೆನ್ನಲು ಯಾವುದೇ ಆಧಾರವಿಲ್ಲ

**तत्वप्रकाशिका – न शून्यस्य जगत्कारणत्वं युक्तम् । तत्प्रमाणाभावात्। न तावत्प्रत्यक्षमत्रास्ति। नाप्यनुमानम् । क्वाप्यसतः कारणत्वादर्शनेन दृष्टान्ताभावात्। आगमस्तु नेष्टो दृष्टो वेति भावः ।।**

ಶೂನ್ಯವು ಜಗತ್ತಿಗೆ ಕಾರಣವಾಗಲು ಸಾಧ್ಯವಿಲ್ಲ. ಈ ವಿಷಯದಲ್ಲಿ ಯಾವುದೇ ಪ್ರಮಾಣ ಇರುವುದಿಲ್ಲ. ಪ್ರಕೃತದಲ್ಲಿ ಪ್ರತ್ಯಕ್ಷವು ಪ್ರಮಾಣವಾಗುವುದಿಲ್ಲ. ಅನುಮಾನವೂ ಕೂಡ ಇಲ್ಲ. ಏಕೆಂದರೆ ಅಸತ್‌ಪದಾರ್ಥಕ್ಕೆ ಕಾರಣತ್ವವು ಇದೆ ಎನ್ನಲು ದೃಷ್ಟಾಂತವೇ ಕಂಡಿಲ್ಲ. ಶೂನ್ಯವು ಜಗತ್ತಿಗೆ ಕಾರಣವಾಗಿದೆ ಎಂಬ ಆಗಮವು ನಮಗೆ ಸಮ್ಮತವಾಗಿಲ್ಲ. ಅಂಥ ಆಗಮ ಇರುವುದನ್ನು ನಾವು ಕಂಡೂ ಇಲ್ಲ.

**भावदीपः** – व्युत्क्रमेण भाष्यं व्याचष्टे – **नेति** ।। ननु अदृष्टमात्रेण कथं कारणत्वाभावः। ईश्वरस्यापि तदभावापातादित्यतो मध्ये हेतुमाह – **तत्प्रमाणेति** ।। तत्तत्र कारणत्वे। तदुपपादकत्वेनादृष्टत्वादित्येतस्य शून्यकारणत्वस्य अप्रत्यक्षत्वात्। असति कारणत्वस्य क्वाप्यननुभावात्। असत्कारणत्वे आगमस्यादृष्टत्वादिति त्रेधार्थ

मत्वाऽह – **न तावदित्यादिना ।। क्वाप्यसत इति ।।** शून्यं सदिति पराङ्गीकारेऽपि सर्वधर्मराहित्ये सति असत्त्वमवर्जनीयमित्यापाद्य दूषणमिदमिति ध्येयम् ॥ **दृष्टो वेति ।।** असद्वा इदमग्र आसीदित्यादिस्तु एतेन सर्वे व्याख्याता इत्यादावन्यार्थत्वेन निर्णीत इति भावः। तत्वप्रदीपे तु अदृष्टत्वात् प्रमाणेनादृष्टत्वादित्येवोक्तम्।। २६ ।।

ವ್ಯುತ್ಕ್ರಮವಾಗಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಶೂನ್ಯಸ್ಯ' ಇತ್ಯಾದಿ ಗ್ರಂಥವು ಹೊರಟಿದೆ. ಕಂಡಿಲ್ಲ ಎಂಬ ಮಾತ್ರಕ್ಕೆ, ಕಾರಣವಲ್ಲ ಎಂದು ಹೇಗೆ ಹೇಳುತ್ತೀರಿ ? ಹಾಗಾದರೆ ಈಶ್ವರನೂ ಕೂಡ ಜಗತ್ತಿಗೆ ಕಾರಣನಾಗದೇ ಇರಬೇಕಾದೀತು ಎಂಬ ಪ್ರಶ್ನೆಗೆ ಮಧ್ಯದಲ್ಲಿ ತಿಳಿಯಬೇಕಾದ ಹೇತುವನ್ನು ತತ್ಪ್ರಮಾಣಾಭಾವಾತ್' ಎಂಬುದರಿಂದ ತಿಳಿಸಿದ್ದಾರೆ. 'ತತ್' ಎಂಬ ಪದಕ್ಕೆ 'ತತ್ರ' ಎಂದರ್ಥ. ಕಾರಣತ್ವವಿಷಯದಲ್ಲಿ ಎಂದು ತಿಳಿಯಬೇಕು. ಇದಕ್ಕೆ ಉಪಪಾದಕವಾಗಿ 'ಅದೃಷ್ಟತ್ವಾತ್' ಎಂದು ಸೂತ್ರದಲ್ಲಿ ಹೇಳಿರುತ್ತಾರೆ. ಶೂನ್ಯಕ್ಕೆ ಜಗತ್ಕಾರಣತ್ವವು ಪ್ರತ್ಯಕ್ಷದಿಂದ ಕಂಡಿರುವುದಿಲ್ಲ ಎಂದರ್ಥ. ಅಸತ್‌ಪದಾರ್ಥದಲ್ಲಿ ಕಾರಣತ್ವವಿರುವುದು ಯಾರಿಗೂ ಎಲ್ಲೂ ಕೂಡ ಅನುಭವವು ಇರುವುದಿಲ್ಲ. ಈ ವಿಷಯದಲ್ಲಿ ಆಗಮವೂ ಕೂಡ ಪ್ರಮಾಣವಾಗಿರುವುದಿಲ್ಲ. ಹೀಗೆ ಪ್ರತ್ಯಕ್ಷವಿಲ್ಲ, ಅನುಭವವಿಲ್ಲ, ಆಗಮವೂ ಕೂಡ ಇಲ್ಲ ಎಂಬುದಾಗಿ ಸೂತ್ರದಿಂದ ಅದೃಷ್ಟತ್ವಾತ್' ಎಂಬ ಪದಕ್ಕೆ ಮೂರು ಅರ್ಥಗಳನ್ನು ತಿಳಿಯಬೇಕು. ಇದನ್ನು ಟೀಕೆಯಲ್ಲಿ 'ನ ತಾವತ್' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡಿದ್ದಾರೆ. 'ಕ್ವಾಪ್ಯಸತಃ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಶೂನ್ಯವು ಸತ್ಯವಾಗಿದೆ ಎಂಬುದಾಗಿ ಪರನು ಅಂಗೀಕಾರ ಮಾಡಿದರೂ ಕೂಡ ಸಕಲಧರ್ಮಗಳಿಂದ ರಹಿತವಾಗಿದೆ ಎಂದು ಒಪ್ಪಿದ್ದಾನೆ. ಇಂಥದ್ದರಲ್ಲಿ ಅಸತ್ವವನ್ನು ಒಪ್ಪುವುದು ಅನಿವಾರ್ಯ. ಹೀಗೆ ಆಪಾದನೆ ಮಾಡಿ ದೋಷವನ್ನು ಹೇಳಬೇಕೆಂದು ತಿಳಿಯಬೇಕು.

'ದೃಷ್ಟೋ ವಾ' ಎಂಬುದರ ಅಭಿಪ್ರಾಯ ಹೀಗಿದೆ - 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಗೆ 'ಏತೇನ ಸರ್ವೇ ವ್ಯಾಖ್ಯಾತಾಃ' ಇತ್ಯಾದಿ ಸೂತ್ರಗಳಲ್ಲಿ ಬೇರೆ ಅರ್ಥವನ್ನೇ ನಿರ್ಣಯ ಮಾಡಲಾಗಿದೆ ಎಂದು ತಿಳಿಯಬೇಕು. ತತ್ವಪ್ರದೀಪದಲ್ಲಿ ಸೂತ್ರದಲ್ಲಿ ಉಲ್ಲೇಖಿಸಿದ 'ಅದೃಷ್ಟತ್ವಾತ್' ಎಂಬ ಪದಕ್ಕೆ ಪ್ರಮಾಣದಿಂದ ಸಿದ್ಧವಾಗದ ಕಾರಣ ಎಂಬರ್ಥವನ್ನೇ ಹೇಳಿರುತ್ತಾರೆ.

ವಿವರಣೆ - ವಸ್ತುತಸ್ತು ಶೂನ್ಯವಾದಿಗಳು ಶೂನ್ಯವನ್ನು ಅಸತ್‌ಸ್ವರೂಪ ಎಂದು ಹೇಳುವುದಿಲ್ಲ. ಆದರೂ ಯಾವುದೇ ವಿಶೇಷಗಳಿಂದ ರಹಿತವಾಗಿದೆ ಎಂಬ ಮಾತುಗಳಿಂದ ಅಸತ್ತಿನಲ್ಲೇ ಪರ್ಯವಸಾನವಾಗುತ್ತದೆಂಬುದು ಸಿದ್ಧಾಂತಿಗಳ ಅಭಿಪ್ರಾಯ.

ಪ್ರಮಾಣಾಭಾವವೇ ಪ್ರಮೇಯವನ್ನು ಸಾಧಿಸುತ್ತದೆ. ಪ್ರಮಾಣವಿಶೇಷಾಭಾವವು ಪ್ರಮೇಯಾಭಾವವನ್ನು ಸಾಧಿಸುವುದಿಲ್ಲ. ಆದ್ದರಿಂದ ಇದು ಸಾಕ್ಷಾತ್ ಹೇತು ಆಗುವುದಿಲ್ಲ. ಹೇತುಸಾಧಕಹೇತುವಾಗಿದೆ ಎಂಬ ಅಭಿಪಾಯದಿಂದ ಸಾಕ್ಷಾತ್ ಹೇತುವನ್ನು 'ತತ್ ಪ್ರಮಾಣಾಭಾವಾತ್' ಎಂದು ಟೀಕೆಯಲ್ಲಿ ಅಧ್ಯಹಾರ ಮಾಡಿದ್ದಾರೆ. ಇದಕ್ಕೆ ಉಪಪಾದಕವಾಗಿ ಸೂತ್ರದಲ್ಲಿರುವ ಹೇತುವನ್ನು 'ನ ತಾವತ್' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಶೂನ್ಯವಾದಿಗಳು ಹೇಳುವ ಆಗಮವು ನಮಗೆ ಇಷ್ಟವಿಲ್ಲ. ನಾವು ಹೇಳುವ ಆಗಮವು ಅವರಿಗೆ ಇಷ್ಟವಿಲ್ಲ. ಮತ್ತು ಅಂಥ ಆಗಮವು ನಮಗೆ ಕಂಡೂ ಇಲ್ಲ. ಹೀಗೆ ವ್ಯಾಖ್ಯಾನ ಮಾಡಿದ್ದರಿಂದ ಸೂತ್ರದಲ್ಲಿ 'ಕಾರಣತ್ವಮ್' ಎಂಬುದನ್ನು ಅಧ್ಯಹಾರ ಮಾಡಿಕೊಳ್ಳಬೇಕು. 'ಪ್ರಮಾಣಾಭಾವಾತ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಏಕೆ ಪ್ರಮಾಣ ಇಲ್ಲ? ಎಂದರೆ ಅಸತ್ತಿಗೆ ಕಾರಣತ್ವವು ಪ್ರತ್ಯಕ್ಷದಿಂದ ಕಂಡಿಲ್ಲ. ಅನುಮಾನದಿಂದ ಸಿದ್ಧವಾಗುತ್ತದೆಂದು ಅಂಗೀಕರಿಸಿದರೆ ಅದಕ್ಕೆ ದೃಷ್ಟಾಂತವೇ ಇಲ್ಲ. ಉಭಯಸಂಪ್ರತಿಪನ್ನವಾದ ಆಗಮವು ಇಲ್ಲವೇ ಇಲ್ಲ. ಇಷ್ಟು ಟೀಕೆಯ ಅಭಿಪ್ರಾಯ.

## ಭಾವದೀಪದ ವೈಶಿಷ್ಟ್ಯ

* 'ಅಪರಃ ಶೂನ್ಯಮ್ ಅಖಿಲಮ್' ಎಂಬ ಅನುವ್ಯಾಖ್ಯಾನವನ್ನು ಅನುಸಂಧಾನ ಮಾಡಿದ್ದಾರೆ.

* 'ನಾ ಭಾವಃ ಉಪಲಬ್ಧೇಃ' ಮತ್ತು 'ವೈಧರ್ಮ್ಯಾಚ್ಚ ನ ಸ್ವಪ್ನವತ್' ಎಂಬ ಸೂತ್ರದಿಂದ ಪರಿಹಾರವಾಗುವ ಆಕ್ಷೇಪವನ್ನು ಏವಕಾರದಿಂದಲೇ ಸೂಚನೆ ಮಾಡಿದ್ದಾರೆ.

* 'ಅಂತತ್ರಯರಹಿತಮ್' ಎಂಬ ಪದಕ್ಕೆ ಉದಾಹರಣೆಯನ್ನು ನೀಡುವ ಮೂಲಕ ಮೂರು ಬಗೆಯ ಕೊನೆಯಿಲ್ಲದ್ದನ್ನು ಸಮರ್ಥಿಸಿದ್ದಾರೆ.

* ಸೂತ್ರದಲ್ಲಿರುವ ಅದೃಷ್ಟತ್ವಾತ್' ಎಂಬ ಪದಕ್ಕೆ ಮೂರು ಅರ್ಥವನ್ನು ತಿಳಿಸಿದ್ದಾರೆ. ೧. ಪ್ರತ್ಯಕ್ಷವಿಲ್ಲದ್ದರಿಂದ, ೨. ಅನುಭವವಿಲ್ಲದ್ದರಿಂದ, ೩. ಆಗಮವು ಪ್ರಮಾಣವಾಗದೇ ಇರುವುದರಿಂದ. ಈ ಮೂರು ಅರ್ಥವು ಟೀಕೆಯಿಂದಲೇ ತಿಳಿಯುತ್ತದೆಂದು ವ್ಯಾಖ್ಯಾನಿಸಿದ್ದಾರೆ.

## ಬ್ರಹ್ಮಸೂತ್ರ

'ಉದಾಸೀನಾನಾಮಪಿ ಚೈವಂ ಸಿದ್ಧಿಃ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – उदासीनानामपि चैवं सिद्धिः ।।**

ಒಂದು ವೇಳೆ ಶೂನ್ಯಕ್ಕೆ ಜಗತ್‌ಕಾರಣತ್ವವನ್ನು ಅಂಗೀಕರಿಸಿದರೆ, ಹೇಯಬುದ್ಧಿ ಹಾಗೂ ಉಪಾದೇಯ ಬುದ್ಧಿಗೆ ವಿಷಯವಾಗದ ಗಗನಕುಸುಮವು ಸೌರಭ್ಯ ಎಂಬ ಕಾರ್ಯಕ್ಕೆ ಕಾರಣವಾಗಬೇಕಾದೀತು.

ಅರ್ಥ -- ಏವಂ = ಒಂದು ವೇಳೆ ಶೂನ್ಯಕ್ಕೆ ಜಗತ್‌ಕಾರಣತ್ವವನ್ನು ಅಂಗೀಕರಿಸಿದರೆ, ಉದಾಸೀನಾನಾಮಪಿ = ಹೇಯಬುದ್ಧಿಗೆ ಹಾಗೂ ಉಪಾದೇಯಬುದ್ಧಿಗೆ ವಿಷಯವಾಗದ ಗಗನಕುಸುಮಾದಿಗಳಿಂದಲೂ ಸೌರಭ್ಯಾದಿಕಾರ್ಯಗಳ, ಸಿದ್ಧಿಃ = ಸಿದ್ಧಿಯು ಆಗಬೇಕಾದೀತು. ಇಲ್ಲದಿದ್ದರೆ ಶೂನ್ಯದಿಂದಲೂ ಕಾರ್ಯೋತ್ಪತ್ತಿಯು ಸಾಧ್ಯವಾಗುವುದಿಲ್ಲ ಎಂದರ್ಥ. ಅಂದರೆ ಆಕಾಶದಲ್ಲಿರುವ ಕುಸುಮವು ಅಸತ್ಯವಾಗಿದ್ದರೂ ಅದರ ಸುವಾಸನೆಯು ಎಲ್ಲರಿಗೂ ತಿಳಿಯಬೇಕಾದೀತು

## ಬ್ರಹ್ಮಸೂತ್ರಭಾಷ್ಯ

ಗಗನಕುಸುಮದಿಂದ ಪರಿಮಳ ಬರುತ್ತದೆಯೆ?

**ब्रह्मसूत्रभाष्यम् – ।। उदासीनानामपि चैवं सिद्धिः ।।२।।**

**असतः कारणत्वे उदासीनानां हेयोपादेयबुद्धिवर्जितानां खपुष्पादीनामपि सकाशात् कार्यसिद्धिः ।**

ಅನುವಾದ - ಶೂನ್ಯವು ಜಗತ್ತಿಗೆ ಕಾರಣವಾಗುವುದಾದರೆ ಗಗನಕುಸುಮವು ಜಗತ್ತಿಗೆ ಕಾರಣವಾಗಬೇಕಾದೀತು. ಶೂನ್ಯವು ಹೇಗೆ ಹಾನ ಮತ್ತು ಉಪಾದಾನಗಳ ಬುದ್ಧಿಗೆ ದೂರವಾಗಿದೆಯೋ ಅದರಂತೆ ಗಗನಕುಸುಮವು ಕೂಡ ಹಾನ ಮತ್ತು ಉಪಾದಾನಗಳ ಬುದ್ಧಿಗೆ ದೂರವಾಗಿದೆ. ಗಗನ ಕುಸುಮವು ಜಗತ್ತಿಗೆ ಕಾರಣವಲ್ಲವೆನ್ನುವುದಾದರೆ ಶೂನ್ಯವೂ ಕೂಡ ಜಗತ್ತಿಗೆ ಕಾರಣವಾಗುವುದಿಲ್ಲ.

ಪ್ರತಿಪದಾರ್ಥ -- ಬೇರೆಡೆ ಕಾಣದಿದ್ದರೂ ಶೂನ್ಯವು ಜಗತ್ತಿಗೆ ಕಾರಣವಾಗುತ್ತದೆ ಎಂದರೆ ಏನು ದೋಷ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅಸತಃ = ಶೂನ್ಯಕ್ಕೆ, ಕಾರಣತ್ವೇ = ಜಗತ್ಕಾರಣತ್ವ ಇರುವುದಾದರೆ, ಉದಾಸೀನಾನಾಂ = ಉಪೇಕ್ಷೆಗೆ ಅರ್ಹವಾದ, ಹೇಯೋಪಾದೇಯಬುದ್ಧಿವರ್ಜಿತಾನಾಂ = ಹೇಯತ್ವ ಉಪಾದೇಯತ್ವ ಬುದ್ಧಿಗೆ ವಿಷಯವಾಗದ, ಖಪುಷ್ಪಾದೀನಾಮಪಿ = ಗಗನಕುಸುಮ ಮುಂತಾದವುಗಳ, ಸಕಾಶಾತ್ = ದೆಸೆಯಿಂದಲೂ, ಕಾರ್ಯಸಿದ್ಧಿಃ = ಜಗತ್ತಿನ ಸೃಷ್ಟಿ ಕಾರ್ಯವು ಆಗಬೇಕಾದೀತು.

## ಶೂನ್ಯ-ಗಗನಕುಸುಮಗಳಿಗೆ ವ್ಯತ್ಯಾಸವೇನು?

**भाष्यम् – च शब्दान्न चेदन्यत्रापि न स्यात्, अविशेषात् ।।२।।**

ಅನುವಾದ - ಗಗನಕುಸುಮವು ಜಗತ್ತಿಗೆ ಕಾರಣವಾಗುವುದಿಲ್ಲವೆಂದರೆ ಶೂನ್ಯವೂ ಜಗತ್ತಿಗೆ ಕಾರಣವಾಗುವುದಿಲ್ಲ. ಗಗನಕುಸುಮಕ್ಕಿಂತ ಹೆಚ್ಚಿನ ವೈಶಿಷ್ಟ್ಯವು ಶೂನ್ಯದಲ್ಲಿರುವುದಿಲ್ಲ.

ಪ್ರತಿಪದಾರ್ಥ -- ನಚೇತ್ = ಗಗನಕುಸುಮ ಮುಂತಾದವುಗಳಿಂದ ಕಾರ್ಯವು ಆಗುವುದಿಲ್ಲವೆಂದರೆ, ಅನ್ಯತ್ರಾಪಿ = ಬೇರೆ ಶೂನ್ಯದ ವಿಷಯದಲ್ಲೂ, ನ ಸ್ಯಾತ್ = ಸೃಷ್ಟಿ ಕಾರ್ಯತ್ವವು ಉಪಪನ್ನ-ವಾಗುವುದಿಲ್ಲ. ಅವಿಶೇಷಾತ್ = ಶೂನ್ಯಕ್ಕೂ ಗಗನಕುಸುಮಕ್ಕೂ ಯಾವುದೇ ವಿಶೇಷವಿರುವುದಿಲ್ಲ.

## ಸತ್ತರ್ಕದೀಪಾವಳಿ

**सत्तर्कदीपावळिः – न हि शशभृङ्गात्किञ्चिदुत्पन्नं दृश्यते । अन्यथा वन्ध्यासुतादपि पुत्रोत्पत्तिः स्यात् इत्यर्थः ।**

ಅತ್ಯಂತ ಅಸತ್ತಾದ ಮೊಲದ ಕೊಂಬಿನಿಂದ ಯಾವುದೇ ಪದಾರ್ಥ ಹುಟ್ಟಿದ್ದು ಕಂಡಿಲ್ಲ. ಅದರಂತೆ ಅಸತ್ತಾದ ಶೂನ್ಯದಿಂದಲೂ ಕೂಡ ಜಗತ್ತು ಹುಟ್ಟಲು ಸಾಧ್ಯವಿಲ್ಲ. ಹಾಗೇನಾದರು ಹುಟ್ಟುವುದಾದರೆ ಬಂಜೆಯ ಮಗನಿಂದಲೂ ಪುತ್ರೋತ್ಪತ್ತಿಯು ಆಗಬೇಕಾಯಿತು.

## ತತ್ವಪ್ರದೀಪ

### 'ಉದಾಸೀನ' ಪದಕ್ಕೆ ಅಪೂರ್ವ ವ್ಯಾಖ್ಯಾನ

**तत्वप्रदीपः – उदासीनानामपि चैवं सिद्धिः ।। असतः कारणत्वाङ्गीकार उदासीनानां हेयोपादेयबुद्धिविषयत्वादुद्गत्याऽसीनानां खपुष्पादीनां सकाशादपि कार्यसिद्धिः । तथोदासीनानां हेयोपादेयबुद्धिरहितानामप्रवृत्तानां पुरुषाणामपि कार्यसिद्धिः ।**

ಅಸತ್ತು ಜಗತ್ತಿಗೆ ಕಾರಣವಾಗಿದೆ ಎಂದು ಅಂಗೀಕಾರ ಮಾಡಿದರೆ ಹೇಯೋಪಾದೇಯ ಬುದ್ಧಿಗೆ ವಿಷಯವಾಗದ ಗಗನಕುಸುಮಾದಿಗಳಿಂದಲೂ ಕಾರ್ಯಸಿದ್ಧಿಯು ಆಗಬೇಕಾಗುತ್ತದೆ. ಅದರಂತೆ ಹೇಯೋಪಾದೇಯ ಬುದ್ಧಿ ರಹಿತರಾದ ಪ್ರವೃತ್ತಿ ಮಾಡದ ಪುರುಷರಿಂದಲೂ ಕೂಡ ಕಾರ್ಯಸಿದ್ಧಿಯು ಆಗಬೇಕಾದೀತು.

ವಿವರಣೆ - ಸೂತ್ರದಲ್ಲಿ 'ಉದಾಸೀನಾನಾಮ್' ಎಂಬ ಪದಕ್ಕೆ 'ಉತ್ ಆಸೀನಾನಾಮ್' ಎಂಬುದಾಗಿ ಪದವಿಭಾಗವನ್ನು ಮಾಡಿ, ಪಂಡಿತಾಚಾರ್ಯರು ಅರ್ಥವನ್ನು ತಿಳಿಸಿದ್ದಾರೆ. ಉದಾಸೀನ ಎಂದರೆ 'ಉದ್ಗತ್ಯ ಆಸೀನ' ಎಂದರ್ಥ. ದಾಟಿ ಕುಳಿತಿದೆ ಎಂಬುದು ಇದರ ಅರ್ಥ. ಗಗನಕುಸುಮವು ಹೇಯಬುದ್ಧಿಯನ್ನು ಹಾಗೂ ಉಪಾದೇಯಬುದ್ಧಿಯನ್ನು ದಾಟಿ ಕುಳಿತಿದೆ. ಅರ್ಥಾತ್ ಹೇಯಬುದ್ಧಿಗೂ ವಿಷಯವಿಲ್ಲ. ಉಪಾದೇಯಬುದ್ಧಿಗೂ ವಿಷಯವಲ್ಲ ಎಂದರ್ಥ. ಹೀಗೆ ಸೂತ್ರದಲ್ಲಿರುವ 'ಉದಾಸೀನ' ಎಂಬ ಪದಕ್ಕೆ 'ಉದ್ಗತ್ಯ ಆಸೀನ 'ಎಂಬ ನಿಷ್ಪತ್ತಿಯಿಂದ ಗಗನಕುಸುಮ ಎಂಬರ್ಥವನ್ನು ತಿಳಿಸಿರುವುದು ಅಪೂರ್ವವಾಗಿದೆ.

## ತತ್ವಪ್ರಕಾಶಿಕಾ

### ಜಗತ್ಕಾರಣತ್ವವನ್ನು ಶೂನ್ಯಕ್ಕೆ ಹೇಳಬಹುದಲ್ಲವೆ?

**तत्वप्रकाशिका – नन्वदृष्टमपि जगत्कारणत्वं शून्यस्याभ्युपगतं चेत्को दोष इत्याशङ्कां परिहरत्सूत्रपन्यस्य व्याचष्टे – उदासीनानामिति ।।**

ಜಗತ್ಕಾರಣತ್ವವು ಅಸತ್‌ಪದಾರ್ಥಕ್ಕೆ ಎಲ್ಲಯೂ ಕಂಡಿಲ್ಲ. ಆದರೂ ಕೂಡ ಶೂನ್ಯಕ್ಕೆ ಜಗತ್ಕಾರಣತ್ವವನ್ನು ಅಂಗೀಕಾರ ಮಾಡಿದರೆ ಏನು ದೋಷ ? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಉದಾಸೀನಾನಾಮಪಿ' ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಶೂನ್ಯದಿಂದ ಜಗತ್ತು ಉತ್ಪತ್ತಿ ಆಗುತ್ತದೆಂಬ ವಿಷಯದಲ್ಲಿ ಪ್ರಮಾಣ ಇಲ್ಲವೆಂದು ಹೇಳಲಾಗದು. ಅನುಮಾನವೇ ಪ್ರಮಾಣವಾಗಿದೆ. ದೃಷ್ಟಾಂತ ಇಲ್ಲವೆಂಬ ದೋಷವಿಲ್ಲ. 'ವಿಮತಂ ಸಕಾರಣಕಂ ಕಾರ್ಯತ್ವಾತ್' ಎಂಬ ಅನುಮಾನದಿಂದ ಸಾಮಾನ್ಯವಾಗಿ ಕಾರಣವು ಇದೆ ಎಂದು ಸಿದ್ಧವಾಗಿದೆ. ಅನಂತರ 'ಕಾರಣಂ ಪ್ರಳಯೇ ಅಸದ್ ಭವಿತುಂ ಅರ್ಹತಿ ವಸ್ತುತ್ವಾತ್' ವಸ್ತುವಾದ್ದರಿಂದ ಕಾರಣವು ಪ್ರಳಯಕಾಲದಲ್ಲಿ ಇರುತ್ತದೆಂದು ಸತ್ವವನ್ನು ನಿಷೇಧ ಮಾಡಿ ಪರಿಶೇಷಾತ್ ಅಸತ್ತೇ ಜಗತ್ಕಾರಣವಾಗಿದೆ ಎಂದು ಸಾಧಿಸಬಹುದು ಎಂಬ ಕಾರಣದಿಂದ ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಿದ್ದಾನೆ. (ಭಾವಭೋಧ)

### ಗಗನಕುಸುಮಕ್ಕೂ ಸೌರಭ್ಯ ಒಪ್ಪಬೇಕಾದೀತು

**तत्वप्रकाशिका – यद्यदृष्टमप्यसतः कारणत्वं कल्प्येत । एवं तर्हि खपुष्पादीनामपि सकाशात्सौरभ्यादिसिद्धिः स्यात् । न च साऽभ्युपगन्तुं शक्यते । तेषां हेयोपादेयबुद्धिविषयतावर्जितत्वादिति भावः ।**

ಬೇರೆಲ್ಲೂ ಕಾಣದಿದ್ದರೆ ಅಸತ್ ಪದಾರ್ಥವು ಜಗತ್ತಿಗೆ ಕಾರಣವಾಗಿದೆ ಎಂಬುದನ್ನು ಕಲ್ಪನೆ ಮಾಡುವುದಾದರೆ ಗಗನಕುಸುಮದಿಂದಲೂ ಕೂಡ ಸೌರಭ್ಯವು ಸಿದ್ಧವಾಗಬೇಕಾಗುತ್ತದೆ.

ಆದರೆ ಅದನ್ನು ಒಪ್ಪಲು ಸಾಧ್ಯವೇ ಇಲ್ಲ. ಗಗನಕುಸುಮ ಮೊದಲಾದ ಅಸತ್‌ಪದಾರ್ಥವು ಸ್ವೀಕಾರಕ್ಕಾಗಲಿ ಪರಿತ್ಯಾಗ ಮಾಡುವುದಕ್ಕಾಗಲಿ ಬುದ್ಧಿಗೆ ವಿಷಯವಲ್ಲ.

## ಭಾವದೀಪ

**भावदीपः – ।। उदासीनानामपि चैवं सिद्धिः ।।२७।।** सौत्रैवंशब्दार्थो भाष्ये असतः कारणत्व इति दर्शयत् तदापादनानुगुणं व्याख्याति – **यद्यदृष्टमपीति ।।** व्याख्येयस्य सौत्रैवंशब्दस्यानुवादः एवं तर्हीति । सूत्रे खपुष्पादीनामित्यनुक्त्वोदासीनानामित्युक्तस्य भावं वक्तुं तद्व्यावर्त्यमाह – **न च सेति ।।** एतच्छङ्कानिवर्तकमुदासीनानामित्यस्य व्याख्यानरूपं भाष्यस्थं हेयोपादेयबुद्धिवर्जितानामिति हेतुगर्भं विशेषणमयुक्तम्। तद्वर्जितानामपि तन्त्वादीनां हेतुत्वादित्याशङ्क्यार्थमाह – **तेषामिति ।।** तन्त्वादयस्तु तद्बुद्धिविषया एवेति न दोष इति भावः।

ಸೂತ್ರದಲ್ಲಿರುವ 'ಏವಂ' ಶಬ್ದದ ಅರ್ಥವನ್ನು ಭಾಷ್ಯದಲ್ಲಿ 'ಅಸತಃ ಕಾರಣತ್ವೇ' ಎಂಬುದಾಗಿ ಹೇಳಿದ್ದಾರೆ. ಈ ಆಪಾದನೆಗೆ ಅನುಗುಣವಾಗಿ ವ್ಯಾಖ್ಯಾನ ಮಾಡಲು 'ಯದಿ ಅದೃಷ್ಟಮಪಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಸೂತ್ರದಲ್ಲಿರುವ 'ಏವಂ' ಎಂಬ ಪದವು ವ್ಯಾಖ್ಯೇಯವಾಗಿದೆ. ಅದರ ಅನುವಾದವನ್ನು 'ಏವಂ ತರ್ಹಿ' ಇತ್ಯಾದಿಯಾಗಿ ಟೀಕೆಯಲ್ಲಿ ಮಾಡಿರುತ್ತಾರೆ. ಸೂತ್ರದಲ್ಲಿ 'ಖಪುಷ್ಪಾದೀನಾಮ್' ಎಂದು ಹೇಳದೆ 'ಉದಾಸೀನಾನಾಮ್' ಎಂದೇಕೆ ಹೇಳಿದ್ದಾರೆ? ಎಂದರೆ ಸೂತ್ರದಲ್ಲಿರುವ ಪದದ ಅಭಿಪ್ರಾಯವನ್ನು ತಿಳಿಸುವ ಮೂಲಕ ಪರಿಹಾರವಾಗುವ ವಿಷಯವನ್ನು 'ನಚ ಸಾ' ವಾಕ್ಯದಿಂದ ತಿಳಿಸಿರುತ್ತಾರೆ. ಈ ಶಂಕೆಯ ಪರಿಹಾರಕ್ಕಾಗಿ 'ಉದಾಸೀನಾನಾಮ್' ಎಂಬುದಕ್ಕೆ ವ್ಯಾಖ್ಯಾನ ಮಾಡಬೇಕಾದರೆ ಭಾಷ್ಯದಲ್ಲಿ 'ಹೇಯೋಪಾದೇಯಬುದ್ಧಿವರ್ಜಿತಾನಾಮ್' ಎಂಬ ಹೇತುಗರ್ಭವಿಶೇಷಣವನ್ನು ಹೇಳಿರುತ್ತಾರೆ. ಇದು ತಪ್ಪು. ಏಕೆಂದರೆ ಹೇಯೋಪಾದೇಯ ಬುದ್ಧಿವರ್ಜಿತವಾದ ತಂತು ಮೊದಲಾದವುಗಳು ಕಾರ್ಯದ ಉತ್ಪತ್ತಿಗೆ ಕಾರಣಗಳಾಗಿವೆ ಅಲ್ಲವೇ? ಈ ಆಕ್ಷೇಪಕ್ಕೆ 'ತೇಷಾಂ' ಎಂಬ ವಾಕ್ಯವು ಉತ್ತರಿಸುತ್ತಿದೆ. ತಂತು ಮೊದಲಾದವುಗಳು ಹೇಯ ಅಥವಾ ಉಪಾದೇಯ ಬುದ್ಧಿಗೆ ವಿಷಯಗಳೇ ಆಗಿವೆ. ತತ್‌ವರ್ಜಿತತ್ವವು ಅವುಗಳಲ್ಲಿ ಬರುವುದಿಲ್ಲ.

**ವಿವರಣೆ** - ಅಸತ್ ಪದಾರ್ಥವು ಜಗತ್ತಿಗೆ ಕಾರಣವಾಗಲು ಸಾಧ್ಯವಿಲ್ಲ. ಹಾಗಾದಲ್ಲಿ ಅತ್ಯಂತ ಅಸತ್‌ಪದಾರ್ಥವಾದ ಗಗನಕುಸುಮದಿಂದಲೂ ಪರಿಮಳ ಎಂಬ ಕಾರ್ಯವು ಉಂಟಾಗಬೇಕಾಗುತ್ತದೆ. ಆದರೆ ಯಾರೂ ಕೂಡ ಗಗನಕುಸುಮದಿಂದ ಪರಿಮಳ ಹುಟ್ಟುತ್ತದೆಂದು ಅಂಗೀಕಾರ ಮಾಡಿಲ್ಲ. ಈ ಗಗನಕುಸುಮವು ಹೇಯಬುದ್ಧಿಗಾಗಲೀ, ಉಪಾದೇಯಬುದ್ಧಿಗಾಗಲೀ ವಿಷಯವಲ್ಲದ ಕಾರಣ ಅತ್ಯಂತ ಅಸತ್ತಾಗಿದೆ. ಹೀಗೆ ಭಾಷ್ಯದಲ್ಲಿ ಗಗನಕುಸುಮವು ಅಸತ್‌ಪದಾರ್ಥವೆನ್ನಲು ಹೇಯೋಪಾದೇಯಬುದ್ಧಿವರ್ಜಿತತ್ವವನ್ನು ಕಾರಣವನ್ನಾಗಿ ಹೇಳಿದ್ದಾರೆ. ಹಾಗಾದರೆ ಹೇಯೋಪಾದೇಯಬುದ್ಧಿವರ್ಜಿತತ್ವವು ತಂತುಗಳಲ್ಲೂ ಇದೆ. ಗಗನಕುಸುಮದಂತೆ ಈ ತಂತುಗಳಿಂದಲೂ ಕೂಡ ಪಟ ಎಂಬ ಕಾರ್ಯವು ಆಗದೇ ಇರಬೇಕಾದೀತು. ಈ ಆಶಂಕೆಗೆ 'ಹೇಯೋಪಾದೇಯಬುದ್ಧಿವಿಷಯ ವರ್ಜಿತತ್ವಾತ್' ಎಂದು ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಹೇಯಬುದ್ಧಿ, ಉಪಾದೇಯ ಬುದ್ಧಿಗಳು ತಂತುಗಳಲ್ಲಿ ಇರುವುದಿಲ್ಲ. ಆದರೆ ಹೇಯಬುದ್ಧಿಗೆ, ಉಪಾದೇಯ ಬುದ್ಧಿಗೆ ಆ ತಂತುಗಳು ವಿಷಯಗಳಾಗಿವೆ. ತದ್‌ವರ್ಜಿತತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ತಂತು ಮೊದಲಾದವುಗಳು ಸತ್ಯಪದಾರ್ಥವಾಗಿವೆ. ಗಗನಕುಸುಮವು ಅಸತ್ಯ-ಪದಾರ್ಥವಾಗಿದೆ.

### ಗಗನಕುಸುಮಕ್ಕೂ ಶೂನ್ಯಕ್ಕೂ ಏನೂ ವ್ಯತ್ಯಾಸವಿಲ್ಲ

**तत्वप्रकाशिका – खपुष्पादीनामकारणत्वेऽपि शून्यादेव जगदुत्पत्तौ को दोष इत्यत आह – चशब्दादिति ।। 'इति सूचितम्' इति शेषः । अन्यत्र = शून्यात् । असत्त्वाविशेषादिति भावः ।।**

ಗಗನಕುಸುಮಾದಿಗಳು ಸೌರಭ್ಯಾದಿಗಳಿಗೆ ಕಾರಣವಾಗದಿದ್ದರೂ ಶೂನ್ಯವು ಜಗತ್ತಿನ ಉತ್ಪತ್ತಿಗೆ ಕಾರಣದರೆ ಏನು ದೋಷ? ಈ ಪ್ರಶ್ನೆಗೆ 'ಚಶಬ್ದಾತ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಇತಿ ಸೂಚಿತಂ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಅನ್ಯತ್ರ' ಎಂಬ ಪದಕ್ಕೆ ಶೂನ್ಯದಿಂದ ಎಂದರ್ಥ. ಗಗನಕುಸುಮಕ್ಕಿಂತ ಶೂನ್ಯದಲ್ಲಿ ಅಸತ್ವವು ವಿಲಕ್ಷಣವಾಗಿರುವುದಿಲ್ಲ ಎಂದಭಿಪ್ರಾಯ.

**भावदीपः** – कार्यसिद्धिपदान्वयायान्यत्रेति पदं व्याचष्टे॥ **अन्यत्रेति**॥ अन्यस्मात् शून्यादिति यावत्॥ २७ ॥

'ಕಾರ್ಯಸಿದ್ಧಿ' ಎಂಬ ಪದದ ಅನ್ವಯಕ್ಕಾಗಿ' ಅನ್ಯತ್ರ' ಎಂಬ ಭಾಷ್ಯದಲ್ಲಿರುವ ಪದವನ್ನು ವ್ಯಾಖ್ಯಾನ ಮಾಡಲು 'ಅನ್ಯತ್ರ' ಎಂಬ ವಾಕ್ಯವು ಹೊರಟಿದೆ. ಇಲ್ಲಿ ಅನ್ಯತ್ರ ಎಂದರೆ 'ಅನ್ಯಸ್ಮಾತ್' ಶೂನ್ಯಪದಾರ್ಥದ ದೆಸೆಯಿಂದ ಎಂಬರ್ಥವನ್ನು ತಿಳಿಯಬೇಕು.

ವಿವರಣೆ - 'ಉದಾಸೀನಾನಾಮಪಿ' ಇತ್ಯಾದಿ ಸೂತ್ರದಲ್ಲಿ 'ಚ' ಶಬ್ದವು ಯುಕ್ತಿಯನ್ನು ಸೂಚನೆ ಮಾಡುತ್ತಿದೆ. ಗಗನಕುಸುಮಸೌರಭ್ಯ ಎಂಬ ಕಾರ್ಯವು ಸಿದ್ಧವಾಗದಿದ್ದರೆ ಶೂನ್ಯದಿಂದಲೂ ಕೂಡ ಜಗದುತ್ಪತ್ತಿಯನ್ನು ಒಪ್ಪಬಾರದು. ಏಕೆಂದರೆ ಗಗನಕುಸುಮಕ್ಕಿಂತ ಶೂನ್ಯದಲ್ಲಿ ಯಾವುದೇ ವೈಲಕ್ಷಣ್ಯವಿಲ್ಲ.

### ಬ್ರಹ್ಮಸೂತ್ರ

**ब्रह्मसूत्रम् – नाभाव उपलब्धेः ॥**

ಸಮಸ್ತ ಜಗತ್ತು ಶೂನ್ಯದಲ್ಲಿ ಆರೋಪಿತವೆಂದು ಹೇಳಬಾರದು. ನಾವು ಅನುಭವಿಸುತ್ತಿರುವ ಜಗತ್ತು ಸತ್ಯವಾಗಿದೆ ಎಂದು ಸಿದ್ಧವಾಗಿದೆ.

ಅರ್ಥ -- ಜಗತ್ = ಸಮಸ್ತ ಜಗತ್ತು, ಅಭಾವಃ ನ = ಶೂನ್ಯದಲ್ಲಿ ಆರೋಪಿತವಲ್ಲ.
ಏಕೆಂದರೆ ಉಪಲಬ್ಧೇಃ = ಸತ್ಯವಾಗಿದೆ ಎಂದು ಪ್ರತ್ಯಕ್ಷಸಿದ್ಧವಾಗಿರುವುದರಿಂದ.

### ಬ್ರಹ್ಮಸೂತ್ರಭಾಷ್ಯ

### ಕಣ್ಣಿಗೆ ಕಾಣುವ ಜಗತ್ತು ಶೂನ್ಯವಲ್ಲ

**ब्रह्मसूत्रभाष्यम् –॥ नाभाव उपलब्धेः ॥३॥**

**न च जगदेव शून्यमिति वाच्यम् । दृष्टत्वात् ॥३॥**

ಅನುವಾದ - ಜಗತ್ತೇ ಶೂನ್ಯವಾಗಿ ಕಾಣಿಸುತ್ತದೆಂದು ಹೇಳಬಾರದು. ಏಕೆಂದರೆ ಜಗತ್ತು ಸತ್ಯವೆಂದು ಅನುಭವಸಿದ್ಧವಾಗಿದೆ.

ಪ್ರತಿಪದಾರ್ಥ -- ಶುಕ್ತಿಯು ರಜತವಾಗಿ ತೋರುವಂತೆ ಶೂನ್ಯವೇ ಜಗತ್ ರೂಪದಲ್ಲಿ ಕಾಣಿಸುತ್ತಿದೆ ಎಂಬ ಆಶಂಕೆಯನ್ನು ಪರಿಹರಿಸುತ್ತಿದ್ದಾರೆ. ಶೂನ್ಯಮೇವ = ಶೂನ್ಯವೇ, ಜಗತ್ = ಜಗದಾಕಾರವಾಗಿ ಕಾಣಿಸುತ್ತಿದೆ. ಇತಿ = ಹೀಗೆ, ನ ಚ ವಾಚ್ಯಮ್= ಆಕ್ಷೇಪ ಮಾಡಬಾರದು. ಏಕೆಂದರೆ ದೃಷ್ಟತ್ವಾತ್ = ಪ್ರತಿಕ್ಷಣವು ಸತ್ಯವೆಂದು ಅನುಭವ ಸಿದ್ಧವಾಗಿರುವುದರಿಂದ.

### ಸತ್ತರ್ಕದೀಪಾವಳಿ

**सत्तर्कदीपावळिः – शून्यात्सत्यजगदसम्भवेऽपि मिथ्याजगत्किं न स्यात् इत्याशङ्कायामाह - नाभाव इत्यादिना ।**

ಶೂನ್ಯದಿಂದ ಸತ್ಯಭೂತವಾದ ಜಗತ್ತು ಹುಟ್ಟದೇ ಇರಬಹುದು. ಮಿಥ್ಯಾಭೂತವಾದ ಜಗತ್ತು ಏಕೆ ಹುಟ್ಟಬಾರದು ? ಈ ಆಶಂಕೆಯ ಪರಿಹಾರಕ್ಕೋಸ್ಕರ 'ನಾಭಾವಃ' ಇತ್ಯಾದಿ ಭಾಷ್ಯವು ಪ್ರವೃತ್ತವಾಗಿದೆ.

### ತತ್ವಪ್ರದೀಪ

ಸತ್ಯಜಗತ್ತು ಶೂನ್ಯವಾಗುದು

**तत्वप्रदीपः – यच्चोक्तं, शून्याध्यस्तं जगत्तत्त्वतो नास्त्येवेति । अत्रोच्यते नाभाव उपलब्धेः । न च जगदेव शून्यमिति वाच्यम् । दृष्टत्वात् सत्त्वेनोपलब्धेः। असदेव चेत्कथं दृश्येत ।**

ಬೌದ್ಧರು ಹೀಗೆ ಹೇಳುತ್ತಾರೆ - ಸಮಸ್ತ ಜಗತ್ತು ಶೂನ್ಯದಲ್ಲಿ ಆರೋಪಿತವಾಗಿದೆ. ಪಾರಮಾರ್ಥಿಕವಾಗಿ ಜಗತ್ತು ಇರುವುದೇ ಇಲ್ಲ ಎಂದು.

ಇವರ ವಾದಕ್ಕೆ ಉತ್ತರವನ್ನು ನೀಡುವುದಕ್ಕಾಗಿ 'ನಾಭಾವ ಉಪಲಬ್ಧೇಃ' ಎಂಬ ಸೂತ್ರ ಹೊರಟಿದೆ. ಸಮಸ್ತ ಜಗತ್ತು ಶೂನ್ಯವೆಂದು ಹೇಳಬಾರದು. ಏಕೆಂದರೆ ಸತ್ಯವಾಗಿದೆ ಎಂದು ತಿಳಿಯುತ್ತಿದೆ. ಒಂದು ವೇಳೆ ಅಸತ್ತಾದರೆ ಹೇಗೆ ತಾನೇ ಸತ್ಯವೆಂದು ತಿಳಿಯಲು ಸಾಧ್ಯವಾಗುತ್ತಿತ್ತು.

ವಿವರಣೆ - ಸಮಸ್ತ ಜಗತ್ತು ಶೂನ್ಯವೇ ಆಗಿದೆ ಎಂಬುದು ಬೌದ್ಧರ ವಾದ. ಅಭಿಪ್ರಾಯವೇನೆಂದರೆ ಶೂನ್ಯವು ಜಗತ್ತಾಗಿ ಕಾಣಿಸುತ್ತಿದೆ. ಶೂನ್ಯಕ್ಕಿಂತ ಅತಿರಿಕ್ತವಾದ ಪಾರಮಾರ್ಥಿಕವಾಗಿ ಜಗತ್ತು ಇರುವುದಿಲ್ಲ. ಆದ್ದರಿಂದ ಶೂನ್ಯದಲ್ಲಿ ಯಾವುದೇ ಧರ್ಮವಿಲ್ಲ. ಶೂನ್ಯಸ್ವರೂಪವಾದ ಜಗತ್ತನಲ್ಲೂ ಕೂಡ ಯಾವುದೇ ಧರ್ಮವಿಲ್ಲ. ಇಷ್ಟು ಬೌದ್ಧರ ಆಕ್ಷೇಪ. ಆದರೆ ಬೌದ್ಧರ ಈ ವಾದ ಸರಿಯಲ್ಲ. ಸಮಸ್ತ ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುಗಳನ್ನೂ ಸತ್ಯಭೂತವೆಂದೇ ನಾವು ತಿಳಿಯುತ್ತಿದ್ದೇವೆ. ಬೌದ್ಧರು ಹೇಳುವಂತೆ ಸಮಸ್ತ ಜಗತ್ತೂ ಶೂನ್ಯವಾದರೆ ಅಸತ್ ಎಂದಾಯಿತು. ಅಸತ್ಯವನ್ನು ನೋಡುವುದಾಗಲೀ, ಸತ್ಯವೆಂದು ವ್ಯವಹರಿಸುವುದಾಗಲೀ ಹೇಗೆ ಸಾಧ್ಯವಾಗುತ್ತದೆ ? ಆದ್ದರಿಂದ ಬೌದ್ಧರ ಈ ವಾದ ತಪ್ಪು.

### ತತ್ವಪ್ರಕಾಶಿಕಾ

### ಶೂನ್ಯದಲ್ಲಿ ಜಗತ್ತು ಅಧ್ಯಸ್ತ

**तत्वप्रकाशिका – भवेदेतद्दूषणं यदि शून्यतत्वात्परमार्थतो मृदो घट इव जगदुत्पद्येत । नैतदस्ति। संवृतिवशाच्छून्यमेव जगदाकारेण विवर्तत इत्यभ्युपगमात् । न हि शून्ये जगदध्यस्तमित्यत्रोक्तदोषप्रसरः । असत एव रजताकारेण प्रतीयमानत्वादित्याशङ्कां परिहरत्सूत्रं पठित्वा व्याचष्टे ।। नेति ।।**

ನೀವು ಮಾಡಿದ ಆಕ್ಷೇಪವು ಯುಕ್ತವಾಗುತ್ತಿತ್ತು. ಒಂದುವೇಳೆ ಶೂನ್ಯತತ್ವದಿಂದ ಪಾರಮಾರ್ಥಿಕವಾಗಿ ಮಣ್ಣಿನಿಂದ ಘಟವು ಹುಟ್ಟುವಂತೆ ಜಗತ್ತು ಹುಟ್ಟುತ್ತದೆ ಎಂದು ಹೇಳಿದ್ದರೆ; ಆದರೆ ನಾವು ಹಾಗೆ ಹೇಳುತ್ತಿಲ್ಲ. ಸಂವೃತಿಯ ಅಧೀನವಾಗಿ ಶೂನ್ಯವೇ ಜಗತ್ತಿನ ಆಕಾರದಲ್ಲಿ ವಿವರ್ತವಾಗುತ್ತಿದೆ ಎಂದು ಅಂಗೀಕರಿಸಿದ್ದೇವೆ. ಶೂನ್ಯದಲ್ಲಿ ಜಗತ್ತು ಆರೋಪಿತ ಎಂದಾಗ

ಹಿಂದೆ ಹೇಳಿದ ದೋಷಕ್ಕೂ ಅವಕಾಶವಿಲ್ಲ. ಅಸತ್ತೇ ರಜತಾಕಾರದಿಂದ ಪ್ರತೀಯಮಾನ-ವಾಗುವುದು ಕಂಡಿದೆ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ನಾಭಾವ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಶೂನ್ಯವೇ ಜಗದಾಕಾರದಿಂದ ಪರಿಣಾಮ ಹೊಂದುತ್ತದೆಂದು ಹೇಳುವ ಇವರು ನಿರಧಿಷ್ಠಾನಭ್ರಮೆಯನ್ನು ಒಪ್ಪುತ್ತಾರೆ. ಆದ್ದರಿಂದ ಶೂನ್ಯದಲ್ಲಿ ಜಗತ್ತು ಆರೋಪಿತವಾಗಿದೆ ಎಂಬುದು ಇವರ ವಾದ. ಇದಕ್ಕೆ ಅಧಿಷ್ಠಾನದ ಅವಶ್ಯಕತೆ ಇರುವುದಿಲ್ಲ. 'ಅಸತ್ತಾದ ಶುಕ್ತಿಯೇ ರಜತರೂಪದಲ್ಲಿ ಪರಿಣಾಮ ಹೊಂದಿದಂತೆ ಇಲ್ಲೂ ಕೂಡ ತಿಳಿಯಬೇಕು' ಎಂಬುದು ಪೂರ್ವಪಕ್ಷಿವಾದಿಗಳ ಸಮರ್ಥನೆ.

ಶೂನ್ಯವೇ ಜಗತ್ತು

**तत्वप्रकाशिका – शून्यमेव जगदाकारेणावभाति न परमार्थतो जगदस्तीत्ययुक्तम् सदिति दृष्टत्वादित्यर्थः । न चासदेव रजताकारेणावभातीति युक्तम् । नेदं रजतं किं तु शुक्तिरेवेति बाधविरोधात् ।।**

ಶೂನ್ಯವೇ ಜಗತ್ತಾಗಿ ತೋರುತ್ತದೆ. ಪಾರಮಾರ್ಥಿಕವಾಗಿ ಶೂನ್ಯ ಎಂಬುದೇ ಇಲ್ಲ. ಎಂಬುದು ಅಯುಕ್ತ. ಏಕೆಂದರೆ ಜಗತ್ತು ಸತ್ಯವೆಂದು ತಿಳಿಯುತ್ತಿದೆ.

ಅಸತ್ತೇ ರಜತಾಕಾರದಲ್ಲಿ ತೋರುತ್ತಿದೆಯೆಂದು ಹೇಳಬಾರದು. 'ನೇದಂ ರಜತಂ ಕಿಂತು ಶುಕ್ತಿರೇವ' ಇದು ಬೆಳ್ಳಿ ಅಲ್ಲ. ಕಪ್ಪೇಚಿಪ್ಪೇ ಆಗಿದೆ ಎಂಬ ಬಾಧಕಜ್ಞಾನ ಇರುವುದರಿಂದ ಅಸತ್ತು ರಜತರೂಪದಲ್ಲಿ ಪರಿಣಾಮವನ್ನು ಹೊಂದಿಲ್ಲ.

ಭಾವದೀಪ

**भावदीपः – ।। नाभाव उपलब्धेः ।।२८।।** विवर्तते विपरीतज्ञानविषयो भवतीत्यर्थः। न चादृष्टिविरोध इत्यत आह – **असत एवेति।।** तन्मते भ्रान्तेर्निरधिष्ठानत्वादसत एव रजताकारेणेत्युक्तम्।

'ವಿವರ್ತತೇ' ಎಂಬ ಪದಕ್ಕೆ ವಿಪರೀತಜ್ಞಾನಕ್ಕೆ ವಿಷಯವಾಗುತ್ತದೆಂದರ್ಥ. ಎಲ್ಲೂ ಕೂಡ ಅಸತ್ ಪ್ರತೀಯಮಾನವಾದದ್ದು ಕಂಡಿಲ್ಲವಲ್ಲ ? ಎಂಬ ಪ್ರಶ್ನೆಗೆ 'ಅಸತ ಏವ' ಎಂಬ ಪದದಿಂದ ಉತ್ತರಿಸುತ್ತಿದ್ದಾರೆ. ಈ ಶೂನ್ಯಮತದಲ್ಲಿ ಭ್ರಾಂತಿಯನ್ನು ನಿರಧಿಷ್ಠಾನ ಎಂದು ಒಪ್ಪುತ್ತಾರೆ. ಆದ್ದರಿಂದ ಅಸತ್ತೇ ರಜತಾಕಾರವಾಗಿ ಹೊಂದಿದೆಯೆಂದು ಟೀಕೆಯಲ್ಲಿ ಹೇಳಿದ್ದಾರೆ.

**ಭಾವದೀಪಃ** – ಭಾಷ್ಯಸ್ಥೈವಕಾರಾನ್ವಯಂ ವದನ್ ತದ್ವ್ಯಾವರ್ತ್ಯಂ ದರ್ಶಯತಿ – **ಶೂನ್ಯಮೇವೇತಿ** ।। ದೃಷ್ಟಾನ್ತಂ ನಿರಾಹ – **ನ ಚೇತಿ** ।। **ನೇದಮಿತಿ** ।। ತಥಾ ಚ ಸದೇವಾನ್ಯಾಕಾರೇಣ ಪ್ರತೀಯತೇ ನ ತ್ವಸತ್। ಯೇನ ತದ್ದೃಷ್ಟಾನ್ತೇನೇಹಾಪಿ ತಥಾ ಸ್ಯಾದಿತಿ ಭಾವಃ।। ೨೮ ।।

ಭಾಷ್ಯದಲ್ಲಿರುವ ಏವಕಾರಕ್ಕೆ ಅನ್ವಯವನ್ನು ತೋರಿಸುತ್ತಾ ಇದರಿಂದ ಪರಿಹಾರವಾಗುವ ಆಕ್ಷೇಪವನ್ನು 'ಶೂನ್ಯಮೇವ' ಎಂಬ ವಾಕ್ಯದಿಂದ ಉಪಸ್ಥಾಪನೆ ಮಾಡಿದ್ದಾರೆ. ದೃಷ್ಟಾಂತದ ನಿರಾಕರಣೆಗಾಗಿ 'ನ ಚ' ಇತ್ಯಾದಿ ವಾಕ್ಯವು ಪ್ರವೃತ್ತವಾಗಿವೆ. 'ನೇದಮ್' ಇತ್ಯಾದಿಯಾಗಿ ಹೇಳಿದ್ದರಿಂದ ಸತ್‌ಪದಾರ್ಥವೇ ಮತ್ತೊಂದು ರೂಪದಲ್ಲಿ ತೋರುತ್ತದೆ. ಅಸತ್‌ಪದಾರ್ಥವು ಮತ್ತೊಂದು ರೂಪದಲ್ಲಿ ತೋರುವುದಿಲ್ಲ ಎಂದು ತಿಳಿಯುತ್ತದೆ. ಹಾಗೇನಾದರೂ ಅಸತ್‌ಪದಾರ್ಥವು ಮತ್ತೊಂದು ರೂಪದಿಂದ ತೋರಿದಲ್ಲಿ ಆದರ ದೃಷ್ಟಾಂತದಿಂದ ಪ್ರಕೃತದಲ್ಲೂ ಕೂಡ ಶೂನ್ಯವೇ ಜಗದಾಕಾರವಾಗಿ ತೋರುತ್ತದೆಂದು ಹೇಳಬಹುದಿತ್ತು.

## ಬ್ರಹ್ಮಸೂತ್ರ

### 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಎಂಬ ಸೂತ್ರ ವ್ಯಾಖ್ಯಾನ

**ಬ್ರಹ್ಮಸೂತ್ರಮ್ – ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ।।**

ಸ್ವಪ್ನವು ಹೇಗೆ ಮಿಥ್ಯಾಭೂತವೋ, ಅದರಂತೆ ಜಗತ್ತೂ ಕೂಡ ಮಿಥ್ಯಾಭೂತವಾಗಿದೆ ಎಂದು ಹೇಳಬಾರದು. ಏಕೆಂದರೆ ಸ್ವಪ್ನದ ಅನಂತರ ಬಾಧಜ್ಞಾನವು ಬರುವಂತೆ ಜಗತ್ತಿನ ವಿಷಯದಲ್ಲಿ ಬಾಧಜ್ಞಾನವನ್ನು ಹೇಳಲು ಸಾಧ್ಯವಿಲ್ಲ.

ಅರ್ಥ -- ಜಗತ್ = ಸಮಸ್ತ ಜಗತ್ತು, ಸ್ವಪ್ನಾದಿವತ್ = ಸ್ವಾಪ್ನವಸ್ತುಗಳಲ್ಲಿ ಜಾಗ್ರತ್ ಪದಾರ್ಥಗಳು ಆರೋಪಿತವಾದಂತೆ, ನ = ಅಸತ್ ಎಂದು ಹೇಳಬಾರದು. ಏಕೆಂದರೆ

ವೈಧರ್ಮ್ಯಾಚ್ಚ = ಎಚ್ಚರವಾದ ಮೇಲೆ ಸ್ವಪ್ನದಲ್ಲಿ ಕಂಡ ಪದಾರ್ಥಗಳು ಜಾಗ್ರದವಸ್ಥೆಯಲ್ಲಿ ಇರುವವುಗಳಲ್ಲ ಎಂಬ ಬಾಧಜ್ಞಾನವು ಬರುತ್ತದೆ. ಆದಕ್ಕಿಂತ ವೈಲಕ್ಷಣ್ಯವು ಜಗತ್ತಿನಲ್ಲಿ ಇರುವುದರಿಂದ ಜಗತ್ತನ್ನು ಅಸತ್ಯವೆಂದು ಹೇಳಬಾರದು.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಅಸದಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಸ್ವಪ್ನದಂತೆ ಜಗತ್ತಲ್ಲ

**ब्रह्मसूत्रभाष्यम् – ।। वैधर्म्याच्च न स्वप्नादिवत् ।।४।।**

**न च दृष्टस्यापि स्वप्नादिवदभावः । तस्योत्तरकाले स्वप्नोऽयं नायं सर्प इत्याद्यनुभवात् । न चात्र तादृशं प्रमाणमस्ति ।।४।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये असदधिकरणम् ।। ८ ।।**

ಅನುವಾದ - ಜಗತ್ತು ಸತ್ಯವೆಂದು ತಿಳಿಯಲ್ಪಟ್ಟರೂ ಸ್ವಾಪ್ನಪದಾರ್ಥದಂತೆ ಅಸತ್ಯವೇಕಾಗಿರಬಾರದು? ಹೀಗೆ ಪ್ರಶ್ನಿಸಬಾರದು. ಎಚ್ಚರವಾದ ಮೇಲೆ ಇದು ಸ್ವಪ್ನ ಹೊರತು ಸರ್ಪವಲ್ಲ ಎಂಬ ಬಾಧಜ್ಞಾನ ಬರುತ್ತದೆ. ಆದರೆ ಇಲ್ಲಿ ಹಾಗೆ ಬಾಧಜ್ಞಾನ ಬರುತ್ತಿಲ್ಲ. ಆದ್ದರಿಂದ ಜಗತ್ತನ್ನು ಅಸದ್‌ರೂಪ ಎಂದು ಹೇಳಬಾರದು. ಪ್ರಕೃತ ಅಂಥ ಯಾವುದೇ ಪ್ರಮಾಣವಿರುವುದಿಲ್ಲ.

ಪ್ರತಿಪದಾರ್ಥ -- ಜಗತ್ತು ಸತ್ಯವಾಗಿ ಕಂಡರೂ ಸ್ವಾಪ್ನಪದಾರ್ಥದಂತೆ ಏಕೆ ಅಸತ್ಯವಾಗಬಾರದು ? ಎಂಬ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ. ದೃಷ್ಟಸ್ಯಾಪಿ = ಜಗತ್ತು ಸತ್ಯವೆಂದು ಕಾಣಿಸುತ್ತಿದ್ದರೂ, ಸ್ವಾಪ್ನಾದಿವತ್ = ಸ್ವಾಪ್ನಪದಾರ್ಥಗಳಂತೆ, ಅಭಾವಃ

= ಇರುವುದಿಲ್ಲ. ಹೀಗೆ ನಚ = ಹೇಳಬಾರದು. ಏಕೆಂದರೆ ತಸ್ಯ = ಆ ಸ್ವಾಪ್ನಪದಾರ್ಥವು, ಉತ್ತರಕಾಲೇ = ಎಚ್ಚರವಾದ ಮೇಲೆ, ಸ್ವಪ್ನೋऽಯಂ = ಇದು ಸ್ವಪ್ನ, ನಾಯಂ ಸರ್ಪಃ = ಹೊರತು ಸರ್ಪವಲ್ಲ. ಇತ್ಯಾದ್ಯನುಭವಾತ್ = ಇದೇ ಮೊದಲಾದ ಅನುಭವವು ಬರುತ್ತಾದ್ದರಿಂದ ಅತ್ರ = ಜಗತ್‌ವಿಷಯದಲ್ಲಿ, ತಾದೃಶಂ = ಉತ್ತರಕಾಲದಲ್ಲಿ ಬಾಧವಿದೆ ಎನ್ನಲು, ಪ್ರಮಾಣಂ = ಪ್ರಮಾಣವು, ನಾಸ್ತಿ = ಇರುವುದಿಲ್ಲ

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಅಸದಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

**सत्तर्कदीपावळिः – दृष्टत्वान्न जगन्मिथ्येत्येतन्न युज्यते । स्वप्नादिवन्मिथ्यात्वसम्भवादित्याशङ्क्य परिहरति – वैधर्म्यादिति । स्वप्नस्य जाग्रत्त्वं मिथ्या तथादृष्टोऽपि रज्जुसर्पोऽपि मिथ्या स्वप्नोऽयं नायं सर्प इति बलवत्प्रमाणबाधितत्वात् सर्वदृष्टजगत्सत्यत्वस्य केनाप्यबाधितत्वान्न जगन्मिथ्येत्यर्थः ।**

ಕಣ್ಣಿಗೆ ಕಾಣಿಸುತ್ತಿರುವುದರಿಂದ ಜಗತ್ತು ಮಿಥ್ಯಾಭೂತವೆಂದು ಹೇಳಬಾರದು ಎಂಬುದಾಗಿ ತತ್ವವಾದಿಗಳಾದ ನೀವು ಹೇಳುತ್ತೀರಿ. ಇದು ತಪ್ಪು. ಸ್ವಾಪ್ನಪದಾರ್ಥಗಳು ಕಾಣಿಸುತ್ತಿದ್ದರೂ ಕೂಡ ಮಿಥ್ಯಾಭೂತವಾಗಿದೆ. ಅದರಂತೆ ಜಗತ್ತೂ ಕೂಡ ಮಿಥ್ಯಾಭೂತವಾಗುತ್ತದಲ್ಲವೇ? ಈ ಆಕ್ಷೇಪದ ಪರಿಹಾರಕ್ಕಾಗಿ 'ವೈಧರ್ಮ್ಯಾಚ್ಚ' ಇತ್ಯಾದಿ ಸೂತ್ರಭಾಷ್ಯವು ಹೊರಟಿದೆ. ಸ್ವಾಪ್ನ ಪದಾರ್ಥವು ಮಿಥ್ಯಾಭೂತವಲ್ಲ. ಆ ಪದಾರ್ಥಗಳಲ್ಲಿ ಜಾಗ್ರತ್ವ ಬುದ್ಧಿಯು ಮಾತ್ರ ಮಿಥ್ಯಾಭೂತವಾಗುತ್ತದೆ. ಸ್ವಪ್ನದಲ್ಲಿ ಪದಾರ್ಥಗಳು ಹಾಗೇ ಕಂಡರೂ ಕೂಡ ಜಾಗ್ರತ್ಕಾಲೀನವಾದ ಪದಾರ್ಥ ಎಂದೂ ಕೂಡ ಎಚ್ಚರವಾದ ಮೇಲೆ ಇದು ಸ್ವಪ್ನ ಎಂಬ

ಬಾಧಜ್ಞಾನವು ಬರುತ್ತದೆ. ಅದರಂತೆ ಹಗ್ಗವನ್ನೇ ನೋಡಿ, ಇದು ಸರ್ಪ ಎಂಬ ಭ್ರಾಂತಿಯು ಬರುತ್ತದೆ. ಅನಂತರ 'ನಾಯಂ ಸರ್ಪಃ' ಎಂಬ ಬಲವತ್ ಪ್ರಮಾಣದಿಂದ ಬಾಧದೋಷವು ಬರುತ್ತದೆ. ಹೀಗೆ ಎಲ್ಲಿ ಮಿಥ್ಯಾತ್ವವಿರುತ್ತದೋ, ಅಲ್ಲಿ ಬಲವತ್‌ಪ್ರಮಾಣ ಬಾಧಿತತ್ವವು ನಿಯಮೇನ ಇರುತ್ತದೆ. ಪ್ರಕೃತ ಸಮಸ್ತ ಜಗತ್ತನ್ನು ನೀವು ಮಿಥ್ಯಾಭೂತವೆಂದು ಹೇಳಿದರೆ, ಉತ್ತರಕಾಲದಲ್ಲಿ ಬಾಧಜ್ಞಾನವು ಬರಬೇಕು. ಆದರೆ ಪ್ರಪಂಚದಲ್ಲಿ ಯಾರೊಬ್ಬರಿಗೂ ಕೂಡ ಬಾಧಜ್ಞಾನವು ಬರುತ್ತಿಲ್ಲ. ಹಾಗಾಗಿ ಈ ಜಗತ್ತು ಮಿಥ್ಯಾಭೂತವೆಂದು ಹೇಳಬಾರದು.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಅಸದಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ತತ್ವಪ್ರದೀಪ

### ಮಿಥ್ಯಾತ್ವಾನುಮಾನದ ನಿರಾಕರಣೆ

**तत्वप्रदीपः – अन्धोदेवप्रिय! दृश्यस्यापि जगतो मिथ्यात्वमभिरोचयन्ते भूयांसो न्यायशरणाः । तथा च प्रयुज्यते विमतं मिथ्या दृश्यत्वात्स्वप्नवदिति। नचासिद्धोहेतुः । दृश्यत्वमात्रस्य सम्प्रतिपन्नत्वात् । मिथ्यात्वं च रज्जुसर्पादौ सम्प्रतिपन्नमेव प्रतिपाद्यत इति न साध्यासिद्धिः । अत आह – वैधर्म्याच्च न स्वप्नादिवत् । यदुक्तं दृश्यस्यापि स्वप्नादिवत्तत्वतोऽभाव इति तदयुक्तम् । तस्योत्तरकाले स्वप्नोऽयं नेदं जागरितमित्यनुभवात् । न हि स्वप्नवस्तुनोऽभावः प्रतीयते । स्वप्ने गजमपश्यमिति ह्यवयन्ति । तत्र जाग्रत्त्वप्रतीतिरेव भ्रान्तिः। न चैकदेशभ्रान्तित्वेन सर्वभ्रान्तित्वम् । शून्यादिप्रतीतावपि तत्प्रसङ्गात् । अतः साध्यविकलः स्वप्नदृष्टान्तः ।**

ಓ ಮಹಾಮೂರ್ಖನೇ ! ಜಗತ್ತು ಕಣ್ಣಿಗೆ ಕಾಣಿಸುತ್ತಿದ್ದರೂ ಕೂಡ ಮಿಥ್ಯಾಭೂತವಾಗಿದೆ ಎಂದು ಹೇಳಲು ನ್ಯಾಯಕ್ಕೆ ಶರಣು ಹೊಂದಿದ ಅನೇಕರು ಬಹಳ ಇಚ್ಛೆ ಪಡುತ್ತಾರೆ. ಮತ್ತು ಆ ನ್ಯಾಯವನ್ನು ಹೀಗೆ ಪ್ರಯೋಗಿಸುತ್ತಾರೆ - 'ವಿಮತಂ ಮಿಥ್ಯಾ ದೃಶ್ಯತ್ವಾತ್ ಸ್ವಪ್ನವತ್' ಸ್ವಪ್ನವು ದೃಶ್ಯವಾಗಿದೆ, ಮಿಥ್ಯಾಭೂತವಾಗಿಗೆ. ಈ ಸಮಸ್ತ ಜಗತ್ತು ದೃಶ್ಯವಾಗಿರುವುದರಿಂದ ಮಿಥ್ಯಾಭೂತವಾಗಬೇಕು. ಈ ಅನುಮಾನದಲ್ಲಿ ದೃಶ್ಯತ್ವವೆಂಬ ಹೇತು ಅಸಿದ್ಧವಾಗಿದೆ ಎನ್ನಬಾರದು. ಜಗತ್ತಿನಲ್ಲಿರುವ ಪ್ರತಿಯೊಂದು ಪದಾರ್ಥಗಳು ಜ್ಞಾನವಿಷಯವಾಗಿರುವುದು ಇಬ್ಬರಿಗೂ ಕೂಡ ಸಮ್ಮತವಾಗಿದೆ. ಮಿಥ್ಯಾತ್ವವೆಂಬ ಸಾಧ್ಯವೂ ಕೂಡ ರಜ್ಜುಸರ್ಪಾದಿಗಳಲ್ಲಿ ಸಂಪ್ರತಿಪನ್ನವಾಗಿದೆ. ಆದ್ದರಿಂದ ಸಾಧ್ಯಾಸಿದ್ಧಿದೋಷವೂ ಕೂಡ ಬರುವುದಿಲ್ಲ. ನಿರ್ದುಷ್ಟವಾದ ಈ ಅನುಮಾನದಿಂದ ಜಗತ್ತಿನಲ್ಲಿ ಮಿಥ್ಯಾತ್ವವು ಸಿದ್ಧವಾಗುತ್ತದೆ.

ಮೇಲಿನ ಆಕ್ಷೇಪಕ್ಕೆ ಉತ್ತರವನ್ನು ನೀಡಲು 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಎಂಬ ಸೂತ್ರವು ಹೊರಟಿದೆ. ಸ್ವಪ್ನವು ಜ್ಞಾನವಿಷಯವಾಗಿದ್ದರೂ ಕೂಡ ಪಾರಮಾರ್ಥಿಕವಾಗಿ ಹೇಗೆ ಇರುವುದಿಲ್ಲವೋ, ಅದರಂತೆ ಈ ಜಗತ್ತೂ ಕೂಡ ಜ್ಞಾನವಿಷಯವಾಗಿದ್ದರೂ ಪಾರಮಾರ್ಥಿಕವಾಗಿ ಇರುವುದಿಲ್ಲ ಎಂಬುದಾಗಿ ಏನು ಹೇಳುತ್ತಾರೋ, ಇದು ತಪ್ಪು. ಸ್ವಪ್ನಕ್ಕೂ ಈ ಜಗತ್ತಿಗೂ ವ್ಯತ್ಯಾಸವಿದೆ. ಸ್ವಪ್ನವು ಮುಗಿದು ಎಚ್ಚರವಾದ ಮೇಲೆ 'ನೇದಂ ಜಾಗರಿತಮ್' 'ಸ್ವಪ್ನದಲ್ಲಿ ಕಂಡ ಪದಾರ್ಥವು ಜಾಗ್ರತ್ಕಾಲೀನವಾದದ್ದಲ್ಲ' ಎಂಬ ಅನುಭವ ಬರುತ್ತಿದೆ. 'ಸ್ವಪ್ನವಸ್ತುವೇ ಸುಳ್ಳು' ಎಂಬುದಾಗಿ ಬಾಧಜ್ಞಾನವು ಬರುವುದಿಲ್ಲ. ಏಕೆಂದರೆ 'ಸ್ವಪ್ನೇ ಗಜಮಪಶ್ಯಂ' 'ಸ್ವಪ್ನದಲ್ಲಿ ಆನೆಯನ್ನು ಕಂಡೆನು' ಎಂದೇ ಎಲ್ಲರು ತಿಳಿಯುತ್ತಾರೆ. ಸ್ವಾಪ್ನಪದಾರ್ಥದಲ್ಲಿ ಜಾಗ್ರತ್ವಪ್ರತೀತಿ ಮಾತ್ರ ಭ್ರಾಂತಿಯಾಗಿದೆ. ಏಕದೇಶದಲ್ಲಿರುವ ಭ್ರಾಂತಿಯಿಂದ ಸಮಸ್ತಕ್ಕೂ ಭ್ರಾಂತಿತ್ವವನ್ನು ಹೇಳಬಾರದು. ಹಾಗಾದಲ್ಲಿ ಶೂನ್ಯಾದಿ ಪ್ರತೀತಿಯನ್ನೂ ಕೂಡ ಭ್ರಾಂತಿ ಎಂದು ಅಂಗೀಕರಿಸಬೇಕಾಗುತ್ತದೆ. ಆದ್ದರಿಂದ ಸ್ವಪ್ನ ಎಂಬ ದೃಷ್ಟಾಂತದಲ್ಲಿ ಮಿಥ್ಯಾತ್ವವೆಂಬ ಸಾಧ್ಯವು ಇಲ್ಲದ ಕಾರಣ ಸಾಧ್ಯವೈಕಲ್ಯ ದೋಷವು ಪ್ರಾಪ್ತವಾಯಿತು.

## ಮಿಥ್ಯಾತ್ವಾನುಮಾನಕ್ಕೆ ಅನೈಕಾಂತಿಕದೋಷ

**तत्वप्रदीपः – न च तज्जाग्रत्त्ववद्रज्जुसर्पवद्वा मिथ्यात्वं वाच्यम् । तस्य नेदं जागरितं नायं सर्प इति विपरीतप्रमाणेनाभावानुभवात् । न चात्र तादृशं प्रमाणमस्ति । उक्तमनुमानमिति चेन्न । प्रत्यक्षदृष्टस्यानुमानमात्रेण क्वापि बाधादृष्टेः । उपजीव्यविरोधेन तस्यैवाभासत्वोपपत्तेः । अनैकान्तिकश्चायं हेतुः। आत्मनोऽपि दृश्यत्वात् अन्यथा तद्व्यवहारायोगात् । विपक्षत्वाप्रतिपत्तेश्च। लक्षणायां च दृश्यत्वं स्यात् । लक्ष दर्शन इति धातोः ।**

ಸ್ವಾಪ್ನಪದಾರ್ಥದಲ್ಲಿ ಜಾಗ್ರತ್ವವು ಭ್ರಾಂತಿಯಾಗಿದೆ. ರಜ್ಜುವಿನಲ್ಲಿ ತತ್ವಜ್ಞಾನವು ಭ್ರಾಂತಿಯಾಗಿದೆ. ಅದರಂತೆ ಜಗತ್ತಿನ ಜ್ಞಾನವೂ ಕೂಡ ಭ್ರಾಂತಿ ಎಂದು ಏಕೆ ಹೇಳಬಾರದು ? ಇದು ತಪ್ಪು.

'ನೇದಂ ಜಾಗರಿತಂ' 'ಇದು ಜಾಗ್ರತ್ಕಾಲೀನ ಪದಾರ್ಥವಲ್ಲ' 'ನಾಯಂ ಸರ್ಪಃ' 'ಇದು ಸರ್ಪವಲ್ಲ' ಎಂಬುದಾಗಿ ವಿಪರೀತಪ್ರಮಾಣದಿಂದ ಜಾಗ್ರತ್ವದ ಅಭಾವವು ಸರ್ಪತ್ವದ ಅಭಾವವು ಅನುಭವಸಿದ್ಧವಾಗಿದೆ. ಆದರೆ ಆ ರೀತಿಯಲ್ಲಿ ಪ್ರಕೃತ ಯಾವುದೇ ಪ್ರಮಾಣವು ಕಾಣಿಸುತ್ತಿಲ್ಲ. 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ಹಿಂದೆ ಹೇಳಿದ ಅನುಮಾನವು ಪ್ರಮಾಣವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಪ್ರತ್ಯಕ್ಷ ದೃಷ್ಟವಾದ ವಿಷಯದಲ್ಲಿ ಕೇವಲ ಅನುಮಾನದಿಂದ ಬಾಧವನ್ನು ಹೇಳಿರುವುದು ಎಲ್ಲೂ ಕೂಡ ಕಂಡಿಲ್ಲ. ಉಪಜೀವ್ಯವಿರೋಧ-ವಿರುವುದರಿಂದ ಆ ಮಿಥ್ಯಾತ್ವಸಾಧಕವಾದ ಅನುಮಾನವೇ ಆಭಾಸಭೂತವಾಗಿದೆ.

ಮತ್ತು ದೃಶ್ಯತ್ವಹೇತುವು ಅನೈಕಾಂತಿಕದೋಷಗ್ರಸ್ತವಾಗಿದೆ. ಆತ್ಮನಲ್ಲಿ ದೃಶ್ಯತ್ವವೆಂಬ ಹೇತುವಿದೆ. ಮಿಥ್ಯಾತ್ವವೆಂಬ ಸಾಧ್ಯವಿಲ್ಲ. ಆದ್ದರಿಂದ ಸಾಧ್ಯಾಭಾವಾಧಿಕರಣವಾದ ಆತ್ಮನಲ್ಲಿ ದೃಶ್ಯತ್ವವಿರುವುದರಿಂದ ಅನೇಕಾಂತಿಕದೋಷವು ಪ್ರಾಪ್ತವಾಯಿತು. ಒಂದು ವೇಳೆ ಆತ್ಮನಲ್ಲಿ ದೃಶ್ಯತ್ವವೇ ಇಲ್ಲವೆಂದರೆ ಆತ್ಮವಿಷಯಕಜ್ಞಾನವೇ ಇಲ್ಲದ ಕಾರಣ ಆತ್ಮವಿಷಯಕವ್ಯವಹಾರವು ಅಯುಕ್ತವಾಗುತ್ತದೆ. ಮತ್ತು ಆತ್ಮನು ಜ್ಞಾನಕ್ಕೆ ವಿಷಯನೇ ಆಗದಿದ್ದರೆ ಅವನು ವಿಪಕ್ಷನಾಗಿದ್ದಾನೆ ಎಂದೂ ಕೂಡ ತಿಳಿಯಲು ಸಾಧ್ಯವಾಗುವುದಿಲ್ಲ. ಲಕ್ಷಣಾವೃತ್ತಿಯಿಂದ ತಿಳಿಯುತ್ತಾನೆಂದು

ಹೇಳಿದರೂ ಕೂಡ ದೃಶ್ಯತ್ವವೆಂಬ ಹೇತು ಬಂದೇ ಬರುತ್ತದೆ. ಏಕೆಂದರೆ 'ಲಕ್ಷ ದರ್ಶನೇ' ಎಂಬ ಧಾತುವಿನಿಂದ ಲಕ್ಷ್ಯತೇ ಎಂಬ ರೂಪವು ನಿಷ್ಪನ್ನವಾಗಿದೆ. 'ಆತ್ಮಾ ಲಕ್ಷ್ಯತೇ' ಎಂದು ಹೇಳಿದರೆ ಆತ್ಮನು ಜ್ಞಾನವಿಷಯನಾಗುತ್ತಾನೆ ಎಂದೇ ಅರ್ಥ.

### 'ದೃಶ್ಯತ್ವಾತ್' ಎಂಬ ಹೇತುವೇ ಅಯುಕ್ತ

**तत्वप्रदीपः – न च जगदेव शून्यं मन्वाना मिथ्यात्वं दृश्यत्वं च सम्प्रतिपद्यन्ते । मिथ्या दृश्यत्वं चेन्नास्ति दृश्यत्वमित्युक्तं स्यात् । एवं चादृश्यत्वादिति किं नावोचन्त? यदि चात्रान्यतरपक्षीयो विमतं दृश्यत्वं वाऽनिर्वाच्यं वक्ति, तदसिद्धं प्रतिवादिनः । सोऽपि परमार्थतोऽसत्त्वमेवेच्छतीति नैव पक्षभेदः । अतो नानुमानेन मिथ्यात्वम् । न चात्र नायं सर्प इत्यादिवदपरोक्षानुभवो भविष्यतीत्यत्र प्रमाणमस्ति । इत्यसदधिकरणम् ।।**

ಯಾವ ಬೌದ್ಧನು ಸಮಸ್ತ ಜಗತ್ತನ್ನೇ ಶೂನ್ಯ ಎಂದು ಅಭಿಪ್ರಾಯ ಪಡುತ್ತಾನೋ, ಅವನು ಜಗತ್ತನ್ನು ಮಿಥ್ಯಾಭೂತವೆಂದು, ಹಾಗೂ ಜ್ಞಾನವಿಷಯವಾಗಿದೆ ಎಂದು ಅಂಗೀಕರಿಸುತ್ತಾನೆ. ಒಂದು ವೇಳೆ ದೃಶ್ಯತ್ವವನ್ನೂ ಕೂಡ ಮಿಥ್ಯಾಭೂತವೆಂದು ಹೇಳಿದರೆ 'ನಾಸ್ತಿ ದೃಶ್ಯತ್ವಮ್' ಎಂದು ಹೇಳಿದಂತಾಯಿತು. ಆಗ ದೃಶ್ಯತ್ವಾತ್' ಎಂದು ಹೇತುವನ್ನು ಪ್ರಯೋಗಿಸುವುದು ಬೇಡ. 'ಅದೃಶ್ಯತ್ವಾತ್' ಎಂದು ಹೇತು ಪ್ರಯೋಗವನ್ನು ಮಾಡಿದಂತಾಗುತ್ತದೆ. ಆದ್ದರಿಂದ ನೀವು ಅನುಮಾನವನ್ನು ಪ್ರಯೋಗಿಸುವಾಗ 'ವಿಮತಂ ಮಿಥ್ಯಾ ಅದೃಶ್ಯತ್ವಾತ್' ಎಂದೇಕೆ ಹೇಳಲಿಲ್ಲ?

ಒಂದು ವೇಳೆ ಈ ಎರಡೂ ಪಕ್ಷವನ್ನು ಅಂಗೀಕಾರ ಮಾಡದೇ ಇರುವ ವ್ಯಕ್ತಿಯು, ದೃಶ್ಯತ್ವವನ್ನು ಅನಿರ್ವಚನೀಯ ಎಂದು ಹೇಳುವುದಾದರೆ, ಪ್ರತಿವಾದಿಗಳಾದ ನಮಗೆ ಅದು ಅಸಿದ್ಧವಾಗಿದೆ. ಇಂಥ ಅನಿರ್ವಚನೀಯವು ಪಾರಮಾರ್ಥಿಕವಾಗಿ ಅಸತ್ತಾಗಿದೆ ಎಂದೇ ಆ ಅನ್ಯಪಕ್ಷದವನು ಅಪೇಕ್ಷಿಸುತ್ತಾನೆ. ಆದ್ದರಿಂದ ಹಿಂದಿನ ಪಕ್ಷಕ್ಕಿಂತ ಯಾವುದೇ ವೈಲಕ್ಷಣ್ಯವು ಈ ಪಕ್ಷದಲ್ಲಿ ಇರುವುದಿಲ್ಲ. ಆದ್ದರಿಂದ ಅನುಮಾನದಿಂದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ.

ಮೇಲೆ ಹೇಳಿದ ಎಲ್ಲಾ ಕಾರಣಗಳಿಂದ 'ನಾಯಂ ಸರ್ಪಃ' ಎಂಬ ಬಾಧಜ್ಞಾನದಂತೆ ಈ ಸಮಸ್ತ ಜಗತ್ತು ಪಾರಮಾರ್ಥಿಕವಲ್ಲ ಎಂಬ ಅಪರೋಕ್ಷಾನುಭವವು ಎಂದೂ ಕೂಡ ಬರಲು ಸಾಧ್ಯವಿಲ್ಲ. ಈ ಬಾಧಜ್ಞಾನವಿಲ್ಲದ ಕಾರಣ ಸಮಸ್ತ ಜಗತ್ತನ್ನು ಅಸದ್ರೂಪವಾದ ಶೂನ್ಯವೆಂದು ಹೇಳಲು ಸಾಧ್ಯವಾಗುವುದಿಲ್ಲ. ಈ ಜಗತ್ತು ಶೂನ್ಯವಾಗಿದೆ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣವು ಇರುವುದಿಲ್ಲ. ಹೀಗೆ ಅಸದಧಿಕರಣವು ಮುಗಿಯಿತು.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ
ಅಸದಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

### ಸತ್ತಾಗಿ ತೋರುವ ಜಗತ್ತು ಏಕೆ ಅಸತ್ತಲ್ಲ?

**तत्वप्रकाशिका – ननु सदिति दृश्यमानस्य स्वप्नस्य रज्जुभुजङ्गादेश्चासत्त्वं दृष्टम् अतो जगतः सत्त्वेन दृष्टस्याप्यसत्त्वं किं न स्यादित्याशङ्कां परिहरत्सूत्रमुपन्यस्य व्याचष्टे ।। वैधर्म्याचेति ।।**

ಸತ್ ಎಂದು ಕಾಣುವ ಸ್ವಪ್ನವು ಮತ್ತು ಹಗ್ಗದಲ್ಲಿ ಕಾಣುವ ಸರ್ಪವು ಅಸತ್ತಾಗಿರುವುದು ಕಂಡಿದೆ. ಅದರಂತೆ ಸತ್ಯವೆಂದು ಕಾಣುವ ಈ ಜಗತ್ತೂ ಕೂಡ ಏಕೆ ಅಸತ್ ಆಗಬಾರದು ! ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ವೈಧರ್ಮ್ಯಾಚ್ಚ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಭಾವದೀಪ

**भावदीपः – ।। वैधर्म्याच्च न स्वप्नादिवत् ।।२९।।** सूत्रादिस्थादिपदार्थमाह **– रज्जुभुजङ्गादेश्चेति ।।**

ಸೂತ್ರದಲ್ಲಿರುವ ಆದಿಪದದ ಅರ್ಥವನ್ನು 'ರಜ್ಜುಭುಜಂಗಾದೇಶ್ಚ' ಎಂದು ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

ವಿವರಣೆ - ಸ್ವಪ್ನಪದಾರ್ಥದಲ್ಲಿ ಸತ್ತಾಭ್ರಮವಿದ್ದಂತೆ ರಜ್ಜುಭುಜಂಗಾದಿಗಳಲ್ಲಿ ಸತ್ತಾಭ್ರಮ ಇದ್ದಂತೆ ಜಗತ್ತಿನಲ್ಲಿರುವ ಸತ್ತಾಪ್ರತೀತಿಯೂ ಕೂಡ ಏಕೆ ಭ್ರಮೆ ಎನಿಸಬಾರದು. ಸತ್ ಆಗಿರುವ ಪದಾರ್ಥಕ್ಕೆ ಯಾವುದಾದರು ಒಂದು ಅಧಿಷ್ಠಾನವನ್ನು ಪರಿಕಲ್ಪನೆ ಮಾಡಿ ಭ್ರಾಂತಿ ಎಂದು ಹೇಳಿದರೆ ಏನು ತೊಂದರೆ! ಎಂಬುದಾಗಿ ಪೂರ್ವಪಕ್ಷಿಯು 'ನನು ಸದಿತಿ' ಇತ್ಯಾದಿಯಾಗಿ ಆಕ್ಷೇಪ ಮಾಡುತ್ತಿದ್ದಾನೆ. (ಗುರ್ವರ್ಥದೀಪಿಕಾ)

ಸ್ವಪ್ನದಂತೆ ಜಗತ್ತಲ್ಲ

**तत्वप्रकाशिका – न जगतः सत्त्वेनोपलब्धस्यापि स्वप्नादिवदसत्त्वं वाच्यम् । स्वप्नस्यासत्त्वस्यैवाभावात् । स्वप्नजाग्रत्त्वं दृष्टान्त इति चेन्न । तथापि न तद्वदसत्त्वं जगतः । ततो जाग्रत्त्वादेः 'स्वप्न एवायं न जाग्रत्', 'रज्जुरियं न सर्पः' इत्यादिबाधकविषयत्वेन वैलक्षण्यादित्याशयः ।**

ಜಗತ್ತು ಸತ್ಯವಾಗಿ ಕಂಡರೂ ಕೂಡ ಸ್ವಪ್ನಾದಿಗಳಂತೆ ಅಸತ್ಯವಾಗಬಹುದೆಂದು ಹೇಳಬಾರದು. ಏಕೆಂದರೆ ದೃಷ್ಟಾಂತವನ್ನಾಗಿ ನೀಡಿದ ಸ್ವಪ್ನದಲ್ಲಿ ಅಸತ್ವವೇ ಇರುವುದಿಲ್ಲ. ಸ್ವಪ್ನದಲ್ಲಿ ಕಾಣುವ ಜಾಗ್ರತ್ವವು ದೃಷ್ಟಾಂತ ಎನ್ನುತ್ತೇವೆ ಎನ್ನಬಾರದು. ಏಕೆಂದರೆ ಜಗತ್ತು ಅದರಂತೆ ಅಸತ್ಯವೆನ್ನುವುದು ಕೂಡುವುದಿಲ್ಲ. ಸ್ವಪ್ನದಲ್ಲಿರುವ ಜಾಗ್ರತ್ವಕ್ಕೂ ಜಗತ್ತಿಗೂ ವ್ಯತ್ಯಾಸವಿದೆ. 'ನಾನು ಇಲ್ಲಿಯ ತನಕ ಕಂಡದ್ದು ಕನಸೇ ಬಾಹ್ಯಪದಾರ್ಥವಲ್ಲ', ಮತ್ತು 'ನಾನು ಕಂಡದ್ದು ಹಗ್ಗವೇ ಹೊರತು ಸರ್ಪವಲ್ಲ' ಎಂಬ ಬಾಧಕಜ್ಞಾನವು ಅನಂತರಕ್ಷಣದಲ್ಲಿ ಬರುತ್ತದೆ. ಆದರೆ ಜಗತ್ತಿನಲ್ಲಿ ಈ ರೀತಿ ವೈಲಕ್ಷಣ್ಯಜ್ಞಾನವು ಬರುತ್ತಿಲ್ಲ.

**भावदीपः** – न चेत्यादिभाष्यं व्याचष्टे – **न जगत इति।।** भाष्ये अनुवर्तिताभावशब्दार्थो सत्वमिति। 'सन्ध्ये सृष्टिराह हि' इति वक्ष्यमाणाविरोधाय

भाष्यभावामाह – **स्वप्नस्येति ।। नेति ।।** नासत्त्वमित्यन्वयः ।। **तत इति ।।** जगत इत्यर्थः ।।

'ನ ಚ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಜಗತಃ' ಇತ್ಯಾದಿ ಟೀಕೆಯು ಹೊರಟಿದೆ. ಭಾಷ್ಯದಲ್ಲಿ ಅನುವೃತ್ತಿ ಮಾಡಿಕೊಳ್ಳಲ್ಪಟ್ಟ ಭಾವಶಬ್ದದ ಅರ್ಥವನ್ನು 'ಸತ್ವಂ' ಎಂದು ವ್ಯಾಖ್ಯಾನ ಮಾಡಿದ್ದಾರೆ. 'ಸಂಧ್ಯೇ ಸೃಷ್ಟಿರಾಹ ಹಿ' ಎಂಬ ತೃತೀಯಾಧ್ಯಾಯದಲ್ಲಿರುವ ಸೂತ್ರದಿಂದ ವಿರೋಧ ಪರಿಹಾರಕ್ಕಾಗಿ ಭಾಷ್ಯದ ಅಭಿಪ್ರಾಯವನ್ನು 'ಸ್ವಪ್ನಸ್ಯ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ. 'ನ' ಎಂಬ ಪದಕ್ಕೆ 'ಅಸತ್ವಂ' ಎಂಬಲ್ಲಿ ಅನ್ವಯ. 'ತತಃ' ಎಂಬ ಪದಕ್ಕೆ ಜಗತ್ತಿನ ಎಂದರ್ಥ.

ಜಗತ್ತು ಅಸತ್ತಲ್ಲ

**तत्वप्रकाशिका – प्रकृतेऽपि बाधकादसत्त्वं किं न स्यादित्याशङ्कां चशब्दभिप्रायेण परिहरति – न चेति ।।**

**तदेवं शून्यमतस्याप्ययुक्तत्वाद्युक्तमीश्वरस्य जगत्कारणत्वलक्षणमिति सिद्धम् ।।**

ಜಗತ್ತಿನ ವಿಷಯದಲ್ಲಿ ಬಾಧಕ ಇರುವುದರಿಂದ ಅಸತ್ವವನ್ನು ಏಕೆ ಹೇಳಬಾರದು? ಎಂಬ ಆಶಂಕೆಯನ್ನು ಸೂತ್ರದ 'ಚ' ಶಬ್ದಾರ್ಥದಿಂದ ಪರಿಹರಿಸಲು 'ನ ಚ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. ಹೀಗೆ ಶೂನ್ಯಮತವು ಅಯುಕ್ತವಾದ್ದರಿಂದ ಭಗವಂತನಿಗೆ ಹೇಳಲ್ಪಟ್ಟ ಜಗತ್ಕಾರಣತ್ವ ಲಕ್ಷಣವು ನಿರ್ದುಷ್ಟವೆಂದು ಸಿದ್ಧವಾಯಿತು.

।। ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ
ಅಸದಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ।।

## ಭಾವದೀಪ

**भावदीपः – चशब्देति ।।** जगति बाधाभावादित्यनुक्तसमुच्चये सौत्रश्चशब्द इति दर्शितम्। तत् तस्मान्निष्प्रमाणकत्वात्प्रमाणविरुद्धत्वाच्चेत्यर्थः ।। २९ ।।

'ಚಶಬ್ದಾಭಿಪ್ರಾಯೇಣ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಜಗತ್ತಿನಲ್ಲಿ ಯಾವುದೇ ಬಾಧಕವು ಇಲ್ಲದ ಕಾರಣ ಅನುಕ್ತವಾದದ್ದನ್ನು ಸಮುಚ್ಚಯ ಮಾಡುವುದಕ್ಕಾಗಿ ಸೂತ್ರದಲ್ಲಿ 'ಚ' ಶಬ್ದವನ್ನು ಪ್ರಯೋಗಿಸಿದ್ದಾರೆಂದು ತಿಳಿಯಬೇಕು. 'ತತ್' ಎಂದರೆ ಆದ್ದರಿಂದ ಎಂದರ್ಥ. ಯಾವುದೇ ಪ್ರಮಾಣವಿಲ್ಲದ್ದರಿಂದ ಹಾಗೂ ಪ್ರಮಾಣವಿರುದ್ಧವಾಗಿರುವುದರಿಂದ ಎಂದರ್ಥ.

ವಿವರಣೆ - ಈ ಅಧಿಕರಣದಲ್ಲಿ ಒಟ್ಟು ನಾಕು ಸೂತ್ರಗಳಿವೆ. ಪ್ರಥಮಸೂತ್ರದಲ್ಲಿ 'ಶೂನ್ಯವು ಜಗತ್ಕಾರಣ ಆಗುವುದಿಲ್ಲ' ಎನ್ನಲು ಪ್ರಮಾಣಾಭಾವವನ್ನು ಹೇತುವನ್ನಾಗಿ ಹೇಳಿದರು. ಅದಕ್ಕೆ ಸಾಧಕವಾಗಿ ಇತರ ಪ್ರಮಾಣಕ್ಕೆ ಮೂಲಭೂತವಾದ ಪ್ರತ್ಯಕ್ಷಾದಿಗಳು ಇರುವುದಿಲ್ಲವೆಂದು ಹೇಳಲಾಯಿತು. ಎರಡನೆಯ ಸೂತ್ರದಲ್ಲಿ ಶೂನ್ಯವು ಜಗತ್ಕಾರಣವಾದರೆ ಪರಾಭಿಮತವಾದ ಅನುಮಾನಕ್ಕೆ ತರ್ಕಪರಾಹತಿಯನ್ನು ಹೇಳಿದರು. ಮೃದ್‌ಘಟಾದಿಗಳಂತೆ ಶೂನ್ಯ ಮತ್ತು ಪ್ರಪಂಚಗಳಿಗೆ ಕಾರ್ಯಕಾರಣಭಾವವನ್ನು ಅಂಗೀಕರಿಸಿದರೆ ಅದೃಷ್ಟವಿರೋಧ ಬರುತ್ತದೆ. 'ಶೂನ್ಯವೇ ಜಗದಾಕಾರದಿಂದ ಕಾಣಿಸುತ್ತದೆ. ಪಾರಮಾರ್ಥಿಕವಾಗಿ ಜಗತ್ತು ಇರುವುದಿಲ್ಲ' ಎಂದು ಅಂಗೀಕರಿಸಿದರೆ ಹಿಂದಿನ ದೋಷ ಬರುವುದಿಲ್ಲ ಎಂಬ ಆಶಂಕೆಯ ಪರಿಹಾರಕ್ಕಾಗಿ ಮೂರನೆಯ ಸೂತ್ರದಲ್ಲಿ ಜಗತ್ತಿಗೆ ಅಸತ್ವವನ್ನು ಅಂಗೀಕರಿಸಿದರೆ 'ಸತ್' ಎಂಬ ಪ್ರತ್ಯಕ್ಷವಿರೋಧವು ಬರುತ್ತದೆಂದು ಹೇಳಲಾಯಿತು. ಪ್ರಪಂಚ ಸತ್ವಗ್ರಾಹಿಯಾದ ಪ್ರತ್ಯಕ್ಷಕ್ಕೆ ಸ್ವಪ್ನಾದಿ ಪ್ರತೀತಿಯಂತೆ ಭ್ರಾಂತಿತ್ವಶಂಕೆಯನ್ನು ನಿರಾಕರಣೆ ಮಾಡುವುದಕ್ಕಾಗಿ ನಾಕನೆಯ ಸೂತ್ರದಲ್ಲಿ ಬಾಧಕಸದ್‌ಭಾವ ಎಂಬ ವೈಲಕ್ಷಣ್ಯವನ್ನು ಹೇಳಲಾಯಿತು. ಹೀಗೆ ಸೂತ್ರಗಳ ಆಗತಿಕ್ರಮವು ಸ್ವರಸವಾಗಿದೆ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ ಅಸದಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## असदधिकरणम् - ८

ಶೂನ್ಯಮತ ನಿರಾಕರಣೆಗಾಗಿ ಅಸದಧಿಕರಣ

।। नासतोऽदृष्टत्वात् ।।

अत्र नये परमाणुपुञ्जवादोक्तदोषोऽत्र नेति प्राप्तं शून्यमतं निरस्यते । विश्वकारणत्वमिति प्रकरणाल्लभ्यते । असतः शून्यस्य जगत्कारणत्वं न युक्तम् । कुतः? मानाभावादिति भावः । कुतो न मानमित्यतः अदृष्टत्वात् शून्यकारणत्वस्याप्रत्यक्षत्वात् । क्वापि तत्कारणत्वस्यादर्शनाद् दृष्टान्ताभवेन नानुमानिकत्वादिति यावत् । तथा अदृष्टत्वात्, आगमस्येति शेषः, शून्यकारणत्वबोधकागमस्यादर्शनादिति परम्परया अदृष्टत्वादिति हेतुर्योज्यः। तेन मानाभावो मेयाभावहेतुर्न तु प्रत्यक्षाभावमात्रमिति न शङ्क्यम् ।

ಈ ಅಧಿಕರಣದಲ್ಲಿ ಪರಮಾಣುಪುಂಜವಾದದಲ್ಲಿ ಯಾವು ದೋಷವು ಪ್ರಾಪ್ತವಾಗಿತ್ತೋ, ಆ ದೋಷಗಳು ತನಗೆ ಬರುವುದಿಲ್ಲವೆಂದು ಪ್ರಸ್ತಕವಾಗುವ ಶೂನ್ಯಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ವಿಶ್ವಕಾರಣತ್ವವು ಪ್ರಕರಣದಿಂದ ಪ್ರಾಪ್ತವಾಗುತ್ತದೆ. ಅಸತಃ = ಶೂನ್ಯಕ್ಕೆ, ನ = ಜಗತ್ಕಾರಣತ್ವವು ಯುಕ್ತವಲ್ಲ. ಏಕೆಂದರೆ ಪ್ರಮಾಣವಿರುವುದಿಲ್ಲ ಎಂದಭಿಪ್ರಾಯ. ಏಕೆ ಪ್ರಮಾಣವಿಲ್ಲ ? ಎಂಬ ಪ್ರಶ್ನೆಗೆ, ಅದೃಷ್ಟತ್ವಾತ್ = ಶೂನ್ಯಕಾರಣತ್ವವು ಪ್ರತ್ಯಕ್ಷಸಿದ್ಧವಾಗದಿರುವುದರಿಂದ.

ಶೂನ್ಯವು ಕಾರಣವಾಗಿರುವುದು ಎಲ್ಲೂ ಕೂಡ ಕಂಡಿಲ್ಲ. ಆದ್ದರಿಂದ ದೃಷ್ಟಾಂತವೇ ಇಲ್ಲ. ಹಾಗಾಗಿ ಶೂನ್ಯಕಾರಣತ್ವವು ಅನುಮಾನಪ್ರಮಾಣದಿಂದ ಸಿದ್ಧವಾಗಿಲ್ಲ ಎಂದಭಿಪ್ರಾಯ. ಅದೃಷ್ಟತ್ವಾತ್ = ಆಗಮಸ್ಯ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಶೂನ್ಯವು ಜಗತ್‌ಕಾರಣವಾಗಿದೆ ಎಂದು ಹೇಳುವ ಆಗಮವೇ ಕಾಣಿಸುತ್ತಿಲ್ಲ. ಆದ್ದರಿಂದ ಶೂನ್ಯವು ಜಗತ್‌ಕಾರಣವಾಗಿದೆ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲ. ಹೀಗೆ ಹೇಳಿದ್ದರಿಂದ ಶೂನ್ಯವು ಜಗತ್‌ಕಾರಣವಲ್ಲ ಎಂಬುದನ್ನು ಸಾಧನೆ ಮಾಡಲು ಅದೃಷ್ಟತ್ವವು ಪರಂಪರೆಯ ಹೇತುವಾಗಿದೆ ಎಂದು ಯೋಜನೆ ಮಾಡಬೇಕು. ಇದರಿಂದ ಪ್ರಮೇಯವು ಇಲ್ಲವೆನ್ನಲು ಪ್ರಮಾಣಾಭಾವವೇ ಹೇತುವಾಗಿದೆ. ಪ್ರತ್ಯಕ್ಷಾಭಾವವು ಹೇತುವಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

### ಸುಧೆಯ ಪ್ರಕಾರ ಸೂತ್ರ ವ್ಯಾಖ್ಯಾನ

**सुधायां तु असतः शून्याज्जगतो जन्म नेति पञ्चम्यन्ततया व्याख्यातम्। यद्यपि शून्यं नासदित्यभ्युपेतं माध्यमिकैः । तथापि सर्वधर्मशून्यत्वे असत्त्वमापाद्य असत इत्युक्तम् । वृत्त्यन्तरं तु ना पुरुषः सतः आदिकालीनकार्यस्य कर्ताऽनुमातव्यः । कुतः? दृष्टत्वात् अद्यतनकार्ये पुंस्कृतत्वस्य दृष्टत्वादिति ध्येयम् ।।**

ನ್ಯಾಯಸುಧಾದಲ್ಲಿ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ಅಸತಃ = ಶೂನ್ಯದಿಂದ ಜಗತ್ತಿನ ಉತ್ಪತ್ತಿಯು ಸಾಧ್ಯವಿಲ್ಲ ಎಂಬುದಾಗಿ ಹೇಳಿದ್ದಾರೆ. 'ಅಸತಃ' ಎಂಬ ಪದವು ಪಂಚಮ್ಯಂತವಾಗಿದೆ ಎಂದು ವ್ಯಾಖ್ಯಾನ ಮಾಡಲಾಗಿದೆ. ಮಾಧ್ಯಮಿಕರು ಶೂನ್ಯವು ಅಸದ್ರೂಪವಾಗಿದೆ ಎಂದು ಅಂಗೀಕಾರ ಮಾಡುವುದಿಲ್ಲ. ಆದರೂ ಯಾವುದೇ ಧರ್ಮ ಇಲ್ಲದಿದ್ದರೆ ಅದು ಅಸತ್ತೇ ಆಗುತ್ತದೆ ಎಂದು ಆಪಾದನೆ ಮಾಡಿ, ಸೂತ್ರದಲ್ಲಿ 'ಅಸತಃ' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ ಹೀಗಿದೆ - ನಾ = ಪುರುಷನು, ಸತಃ = ಸೃಷ್ಟಿಯ ಪ್ರಾರಂಭ ಕಾಲದ ಕಾರ್ಯಕ್ಕೆ ಕರ್ತೃವಾಗಿದ್ದಾನೆಂದು ಅನುಮಾನ ಪ್ರಮಾಣದಿಂದ ಸಾಧಿಸಬಹುದು. ಏಕೆಂದರೆ ದೃಷ್ಟತ್ವಾತ್ = ಈ ಕಾಲದ ಕಾರ್ಯಗಳು ಪುರುಷನಿರ್ಮಿತವಾಗಿವೆ ಎಂದು ದೃಷ್ಟವಾಗಿರುವುದರಿಂದ ಎಂದು ತಿಳಿಯಬೇಕು.

ಸೂತ್ರಪದಗಳಿಗೆ ಅರ್ಥ

अदृष्टमप्यसतो जगत्कारणत्वमस्त्वित्यत आह -

।। उदासीनानामपि चैवं सिद्धिः ।।२-२-२७।।

एवमसतः कारणत्वे सत्युदासीनानां हेयोपादेयधीविषयत्वादुदासीनानां खपुष्पादीनामपि सकाशात् सौरभ्यादिकार्यसिद्धिः स्यादित्यर्थः । तेभ्यो न चेच्छून्यादपि कार्यं न स्यादसत्वाविशेषादिति सूचयितुं चशब्दः । खपुष्पादीनामिति वाच्ये उदासीनेत्युक्तिर्हेतुगर्भतया नेष्टापत्तिरिति सूचयितुम् ।

ಶೂನ್ಯವು ಜಗತ್ಕಾರಣವಾಗಿದೆ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣವಿರುವುದು ಬೇಡ. ಆದರೂ ಕೂಡ ಶೂನ್ಯವೇ ಜಗತ್ಕಾರಣವಾಗಲಿ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - 'ಉದಾಸೀನಾನಾಮಪಿ ಚೈವಂ ಸಿದ್ಧಿಃ' ಎಂದು.

ಏವಂ = ಹೀಗೆ ಅಸತ್ತಿಗೆ ಜಗತ್ಕಾರಣತ್ವವು ಇರುವುದಾದರೆ, 'ಉದಾಸೀನಾನಾಮಪಿ' ಹೇಯಬುದ್ಧಿಗೆ ಮತ್ತು ಉಪಾದೇಯಬುದ್ಧಿಗೆ ವಿಷಯವಾಗದೇ ಉದಾಸೀನವಾಗಿರುವ ಗಗನಕುಸುಮಾದಿಗಳಿಂದಲೂ, ಸಿದ್ಧಿಃ = ಸೌರಭ್ಯ ಮೊದಲಾದ ಕಾರ್ಯಗಳು ಉಂಟಾಗಬೇಕಾದೀತು ಎಂಬುದು ಸೂತ್ರದ ಅರ್ಥ. ಗಗನಕುಸುಮಾದಿಗಳಿಂದ ಸೌರಭ್ಯಾದಿಕಾರ್ಯಗಳು ಉಂಟಾಗುವುದಿಲ್ಲ ಎಂದು ಹೇಳಿದರೆ, ಶೂನ್ಯದಿಂದಲೂ ಕೂಡ ಯಾವುದೇ ಕಾರ್ಯವು ಉಂಟಾಗುವುದಿಲ್ಲ. ಏಕೆಂದರೆ ಎರಡರಲ್ಲೂ 'ಅಸತ್ತ್ವ' ಎಂಬುದು ಸಮಾನವಾಗಿದೆ. ಇದನ್ನು ಸೂಚನೆ ಮಾಡುವುದಕ್ಕಾಗಿ ಸೂತ್ರದಲ್ಲಿ ಚ ಶಬ್ದವನ್ನು ಪ್ರಯೋಗಿಸಿದ್ದಾರೆ. ಹಾಗಾದರೆ 'ಖಪುಷ್ಪಾದೀನಾಮ್' ಎಂದು ಹೇಳಬಹುದಿತ್ತಲ್ಲವೇ? ಎಂದರೆ ಉದಾಸೀನಪದ ಪ್ರಯೋಗವು ಹೇತುಗರ್ಭಿತವಾಗಿದೆ. ಗಗನಕುಸುಮಾದಿಗಳಿಂದ ಸೌರಭ್ಯ ಮೊದಲಾದ ಕಾರ್ಯಗಳ ಉತ್ಪತ್ತಿಯು ಅಂಗೀಕರಿಸಲು ಯೋಗ್ಯವಲ್ಲ ಎಂಬುದಾಗಿ ಹೇಳಬೇಕಾಗಿದೆ. ಆದಕ್ಕಾಗಿ 'ಉದಾಸೀನಾನಾಮ್' ಎಂಬ ಪದವನ್ನೇ ಪ್ರಯೋಗ ಮಾಡಿದ್ದಾರೆ.

ವಿವರಣೆ - ಗಗನಕುಸುಮದಿಂದ ಹೇಗೆ ಯಾವುದೇ ಸೌರಭ್ಯ ಮೊದಲಾದ ಕಾರ್ಯಗಳು ಹುಟ್ಟುವುದಿಲ್ಲವೋ, ಆದರಂತೆ ಶೂನ್ಯದಿಂದಲೂ ಕೂಡ ಯಾವುದೇ

ಕಾರ್ಯವು ಹುಟ್ಟುವುದಿಲ್ಲ. ಒಂದು ವೇಳೆ ಗಗನಕುಸುಮದಿಂದಲೂ ಕಾರ್ಯವು ಹುಟ್ಟಿದ್ದರೆ ಹೇಯಬುದ್ಧಿಗೆ, ಉಪಾದೇಯಬುದ್ಧಿಗೆ ಅದು ವಿಷಯವಾಗುತ್ತಿತ್ತು. ಆದರೆ ಯಾವುದೇ ಕಾರ್ಯವು ಹುಟ್ಟುತ್ತಿಲ್ಲ. ಆದ್ದರಿಂದ ಹೇಯಬುದ್ಧಿಗೆ ಅಥವಾ ಉಪಾದೇಯಬುದ್ಧಿಗೆ ಗಗನಕುಸುಮವು ವಿಷಯವಾಗುವುದಿಲ್ಲ. ಹೀಗೆ ಗಗನಕುಸುಮಾದಿಗಳಿಂದ ಸೌರಭ್ಯ ಮೊದಲಾದವುಗಳ ಉತ್ಪತ್ತಿಯು ಅನಿಷ್ಟವಾಗಿದೆ ಎಂಬುದಕ್ಕೆ 'ಹೇಯೋಪಾದೇಯಬುದ್ಧ್ಯ-ವಿಷಯತ್ವವೆಂಬ ಔದಾಸೀನ್ಯವು ಹೇತುವಾಗಿದೆ. ಈ ಹೇತುವನ್ನು ತಿಳಿಸುವುದಕ್ಕಾಗಿ 'ಉದಾಸೀನಾನಾಮ್' ಎಂಬ ಪದವನ್ನುಪ್ರಯೋಗ ಮಾಡಿದ್ದಾರೆ. ಇಲ್ಲದಿದ್ದರೆ 'ಗಗನಕುಸುಮಾದೀನಾಮ್ ಎಂಬ ಪದವನ್ನೇ ಪ್ರಯೋಗ ಮಾಡುತ್ತಿದ್ದರು.

## ಸೂತ್ರಕ್ಕೆ ಬೇರೆ ವ್ಯಾಖ್ಯಾನ

वृत्यन्तराणि तु-एवं शून्यादेव सर्वोत्पत्तौ तन्त्वाद्युपादानादुदासीनानामपि उपादानहीनानां, चिकीर्षादिरहितानामिति यावत्, पुंसां घटादिकार्यसिद्धिः स्यादिति । तथा देशकालाद्यपेक्षानियमादुदासीनानां तदपेक्षारहितानामपि कार्याणां किंशुकपुष्पादीनां सिद्धिः स्यादिति सुधोक्तानि ध्येयानि । कर्त्रुपादाननिमित्तापेक्षापि न स्यादिति फलितार्थः ।

ಸೂತ್ರದ ಬೇರೆ ವ್ಯಾಖ್ಯಾನಗಳು ಹೀಗಿವೆ - ಏವಂ = ಶೂನ್ಯದಿಂದಲೇ ಎಲ್ಲವೂ ಹುಟ್ಟುವುದಾದರೆ, ಉದಾಸೀನಾನಾಮಪಿ = ತಂತು ಮೊದಲಾದ ಉಪಾದಾನಕಾರಣಗಳೇ ಇಲ್ಲದ ಪುರುಷರಿಗೂ ಪಟಾದಿಗಳನ್ನು ಮಾಡುವ ಇಚ್ಛೆಯಿಲ್ಲದಿದ್ದ ಮನುಷ್ಯರಿಗೂ ಎಂದಭಿಪ್ರಾಯ. ಸಿದ್ಧಿಃ = ಪಟಾದಿ ಕಾರ್ಯಗಳು ಸಿದ್ಧವಾಗಬೇಕಾದೀತು.

ಹಾಗೆಯೇ ದೇಶ, ಕಾಲ ಮೊದಲಾದವುಗಳು ಆವಶ್ಯಕವಾಗಿವೆ ಎಂಬ ನಿಯಮದಿಂದ ಉದಾಸೀನವಾದ ದೇಶಕಾಲಾದಿಗಳ ಅಪೇಕ್ಷೆಯೇ ಇಲ್ಲದ ಕಿಂಶುಕ ಮೊದಲಾದ ಪುಷ್ಪಗಳ ಸೃಷ್ಟಿಯೂ ಕೂಡ ಆಗದೇ ಇರಬೇಕಾದೀತು. ಹೀಗೆ ನ್ಯಾಯಸುಧೆಯಲ್ಲಿ ಹೇಳಿದ ಬೇರೆ ವ್ಯಾಖ್ಯಾನಗಳನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. ಕರ್ತೃ, ಉಪಾದಾನಕಾರಣ, ನಿಮಿತ್ತಕಾರಣಗಳ ಅಪೇಕ್ಷೆಯೂ ಇಲ್ಲದಿರಬೇಕಾದೀತು ಎಂಬುದು ಫಲಿತವಾದ ಅರ್ಥ.

### ಶೂನ್ಯವಿವರ್ತವಾದ ನಿರಾಕರಣೆ

माऽस्तु शून्यपरिणामः प्रपञ्चस्तद्विवर्तस्तु स्यात्तत्रोक्तदोषाभावादत आह -

।। नाभाव उपलब्धेः ।।२-२-२८।।

भवतीति भावः सन् । अभावोऽसन् । भवतेश्चेति णः । जगत् अभावो न शून्यव्यतिरेकेण तत्त्वं नास्तीति न । उपलब्धेः सदित्युपलभ्यमानत्वादित्यर्थः । सुधायां तु तवासतो जनिरिव मम सतो जनिर्न दृष्टा । जगतः सत्त्वासम्मतेरित्यतो जगतोऽसत्त्वं नेत्याहेत्यवतार्य व्याख्यातम् ।।

ಪ್ರಪಂಚವು ಶೂನ್ಯದ ಪರಿಣಾಮ ಆಗುವುದು ಬೇಡ. ಶೂನ್ಯದ ವಿವರ್ತವೆಂದು ಹೇಳುತ್ತೇವೆ. ಆಗ ಪರಿಣಾಮವಾದದಲ್ಲಿ ಬಂದ ದೋಷ ವಿವರ್ತವಾದದಲ್ಲಿ ಬರುವುದಿಲ್ಲ. ಈ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ- 'ನಾಭಾವ ಉಪಲಬ್ಧೇಃ

ಭಾವಶಬ್ದಕ್ಕೆ 'ಭವತೀತಿ ಭಾವಃ' ಎಂಬ ವ್ಯುತ್ಪತ್ತಿಯಂತೆ ಅಸ್ತಿತ್ವವುಳ್ಳದ್ದು ಎಂದರ್ಥ. ಅಭಾವ ಶಬ್ದಕ್ಕೆ ಅಸ್ತಿತ್ವರಹಿತವಾದದ್ದು ಎಂದರ್ಥ. 'ಭವತೇಶ್ಚ' ಎಂಬ ಪಾಣಿನಿಯ ಸೂತ್ರದಿಂದ ಭೂಧಾತುವಿಗೆ ಣ ಎಂಬ ಪ್ರತ್ಯಯವು ಬಂದರೆ ಭಾವ ಎಂಬ ರೂಪವು ನಿಷ್ಪನ್ನವಾಗುತ್ತದೆ. ಜಗತ್ತು ನ ಅಭಾವಃ = ಶೂನ್ಯವ್ಯತಿರಿಕ್ತವಾಗಿ ಅಸ್ತಿತ್ವವನ್ನೇ ಹೊಂದಿರುವುದಿಲ್ಲ ಎಂಬುದು ತಪ್ಪು. ಏಕೆಂದರೆ ಉಪಲಬ್ಧೇಃ = ಸತ್ ಎಂಬ ಅನುಭವಕ್ಕೆ ವಿಷಯವಾಗಿರುವುದರಿಂದ ಎಂಬುದು ಸೂತ್ರದ ಅರ್ಥ.

ನ್ಯಾಯಸುಧಾದಲ್ಲಿ ಅಸತ್ತಿನಿಂದ ಉತ್ಪತ್ತಿಯಾಗುವುದು ನಿನಗೆ ಹೇಗೆ ದೃಷ್ಟವಾಗಿಲ್ಲವೋ, ಅದರಂತೆ ಸತ್ಯತ್ವವನ್ನು ನಾನು ಜಗತ್ತಿನಲ್ಲಿ ಒಪ್ಪದಿರುವುದರಿಂದ ಸತ್ಯದಿಂದ ಕಾರ್ಯದ ಉತ್ಪತ್ತಿಯು ದೃಷ್ಟವಾಗಿಲ್ಲ ಎಂಬುದಾಗಿ ಬೌದ್ಧನು ಪ್ರತಿಯಾಗಿ ಆಕ್ಷೇಪ ಮಾಡುತ್ತಾನೆ. ಅದಕ್ಕೆ ಉತ್ತರವಾಗಿ ಜಗತ್ತಿಗೆ ಅಸತ್ವವೇ ಇಲ್ಲ ಎಂಬುದನ್ನು ಹೇಳುವುದಕ್ಕಾಗಿ ಅವತಾರಿಕೆ ನೀಡಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

### ಸ್ವಪ್ನಾದಿಗಳಂತೆ ಜಗತ್ತು ಅಸತ್ಯವಲ್ಲ ಎಂದು ಸೂತ್ರಾರ್ಥ

ननु सदित्युपलम्भेऽपि स्वप्नादिवदसज्जगत् किं न स्यादत आह -

।। वैधर्म्याच्च न स्वप्नादिवत् ।।२-२-२९।।

**अभाव इति वर्तते । स्वप्नजाग्रत्वादिवद्रज्जुभुजङ्गादिवच्च जगदभावोऽसन्न। कुतः? वैधर्म्याच्च स्वप्न एवायं न जाग्रत्, रज्जुरियं न सर्प इति बाधविषयत्ववैलक्षण्यादित्यर्थः । चशब्दोऽत्र च बाधाभावादित्यर्थ सूचनार्थः।**

ಜಗತ್ತು ಸತ್ಯವೆಂದು ಅನುಭವಸಿದ್ಧವಾಗಿದ್ದರೂ ಕೂಡ ಸ್ವಪ್ನಾದಿಗಳಂತೆ ಏಕೆ ಅಸತ್ಯವಾಗಬಾರದು ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್'

'ಅಭಾವಃ' ಎಂಬ ಪದವನ್ನು ಅನುವೃತ್ತಿ ಮಾಡಬೇಕು. ಸ್ವಾಪ್ನಪದಾರ್ಥಗಳಲ್ಲಿ ಜಾಗ್ರತ್ವದಂತೆ, ರಜ್ಜುವಿನಲ್ಲಿ ಭುಜಂಗದಂತೆ ಜಗತ್ತು ಅಸತ್ಯವಾಗಿದೆ ಎಂದು ಹೇಳಬಾರದು. ಏಕೆಂದರೆ ವೈಧರ್ಮ್ಯಾಚ್ಚ = ಇದು ಸ್ವಪ್ನವೇ ಆಗಿದೆ ಎಚ್ಚರಾವಸ್ಥೆಯಲ್ಲ ಎಂಬ ಬಾಧಜ್ಞಾನವಿದೆ. ಇದು ಹಗ್ಗವೇ ಆಗಿದೆ, ಸರ್ಪವಲ್ಲ ಎಂಬ ಬಾಧಜ್ಞಾನವಿದೆ. ಆದರೆ ಈ ಜಗತ್ತಿನ ಬಗ್ಗೆ ಹಾಗೇ ಬಾಧಜ್ಞಾನವಿರುವುದಿಲ್ಲ. ಈ ವೈಲಕ್ಷಣ್ಯವಿರುವ ಕಾರಣ 'ನ ಸ್ವಪ್ನಾದಿವತ್' ಸ್ವಪ್ನಾದಿಗಳಂತೆ ಜಗತ್ತನ್ನು ಅಸತ್ತೆಂದು ಹೇಳಬಾರದು. 'ಚ'ಶಬ್ದವು ಜಗತ್ತಿನ ವಿಷಯದಲ್ಲಿ ಬಾಧಜ್ಞಾನವಿಲ್ಲವೆಂದು ಸೂಚನೆ ಮಾಡುತ್ತಿದೆ.

### ನ್ಯಾಯಸುಧಾದಲ್ಲಿ ಅರ್ಥಕ್ರಿಯಾಕಾರಿತ್ವದಿಂದ ಸತ್ಯತ್ವ ಸಮರ್ಥನೆ

**सुधायां दृश्यत्वादिमिथ्यात्वहेत्वपाकरणार्थमप्येतदवतार्य स्वप्नादिवज्जगद् दृश्यत्वादिना न मिथ्या । अर्थक्रियाकारित्वादिवैधर्म्यात् सत्यत्वसिद्धेः, चशब्दोक्तसत्यत्वानुभवबाधात्, ततएव मिथ्यात्वे कस्यापि मानस्याभावाच्चेति सत्प्रतिपक्षबाधमिथ्यात्वमानाभावोक्तिपरमप्युक्तम् । तेन बाधाभावो नासिद्ध इति ध्येयम् ।**

ನ್ಯಾಯಸುಧಾ ಗ್ರಂಥದಲ್ಲಿ ದೃಶ್ಯತ್ವ ಮೊದಲಾದ ಜಗನ್ಮಿಥ್ಯಾತ್ವಾಪಾದಕವಾದ ಹೇತುಗಳನ್ನು ನಿರಾಕರಣೆ ಮಾಡುವುದಕ್ಕಾಗಿಯೂ ಈ ಸೂತ್ರವು ಪ್ರಾಪ್ತವಾಗಿದೆ ಎಂಬುದಾಗಿ ಅವತಾರಿಕೆ ನೀಡಿದ್ದಾರೆ. ಅನಂತರ ಹೀಗೆ ಹೇಳಿದ್ದಾರೆ - ಸ್ವಪ್ನಾದಿಗಳಂತೆ ದೃಶ್ಯವಾಗಿರುವುದರಿಂದ ಜಗತ್ತು ಮಿಥ್ಯಾಭೂತವಾಗಿದೆ ಎಂದು ಸರಿಯಲ್ಲ. ಏಕೆಂದರೆ ಅರ್ಥಕ್ರಿಯಾಕಾರಿತ್ವವೇ ಮೊದಲಾದ ಧರ್ಮಗಳು ಜಗತ್ತಿನಲ್ಲಿರುತ್ತವೆ. ಇದು ಸ್ವಪ್ನದಲ್ಲಿ ಇಲ್ಲ. ವೈಧರ್ಮ್ಯಾಚ್ಚ = ಅರ್ಥಕ್ರಿಯಾಕಾರಿತ್ವಾದಿ ವೈಲಕ್ಷಣ್ಯವಿರುವುದರಿಂದ, ನ

ಸ್ವಪ್ನಾದಿವತ್ = ಸ್ವಪ್ನದಂತೆ ಮಿಥ್ಯಾಭೂತವಲ್ಲ. ಜಗತ್ತು ಸತ್ಯವೆಂದೇ ಅನುಭವಸಿದ್ಧವಾಗಿದೆ. ಚಶಬ್ದವು ಸತ್ಯತ್ವಾನುಭವದ ಬಾಧವಿರುವುದರಿಂದ ಹಾಗೂ ಜಗನ್ಮಿಥ್ಯಾತ್ವವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲದಿರುವುದರಿಂದ ಮಿಥ್ಯಾತ್ವಾನುಮಾನಕ್ಕೆ ಸತ್‌ಪ್ರತಿಪಕ್ಷ, ಬಾಧ ಇತ್ಯಾದಿ ವಿಷಯದಲ್ಲಿ ಪ್ರಮಾಣಾಭಾವ ಮೊದಲಾದ ದೋಷಗಳನ್ನು ಹೇಳಿರುತ್ತಾರೆ. ಈ ಅರ್ಥದಲ್ಲಿ ಸೂತ್ರವನ್ನು ವ್ಯಾಖ್ಯಾನ ಮಾಡಿರುತ್ತಾರೆ. ಆದ್ದರಿಂದ ಬಾಧವಿಲ್ಲದಿರುವಿಕೆ ಎಂಬ ಹೇತು ಅಸಿದ್ಧವಲ್ಲ ಎಂದು ತಿಳಿಯಬೇಕು.

### ತತ್ವಪ್ರದೀಪದಲ್ಲಿ ಮಾಡಿದ ಸೂತ್ರ ವ್ಯಾಖ್ಯಾನ

तत्त्वप्रदीपे तु स्वप्नादिवज्जगन्न दृश्यत्वादिना मिथ्या । स्वप्न एवायं न जागरित इति प्रतीत्या जाग्रत्त्वाद्येकदेशस्यैव मिथ्यात्वेन सर्वस्य तदभावेन साध्यवैकल्यात् । जाग्रत्त्वस्य दृष्टान्तत्वे बाधकभावाभावाभ्यां वैधर्म्यादिति योजितम् । एतेनैवाद्वैतमतं च प्रत्युक्तं बोध्यम् ।।८।।

ತತ್ವಪ್ರದೀಪದಲ್ಲಿ ಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ಸ್ವಪ್ನಾದಿಗಳಂತೆ ದೃಶ್ಯತ್ವವಿರುವುದರಿಂದ ಜಗತ್ತು ಮಿಥ್ಯಾಭೂತವಾಗಿದೆ ಎಂದು ಹೇಳುವುದು ತಪ್ಪು. ಏಕೆಂದರೆ ಎಚ್ಚರವಾದ ಮೇಲೆ ಇದು ಸ್ವಪ್ನವೇ ಆಗಿದೆ. ಎಚ್ಚರಾವಸ್ಥೆಯ ಪದಾರ್ಥವಲ್ಲ ಎಂಬುದಾಗಿ ಬಾಧಜ್ಞಾನವು ಬರುತ್ತದೆ. ಆದ್ದರಿಂದ ಸ್ವಪ್ನದಲ್ಲಿ ತೋರುವ ಜಾಗ್ರತ್ವವೆಂಬ ಏಕದೇಶವು ಮಾತ್ರ ಮಿಥ್ಯಾಭೂತವಾಗಿದೆ. ಸಮಸ್ತ ಸ್ವಪ್ನವು ಮಿಥ್ಯಾಭೂತವಾಗಿರುವುದಿಲ್ಲ. ಆದ್ದರಿಂದ ಸ್ವಪ್ನವೆಂಬ ದೃಷ್ಟಾಂತದಲ್ಲಿ ಮಿಥ್ಯಾತ್ವವೆಂಬ ಸಾಧ್ಯವೈಕಲ್ಯವು ಬರುತ್ತದೆ. ಜಗನ್ಮಿಥ್ಯಾತ್ವವನ್ನು ಸಾಧನ ಮಾಡುವ ಅನುಮಾನಕ್ಕೆ ಜಾಗ್ರತ್ವವನ್ನೇ ದೃಷ್ಟಾಂತವೆಂದು ಹೇಳಿದರೆ, ಜಾಗ್ರತ್ವಕ್ಕೆ ಪ್ರಮಾಣಬಾಧ ಹೇಗೆ ಬರುತ್ತದೋ, ಅದರಂತೆ ಜಗತ್ತಿಗೆ ಪ್ರಮಾಣಬಾಧವು ಬರುವುದಿಲ್ಲ. ಈ ವೈಲಕ್ಷಣ್ಯದಿಂದ ಜಾಗ್ರತ್ವದಂತೆ ಜಗತ್ತು ಮಿಥ್ಯಾಭೂತವೆಂದು ಸಿದ್ಧವಾಗುವುದಿಲ್ಲ. ಹೀಗೆ ಯೋಜನೆ ಮಾಡಿಕೊಳ್ಳಬೇಕು. ಇದರಿಂದಲೇ ಅದ್ವೈತಮತವೂ ಕೂಡ ನಿರಾಕೃತವಾಯಿತೆಂದು ತಿಳಿಯಬೇಕು.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಅಸದಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಅನುಪಲಬ್ಧ್ಯಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಅನುಪಲಬ್ಧ್ಯಧಿಕರಣ

## ಬ್ರಹ್ಮಸೂತ್ರ

'ನ ಭಾವೋऽನುಪಲಬ್ಧೇಃ' ಎಂಬ ಸೂತ್ರ ವ್ಯಾಖ್ಯಾನ

**सूत्रम् – न भावोऽनुपलब्धेः ।।**

ಜಗತ್ತು ಜ್ಞಾನರೂಪವೆಂದು ಹೇಳುವ ಬೌದ್ಧರ ಮತ್ತೊಂದು ಮತವು ಅಯುಕ್ತವಾಗಿದೆ. ಏಕೆಂದರೆ ಜ್ಞಾನ ಮತ್ತು ಜ್ಞೇಯಗಳು ಭಿನ್ನವಾಗಿರುವುದರಿಂದ ಅವುಗಳ ಅಭೇದವು ಅನುಭವವಿರುದ್ಧವಾಗಿದೆ.

ಅರ್ಥ -- ಭಾವಃ = ಜಗತ್ತು ಜ್ಞಾನಾತ್ಮಕವು, ನ = ಆಗುವುದಿಲ್ಲ. ಏಕೆಂದರೆ ಅನುಲಬ್ಧೇಃ = ಜ್ಞಾನ ಮತ್ತು ಜ್ಞೇಯಗಳು ಒಂದೇ ಎಂಬುದು ಅನುಭವಸಿದ್ಧವಾಗಿಲ್ಲ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ವಿಜ್ಞಾನವೇ ಜಗತ್ತಲ್ಲ

**ब्रह्मसूत्रभाष्यम् — विज्ञानवादमपाकरोति —**

**।। न भावोऽनुपलब्धेः ।।१।।**

**न विज्ञानमात्रं जगत्, तथाऽनुभवाभावात् ।।१।।**

ಅನುವಾದ - ಜಗತ್ತು ಜ್ಞಾನರೂಪವಾಗಿದೆ ಎಂದು ಹೇಳುವ ಬೌದ್ಧರ ಏಕದೇಶವಾದ ವಿಜ್ಞಾನವಾದವನ್ನು ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ.

ಜಗತ್ತನ್ನು ವಿಜ್ಞಾನ ಸ್ವರೂಪವೆಂದು ಹೇಳಬಾರದು ಹಾಗೆ ಹೇಳಲು ಯಾರ ಅನುಭವವು ಕೂಡ ಇರುವುದಿಲ್ಲ.

ಪ್ರತಿಪದಾರ್ಥ -- ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ ಎಂಬ ಮೂರು ಪಂಗಡದವರನ್ನು ನಿರಾಕರಣೆ ಮಾಡಿದ್ದಾಯಿತು. ಈಗ ವಿಜ್ಞಾನವಾದವನ್ನು ನಿರಾಕರಣೆ ಮಾಡುತ್ತಿದ್ದಾರೆ. ವಿಜ್ಞಾನವಾದಂ = ವಿಜ್ಞಾನವೇ ಜಗತ್ತೆಂದು ಹೇಳುವ ವಾದವನ್ನು, ಅಪಾಕರೋತಿ = ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ.

ಜಗತ್ = ಜಗತ್ತು, ವಿಜ್ಞಾನಮಾತ್ರಂ = ಕೇವಲ ವಿಜ್ಞಾನಸ್ವರೂಪವೆಂದು, ನ = ಹೇಳಬಾರದು, ತಥಾ = ವಿಜ್ಞಾನ ಸ್ವರೂಪ ಎಂಬ ವಿಷಯದಲ್ಲಿ, ಅನುಭವಾಭಾವಾತ್ = ಯಾರ ಅನುಭವವೂ ಕೂಡ ಇರುವುದಿಲ್ಲ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

**सत्तर्कदीपावळिः – जगच्छून्यवादं निराकृत्य जगद्विज्ञानवादमुपक्षिप्य दूषयति । ज्ञानार्थयोरभेदे अहं घट इति प्रतीतिः स्यात् । न त्वयं घट इति । अतो नार्थस्य ज्ञानाकारत्वं युज्यते अनुभवविरुद्धत्वात् ।**

ಸಮಸ್ತ ಜಗತ್ತು ಶೂನ್ಯದಿಂದಲೇ ಉತ್ಪನ್ನವಾಗುತ್ತದೆಂಬ ಮತವನ್ನು ಹಿಂದಿನ ಅಸದಧಿ-ಕರಣದಲ್ಲಿ ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಸಮಸ್ತ ಜಗತ್ತು ವಿಜ್ಞಾನಾತ್ಮಕವಾಗಿದೆ ಎಂದು ಹೇಳುವ ಬೌದ್ಧೈಕದೇಶಮತವನ್ನು ಅನುವಾದ ಮಾಡಿ ದೂಷಣೆ ಮಾಡುತ್ತಿದ್ದಾರೆ. ಜ್ಞಾನ ಮತ್ತು ಅರ್ಥ ಇವೆರಡಕ್ಕೆ ಅಭೇದವನ್ನು ಅಂಗೀಕಾರ ಮಾಡಿದರೆ 'ಅಹಂ ಘಟಃ' ಎಂಬ ಪ್ರತೀತಿ ಬರಬೇಕಾದೀತು. ಹೊರತು, 'ಅಯಂ ಘಟಃ' ಎಂಬ ಪ್ರತೀತಿಯು ಬಾರದೇ ಇರಬೇಕಾದೀತು. ಆದ್ದರಿಂದ ಘಟಪಟಾದಿ ಅರ್ಥಗಳಿಗೆ ಜ್ಞಾನಾಕಾರತ್ವವನ್ನು ಹೇಳಬಾರದು. ಅನುಭವವಿರೋಧವು ಬರುತ್ತದೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

### ವಿಜ್ಞಾನವಾದಿಗಳಿಗೆ ಹೆಚ್ಚಿನ ದೋಷ

**तत्वप्रदीपः – यथा शून्यवादिनः शून्यं तथा प्रायो विज्ञानवादिनो विज्ञानं मन्यन्ते । तत्र यथासम्भवमुक्तदोषाः प्राप्नुयुरेवावकाशम् । वैशेषिकदोष एव प्रादुष्करिष्यते । न भावोऽनुपलब्धेः ।**

ಹೇಗೆ ಶೂನ್ಯವಾದಿಗಳು ಶೂನ್ಯವನ್ನು ಪ್ರತಿಪಾದನೆ ಮಾಡುತ್ತಾರೋ, ಅದರಂತೆ ವಿಜ್ಞಾನವಾದಿಗಳು ವಿಜ್ಞಾನವನ್ನು ಪ್ರತಿಪಾದನೆ ಮಾಡುತ್ತಾರೆ. ಹಾಗಾಗಿ ಶೂನ್ಯವಾದಿಗಳಿಗೆ ಹೇಳಲ್ಪಟ್ಟ ಎಲ್ಲಾ ದೋಷಗಳಿಗೆ ಇವರಲ್ಲೂ ಕೂಡ ಹೇರಳವಾಗಿ ಅವಕಾಶವಿದೆ.

ಶೂನ್ಯವಾದಿಗಳಿಗೆ ಬಾರದ ವಿಶೇಷದೋಷಗಳನ್ನಷ್ಟೇ ಪ್ರಕೃತ ಸೂತ್ರಕಾರರು ಹೇಳಲು 'ನ ಭಾವೋऽನುಪಲಬ್ಧೇಃ' ಎಂದಿದ್ದಾರೆ.

### ವಿಷಯವಿಷಯಿಗಳಿಗೆ ಐಕ್ಯವು ಸಾಧ್ಯವೇ ಇಲ್ಲ

**तत्वप्रदीपः – न विज्ञानमात्रं जगदिति वाच्यम् । न हि ज्ञानात्मकं तदनुभूयते । तदज्ञासिषमिति ज्ञानविषयत्वेनैव । पराचीनप्रतीचीनतया प्रतीयमानयोरनयोर्विषयविषयिणोर्न कोऽपि कोविदोऽभेदवार्तामावर्तयीत । अतो न सहोपलम्भनियमादभेद इति वाच्यम् ।**

ಜಗತ್ತನ್ನು ಕೇವಲ ವಿಜ್ಞಾನಸ್ವರೂಪ ಎಂದು ಹೇಳಬಾರದು. ಜಗತ್ತು ಜ್ಞಾನಸ್ವರೂಪವಾಗಿದೆ ಎಂಬ ಅನುಭವ ಯಾರಿಗೂ ಬರುತ್ತಿಲ್ಲ. 'ತತ್ ಅಜ್ಞಾಸಿಷಮ್' ಇದನ್ನು ತಿಳಿದಿದ್ದೇನೆ ಎಂಬುದಾಗಿ ಜ್ಞಾನವಿಷಯಕವಾಗಿಯೇ ಅನುಭವ ಬರುತ್ತಿದೆ. ಹೊರಗೆ ಒಳಗೆ ಪ್ರತೀಯಮಾನವಾದ ಎರಡು ಭಿನ್ನವಾದ ವಿಷಯವಿಷಯಿಗಳಿಗೆ ಯಾರೊಬ್ಬ ಪಂಡಿತನೂ ಕೂಡ ಅಭೇದವಾರ್ತೆಯನ್ನು ಉಚ್ಚಾರ ಮಾಡಲಾರ. ಆದ್ದರಿಂದ ಸಹೋಪಲಂಭನಿಯದಿಂದ ಅಭೇದವನ್ನು ಹೇಳಬೇಕೆಂಬ ಸಮರ್ಥನೆಯು ತಪ್ಪು.

### ಜ್ಞಾನ-ಜ್ಞೇಯಗಳಿಗೆ ಭೇದಸಮರ್ಥನೆ

**तत्वप्रदीपः – न च विनष्टविद्यमानत्वेनोपलभ्यमानयोरतीत-वृष्टितत्संविदोरभेदाशङ्का बालकेष्वपि प्रापणीया । नापि भविष्यतां दिनकरोदयादीनां वर्तमानतत्संविदभेदम् आशाङ्कितुं शक्येत । अतः समानदेशो समानकालो चानुपलब्धेर्न ज्ञानज्ञेययोरैक्यम् । द्वयोश्च सहोपलम्भ इष्यते । द्वितीयाभावे केन सहोपलम्भः स्यात् । अतः सहोपलम्भ एवाभेदं निवारयति।**

ಅತೀತವೃಷ್ಟಿಯು ವಿನಷ್ಟವಾಗಿದೆ. ಅತೀತವೃಷ್ಟಿಯ ಜ್ಞಾನವು ವಿದ್ಯಮಾನವಾಗಿದೆ. ಇವೆರಡಕ್ಕೆ ಅಭೇದಾಶಂಕೆಯನ್ನು ಬಾಲಕರಲ್ಲೂ ಕೂಡ ಉಂಟು ಮಾಡಲು ಸಾಧ್ಯವಿಲ್ಲ. ಮತ್ತು ಸೂರ್ಯೋದಯವು ಮುಂದಾಗುತ್ತದೆ. ಅದರ ಜ್ಞಾನವು ವರ್ತಮಾನಕಾಲದಲ್ಲಿದೆ. ಮುಂದೆ

ಆಗುವ ಸೂರ್ಯೋದಯಕ್ಕೂ, ಈಗ ಇರುವ ಸೂರ್ಯೋದಯದ ಜ್ಞಾನಕ್ಕೂ ಅಭೇದವನ್ನು ಆಶಂಕಿಸಲೂ ಕೂಡ ಸಾಧ್ಯವಿಲ್ಲ.

ಆದ್ದರಿಂದ ಸಮಾನದೇಶದಲ್ಲಿ ಮತ್ತು ಸಮಾನಕಾಲದಲ್ಲಿ ಅನುಪಲಬ್ಧವಾದ್ದರಿಂದ ಜ್ಞಾನ ಮತ್ತು ಜ್ಞೇಯಗಳಿಗೆ ಐಕ್ಯವನ್ನು ಸರ್ವಥಾ ಹೇಳಬಾರದು. ಜ್ಞಾನ ಮತ್ತು ಜ್ಞೇಯಗಳು ಒಟ್ಟಿಗೆ ಇವೆ ಎಂದು ಅಂಗೀಕರಿಸಲಾಗಿದೆ. ಒಂದು ವೇಳೆ ಎರಡನೆಯ ಪದಾರ್ಥವೇ ಇಲ್ಲವಾದರೆ ಯಾವುದರ ಜೊತೆ ಯಾವುದು ಇದೆ ಎಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಯಾವ ಸಹೋಪಲಂಭವನ್ನು ಅಭೇದವಿಷಯವನ್ನು ಪ್ರಮಾಣವನ್ನಾಗಿ ಹೇಳುತ್ತೀರೋ, ಅದೇ ಸಹೋಪಲಂಭವು ಅಭೇದಕ್ಕೆ ಮಾರಕವೇ ಆಗಿದೆ. ಸಹೋಪಲಂಭದಿಂದ ಜ್ಞಾನಜ್ಞೇಯಗಳಿಗೆ ಭೇದವೇ ಸಿದ್ಧವಾಗುತ್ತದೆ.

ವಿವರಣೆ - ವೈಭಾಷಿಕರ ಮತ್ತು ಸೌತ್ರಾಂತಿಕರ ಮತವನ್ನು ಸಮುದಾಯಾಧಿಕರಣದಲ್ಲಿ ನಿರಾಕರಣೆ ಮಾಡಿದ್ದಾಯಿತು. ಮಾಧ್ಯಮಿಕರ ಮತವನ್ನು ಅಸದಧಿಕರಣದಲ್ಲಿ ನಿರಾಕರಣೆ ಮಾಡಲಾಯಿತು. ಯೋಗಾಚಾರರ ಮತವನ್ನು ಈ ಅನುಪಲಬ್ಧ್ಯಧಿಕರಣದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ವೈಭಾಷಿಕರು ಹಾಗೂ ಸೌತ್ರಾಂತಿಕರು ಪರಮಾಣು ಸಮೂಹರೂಪವಾದ ಜಗತ್ತನ್ನು ಕ್ಷಣಿಕ ಎನ್ನುತ್ತಾರೆ. ಮಾಧ್ಯಮಿಕರು ಈ ಜಗತ್ತನ್ನು ಶೂನ್ಯ ಎನ್ನುತ್ತಾರೆ. ಪ್ರಕೃತ ಯೋಗಾಚಾರರು ಜ್ಞಾನಸ್ವರೂಪ ಎನ್ನುತ್ತಾರೆ. ಕಣ್ಣಿಗೆ ಕಾಣಸುತ್ತಿರುವ ಎಲ್ಲಾ ಪದಾರ್ಥಗಳು ಜ್ಞಾನದ ಆಕಾರವಿಶೇಷವೇ ಆಗಿದೆ. ಜ್ಞಾನ ಇಲ್ಲದಿದ್ದರೆ ಜಗತ್ತೇ ಇಲ್ಲದಾಗುತ್ತದೆ ಎಂಬುದು ಯೋಗಾಚಾರರ ಅಭಿಪ್ರಾಯ. ಸೂತ್ರದಲ್ಲಿ ಭಾವ ಎಂಬ ಶಬ್ದವಿದೆ. ಇದಕ್ಕೆ ಜ್ಞಾನ ಎಂಬರ್ಥವನ್ನು ವಿವಕ್ಷಿಸಬೇಕು. ವಿಜ್ಞಾನವಾದದಲ್ಲಿ ಇರುವ ಪದಾರ್ಥಗಳೆಲ್ಲವೂ ಜ್ಞಾನಸ್ವರೂಪವಾದ್ದರಿಂದ ಭಾವಶಬ್ದವನ್ನು ಪ್ರಯೋಗಿಸಿದ್ದು ಅತ್ಯಂತ ಅರ್ಥಪೂರ್ಣವಾಗಿದೆ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

### ಯೋಗಾಚಾರಮತದ ನಿರಾಕರಣೆಗಾಗಿ ಅನುಪಲಬ್ಧ್ಯಧಿಕರಣ

**तत्वप्रकाशिका – अधिकरणार्थं दर्शयति – विज्ञानेति ।। अत्रेश्वरस्य जगत्कारणत्वे विज्ञानवादविरोधनिरासादस्ति शास्त्रादिसङ्गतिः । ईश्वरो जगत्कारणमित्युक्तम् । तत्र च योगाचारमतविरोधेऽनुपपन्नत्वप्रसङ्गादवश्यं निरसनीयं तद्भवति । हरेर्जगत्कारणत्वमेव विषयः । युक्तमयुक्तं वेति सन्देहः। समयविवाद एव सन्देहबीजम् ।**

ಈ ಅಧಿಕರಣದ ಪ್ರಮೇಯನ್ನು 'ವಿಜ್ಞಾನವಾದಂ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ಈ ಅಧಿಕರಣದಲ್ಲಿ ಈಶ್ವರನ ಜಗತ್ಕಾರಣತ್ವವಿಷಯದಲ್ಲಿ ವಿಜ್ಞಾನವಾದದ ವಿರೋಧವನ್ನು ನಿರಾಕರಣೆ ಮಾಡುತ್ತಿದ್ದಾರೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ಈಶ್ವರನೇ ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳಲಾಯಿತು. ಈ ವಿಷಯದಲ್ಲಿ ಯೋಗಾಚಾರ ಮತದ ವಿರೋಧವು ಪ್ರಾಪ್ತವಾದರೆ ಈಶ್ವರನ ಜಗತ್ಕಾರಣತ್ವವು ಅನುಪಪನ್ನವಾಗುತ್ತದೆ. ಆದ್ದರಿಂದ ಅವಶ್ಯವಾಗಿ ಈ ಮತವನ್ನು ನಿರಾಕರಣೆ ಮಾಡಲೇಬೇಕು.

ಶ್ರೀಹರಿಯ ಜಗತ್ಕಾರಣತ್ವವೇ ಅಧಿಕರಣದ ವಿಷಯ. ಇದು ಯುಕ್ತವೋ ಅಯುಕ್ತವೋ? ಎಂದು ಸಂದೇಹ. ಪ್ರಮೇಯಗಳಲ್ಲಿರುವ ವಿವಾದವೇ ಸಂದೇಹಬೀಜ.

ವಿವರಣೆ - ಶೂನ್ಯವಾದಿಗಳಿಗೆ 'ನಾಸತೋ ಅದೃಷ್ಟತ್ವಾತ್' ಎಂಬ ಸೂತ್ರದಿಂದ ಹೇಳಲ್ಪಟ್ಟ ದೋಷವು ಯೋಗಾಚಾರಪಂಥದ ನಮಗೆ ಬರುವುದಿಲ್ಲ. ಪಾರಮಾರ್ಥಿಕವಾದ ಪದಾರ್ಥವೇ ವಿಜ್ಞಾನಾತ್ಮಕವಾಗಿ ಜಗದ್ರೂಪದಲ್ಲಿ ಪರಿಣಾಮ ಹೊಂದಿದೆ ಎಂದು ನಾವು ಹೇಳುತ್ತಿದ್ದೇವೆ. ಹೀಗೆ ಹೇಳುವ ವಿಜ್ಞಾನವಾದದ ನಿರಾಕರಣೆಗಾಗಿ ಈ ಅಧಿಕರಣ ಹೊರಟದೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ಜಗತ್ತು ವಿಜ್ಞಾನತತ್ತ್ವಾತ್ಮಕ

**तत्वप्रकाशिका – न युक्तमिति पूर्वः पक्षः । नित्यं निरञ्जनं विज्ञानतत्त्वमेकमेव खलु विद्यमानम्। तन्मात्रमेवेदं जगन्न तु ततोऽतिरिक्तमस्ति । ततो जगदुदये नेश्वरेण कृत्यमित्ययुक्तं लक्षणमिति प्राप्ते सिद्धान्तयत्सूत्रमुपन्यस्य व्याचष्टे – नेति ।।**

ಶ್ರೀಹರಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ನಿತ್ಯವಾದ ದೋಷರಹಿತವಾದದ್ದೇ ವಿಜ್ಞಾನತತ್ವ. ಇದು ಒಂದೇ ವಸ್ತುವಾಗಿದೆ. ಸಮಸ್ತ ಜಗತ್ತು ಈ ವಿಜ್ಞಾನತತ್ವದ ಸ್ವರೂಪವೇ ಆಗಿದೆ. ಇದಕ್ಕಿಂತ ಅತಿರಿಕ್ತವಾದ ಬೇರೆ ಯಾವುದೇ ಪದಾರ್ಥವಿಲ್ಲ. ಹೀಗಿರುವಾಗ ಜಗತ್ತಿನ ಉತ್ಪತ್ತಿಗೆ ಈಶ್ವರನ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ಜಗತ್ಕಾರಣತ್ವವು ಈಶ್ವರನ ಲಕ್ಷಣ ಎಂಬುದು ಅಯುಕ್ತವಾಗಿದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ನ ಭಾವೋಽಪನುಲಬ್ಧೇಃ' ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಭಾವದೀಪ

**भावदीपः – ।। न भावोऽनुपलब्धेः ।।३०।। नित्यमिति ।।** प्रवाहतो नित्यमित्यर्थः। ज्ञानस्य क्षणिकत्वात् कैवल्यान्वयायैतदुक्तिः। नासत इत्युक्तदोषो नेति भावोनोक्तम् – **विद्यमानमिति ।।** विज्ञानमात्रं जगदिति भाष्यं व्यनक्ति – **तन्मात्रमेवेति ।।** तथाच नाभावा इत्याद्युक्तदोषोऽपि नेति भावः।।

'ನಿತ್ಯಂ' ಎಂಬ ಪದಕ್ಕೆ ಪ್ರವಾಹತಃ ನಿತ್ಯವಾದದ್ದೆಂದರ್ಥ. ಜ್ಞಾನವನ್ನು ಇವರು ಕ್ಷಣಿಕವೆನ್ನುತ್ತಾರೆ. ಎಲ್ಲವೂ ಕೂಡ ಕೇವಲ ಜ್ಞಾನಸ್ವರೂಪ ಎನ್ನುತ್ತಾರೆ. ಆದಕ್ಕಾಗಿ ಪ್ರವಾಹತಃ ನಿತ್ಯತ್ವವನ್ನು ಇಲ್ಲಿ ತಿಳಿಯಬೇಕು. 'ನಾಸತೋಽದೃಷ್ಟತ್ವಾತ್' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ದೋಷವು ಬರುವುದಿಲ್ಲ ಎಂಬ

ಅಭಿಪ್ರಾಯದಿಂದ 'ವಿದ್ಯಮಾನಮ್' ಎಂಬ ಪದದಿಂದ ತಿಳಿಸುತ್ತಾರೆ. 'ವಿಜ್ಞಾನಮಾತ್ರಂ ಜಗತ್' ಎಂಬ ಭಾಷ್ಯವನ್ನು 'ತನ್ಮಾತ್ರಮೇವ' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಹಾಗಾಗಿ 'ನಾಭಾವೋಪಲಬ್ಧೇಃ' ಎಂಬ ಸೂತ್ರದಲ್ಲಿ ಹೇಳಿದ ದೋಷವೂ ಕೂಡ ಇವರಿಗೆ ಬರುವುದಿಲ್ಲ.

ವಿವರಣೆ - ಸಮಸ್ತ ಜಗತ್ತು ಜ್ಞಾನಾತ್ಮಕವೆಂದು ಇವರು ಹೇಳುತ್ತಿದ್ದಾರೆ. ವಿಜ್ಞಾನವು ಪ್ರವಾಹತಃ ನಿತ್ಯವೆಂದು ತಿಳಿಯಬೇಕು. ಹಿಂದೆ 'ನಾಸತೋಽದೃಷ್ಟತ್ವಾತ್' ಎಂಬ ಸೂತ್ರದಲ್ಲಿ ಅಸತ್ತಿಗೆ ಜಗತ್ಕಾರಣತ್ವವು ಎಲ್ಲೂ ಕೂಡ ಕಂಡಿಲ್ಲವೆಂದು ಹೇಳಲಾಗಿತ್ತು. ಈ ದೋಷ ವಿಜ್ಞಾನವಾದಿಗಳಿಗೆ ಪ್ರಾಪ್ತವಾಗುವುದಿಲ್ಲ. ಏಕೆಂದರೆ ಇವರು ಜ್ಞಾನವನ್ನು ಅಸದಾತ್ಮಕವೆಂದು ಹೇಳುವುದಿಲ್ಲ. ಆದ್ದರಿಂದ ಅವರಿಗೆ ಬಂದ ದೋಷ ಇವರಿಗೆ ಪ್ರಾಪ್ತವಾಗುವುದಿಲ್ಲ. 'ನಾಭಾವೋಪಲಬ್ಧೇಃ' ಎಂಬ ಸೂತ್ರದಲ್ಲಿ ಸಮಸ್ತ ಜಗತ್ತು ಶೂನ್ಯದಲ್ಲಿ ಆರೋಪಿತವೆಂದು ಹೇಳಿದರೆ, ಅನುಭವವಿರೋಧ ಬರುತ್ತದೆ ಎಂದು ಹೇಳಲಾಗಿತ್ತು. ಈ ದೋಷವೂ ಕೂಡ ಈ ವಿಜ್ಞಾನವಾದಿಗಳಿಗೆ ಬರುವುದಿಲ್ಲ. ಏಕೆಂದರೆ ಇವರು ಸಮಸ್ತ ಜಗತ್ತು ಕೇವಲ ಜ್ಞಾನಾತ್ಮಕವೆಂದು ಹೇಳುತ್ತಾರೆ.

ವಿಜ್ಞಾನಕ್ಕಿಂತ ಬೇರೆ ಜಗತ್ತಿಲ್ಲ ಎಂದರೇನು ?

**तत्वप्रकाशिका – न विज्ञानातिरिक्तं जगदिति वदन् प्रष्टव्यो जायते । किं विज्ञानतत्त्वे जगदध्यस्तमिति पक्ष उत परमार्थतो विज्ञानजगतोरभेद एवेति । तत्राद्योऽतीताधिकारणन्यायेन निराकर्तव्यः । नापि द्वितीयः । विज्ञानात्मकं जगदित्यत्र प्रमाणाभावादिति भावः ।**

ವಿಜ್ಞಾನಕ್ಕಿಂತ ಅತಿರಿಕ್ತವಾದ ಜಗತ್ತೇ ಇಲ್ಲ ಎಂದು ಹೇಳುವ ಯೋಗಾಚಾರರನ್ನು ಕುರಿತು ಪ್ರಶ್ನಿಸುತ್ತೇವೆ. ವಿಜ್ಞಾನತತ್ವದಲ್ಲಿ ಜಗತ್ತು ಆರೋಪಿತವಾಗಿದೆ ಎಂದು ಅಭಿಪ್ರಾಯವೋ ? ಅಥವಾ ಜಗತ್ತು ಹಾಗೂ ವಿಜ್ಞಾನಗಳಿಗೆ ಪಾರಮಾರ್ಥಿಕವಾಗಿ ಅಭೇದವಿದೆ ಎಂದು ಅಭಿಪ್ರಾಯವೋ?

ಪ್ರಥಮಪಕ್ಷವು ಹಿಂದಿನ ಅಧಿಕರಣನ್ಯಾಯದಿಂದ ನಿರಾಕೃತವಾಗುತ್ತದೆ. ಎರಡನೆಯ ಪಕ್ಷವನ್ನು ಒಪ್ಪಿದರೆ ಜಗತ್ತು ವಿಜ್ಞಾನಸ್ವರೂಪ ಎನ್ನಲು ಪ್ರಮಾಣವೇ ಇಲ್ಲ.

ಜಗತ್ತು ವಿಜ್ಞಾನತತ್ತ್ವಾತ್ಮಕ

**तत्वप्रकाशिका – न युक्तमिति पूर्वः पक्षः । नित्यं निरञ्जनं विज्ञानतत्त्वमेकमेव खलु विद्यमानम्। तन्मात्रमेवेदं जगन्न तु ततोऽतिरिक्तमस्ति । ततो जगदुदये नेश्वरेण कृत्यमित्ययुक्तं लक्षणमिति प्राप्ते सिद्धान्तयत्सूत्रमुपन्यस्य व्याचष्टे – नेति ।।**

ಶ್ರೀಹರಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ನಿತ್ಯವಾದ ದೋಷರಹಿತವಾದದ್ದೇ ವಿಜ್ಞಾನತತ್ವ. ಇದು ಒಂದೇ ವಸ್ತುವಾಗಿದೆ. ಸಮಸ್ತ ಜಗತ್ತು ಈ ವಿಜ್ಞಾನತತ್ವದ ಸ್ವರೂಪವೇ ಆಗಿದೆ. ಇದಕ್ಕಿಂತ ಅತಿರಿಕ್ತವಾದ ಬೇರೆ ಯಾವುದೇ ಪದಾರ್ಥವಿಲ್ಲ. ಹೀಗಿರುವಾಗ ಜಗತ್ತಿನ ಉತ್ಪತ್ತಿಗೆ ಈಶ್ವರನ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ಜಗತ್ಕಾರಣತ್ವವು ಈಶ್ವರನ ಲಕ್ಷಣ ಎಂಬುದು ಅಯುಕ್ತವಾಗಿದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ನ ಭಾವೋऽಪನುಲಬ್ಧೇಃ' ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಭಾವದೀಪ

**भावदीपः – ।। न भावोऽनुपलब्धेः ।।३०।। नित्यमिति ।।** प्रवाहतो नित्यमित्यर्थः। ज्ञानस्य क्षणिकत्वात् कैवल्यान्वयायैतदुक्तिः। नासत इत्युक्तदोषो नेति भावोनोक्तम् – **विद्यमानमिति ।।** विज्ञानमात्रं जगदिति भाष्यं व्यनक्ति – **तन्मात्रमेवेति ।।** तथाच नाभावा इत्याद्युक्तदोषोऽपि नेति भावः ।।

'ನಿತ್ಯಂ' ಎಂಬ ಪದಕ್ಕೆ ಪ್ರವಾಹತಃ ನಿತ್ಯವಾದದ್ದೆಂದರ್ಥ. ಜ್ಞಾನವನ್ನು ಇವರು ಕ್ಷಣಿಕವೆನ್ನುತ್ತಾರೆ. ಎಲ್ಲವೂ ಕೂಡ ಕೇವಲ ಜ್ಞಾನಸ್ವರೂಪ ಎನ್ನುತ್ತಾರೆ. ಆದಕ್ಕಾಗಿ ಪ್ರವಾಹತಃ ನಿತ್ಯತ್ವವನ್ನು ಇಲ್ಲಿ ತಿಳಿಯಬೇಕು. 'ನಾಸತೋऽದೃಷ್ಟತ್ವಾತ್' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ದೋಷವು ಬರುವುದಿಲ್ಲ ಎಂಬ

ಅಭಿಪ್ರಾಯದಿಂದ 'ವಿದ್ಯಮಾನಮ್' ಎಂಬ ಪದದಿಂದ ತಿಳಿಸುತ್ತಾರೆ. 'ವಿಜ್ಞಾನಮಾತ್ರಂ ಜಗತ್' ಎಂಬ ಭಾಷ್ಯವನ್ನು 'ತನ್ಮಾತ್ರಮೇವ' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಹಾಗಾಗಿ 'ನಾಭಾವೋಪಲಬ್ಧೇಃ' ಎಂಬ ಸೂತ್ರದಲ್ಲಿ ಹೇಳಿದ ದೋಷವೂ ಕೂಡ ಇವರಿಗೆ ಬರುವುದಿಲ್ಲ.

ವಿವರಣೆ - ಸಮಸ್ತ ಜಗತ್ತು ಜ್ಞಾನಾತ್ಮಕವೆಂದು ಇವರು ಹೇಳುತ್ತಿದ್ದಾರೆ. ವಿಜ್ಞಾನವು ಪ್ರವಾಹತಃ ನಿತ್ಯವೆಂದು ತಿಳಿಯಬೇಕು. ಹಿಂದೆ 'ನಾಸತೋಽದೃಷ್ಟತ್ವಾತ್' ಎಂಬ ಸೂತ್ರದಲ್ಲಿ ಅಸತ್ತಿಗೆ ಜಗತ್ಕಾರಣತ್ವವು ಎಲ್ಲೂ ಕೂಡ ಕಂಡಿಲ್ಲವೆಂದು ಹೇಳಲಾಗಿತ್ತು. ಈ ದೋಷ ವಿಜ್ಞಾನವಾದಿಗಳಿಗೆ ಪ್ರಾಪ್ತವಾಗುವುದಿಲ್ಲ. ಏಕೆಂದರೆ ಇವರು ಜ್ಞಾನವನ್ನು ಅಸದಾತ್ಮಕವೆಂದು ಹೇಳುವುದಿಲ್ಲ. ಆದ್ದರಿಂದ ಅವರಿಗೆ ಬಂದ ದೋಷ ಇವರಿಗೆ ಪ್ರಾಪ್ತವಾಗುವುದಿಲ್ಲ. 'ನಾಭಾವೋಪಲಬ್ಧೇಃ' ಎಂಬ ಸೂತ್ರದಲ್ಲಿ ಸಮಸ್ತ ಜಗತ್ತು ಶೂನ್ಯದಲ್ಲಿ ಆರೋಪಿತವೆಂದು ಹೇಳಿದರೆ, ಅನುಭವವಿರೋಧ ಬರುತ್ತದೆ ಎಂದು ಹೇಳಲಾಗಿತ್ತು. ಈ ದೋಷವೂ ಕೂಡ ಈ ವಿಜ್ಞಾನವಾದಿಗಳಿಗೆ ಬರುವುದಿಲ್ಲ. ಏಕೆಂದರೆ ಇವರು ಸಮಸ್ತ ಜಗತ್ತು ಕೇವಲ ಜ್ಞಾನಾತ್ಮಕವೆಂದು ಹೇಳುತ್ತಾರೆ.

ವಿಜ್ಞಾನಕ್ಕಿಂತ ಬೇರೆ ಜಗತ್ತಿಲ್ಲ ಎಂದರೇನು ?

**तत्वप्रकाशिका – न विज्ञानातिरिक्तं जगदिति वदन् प्रष्टव्यो जायते । किं विज्ञानतत्त्वे जगदध्यस्तमिति पक्ष उत परमार्थतो विज्ञानजगतोरभेद एवेति । तत्राद्योऽतीताधिकारणन्यायेन निराकर्तव्यः । नापि द्वितीयः । विज्ञानात्मकं जगदित्यत्र प्रमाणाभावादिति भावः ।**

ವಿಜ್ಞಾನಕ್ಕಿಂತ ಅತಿರಿಕ್ತವಾದ ಜಗತ್ತೇ ಇಲ್ಲ ಎಂದು ಹೇಳುವ ಯೋಗಾಚಾರರನ್ನು ಕುರಿತು ಪ್ರಶ್ನಿಸುತ್ತೇವೆ. ವಿಜ್ಞಾನತತ್ವದಲ್ಲಿ ಜಗತ್ತು ಆರೋಪಿತವಾಗಿದೆ ಎಂದು ಅಭಿಪ್ರಾಯವೋ ? ಅಥವಾ ಜಗತ್ತು ಹಾಗೂ ವಿಜ್ಞಾನಗಳಿಗೆ ಪಾರಮಾರ್ಥಿಕವಾಗಿ ಅಭೇದವಿದೆ ಎಂದು ಅಭಿಪ್ರಾಯವೋ?

ಪ್ರಥಮಪಕ್ಷವು ಹಿಂದಿನ ಅಧಿಕರಣನ್ಯಾಯದಿಂದ ನಿರಾಕೃತವಾಗುತ್ತದೆ. ಎರಡನೆಯ ಪಕ್ಷವನ್ನು ಒಪ್ಪಿದರೆ ಜಗತ್ತು ವಿಜ್ಞಾನಸ್ವರೂಪ ಎನ್ನಲು ಪ್ರಮಾಣವೇ ಇಲ್ಲ.

**भावदीपः** – छलोत्तरत्वनिरासाय विकल्प्यान्तिमपक्षे भाष्यं व्याचष्टे – **किं विज्ञानेति ।।** भाष्यस्थानुभवशब्दः प्रमाणत्रयजन्यप्रमामात्रपर इति भावेनाह – **प्रमाणाभावादिति ।।**

'ಛಲೋತ್ತರ' ಎಂಬ ನಿಗ್ರಹ ಸ್ಥಾನ ನಮಗೆ ಬರುವುದಿಲ್ಲ ಎಂದು ತಿಳಿಸುವುದಕ್ಕಾಗಿ ವಿಕಲ್ಪ ಮಾಡುವ ಮೂಲಕ ಎರಡನೆಯ ಪಕ್ಷದಲ್ಲಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಕಿಂ ವಿಜ್ಞಾನತತ್ವೇ' ಇತ್ಯಾದಿಯಾಗಿ ಟೀಕೆಯು ಹೊರಟಿದೆ. ಭಾಷ್ಯದಲ್ಲಿರುವ ಅನುಭವಶಬ್ದವು ಮೂರು ಪ್ರಮಾಣಗಳಿಂದ ಹುಟ್ಟಿದ ಪ್ರಮಾವನ್ನು ಮಾತ್ರ ಹೇಳುತ್ತಿದೆ. ಈ ಅಭಿಪ್ರಾಯದಿಂದ 'ಪ್ರಮಾಣಾಭಾವಾತ್' ಎಂದು ಹೇಳಿದ್ದಾರೆ.

ವಿವರಣೆ - ವಕ್ತೃವಿನ ಅಭಿಪ್ರಾಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಬೇರೆ ಅರ್ಥದಲ್ಲಿ ಪರ್ಯವಸಾನ ಮಾಡಿದರೆ, ಅಥವಾ ದೋಷವನ್ನು ಹೇಳಿದರೆ ಛಲೋತ್ತರ ಎಂಬ ನಿಗ್ರಹಸ್ಥಾನ ಬರುತ್ತದೆ. ಪ್ರಕೃತ ವಿಜ್ಞಾನವಾದಿಗಳಾದ ನಮ್ಮ ಅಭಿಪ್ರಾಯವೇ ತತ್ವವಾದಿಗಳಿಗೆ ತಿಳಿದಿರುವುದಿಲ್ಲ ಎಂದು ಬೌದ್ಧರು ಆಕ್ಷೇಪ ಮಾಡಬಹುದು. ಅದಕ್ಕಾಗಿ ವಿಕಲ್ಪ ಮಾಡಿಕೊಂಡು ನಿಮ್ಮ ಅಭಿಪ್ರಾಯವೇನೆಂದು ಬೌದ್ಧರಿಗೆ ಪ್ರಶ್ನಿಸಲಾಗಿದೆ.

ಭಾಷ್ಯದಲ್ಲಿ 'ಅನುಭವಾಭಾವಾತ್' ಎಂಬ ಪದವಿದೆ. ಸಮಸ್ತ ಜಗತ್ತು ವಿಜ್ಞಾನಾತ್ಮಕವಾಗಿದೆ ಎನ್ನಲು ಅನುಭವಪ್ರಮಾಣವಿಲ್ಲ ಎಂದಷ್ಟೇ ಇದರಿಂದ ತಿಳಿಯುತ್ತದೆ. ಆದರೆ ಮೂರು ಪ್ರಮಾಣಗಳಿಂದ ಜನ್ಯವಾದ ಪ್ರಮಾವನ್ನು ಅನುಭವಶಬ್ದದಿಂದ ವಿವಕ್ಷಿಸಬೇಕು. ಸಮಸ್ತ ಜಗತ್ತು ವಿಜ್ಞಾನಾತ್ಮಕವಾಗಿದೆ ಎನ್ನಲು ಮೂರು ಪ್ರಮಾಣಗಳಿಂದ ಜನ್ಯವಾದ ಯಥಾರ್ಥಜ್ಞಾನ ಯಾರಿಗೂ ಇಲ್ಲ ಎಂಬರ್ಥವನ್ನು ಈಗ ಹೇಳಿದಂತಾಗುತ್ತದೆ.

ಜ್ಞೇಯವಾದ ಪದಾರ್ಥಗಳೆಲ್ಲವೂ ಸ್ವರೂಪತಃ ಅಸತ್ಯವೇ ಆಗಿದೆ. ವಿಜ್ಞಾನದಲ್ಲಿ ಇವುಗಳು ಆರೋಪಿತವಾಗಿ ವಿಜ್ಞಾನಸ್ವರೂಪವೇ ಆಗಿವೆ ಎಂದು ಅಭಿಪ್ರಾಯವೋ? ಅಥವಾ ಪಾರಮಾರ್ಥಿಕವಾಗಿ ಸತ್ಯವಾದ ಜ್ಞೇಯಪದಾರ್ಥವೇ ವಿಜ್ಞಾನಾತ್ಮಕವಾಗಿವೆ; ಭೇದವೇ ಇರುವುದಿಲ್ಲ ಎಂದೋ? ಇದು ವಿಕಲ್ಪದ ಅಭಿಪ್ರಾಯ. ಸೂತ್ರದಲ್ಲಿ ಜಗತ್ ಎಂಬುದು ಪ್ರಕೃತವಾಗಿದೆ. ಆದ್ದರಿಂದ 'ಜಗತ್ತು ಜ್ಞಾನರೂಪವಲ್ಲ; ಅಭೇದದ ಅನುಭವ ಇಲ್ಲದಿರುವುದರಿಂದ' ಎಂದು ಸೂತ್ರಾರ್ಥವನ್ನು ಹೇಳಿದಂತಾಯಿತು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು 'ನ ದ್ವಿತೀಯಃ' ಇತ್ಯಾದಿ ಟೀಕೆಯು ಹೊರಟಿದೆ.

ಜ್ಞಾನಸ್ವರೂಪವೆಂದರೆ ಅನೇಕ ದೋಷಗಳು

**तत्वप्रकाशिका – न च 'सहोपलम्भनियमादभेदो नीलतद्धियोः' । इति युक्तम् । भेदप्रतीतिविरोधात् । न चेयं भ्रान्तिः । बाधकाभावात् । अनुमानस्यैव बाधकत्वे स्फुटमितरेतराश्रयत्वं सहोपलम्भादभेद इति प्रतिज्ञाहेत्वोर्विरोधश्च । साहित्यस्य भेद एवोपपत्तेः ।**

'ಸಹೋಪಲಂಭನಿಯಮಾತ್ ಅಭೇದೋ ನೀಲತದ್ಧಿಯೋಃ' 'ಸಹೋಪಲಂಭನಿಯಮ ಇರುವುದರಿಂದ ನೀಲ ಹಾಗೂ ನೀಲಜ್ಞಾನಗಳಿಗೆ ಭೇದವನ್ನು ಹೇಳಬೇಕು' ಎಂಬುದು ಯುಕ್ತವಲ್ಲ. ಭೇದಪ್ರತೀತಿಗೆ ವಿರೋಧ ಬರುತ್ತದೆ. ಇದನ್ನು ಭ್ರಾಂತಿ ಎನ್ನಲು ಬಾಧಕವಿರುವುದಿಲ್ಲ. ಅನುಮಾನವನ್ನೇ ಬಾಧಕವೆಂದರೆ ಅನ್ಯೋನ್ಯಾಶ್ರದೋಷವು ಬರುತ್ತದೆ. ಮತ್ತು ನೀನು ಮಾಡಿದ ಪ್ರತಿಜ್ಞೆ ಹಾಗೂ ಹೇತುಗಳ ವಿರೋಧವೂ ಕೂಡ ಬರುತ್ತದೆ. ಸಹಭಾವವು ಭೇದವಿದ್ದಲ್ಲಿ ಮಾತ್ರ ಯುಕ್ತವಾಗುತ್ತದೆ.

**भावदीपः** – परोक्तमनुमानमाशङ्क्य निराह – **न च सहेति ।।** तथानुभवाभावादिति भाष्यस्य प्रत्युत वैपरीत्येनैवानुभवादित्यर्थमुपेत्याह – **भेदेति ।। स्फुटमिति ।।** भेदप्रतीतेर्भ्रान्तित्वे सिद्धे तस्या अविरोधकत्वादनुमानेनाभेदसिद्धिः। सिद्धे च तेनाभेदे भेदप्रतीतेर्भ्रान्तित्वसिद्धिरिति स्फुटमितरेतराश्रयत्वमित्यर्थः।

ವಿಜ್ಞಾನವಾದಿಗಳು ಪ್ರಮಾಣವನ್ನಾಗಿ ಹೇಳಬಹುದಾದ ಅನುಮಾನಸ್ವರೂಪವನ್ನು ಉಲ್ಲೇಖ ಮಾಡಿ ನಿರಾಕರಣೆ ಮಾಡುವುದಕ್ಕಾಗಿ 'ನಚ ಸಹೋಪಲಂಭ' ಇತ್ಯಾದಿ ವಾಕ್ಯವು ಹೊರಟಿದೆ. 'ತಥಾऽನುಭವಾಭಾವಾತ್' ಎಂಬ ಭಾಷ್ಯಕ್ಕೆ ಮೂರು ಪ್ರಮಾಣಗಳಿಂದ ವಿಜ್ಞಾನಾತ್ಮಕವೆಂಬ ಯಥಾರ್ಥಜ್ಞಾನ ಬರುತ್ತಿಲ್ಲ ಎಂದಷ್ಟೇ ಅಲ್ಲ. ವಿಜ್ಞಾನಾತ್ಮಕವಲ್ಲ ಎಂಬುದಾಗಿ ವಿಪರೀತವಾಗಿಯೇ ಅನುಭವ ಬರುತ್ತಿದೆ ಎಂಬರ್ಥವನ್ನು ಅಂಗೀಕಾರ ಮಾಡಿ, 'ಭೇದಪ್ರತೀತಿವಿರೋಧಾತ್' ಎಂಬುದಾಗಿ ಉತ್ತರಿಸುತ್ತಿದ್ದಾರೆ.

ಭೇದಪ್ರತೀತಿಗೆ ಭ್ರಾಂತಿತ್ವವು ಸಿದ್ಧವಾದರೆ ಆದರ ವಿರೋಧವಿಲ್ಲದ ಕಾರಣ ಅನುಮಾನದಿಂದ ಅಭೇದವು ಸಿದ್ಧವಾಗುತ್ತದೆ. ಅನುಮಾನದಿಂದ ಅಭೇದವು ಸಿದ್ಧವಾದರೆ ಭೇದಪ್ರತೀತಿಗೆ ಭ್ರಾಂತಿತ್ವವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ.

ವಿವರಣೆ - ನೀಲ ಎಂಬ ಪದದಿಂದ ಘಟವನ್ನು ವಿವಕ್ಷಿಸಬೇಕು. ಘಟ ಹಾಗೂ ಘಟಜ್ಞಾನಗಳು ಒಟ್ಟಿಗೆ ಉಪಲಬ್ಧವಾಗುವುದರಿಂದ ಘಟ ಹಾಗೂ ಘಟಜ್ಞಾನಗಳಿಗೆ ಅಭೇದವನ್ನು ಹೇಳಬೇಕು ಎಂಬುದು ವಿಜ್ಞಾನವಾದಿಗಳ ಅಭಿಪ್ರಾಯ. ಅನುಮಾನವನ್ನು ಹೀಗೆ ತಿಳಿಯಬೇಕು - 'ಘಟಜ್ಞಾನಂ, ಘಟಾಭಿನ್ನಂ, ಘಟೇನ ಸಃ ಉಪಲಂಭಾತ್' ಎಂದು. ಈ ಅನುಮಾನಕ್ಕೆ ಭೇದಪ್ರತೀತಿಯ ವಿರೋಧವಿದೆ. ಘಟವೇ ಬೇರೆ ಘಟಜ್ಞಾನವೇ ಬೇರೆ ಎಂಬುದಾಗಿ ಭೇದಪ್ರತೀತಿಯು ಬರುತ್ತಿದೆ.

ಜಗತ್ತು ಮತ್ತು ಜ್ಞಾನ ಎರಡು ಕೂಡ ಒಂದೇ ಎಂಬುದು ಯೋಗಾಚಾರಮತದ ಅಭಿಪ್ರಾಯ. ಆದರೆ ಜಗತ್ತು ಮತ್ತು ಜ್ಞಾನಗಳಿಗೆ ಭೇದಪ್ರತೀತಿಯೇ ಬರುತ್ತಿರುವುದರಿಂದ ಅಭೇದವನ್ನು ಹೇಳುವುದು ಸರಿಯಲ್ಲ. ಬರುತ್ತಿರುವ ಈ ಭೇದಪ್ರತೀತಿಯನ್ನು ಬಾಧವೆಂದು ಹೇಳಬೇಕೆಂದರೆ ಬಾಧಕಜ್ಞಾನ ಇರಬೇಕು. ಪ್ರತ್ಯಕ್ಷದಿಂದ ಬಾಧಕಜ್ಞಾನವು ಸಿದ್ಧವಾಗಿಲ್ಲ. ಅನುಮಾನವನ್ನೇ ಬಾಧಕವೆಂದು ಹೇಳಿದರೆ ಅನ್ಯೋನ್ಯಾಶ್ರಯ ಬರುತ್ತದೆ. ಭೇದಪ್ರತೀತಿಯು ಭ್ರಾಂತಿ ಎಂದು ಸಿದ್ಧವಾದರೆ ವಿರೋಧ ಇಲ್ಲದ ಕಾರಣ ಪ್ರಮಾಣದಿಂದ ಅಭೇದ ಸಿದ್ಧವಾಗುತ್ತದೆ. ಅನುಮಾನದಿಂದ ಅಭೇದವು ಸಿದ್ಧವಾದರೆ ಮಾತ್ರ ಭೇದಪ್ರತೀತಿಯು ಭ್ರಾಂತಿಯೆಂದು ಸಿದ್ಧವಾಗುತ್ತದೆ.

ಪ್ರತ್ಯಕ್ಷವು ಭ್ರಾಂತಿ ಎಂದು ಸಿದ್ಧವಾದರೆ ಅನುಮಾನಕ್ಕೆ ಪ್ರಾಮಾಣ್ಯ ಸಿದ್ಧವಾಗುತ್ತದೆ. ಅನುಮಾನಕ್ಕೆ ಪ್ರಾಮಾಣ್ಯವು ಸಿದ್ಧವಾದರೆ ಪ್ರತ್ಯಕ್ಷವು ಭ್ರಾಂತಿ ಎಂದು ಸಿದ್ಧವಾಗುತ್ತದೆ. ಹೀಗೂ ಅನ್ಯೋನ್ಯಾಶ್ರಾಯದೋಷ ಬರುತ್ತದೆ. (ವಾಕ್ಯಾರ್ಥಮಂಜರಿ)

## ಪ್ರಕಾಶಿಸುವುದೆಲ್ಲ ಜ್ಞಾನವಲ್ಲ

**तत्वप्रकाशिका – न च यत्प्रकाशते तद्विज्ञानं यथा ज्ञानम् । प्रकाशन्ते च नीलादय इति युक्तम् । प्रकाशत इति विज्ञानविषयत्वाभ्युपगमे**

**स्ववृत्तिविरोधेन दृष्टान्ते साधनाभावः । अज्ञाने व्यभिचारश्च प्रकाशत्वाभिप्रायेऽसिद्धिरिति ।।**

ಯಾವುದು ಪ್ರಕಾಶಿಸುತ್ತದೋ ಅದೇ ವಿಜ್ಞಾನ. ಜ್ಞಾನವೇ ಉದಾಹರಣೆ - ನೀಲಾದಿವಸ್ತುಗಳು ಪ್ರಕಾಶಿಸುತ್ತಿವೆ. ಆದ್ದರಿಂದ ಇವುಗಳೂ ಕೂಡ ಜ್ಞಾನಸ್ವರೂಪವಾಗಬೇಕು. ಈ ಆಕ್ಷೇಪ ತಪ್ಪು. ವಸ್ತುಗಳು ಪ್ರಕಾಶಿಸುತ್ತವೆ ಎಂದು ಹೇಳಿದಾಗ ಜ್ಞಾನವೇ ವಿಷಯವೆಂದು ಹೇಳಿದಂತಾಯಿತು. ಆಗ ಸ್ವವೃತ್ತಿವಿರೋಧ ಬರುವುದರಿಂದ ದೃಷ್ಟಾಂತದಲ್ಲಿ ಪ್ರಕಾಶವಿಷಯತ್ವವೇ ಇರುವುದಿಲ್ಲ. ಆದ್ದರಿಂದ ದೃಷ್ಟಾಂತದಲ್ಲಿ ಸಾಧನವೈಕಲ್ಯ ಬರುತ್ತದೆ. ಅಜ್ಞಾನದಲ್ಲಿ ವ್ಯಭಿಚಾರವೂ ಕೂಡ ಬರುತ್ತದೆ. ಪ್ರಕಾಶಶಬ್ದಕ್ಕೆ ಕೇವಲ ಜ್ಞಾನ ಎಂಬ ಅರ್ಥವನ್ನು ವಿವಕ್ಷಿಸಿದರೆ ಅಸಿದ್ಧಿದೋಷವು ಬರುತ್ತದೆ.

**भावदीपः** – तद्रीत्या अवयवद्वयेनानुमानान्तरमाशङ्कते – **न च यदिति ।।** तथानुभवेत्यस्य स्वविषयज्ञानाभावादित्यर्थमुपेत्याह – **स्ववृत्तीति ।।** परीत्यैतत्। यद्वा तार्किकादिमते स्ववृत्तिविरोधः न तु सिद्धान्तिमते। साक्षिणः स्वप्रकाशत्वाङ्गीकारादिति पूर्वत्रारुच्या दोषान्तरमाह– **अज्ञाने व्यभिचारश्चेति ।।** ज्ञानप्रागभावादौ ज्ञानावरणे संवृतौ च व्यभिचार इत्यर्थः। एतेन तथा प्रकाशविषयत्वेनानुभवाभावभावात् ज्ञानाभावसत्त्वादिति भावपदवृत्त्या भाष्यार्थः सूचितः। न हि ज्ञानाभावादिरपि ज्ञानम्। विरोधादिति भावः। तथा प्रकाशत्वेनानुभवाभावादित्यप्यर्थमुपेत्याह – **असिद्धिरिति ।।** भेदप्रतीत्या घटादेर्ज्ञानस्वरूपत्वा (नुभवा) भावात्। प्रतीतेर्भ्रान्तित्वं तु पूर्ववन्निरस्यमिति भावः। इतिशब्दः समाप्तौ ।। ३० ।।

ಬೌದ್ಧರ ಪ್ರಕಾರ ಅನುಮಾನಕ್ಕೆ ಎರಡೇ ಅಂಗಗಳು. ಅದರ ಪ್ರಕಾರ 'ನ ಚ ಯತ್' ಎಂಬುದಾಗಿ ಅನುಮಾನವನ್ನು ಪ್ರಯೋಗ ಮಾಡಿದ್ದಾರೆ. 'ತಥಾ ಅನುಭವಾಭಾವಾತ್' ಎಂಬ ಭಾಷ್ಯಕ್ಕೆ ಸ್ವವಿಷಯಕವಾದ ಜ್ಞಾನ ಇಲ್ಲದ್ದರಿಂದ ಎಂಬರ್ಥವನ್ನು ಅಂಗೀಕಾರ ಮಾಡಿ, 'ಸ್ವವೃತ್ತಿವಿರೋಧೇನ' ಎಂಬ ವಾಕ್ಯವು ಹೊರಟಿದೆ. ಪರರ ಪ್ರಕಾರ ಈ ಸಾಧನವೈಕಲ್ಯವನ್ನು ಹೇಳಿದ್ದಾರೆಂದು ತಿಳಿಯಬೇಕು. ಅಥವಾ

ತಾರ್ಕಿಕಮತದಲ್ಲಿ ಸ್ವವೃತ್ತಿ ವಿರೋಧವಿದೆ. ಆದರ ಪ್ರಕಾರ ಹೇಳಿದ್ದಾರೆ. ಸಿದ್ಧಾಂತಮತದ ಅಭಿಪ್ರಾಯದಿಂದ ಹೇಳಿದ್ದಲ್ಲ. ಸಾಕ್ಷಿಯು ಸ್ವಪ್ರಕಾಶವಾಗಿದೆ ಎಂದು ಅಂಗೀಕರಿಸಿರುವುದರಿಂದ ಹಿಂದಿನ ಪಕ್ಷದಲ್ಲಿ ಅರುಚಿಯಿಂದ ಮತ್ತೊಂದು ದೋಷವನ್ನು 'ಅಜ್ಞಾನೇ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಜ್ಞಾನಪ್ರಾಗಭಾವದಲ್ಲಿ ಜ್ಞಾನಕ್ಕೆ ಆವರಣವಾದ ಸಂವೃತ್ತಿಯಲ್ಲಿ ವ್ಯಭಿಚಾರ ಬರುತ್ತದೆ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಭಾಷ್ಯಕ್ಕೆ ಮತ್ತೊಂದು ಅರ್ಥವನ್ನು ಸೂಚನೆ ಮಾಡಿದಂತಾಯಿತು. 'ತಥಾ ಅನುಭವಾಭಾವಾತ್' ಎಂದರೆ ಪ್ರಕಾಶವಿಷಯತ್ವೇನ ಅನುಭವವಿಲ್ಲದ ಕಾರಣ ಜ್ಞಾನಾಭಾವವಿರುವುದರಿಂದ ಎಂದು. ಇಲ್ಲಿ ಭಾವಪದವನ್ನು ಆವೃತ್ತಿ ಮಾಡಿಕೊಂಡು ಅರ್ಥವನ್ನು ಹೇಳಬೇಕು.

ಜ್ಞಾನಾಭಾವವನ್ನೂ ಕೂಡ ಜ್ಞಾನವೆಂದು ಹೇಳಿದರೆ ವಿರೋಧ ಬರುತ್ತದೆ ಎಂದಭಿಪ್ರಾಯ. ಮತ್ತು ಪ್ರಕಾಶಸ್ವರೂಪದಿಂದ ಅನುಭವವಿಲ್ಲದ್ದರಿಂದ ಎಂಬರ್ಥವನ್ನು ಅಂಗೀಕರಿಸಿ 'ಅಸಿದ್ಧಿಃ' ಎಂಬುದಾಗಿ ಹೇಳಿದ್ದಾರೆ. ಭೇದಪ್ರತೀತಿಯಿಂದ ಘಟಾದಿಗಳು ಜ್ಞಾನಸ್ವರೂಪವಲ್ಲವೆಂದೇ ತೋರುತ್ತಿದೆ. ಈ ಪ್ರತೀತಿಯನ್ನು ಭ್ರಾಂತಿ ಎಂದು ಹೇಳಲು ಸಾಧ್ಯವಿಲ್ಲ. ಈ ವಿಷಯವನ್ನು ಹಿಂದೆಯೇ ಉಪಪಾದನೆ ಮಾಡಿದ್ದೇವೆ. 'ಇತಿ' ಶಬ್ದವು ಸಮಾಪ್ತ್ಯರ್ಥದಲ್ಲಿದೆ.

ವಿವರಣೆ - ಉಪನಯ ಹಾಗೂ ನಿಗಮನಗಳು ಮಾತ್ರ ಅನುಮಾನದ ಅಂಗವೆಂದು ಬೌದ್ಧರು ಹೇಳುತ್ತಾರೆ. ಅವರ ಪ್ರಕಾರ ಈ ಎರಡು ಅಂಗಗಳಿಂದಲೇ ಅನುಮಾನಸ್ವರೂಪವನ್ನು ತಿಳಿಸುವುದಕ್ಕಾಗಿ 'ಯತ್ ಪ್ರಕಾಶತೇ' ಇತ್ಯಾದಿ ಗ್ರಂಥವು ಹೊರಟಿದೆ. ಎಲ್ಲಾ ಪದಾರ್ಥಗಳು ಜ್ಞಾನಸ್ವರೂಪವೆಂದು ಹೇಳಿದರೆ ನಮಗೆ ಬರುವ ಘಟಜ್ಞಾನವು ಘಟವನ್ನು ವಿಷಯೀಕರಿಸುವುದಿಲ್ಲ. ಜ್ಞಾನವನ್ನೇ ವಿಷಯೀಕರಿಸುತ್ತದೆ ಎಂದು ಹೇಳಿದಂತಾಯಿತು. ಆಗ ಜ್ಞಾನಕ್ಕೆ ಸ್ವವಿಷಯತ್ವವನ್ನು ಅಂಗೀಕರಿಸಿದಂತಾಯಿತು. ಆದರೆ ಜ್ಞಾನದಲ್ಲಿ ಜ್ಞಾನವು ಇರುತ್ತದೆಂದು ಪರರು ಅಂಗೀಕರಿಸಿಲ್ಲ. ತಾರ್ಕಿಕರೂ ಕೂಡ ಅಂಗೀಕರಿಸಿಲ್ಲ. ಅವರ ಪ್ರಕಾರ ಇದು ವಿರುದ್ಧವಾಗುತ್ತದೆ. ವಾಸ್ತವಿಕವಾಗಿ ತತ್ವವಾದಿಗಳಾದ ನಾವು ಜ್ಞಾನವು ಜ್ಞಾನವನ್ನು ವಿಷಯೀಕರಿಸುತ್ತದೆಂದು ಒಪ್ಪಿದ್ದೇವೆ. ಸಾಕ್ಷಿಯು ಸ್ವತಃ ಜ್ಞಾನಾತ್ಮಕವಾಗಿದೆ. ಆದರೂ ತನ್ನನ್ನು ತಾನೇ ವಿಷಯೀಕರಿಸುತ್ತದೆಂದು ಸ್ವಪ್ರಕಾಶತ್ವವನ್ನು ಒಪ್ಪಿದ್ದೇವೆ.

ಹಿಂದಿನ ಪಕ್ಷದಲ್ಲಿ ಸ್ವವೃತ್ತಿವಿರೋಧವೆಂಬ ದೋಷದಲ್ಲಿ ಅರುಚಿಯಿರುವುದರಿಂದ ಮತ್ತೊಂದು ದೋಷವನ್ನು 'ಅಜ್ಞಾನೇ' ಎಂಬ ವಾಕ್ಯದಿಂದ ಹೇಳಿದ್ದಾರೆ. 'ಅಜ್ಞಾನೇ' ಎಂದರೆ ಜ್ಞಾನಪ್ರಾಗಭಾವದಲ್ಲಿ ಎಂದರ್ಥ. ಅಥವಾ ಜ್ಞಾನಕ್ಕೆ ಆವರಣವಾದ ಸಂವೃತಿಯಲ್ಲಿ

ಎಂದರ್ಥ. ಹೀಗೆ ಹೇಳಿದ್ದರಿಂದ 'ತಥಾನುಭವಾಭಾವಾತ್' ಎಂಬ ಭಾಷ್ಯಕ್ಕೆ ಜ್ಞಾನವು ತನ್ನನ್ನೇ ವಿಷಯೀಕರಿಸುತ್ತದೆಂಬ ಅನುಭವವಿಲ್ಲ ಎಂದರ್ಥ. ಮತ್ತು ಜ್ಞಾನಪ್ರಾಗಭಾವದಲ್ಲಿ ಪ್ರಕಾಶವಿಷಯತ್ವದ ಅನುಭವವಿಲ್ಲದಿರುವುದರಿಂದ ಎಂದರ್ಥ. ಇನ್ನು ಜ್ಞಾನಾಭಾವವನ್ನೂ ಕೂಡ ಜ್ಞಾನವೆಂದೇ ಹೇಳಿ ವ್ಯಭಿಚಾರವನ್ನು ಪರಿಹಾರ ಮಾಡಬೇಕು. ಇದು ವಿರುದ್ಧವಾಗುತ್ತದೆ. ಘಟವೇ ಬೇರೆ ಜ್ಞಾನವೇ ಬೇರೆ ಎಂಬ ಅನುಭವವು ಬರುತ್ತಿದೆ. ಇದನ್ನು ಭ್ರಾಂತಿ ಎಂದು ಹೇಳಲು ಸಾಧ್ಯವಿಲ್ಲ.

ಜಗತ್ತು ಮತ್ತು ಜ್ಞಾನಗಳಿಗೆ ಅಭೇದವನ್ನು ಹೇಳಿದರೆ ಪ್ರತಿಜ್ಞಾವಾಕ್ಯ ಹಾಗೂ ಹೇತುವಾಕ್ಯಗಳಿಗೆ ಪರಸ್ಪರ ವಿರೋಧ ಬರುತ್ತದೆ. ವಿಜ್ಞಾನವೇ ವಸ್ತುಸ್ವರೂಪ ಎಂಬುದು ಅವನ ಪ್ರತಿಜ್ಞೆ. 'ಒಟ್ಟಿಗೆ ತಿಳಿಯುತ್ತಿರುವುರಿಂದ' ಎಂಬುದು ಅವನು ನೀಡಿದ ಹೇತು. ಇವೆರಡಕ್ಕೆ ಪರಸ್ಪರ ವಿರೋಧವಿದೆ. ಏಕೆಂದರೆ 'ಒಟ್ಟಿಗೆ ಇರುತ್ತದೆ' ಎಂದರೆ ಭೇದ ಇರಲೇಬೇಕು. ಇದನ್ನೇ ಸ್ವವೃತ್ತಿವಿರೋಧ ಎಂದು ಹೇಳಿದ್ದು.

ದೃಷ್ಟಾಂತದಲ್ಲಿ ಸಾಧನವೈಕಲ್ಯ ದೋಷವೂ ಕೂಡ ಬರುತ್ತದೆ. ಯಾವುದು ಪ್ರಕಾಶಿಸುತ್ತದೋ ಅದು ಜ್ಞಾನಸ್ವರೂಪ ಎಂಬುದು ಪೂರ್ವಪಕ್ಷಿಯ ವಾದ. ಆದರೆ ವಸ್ತುಗಳಿಗೆ ಜ್ಞಾನಸ್ವರೂಪಾತ್ಮಕತ್ವವನ್ನು ಒಪ್ಪಿ ಪುನಃ ಜ್ಞಾನವಿಷಯತ್ವವನ್ನು ಒಪ್ಪಿದರೆ ಜ್ಞಾನವೇ ಜ್ಞಾನಕ್ಕೆ ವಿಷಯವೆಂದು ಹೇಳಿದಂತಾಯಿತು. ಹೀಗೆ ದೃಷ್ಟಾಂತದಲ್ಲಿ ಪ್ರಕಾಶಿಸುವಿಕೆ ಎಂಬ ಹೇತುವೇ ಇಲ್ಲದ ಕಾರಣ ಸಾಧನವೈಕಲ್ಯ ಬರುತ್ತದೆ.

ಹೇತುವಿಗೆ ವ್ಯಭಿಚಾರ ಹಾಗೂ ಅಸಿದ್ಧಿದೋಷಗಳು ಕೂಡ ಬರುತ್ತವೆ. ಅದು ಹೀಗೆ - ಅಜ್ಞಾನದಲ್ಲಿ ಪ್ರಕಾಶವಿಷಯತ್ವವಿಲ್ಲ. ಜ್ಞಾನಕಾಲದಲ್ಲಿ ಇದು ತೋರಲು ಜ್ಞಾನಸ್ವರೂಪತ್ವ ಇದಕ್ಕಿಲ್ಲವೆಂದು ಅವರೇ ಹೇಳುತ್ತಾರೆ. ಆದ್ದರಿಂದ ಅಜ್ಞಾನದಲ್ಲಿ ವ್ಯಭಿಚಾರ. ಇನ್ನು ಪ್ರಕಾಶಶಬ್ದಕ್ಕೆ ಜ್ಞಾನವೆಂಬ ಅರ್ಥವನ್ನಷ್ಟೇ ಸ್ವೀಕರಿಸಿದರೆ ಘಟಪಟಾದಿಜಗತ್ತಿನಲ್ಲಿ ಜ್ಞಾನಸ್ವರೂಪತ್ವವು ಇಲ್ಲವೆಂದಾಯಿತು. ಆದ್ದರಿಂದ ಹೇತ್ವಸಿದ್ಧಿ.

## ಭಾವದೀಪದ ವೈಶಿಷ್ಟ್ಯ

* ಜ್ಞಾನವು ನಿತ್ಯವೆಂದು ಟೀಕೆಯಲ್ಲಿ ಹೇಳಿದ್ದಾರೆ. ಪ್ರವಾಹತಃ ನಿತ್ಯವೆಂದು ಅರ್ಥ ಹೇಳಬೇಕು. ಇಲ್ಲದಿದ್ದರೆ ಘಟಪಟಾದಿಗಳನ್ನು ಜ್ಞಾನಸ್ವರೂಪವೆಂದೇ ಹೇಳಲು ಸಾಧ್ಯವಾಗುವುದಿಲ್ಲ.
* ಶೂನ್ಯವಾದಿಗಳಿಗೆ ಬರುವ ದೋಷವು ವಿಜ್ಞಾನವಾದಿಗಳಿಗೆ ಬರುವುದಿಲ್ಲ ಎಂಬುದನ್ನು ಸಮರ್ಥನೆ ಮಾಡುವ ಮೂಲಕ ಅಧಿಕರಣಸಾರ್ಥಕ್ಯವನ್ನು ಸಮರ್ಥಿಸಲಾಗಿದೆ.
* ಭಾಷ್ಯದಲ್ಲಿ 'ಅನುಭವಾಭಾವಾತ್' ಎಂದು ಹೇಳಿದ್ದಾರೆ. ಇದಕ್ಕೆ ನಾಕು ಅರ್ಥವನ್ನು ಹೇಳಿದ್ದಾರೆ -

  ೧. ಮೂರು ಪ್ರಮಾಣಗಳಿಂದ ಹುಟ್ಟಿದ ಪ್ರಮಾ ಬರುವುದಿಲ್ಲ.

  ೨. ಘಟಪಟಾದಿಗಳು ಜ್ಞಾನಾತ್ಮಕವಲ್ಲವೆಂದೇ ಅನುಭವ ಬರುತ್ತಿದೆ.

  ೩. ಜ್ಞಾನಪ್ರಾಗಭಾವವು ಜ್ಞಾನಸ್ವರೂಪವಾಗಿದೆ ಎಂಬ ಅನುಭವವಿಲ್ಲ.

  ೪. ಜ್ಞಾನಾಭಾವವಿದೆ ಎಂಬ ಅನುಭವವಿದೆ. ಇದೂ ಕೂಡ ಇಲ್ಲವೆಂದಾಗಬೇಕಾಗುತ್ತದೆ.
* ಜ್ಞಾನವು ಜ್ಞಾನವಿಷಯಕವಾಗುವುದಿಲ್ಲ ಎಂಬ ದೋಷವನ್ನು ತಾರ್ಕಿಕರ ಪ್ರಕಾರ ವಿವಕ್ಷಿಸಬೇಕು. ಸಿದ್ಧಾಂತದ ಪ್ರಕಾರವಲ್ಲವೆಂದು ಸ್ಪಷ್ಟಪಡಿಸಿದ್ದಾರೆ.

## ಬ್ರಹ್ಮಸೂತ್ರ

### 'ಕ್ಷಣಿಕತ್ವಾಚ್ಚ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – क्षणिकत्वाच ॥**

ಜ್ಞಾನವು ಕ್ಷಣಿಕವಾಗಿದೆ. ಜಗತ್ತು ಕ್ಷಣಿಕವಾಗಿರುವುದಿಲ್ಲ. ಹೀಗೆ ವಿರುದ್ಧಧರ್ಮ-ಗಳಿರುವುದರಿಂದಲೂ ಜಗತ್ತು ಜ್ಞಾನಾತ್ಮಕವಾಗುವುದಿಲ್ಲ.

ಅರ್ಥ --ಕ್ಷಣಿಕತ್ವಾಚ್ಚ = ಜ್ಞಾನವು ಏಕಕ್ಷಣಾವಸ್ಥಾಯಿಯಾಗಿದೆ. ಜಗತ್ತು ಸ್ಥಾಯಿಯಾಗಿದೆ. ಹೀಗೆ ವಿರುದ್ಧಧರ್ಮಗಳಿರುವುದರಿಂದ ಜಗತ್ತು ಮತ್ತು ಜ್ಞಾನಗಳಿಗೆ ಐಕ್ಯವನ್ನು ಹೇಳಬಾರದು.

## ಬ್ರಹ್ಮಸೂತ್ರಭಾಷ್ಯ

### ಜ್ಞಾನ-ಜಗತ್ತು ಒಂದೇ ಅಲ್ಲ

**ब्रह्मसूत्रभाष्यम् – ॥ क्षणिकत्वाच ॥२॥**

**ज्ञानं क्षणिकं, अर्थानां च स्थायित्वमुक्तम् । अतश्च नैक्यम् ॥२॥**

ಅನುವಾದ - ಜ್ಞಾನವು ಕ್ಷಣಿಕವಾಗಿದೆ ಆದರೆ ಜಗತ್ತು ಸ್ಥಿರವಾಗಿದೆ ಇದನ್ನು ಈ ಹಿಂದೆ 'ಉಭಯಥಾಚ ದೋಷಾತ್' ಎಂಬ ಸೂತ್ರದಲ್ಲಿ ಪ್ರತಿಪಾದನೆ ಮಾಡಿದ್ದಾಗಿದೆ. ಆದ್ದರಿಂದ ಜ್ಞಾನಕ್ಕೂ ಜಗತ್ತಿಗೆ ಐಕ್ಯವನ್ನು ಹೇಳಬಾರದು.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ಜಗತ್ತಿಗೆ ವಿಜ್ಞಾನಸ್ವರೂಪವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರ ಹೊರಟಿದೆ. ಜ್ಞಾನಂ = ಜ್ಞಾನವು, ಕ್ಷಣಿಕಂ = ಒಂದು ಕ್ಷಣಮಾತ್ರ ಇರುತ್ತದೆ. ಅರ್ಥಾನಾಂ ಚ = ಘಟಪಟಾದಿಗಳಾದರೂ, ಸ್ಥಾಯಿತ್ವಮ್ = ಸ್ಥಾಯಿಯಾಗಿವೆ. ಹೀಗೆ ಉಕ್ತಂ = 'ಉಭಯಥಾಚ ದೋಷಾತ್' ಎಂಬಿತ್ಯಾದಿ ಮೂರು ಸೂತ್ರದಲ್ಲಿ ಹೇಳಿದ್ದಾಗಿದೆ ಅತಶ್ಚ = ಈ ಮೂರು ಕಾರಣದಿಂದಲೂ, ನೈಕ್ಯಮ್ = ವಿಜ್ಞಾನ ಹಾಗೂ ಜಗತ್ತುಗಳಿಗೆ ಐಕ್ಯವನ್ನು ಹೇಳಬಾರದು.

### ಸತ್ತರ್ಕದೀಪಾವಳಿ

**सत्तर्कदीपावळिः – जगतः स्थायित्वेन साधितत्वात् । ज्ञानस्य क्षणिकत्वादपि न जगदाकारं ज्ञानमित्यर्थः ।**

ಜಗತ್ತು ಸ್ಥಾಯಿಯಾಗಿದೆ ಎಂದು ಸಾಧನೆ ಮಾಡಿದ್ದೇನೆ. ಆದರೆ ಜ್ಞಾನವು ಕ್ಷಣಿಕವಾಗಿದೆ. ಸ್ಥಾಯಿಯಾದ ಪದಾರ್ಥಕ್ಕೂ, ಕ್ಷಣಿಕವಾದ ಪದಾರ್ಥಕ್ಕೂ ಐಕ್ಯವು ಸರ್ವಥಾ ಕೂಡುವುದಿಲ್ಲ. ಆದ್ದರಿಂದಲೂ ಜಗತ್ತನ್ನು ಜ್ಞಾನಾಕಾರವೆಂದು ಹೇಳಬಾರದು.

### ತತ್ವಪ್ರದೀಪ

**तत्वप्रदीपः – क्षणिकत्वाच्च । न च क्षणिकस्थायिनोरैक्यम् ।**

ಜ್ಞಾನವು ಕ್ಷಣಿಕವಾಗಿದೆ. ಜಗತ್ತು ಸ್ಥಾಯಿಯಾಗಿದೆ. ಕ್ಷಣಿಕತ್ವ ಹಾಗೂ ಸ್ಥಾಯಿತ್ವವೆಂಬ ವಿರುದ್ಧಧರ್ಮಾಧಿಕರಣಗಳಿಗೆ ಐಕ್ಯವು ಸರ್ವಥಾ ಕೂಡುವುದಿಲ್ಲ.

### ತತ್ವಪ್ರಕಾಶಿಕಾ

ಜ್ಞಾನವು ಕ್ಷಣಿಕವೆಂಬ ಪ್ರತೀತಿಯು ಭ್ರಾಂತಿಯಲ್ಲ

**तत्वप्रकाशिका – युक्त्यन्तरेणापि जगतो विज्ञानात्मकत्वं पराकुर्वत्सूत्रमुपन्यस्य व्याचष्टे ।। क्षणिकत्वाच्चेति ।। न च ज्ञानेऽपि क्षणिकत्वं भ्रान्तमिति वाच्यम् । मानाभावात् ।।**

ಮತ್ತೊಂದು ಯುಕ್ತಿಯಿಂದ ಜಗತ್ತು ವಿಜ್ಞಾನಸ್ವರೂಪ ಎಂಬುದನ್ನು ನಿರಾಕರಣೆ ಮಾಡುವುದಕ್ಕಾಗಿ 'ಕ್ಷಣಿಕತ್ವಾಚ್ಚ' ಎಂಬ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಜ್ಞಾನವು ಕ್ಷಣಿಕ' ಎಂಬ ಪ್ರತೀತಿಯನ್ನು ಭ್ರಾಂತಿ ಎಂದು ಹೇಳಬಾರದು. ಹಾಗೆ ಹೇಳಲು ಯಾವುದೇ ಪ್ರಮಾಣವಿಲ್ಲ.

## ಭಾವದೀಪ

**भावदीपः – ।। क्षणिकत्वाच्च ।।३१ ।।** सौत्रश्चशब्दः समुच्चये इति भावेनाह **– युक्त्यन्तरेणापीति ।।** विरुद्धधर्मवत्त्वरूपेणापीत्यर्थः।। ३१ ।।

ಸೂತ್ರದಲ್ಲಿರುವ 'ಚ'ಶಬ್ದವು ಸಮುಚ್ಚಯಾರ್ಥದಲ್ಲಿದೆ. ಆದ್ದರಿಂದ ಟೀಕೆಯಲ್ಲಿ 'ಯುಕ್ತ್ಯಂತರೇಣಾಪಿ' ಎಂದು ಹೇಳಿದ್ದಾರೆ. 'ವಿರುದ್ಧಧರ್ಮವತ್ವ' ಎಂಬ ಮತ್ತೊಂದು ಯುಕ್ತಿಯಿಂದಲೂ ಕೂಡ ಎಂಬುದು ಇದರ ಅರ್ಥ.

## ಬ್ರಹ್ಮಸೂತ್ರ

### 'ಸರ್ವಥಾಽನುಪಪತ್ತೇಶ್ಚ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – सर्वथाऽनुपपत्तेश्च ।।**

ಹೀಗೆ ಎಲ್ಲ ಬಗೆಯಿಂದಲೂ ಬೌದ್ಧರ ಮತವು ಯುಕ್ತಿಶೂನ್ಯವಾಗಿರುವುದರಿಂದ ಯುಕ್ತಿಗೆ ವಿರುದ್ಧವಾದ್ದರಿಂದ ಗ್ರಾಹ್ಯವಲ್ಲ.

ಅರ್ಥ -- ಸರ್ವಥಾ = ಸಕಲವಿಧದಿಂದ, ಅನುಪಪತ್ತೇಃ = ಬೌದ್ಧರಮತವು, ಯುಕ್ತಿವಿರುದ್ಧವಾದ್ದರಿಂದ ಸ್ವೀಕಾರಕ್ಕೆ ಅರ್ಹವಲ್ಲ.

ಎಲ್ಲವೂ ಕ್ಷಣಿಕ, ಅಥವಾ ಶೂನ್ಯಸ್ವರೂಪ ಅಥವಾ ಜ್ಞಾನಸ್ವರೂಪ ಎಂದು ಹೇಳುವ ಬೌದ್ಧರ ಸಿದ್ಧಾಂತವು ಮತ್ತು ಇದೇ ವಿಷಯವನ್ನು ಬೇರೆ ಶಬ್ದಗಳಿಂದ ಹೇಳುವ ಪ್ರಚ್ಛನ್ನಬೌದ್ಧಮತವು ವೇದವಿರುದ್ಧವಾದ ಪಕ್ಷಗಳಾಗಿವೆ. ಏಕೆಂದರೆ ಅವರ ಸಿದ್ಧಾಂತದಲ್ಲಿ ಅನುಮಾನ ಪ್ರತ್ಯಕ್ಷ, ಆಗಮ ಎಂಬ ಪ್ರಮಾಣಗಳು ಇರುವುದಿಲ್ಲ. ಅಷ್ಟೇ ಅಲ್ಲದೇ ಪ್ರಮಾಣಗಳಿಗೆ ವಿರುದ್ಧವೇ ಆಗಿವೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಅನುಪಲಬ್ಧ್ಯಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಅಪ್ರಾಮಾಣಿಕ ಹಾಗೂ ಯುಕ್ತಿವಿರುದ್ಧವಾದ ಮತಗಳು ಗ್ರಾಹ್ಯವಲ್ಲ

**ब्रह्मसूत्रभाष्यम् – ।। सर्वथाऽनुपपत्तेश्च ।।३।।**

**प्रमाणाभावात् सर्वश्रुतिस्मृतियुक्तिविरुद्धत्वाच्च नैते पक्षा ग्राह्याः ।।३।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये अनुपलब्ध्यधिकरणम् ।। ९ ।।**

ಅನುವಾದ - ಯಾವುದೇ ಪ್ರಮಾಣಗಳಿಲ್ಲದ ಕಾರಣ ಸಕಲಶ್ರುತಿಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಈ ಯಾವ ಪಕ್ಷಗಳೂ ಕೂಡ ಗ್ರಾಹ್ಯವಲ್ಲ.

ಪ್ರತಿಪದಾರ್ಥ -- ಬೌದ್ಧರ ಅವಾಂತರ ಮತಗಳನ್ನು ಪ್ರತ್ಯೇಕ ನಿರಾಕರಣೆ ಮಾಡಿ ಎಲ್ಲರನ್ನು ಸಾಮಾನ್ಯದೋಷದಿಂದ ನಿರಾಕರಣೆ ಮಾಡುತ್ತಿದ್ದಾರೆ. ಪ್ರಮಾಣಾಭಾವಾತ್ = ಯಾವುದೇ ಪ್ರಮಾಣಗಳಿಲ್ಲದ ಕಾರಣ, ಸರ್ವಶ್ರುತಿಸ್ಮೃತಿಯುಕ್ತಿವಿರುದ್ಧತ್ವಾಚ್ಚ = ಸಕಲ ಶ್ರುತಿ ಸ್ಮೃತಿ ಯುಕ್ತಿಗಳ ವಿರೋಧವಿರುವುದರಿಂದ, ಏತೇಪಕ್ಷಾಃ = ಬೌದ್ಧರ ಯಾವ ಪಕ್ಷಗಳೂ ಕೂಡ, ನ ಗ್ರಾಹ್ಯಾಃ = ಸ್ವೀಕಾರಕ್ಕೆ ಅರ್ಹವಾಗಿಲ್ಲ.

।। ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಅನುಪಲಬ್ಧ್ಯಧಿಕರಣವು ಸಮಾಪ್ತವಾಯಿತು ।।

ಸತ್ತರ್ಕದೀಪಾವಳಿ

**सत्तर्कदीपावळिः – बौद्धनिराकरणमुपसंहरति । सर्वथेत्यादिना ।।**

ಬೌದ್ಧರ ನಿರಾಕರಣೆಯನ್ನು ಉಪಸಂಹಾರ ಮಾಡಲು 'ಸರ್ವಥಾಽನುಪಪತ್ತೇಶ್ಚ' ಎಂಬ ಸೂತ್ರವು ಪ್ರವೃತ್ತವಾಗಿದೆ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಅನುಪಲಬ್ಧ್ಯಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

ತತ್ವಪ್ರದೀಪ

ವೇದವಿದ್ವೇಷಿಗಳಿಗ ಸ್ಥಾನವೇ ಇಲ್ಲ

**तत्वप्रदीपः – प्रत्यक्षक्षणिकत्वकल्पने परोक्षप्रत्यक्षबिम्बप्रतिबिम्ब-जगद्युगलकल्पने शून्यविज्ञानयोरद्वैतकल्पने प्रकटने प्रच्छादने वा वेदविद्वेषिणां पक्षा नोपपद्यन्ते, स्थायिनोर्जीवेशयोश्चानङ्गीकारात्। सर्वप्रमाणाभावात् सर्वप्रमाणविरुद्धत्वाच्च । अतो न ग्राह्याः ।**

**।। इति अनुपलब्ध्यधिकरणम् ।।**

ಪ್ರತ್ಯಕ್ಷವಾದ ಪದಾರ್ಥವೆಲ್ಲವೂ ಕ್ಷಣಿಕವಾಗಿವೆ ಎಂದು ಕಲ್ಪನೆ ಮಾಡಿದರೆ, ಕಣ್ಣಿಗೆ ಕಾಣದ ಹಾಗೂ ಕಣ್ಣಿಗೆ ಕಾಣಸುವ ಎರಡು ಬಗೆಯ ಜಗತ್ತನ್ನು ಬಿಂಬಭೂತವಾದ, ಪ್ರತಿಬಿಂಬಭೂತವಾದ ಎರಡು ಬಗೆಯ ಜಗತ್ತನ್ನು ಕಲ್ಪನೆ ಮಾಡಿದರೆ ಶೂನ್ಯ ಮತ್ತು ವಿಜ್ಞಾನಗಳಿಗೆ ಐಕ್ಯವನ್ನು ಕಲ್ಪನೆ ಮಾಡಿದರೆ, ಶೂನ್ಯವಾದಿಗಳೇ ಮೊದಲಾದ ಬೌದ್ಧರ ಶಬ್ದಗಳಿಂದ ಅದ್ವೈತವನ್ನು ಪ್ರಕಟವಾಗಿ ಪರಿಗ್ರಹ ಮಾಡಿದರೆ ಅಥವಾ ಬೌದ್ಧತ್ವವನ್ನು ಪ್ರಕಟ ಪಡಿಸದೇ ಬೇರೆ ಶಬ್ದಗಳಿಂದ

ಅದ್ವೈತವಾದವನ್ನು ಸ್ವೀಕಾರ ಮಾಡಿದರೆ ಇಂಥ ಯಾವುದೇ ವೇದದ್ವೇಷಿಗಳ ಪಕ್ಷವು ಉಪಪನ್ನವಾಗುವುದಿಲ್ಲ. ಏಕೆಂದರೆ ಸ್ಥಾಯಿಯಾದ ಜೀವ ಮತ್ತು ಈಶ್ವರರನ್ನು ಅಂಗೀಕಾರ ಮಾಡಿರುವುದಿಲ್ಲ. ಮತ್ತು ಕ್ಷಣಿಕತ್ವ ವಿಚಾರದಲ್ಲಿ ಯಾವುದೇ ಪ್ರಮಾಣವೂ ಇರುವುದಿಲ್ಲ. ಎಲ್ಲಾ ಪ್ರಮಾಣಗಳಿಗೆ ವಿರೋಧ ಬರುವಂತೆ ಹೇಳುತ್ತಿರುವುದರಿಂದಲೂ ಈ ಪಕ್ಷಗಳು ಗ್ರಾಹ್ಯವಲ್ಲ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ
ಅನುಪಲಬ್ಧ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

### ಬೌದ್ಧಮತಗಳಿಗಿರುವ ಸಾಮಾನ್ಯ ದೋಷ

**तत्वप्रकाशिका – एवं प्रत्येकं दूषितानि बौद्धमतानि पुनः सामान्यदूषणेन पराकुर्वत्सूत्रमुपन्यस्य व्याचष्टे – सर्वथेति ।। श्रुत्यादिकमुक्तं वक्ष्यमाणं च द्रष्टव्यम् ।। एतच्चाधिकारिणं प्रति । अतो बौद्धराद्धान्तस्यानुपपन्नत्वेना-विरोधकत्वाद्युक्तं हरेर्जगत्कारणत्वलक्षणमिति सिद्धम् ।।**

ಹೀಗೆ ಪ್ರತ್ಯೇಕವಾಗಿ ದೂಷಿಸಲ್ಪಟ್ಟ ಬೌದ್ಧಮತವನ್ನು ಸಾಮಾನ್ಯದೋಷದಿಂದ ನಿರಾಕರಣೆ ಮಾಡುವ 'ಸರ್ವಥಾ' ಇತ್ಯಾದಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಬೌದ್ಧಮತವನ್ನು ವಿರೋಧಿಸುವ ಶ್ರುತ್ಯಾದಿಗಳನ್ನು ಹಿಂದೆ ಹೇಳಲಾಗಿದೆ. ಮುಂದೆ ಹೇಳುವುದನ್ನು ಕೂಡ ವಿವಕ್ಷಿಸಬೇಕು. ಬೌದ್ಧರು ನಾವು ಹೇಳುವ ಶ್ರುತಿಯನ್ನು ಒಪ್ಪದಿದ್ದರೂ ಕೂಡ ಮೋಕ್ಷಾಧಿಕಾರಿಗಳನ್ನು ಕುರಿತು ನಾವು ಹೇಳುತ್ತಿರುವುದರಿಂದ ವ್ಯರ್ಥವಲ್ಲ. ಆದ್ದರಿಂದ ಬೌದ್ಧರ ಸಿದ್ಧಾಂತವು ಅನುಪಪನ್ನವಾಯಿತು. ಇವರ ಮತದ ವಿರೋಧವು ನಮಗೆ ಸರ್ವಥಾ

ಬರುವುದಿಲ್ಲ. ಆದ್ದರಿಂದ ಶ್ರೀಹರಿಯ ಜಗತ್ಕಾರಣತ್ವ ಲಕ್ಷಣವು ನಿರ್ದುಷ್ಟವೆಂದು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ ಅನುಪಲಬ್ಧ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ಭಾವದೀಪ

**भावदीपः – ।। सर्वथाऽनुपपत्तेश्च ।। ३२ ।। श्रुत्यादिकमुक्तमिति ।।** न ऋते त्वत्क्रियते यच्च किञ्चिज्जगत्सर्वं ब्रह्मण्येवेदमाविरासीत्। स एव भूयो निजवीर्यचोदितामित्यादीत्यर्थः। युक्तयः सूत्रोक्ता एव। वक्ष्यमाणं पत्युरित्यादावित्यर्थः। परमते श्रुत्यादेरमानत्वादाह – **अधिकारिणं प्रतीति ।।** शास्त्रेऽधिकृतं मुमुक्षुं प्रति तदङ्गीकृतप्रामाण्येन श्रुत्यादिना विरोध उच्यत इत्यर्थः। अत इति। अप्रामाणिकत्वात् प्रमाणविरुद्धत्वाच्चेत्यर्थः।। ३२ ।।

'ಶ್ರುತ್ಯಾದಿಕಮುಕ್ತಮ್' 'ನ ಋತೇ ತ್ವತ್ಕ್ರಿಯತೇ' 'ಯಚ್ಚ ಕಿಂಚಿತ್ ಜಗತ್ಸರ್ವಂ' 'ಬ್ರಹ್ಮಣ್ಯೇವೇದಮಾವಿರಾಸೀತ್' 'ಸ ಏವ ಭೂಯೋ ನಿಜವೀರ್ಯಚೋದಿತಾಮ್' ಇವೇ ಮೊದಲಾದ ಶ್ರುತಿಗಳಿಂದ ಬೌದ್ಧಮತವು ವಿರುದ್ಧವಾಗುತ್ತದೆಂದು ತಿಳಿಯಬೇಕು. ಯುಕ್ತಿಗಳೆಂದರೆ ಆದಿಪದದಿಂದ ಯುಕ್ತಿಗಳನ್ನು ಹೇಳಬೇಕು. ಸೂತ್ರದಲ್ಲಿ ಹೇಳಿದ ಯುಕ್ತಿಗಳಿಂದಲೂ ವಿರೋಧ ಬರುತ್ತದೆಂದಭಿಪ್ರಾಯ. ಹಾಗೂ ಮುಂದೆ 'ಪತ್ಯುರಸಾಮಂಜಸ್ಯಾತ್' ಇತ್ಯಾದಿ ಸೂತ್ರಗಳಲ್ಲಿ ಹೇಳಿದ ಯುಕ್ತಿಗಳ ವಿರೋಧವೂ ಕೂಡ ಬರುತ್ತದೆಂದು ತಿಳಿಯಬೇಕು. ಬೌದ್ಧರು ಶ್ರುತ್ಯಾದಿಗಳನ್ನು ಪ್ರಮಾಣವೆಂದೇ ಒಪ್ಪದ ಕಾರಣ ಅವುಗಳ ವಿರೋಧ ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಅಧಿಕಾರಿಣಂ ಪ್ರತಿ' ಎಂದು ಉತ್ತರಿಸಿದ್ದಾರೆ. ಶಾಸ್ತ್ರವನ್ನು ಅಧ್ಯಯನ ಮಾಡಲು ಯಾವ ಮುಮುಕ್ಷುವು ಅಧಿಕೃತನಾಗಿದ್ದಾನೋ, ಅವನನ್ನು ಕುರಿತು ಅವನೇ ಅಂಗೀಕರಿಸಿರುವ ಶ್ರುತ್ಯಾದಿ ಪ್ರಮಾಣದಿಂದ ವಿರೋಧವನ್ನು ಹೇಳಿದ್ದಾರೆ. 'ಅತಃ' ಎಂಬ ಪದಕ್ಕೆ ಅಪ್ರಾಮಾಣಿಕವಾದ್ದರಿಂದ ಹಾಗೂ ಪ್ರಮಾಣವಿರುದ್ಧವಾದ್ದರಿಂದ ಎಂದರ್ಥ.

**ವಿವರಣೆ** - ಬೌದ್ಧರು ಶ್ರುತಿಯನ್ನು ಪ್ರಮಾಣವೆಂದೇ ಒಪ್ಪುವುದಿಲ್ಲ. ಹೀಗಿರುವಾಗ ನ ಋತೇ ತ್ವತ್ಕ್ರೀಯತೇ' ಇತ್ಯಾದಿ ಶ್ರುತಿಗಳ ವಿರೋಧವನ್ನು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ 'ಅಧಿಕಾರಿಣಂ ಪ್ರತಿ' ಎಂದು ಉತ್ತರಿಸುತ್ತಿದ್ದಾರೆ. ನಿಜವಾದ ಜಿಜ್ಞಾಸು ಶ್ರುತಿಯನ್ನು ಪ್ರಮಾಣವೆಂದು ಒಪ್ಪಿ, ಬೌದ್ಧಮತವು ಗ್ರಾಹ್ಯವಾಗಿದೆ ಎಂಬ ಜಿಜ್ಞಾಸೆಯನ್ನು ವ್ಯಕ್ತಪಡಿಸಿದಾಗ ಅಂಥವನನ್ನು ಕುರಿತು ಈ ವಾಕ್ಯ ಹೊರಟಿದೆ ಎಂದು ತಿಳಿಯಬೇಕು. ಬೌದ್ಧಮತವು ಶ್ರುತ್ಯಾದಿಗಳಿಗೆ ವಿರುದ್ಧವಾದ್ದರಿಂದ ಸರ್ವಥಾ ಗ್ರಾಹ್ಯವಲ್ಲ. ಮತ್ತು ಬೌದ್ಧಮತವನ್ನು ಸಮರ್ಥನೆ ಮಾಡುವ ಯಾವುದೇ ಪ್ರಮಾಣಗಳೂ ಕೂಡ ಇರುವುದಿಲ್ಲ. ಆದ್ದರಿಂದ ಎಲ್ಲಾ ಬಗೆಯ ಬೌದ್ಧಮತಗಳು ನಿರಸ್ತವಾದವು.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ ಅನುಪಲಬ್ಧ್ಯಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## अनुपलब्ध्यधिकरणम् - ९

ಅಧಿಕರಣದ ಪ್ರವೃತ್ತಿ ಹಾಗೂ ಸೂತ್ರಾರ್ಥ

।। न भावोऽनुपलब्धेः ।।

अत्र नये नासतोऽदृष्टत्वादित्युक्तदोषो नात्रेति प्राप्तं विज्ञानमतं निराह। जगदिति प्रकृतम् । भवतीति भावः सद्रूपज्ञानम् । जगत् भावो ज्ञानात्मकं न । ज्ञानमेव जगदाकारेण परिणमत इति नेत्यर्थः । कुतः? अनुपलब्धेरननुभवात् । प्रमाणाभावादित्यर्थः । उपलब्धिविरोधादित्यप्यर्थः। ज्ञानज्ञेययोर्भेदस्य साक्षिसिद्धत्वादिति भावः ।

ಈ ಅಧಿಕರಣದಲ್ಲಿ 'ನಾಸತೋಽದೃಷ್ಟತ್ವಾತ್' ಎಂಬ ಸೂತ್ರದಲ್ಲಿ ಹೇಳಿದ ದೋಷವು ತನಗೆ ಬರುವುದಿಲ್ಲ ಎಂಬುದಾಗಿ ವಿಜ್ಞಾನವಾದಿಗಳು ಹೇಳುತ್ತಾರೆ. ಇವರ ಮತವನ್ನು ನಿರಾಕರಣೆ ಮಾಡಲಾಗಿದೆ.

ಜಗತ್ ಎಂಬುದು ಪ್ರಕೃತವೇ ಆಗಿದೆ. 'ಭವತೀತಿ ಭಾವಃ' ಎಂಬ ನಿಷ್ಪತ್ತಿಯಂತೆ ಭಾವಶಬ್ದಕ್ಕೆ ತದ್ರೂಪವಾದ ಜ್ಞಾನ ಎಂದರ್ಥ. ಭಾವೋನ = ಜಗತ್ತು ಜ್ಞಾನಸ್ವರೂಪವಲ್ಲ. ಜ್ಞಾನವೇ ಜಗದಾಕಾರವಾಗಿ ಪರಿಣಾಮ ಹೊಂದುತ್ತದೆ ಎಂದು ಹೇಳುವುದು ಸರಿಯಲ್ಲ ಎಂಬುದು ಇದರ ಅರ್ಥ. ಏಕೆಂದರೆ ಅನುಪಲಬ್ಧೇಃ = ಜ್ಞಾನಸ್ವರೂಪವೆಂಬ ಅನುಭವ ಯಾರಿಗೂ ಇಲ್ಲ. ಮತ್ತು ಹಾಗೇ ಸಮರ್ಥನೆ ಮಾಡಲು ಪ್ರಮಾಣವೂ ಕೂಡ ಇರುವುದಿಲ್ಲ.

**ವಿವರಣೆ** - ಬೌದ್ಧರು ಶ್ರುತಿಯನ್ನು ಪ್ರಮಾಣವೆಂದೇ ಒಪ್ಪುವುದಿಲ್ಲ. ಹೀಗಿರುವಾಗ ನ ಋತೇ ತ್ವತ್ಕ್ರೀಯತೇ' ಇತ್ಯಾದಿ ಶ್ರುತಿಗಳ ವಿರೋಧವನ್ನು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ 'ಅಧಿಕಾರಿಣಂ ಪ್ರತಿ' ಎಂದು ಉತ್ತರಿಸುತ್ತಿದ್ದಾರೆ. ನಿಜವಾದ ಜಿಜ್ಞಾಸು ಶ್ರುತಿಯನ್ನು ಪ್ರಮಾಣವೆಂದು ಒಪ್ಪಿ, ಬೌದ್ಧಮತವು ಗ್ರಾಹ್ಯವಾಗಿದೆ ಎಂಬ ಜಿಜ್ಞಾಸೆಯನ್ನು ವ್ಯಕ್ತಪಡಿಸಿದಾಗ ಅಂಥವನನ್ನು ಕುರಿತು ಈ ವಾಕ್ಯ ಹೊರಟಿದೆ ಎಂದು ತಿಳಿಯಬೇಕು. ಬೌದ್ಧಮತವು ಶ್ರುತ್ಯಾದಿಗಳಿಗೆ ವಿರುದ್ಧವಾದ್ದರಿಂದ ಸರ್ವಥಾ ಗ್ರಾಹ್ಯವಲ್ಲ. ಮತ್ತು ಬೌದ್ಧಮತವನ್ನು ಸಮರ್ಥನೆ ಮಾಡುವ ಯಾವುದೇ ಪ್ರಮಾಣಗಳೂ ಕೂಡ ಇರುವುದಿಲ್ಲ. ಆದ್ದರಿಂದ ಎಲ್ಲಾ ಬಗೆಯ ಬೌದ್ಧಮತಗಳು ನಿರಸ್ತವಾದವು.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ ಅನುಪಲಬ್ಧ್ಯಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## अनुपलब्ध्यधिकरणम् - ९

ಅಧಿಕರಣದ ಪ್ರವೃತ್ತಿ ಹಾಗೂ ಸೂತ್ರಾರ್ಥ

।। न भावोऽनुपलब्धेः ।।

अत्र नये नासतोऽदृष्टत्वादित्युक्तदोषो नात्रेति प्राप्तं विज्ञानमतं निराह। जगदिति प्रकृतम् । भवतीति भावः सद्रूपज्ञानम् । जगत् भावो ज्ञानात्मकं न । ज्ञानमेव जगदाकारेण परिणमत इति नेत्यर्थः । कुतः? अनुपलब्धेरननुभवात् । प्रमाणाभावादित्यर्थः । उपलब्धिविरोधादित्यप्यर्थः। ज्ञानज्ञेययोर्भेदस्य साक्षिसिद्धत्वादिति भावः ।

ಈ ಅಧಿಕರಣದಲ್ಲಿ 'ನಾಸತೋಽದೃಷ್ಟತ್ವಾತ್' ಎಂಬ ಸೂತ್ರದಲ್ಲಿ ಹೇಳಿದ ದೋಷವು ತನಗೆ ಬರುವುದಿಲ್ಲ ಎಂಬುದಾಗಿ ವಿಜ್ಞಾನವಾದಿಗಳು ಹೇಳುತ್ತಾರೆ. ಇವರ ಮತವನ್ನು ನಿರಾಕರಣೆ ಮಾಡಲಾಗಿದೆ.

ಜಗತ್ ಎಂಬುದು ಪ್ರಕೃತವೇ ಆಗಿದೆ. 'ಭವತೀತಿ ಭಾವಃ' ಎಂಬ ನಿಷ್ಪತ್ತಿಯಂತೆ ಭಾವಶಬ್ದಕ್ಕೆ ತದ್ರೂಪವಾದ ಜ್ಞಾನ ಎಂದರ್ಥ. ಭಾವೋನ = ಜಗತ್ತು ಜ್ಞಾನಸ್ವರೂಪವಲ್ಲ. ಜ್ಞಾನವೇ ಜಗದಾಕಾರವಾಗಿ ಪರಿಣಾಮ ಹೊಂದುತ್ತದೆ ಎಂದು ಹೇಳುವುದು ಸರಿಯಲ್ಲ ಎಂಬುದು ಇದರ ಅರ್ಥ. ಏಕೆಂದರೆ ಅನುಪಲಬ್ಧೇಃ = ಜ್ಞಾನಸ್ವರೂಪವೆಂಬ ಅನುಭವ ಯಾರಿಗೂ ಇಲ್ಲ. ಮತ್ತು ಹಾಗೇ ಸಮರ್ಥನೆ ಮಾಡಲು ಪ್ರಮಾಣವೂ ಕೂಡ ಇರುವುದಿಲ್ಲ.

'ಅನುಪಲಬ್ಧೇಃ' ಎಂಬುದಕ್ಕೆ ಉಪಲಬ್ಧಿವಿರೋಧ, ಅನುಭವವಿರೋಧವಿರುವುದರಿಂದ ಎಂಬರ್ಥವನ್ನೂ ಕೂಡ ತಿಳಿಯಬೇಕು. ಜ್ಞಾನ ಮತ್ತು ಜ್ಞೇಯಗಳ ಭೇದವು ಸಾಕ್ಷಿಪ್ರಮಾಣ ಸಿದ್ಧವಾಗಿರುವುದರಿಂದ ಎರಡನ್ನು ಒಂದೇ ಎಂದು ಹೇಳಿದರೆ ಅನುಭವವಿರೋಧ ಬರುತ್ತದೆ.

### ಸೂತ್ರದಲ್ಲಿರುವ ಭಾವಪದದ ವ್ಯಾಖ್ಯಾನ

**ज्ञानमिति वाच्ये भाव इत्युक्तिर्नाऽसत इत्युक्तदोषो नेति दर्शयितुम् । केचित्तु प्राप्तौ भुव् शुद्धिचिन्तयोरिति कविकल्पद्रुमोक्तेश्चिन्तारूपज्ञानार्थस्य भुवो रूपमिति भावः । युष्माकं भाः साकारत्वेनाभिमतं ज्ञानमिति वाऽभिप्रेत्य भाव इत्यक्किरित्याहुः ।।**

ಸೂತ್ರದಲ್ಲಿ ಜ್ಞಾನವು ಎಂದು ಹೇಳಬೇಕಿತ್ತು. 'ಭಾವಃ' ಎಂದೇಕೆ ಹೇಳಿದರು ? ಎಂದರೆ ಜ್ಞಾನವು ಸತ್ಯವಾಗಿದೆ. ಆದ್ದರಿಂದ 'ನಾಸತಃ' ಎಂಬ ಸೂತ್ರದಲ್ಲಿ ಹೇಳಿದ ದೋಷ ತಮಗೆ ಬರುವುದಿಲ್ಲ ಎಂದು ಪೂರ್ವಪಕ್ಷಕಾರರ ಅಭಿಪ್ರಾಯವನ್ನು ಸ್ಪಷ್ಟಪಡಿಸಬೇಕಾಗಿದೆ.

ಕೆಲವರು 'ಪ್ರಾಪ್ತೌ ಭುವ್ ಶುದ್ಧಿಚಿಂತಯೋಃ' ಎಂಬ ಕವಿಕಲ್ಪದ್ರುಮದ ಮಾತಿನ ಪ್ರಕಾರ ಭಾವಪದವು ಚಿಂತಾಸ್ವರೂಪವಾದ ಜ್ಞಾನಾರ್ಥಕವಾಗಿದೆ. ಭುವ್ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ ಎಂದು ಹೇಳುತ್ತಾರೆ. ಅಥವಾ 'ಭಾವಃ' ಎಂದರೆ ವಃ = ನಿಮ್ಮ, ಭಾಃ = ಸಾಕಾರವೆಂದು ಅಂಗೀಕಾರ ಮಾಡಲ್ಪಟ್ಟ ಜ್ಞಾನ ಎಂದರ್ಥವನ್ನು ವಿವಕ್ಷಿಸಿ ಭಾವ ಪದವನ್ನು ವ್ಯಾಖ್ಯಾನ ಮಾಡುತ್ತಾರೆ.

ವಿವರಣೆ - ಭಾವಪದಕ್ಕೆ ಜ್ಞಾನ ಎಂಬರ್ಥವನ್ನು ವಿವಕ್ಷಿಸಬೇಕು. ಜಗತ್ತು ಇರುವುದೇ ಜ್ಞಾನರೂಪದಲ್ಲಿ. ಜ್ಞಾನವೊಂದೇ ಸತ್ಯವಾಗಿರುವುದರಿಂದ ಜಗತ್ತೂ ಕೂಡ ಸತ್ಯವಾಗಿದೆ. ಆದ್ದರಿಂದ ಜ್ಞಾನವೇ ಜಗತ್ಕಾರಣವಾಗಿದೆ. ಹೀಗೆ ಹೇಳಿದ್ದರಿಂದ ಶೂನ್ಯವಾದಿಗಳಿಗೆ ಯಾವ ದೋಷವು ಬಂದಿತ್ತೋ, ಅದು ತಮಗೆ ಬರುವುದಿಲ್ಲ. ಶೂನ್ಯವು ಅತ್ಯಂತ ಅಸತ್ತಾಗಿದೆ. ಜ್ಞಾನವು ಸತ್ಯವಾಗಿದೆ ಎಂಬುದು ವಿಜ್ಞಾನವಾದಿಗಳ ಅಭಿಪ್ರಾಯ. ಇಷ್ಟು ಅಭಿಪ್ರಾಯವನ್ನು ಸೂತ್ರದಲ್ಲಿರುವ 'ಭಾವ' ಎಂಬ ಒಂದೇಪದವು ತಿಳಿಸುತ್ತಿದೆ. ಅಥವಾ ಭಾವಶಬ್ದಕ್ಕೆ ಚಿಂತಾ ಎಂಬ ಅರ್ಥವಿದೆ. ಚಿಂತಾ ಎಂದರೆ ಜ್ಞಾನ ಎಂದರ್ಥ. ಅಥವಾ 'ಭಾಃ' ಎಂದಷ್ಟೇ ಪದವನ್ನು

ವಿವಕ್ಷಿಸಿ, ಜ್ಞಾನ ಎಂಬರ್ಥವನ್ನು ವಿವಕ್ಷಿಸಬೇಕು. 'ವಾಃ' ಎಂದರೆ ನಿಮಗೆ ಎಂದರ್ಥ. ಹೀಗೆ ಭಾವ ಶಬ್ದಕ್ಕೆ ಜ್ಞಾನ ಎಂಬರ್ಥವನ್ನು ಮೂರು ರೀತಿಯಲ್ಲಿ ವಿವಕ್ಷಿಸಬೇಕು.

### ಜ್ಞಾನವು ಜಗತ್ಕಾರಣವಲ್ಲ

इतश्चैवमित्याह -

।। क्षणिकत्वाच्च ।।२-२-३१।।

न भाव इति वर्तते । भाव इति आवर्तते च । भावस्य क्षणिकत्वाच्च आशुतरविनाशित्वाच्च न भावो जगदित्यर्थः । जगतः स्थायित्वं प्रागुक्तमिति भावः ।।

ಮತ್ತೊಂದು ಕಾರಣದಿಂದಲೂ ಜ್ಞಾನವು ಜಗತ್‌ಕಾರಣವಲ್ಲ ಎಂದು ಹೇಳುತ್ತಿದ್ದಾರೆ 'ಕ್ಷಣಿಕತ್ವಾಚ್ಚ' ಎಂದು.

ಈ ಸೂತ್ರದಲ್ಲಿ ಹಿಂದಿನ ಸೂತ್ರದಿಂದ 'ನ' ಎಂಬ ಪದವನ್ನು ಹಾಗೂ 'ಭಾವಃ' ಎಂಬ ಪದವನ್ನು ಅನುವೃತ್ತಿ ಮಾಡಬೇಕು. 'ಭಾವಃ' ಎಂಬ ಪದವು ಆವೃತ್ತಿಯನ್ನು ಪಡೆಯುತ್ತದೆ. ಭಾವ ಎಂದರೆ ಜ್ಞಾನ ಎಂದರ್ಥ. ಕ್ಷಣಿಕತ್ವಾಚ್ಚ = ಹುಟ್ಟಿದ ತತ್‌ಕ್ಷಣ ವಿನಾಶವನ್ನು ಪಡೆಯುವುದರಿಂದ ಜ್ಞಾನವು ಜಗದಾಕಾರವೆಂದು ಹೇಳಬಾರದು. ಜಗತ್ತು ಸ್ಥಾಯಿಯಾಗಿದೆ ಎಂದು ಈ ಹಿಂದೆ ಸಮರ್ಥನೆ ಮಾಡಿದ್ದೇವೆ ಎಂಬುದು ಸೂತ್ರದ ಅಭಿಪ್ರಾಯ.

### ಎಲ್ಲಾ ಬೌದ್ಧರಿಗೆ ಸಾಮಾನ್ಯ ದೋಷ

एवं पृथङ् निरस्तानि बौद्धमतानि सामान्यदोषेण निराह -

।। सर्वथाऽनुपपत्तेश्च ।।२-२-३२।।

नेत्यस्ति । सर्वथा प्रत्यर्थं क्षणिकत्वकल्पने शून्याद्वैतकल्पने विज्ञानाद्वैतकल्पने प्रकटने प्रच्छादने वा वेदद्वेषपक्षा न ग्राह्याः । कुतः? अनुपपत्तेः उपपत्त्युपलक्षितमानाभावात् तद्विरुद्धत्वाच्चेत्यर्थः ।।९।।

ಹೀಗೆ ಪ್ರತ್ಯೇಕವಾಗಿ ನಿರಾಕರಿಸಲ್ಪಟ್ಟ ಬೌದ್ಧರ ಎಲ್ಲಾ ಪಂಗಡಗಳನ್ನು ಸಾಮಾನ್ಯದೋಷ ಹೇಳುವ ಮೂಲಕ ನಿರಾಕರಣೆ ಮಾಡುತ್ತಿದ್ದಾರೆ - 'ಸರ್ವಥಾಽನುಪಪತ್ತೇಶ್ಚ' ಎಂದು.

'ನ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಸರ್ವಥಾ = ಪ್ರತಿಯೊಂದು ಪದಾರ್ಥವು ಕ್ಷಣಿಕ ಎಂಬುದಾಗಿ ಕಲ್ಪನೆ ಮಾಡಿದರೆ ಶೂನ್ಯವ್ಯತಿರಿಕ್ತವಾದ ಯಾವುದೇ ವಸ್ತುವೇ ಇಲ್ಲ ಎಂಬುದಾಗಿ ಶೂನ್ಯಾದ್ವೈತವನ್ನು ಕಲ್ಪನೆ ಮಾಡಿದರೆ - ವಿಜ್ಞಾನವ್ಯತಿರಿಕ್ತವಾದದ್ದೆಲ್ಲವೂ ಮಿಥ್ಯಾಭೂತವಾಗಿದೆ ಎಂದು ವಿಜ್ಞಾನಾದ್ವೈತವನ್ನು ಕಲ್ಪನೆ ಮಾಡಿದರೆ - ಶೂನ್ಯಾದ್ವೈತಿಗಳು ವಿಜ್ಞಾನಾದ್ವೈತಿಗಳು ಇತ್ಯಾದಿ ಶಬ್ದಗಳಿಂದ ತಮ್ಮನ್ನು ತಾವು ತೋರಿಸಿಕೊಂಡು ಅದ್ವೈತವನ್ನು ಪರಿಗ್ರಹ ಮಾಡಿದರೆ, ಅಥವಾ ಬೌದ್ಧರ ಹೆಸರನ್ನು ಪ್ರಕಟ ಪಡಿಸದೇ ಬೇರೆ ಶಬ್ದಗಳಿಂದ ಅದ್ವೈತವಾದವನ್ನು ಪರಿಗ್ರಹ ಮಾಡಿದರೆ ಅಂಥ ವೇದದ್ವೇಷಿಯಾದ ಯಾವ ಪಕ್ಷಗಳೂ ಕೂಡ ಸ್ವೀಕಾರಕ್ಕೆ ಯೋಗ್ಯವಲ್ಲ. ಏಕೆಂದರೆ 'ಅನುಪಪತ್ತೇಃ' = ಉಪಪತ್ತಿ ಪದವು ಲಕ್ಷಣಯಾ ಹೇಳುವ ಯಾವುದೇ ಪ್ರಮಾಣವು ಇಲ್ಲದೇ ಇರುವುದರಿಂದ, ಮತ್ತು ಪ್ರಮಾಣವಿರುದ್ಧ-ವಾಗಿರುವುದರಿಂದ. ಈ ಎಲ್ಲಾ ಮತಗಳು ಅಯುಕ್ತವಾಗಿವೆ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಅನುಪಲಬ್ಧ್ಯಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ನೈಕಸ್ಮಿನ್ನಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್ ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ನೈಕಸ್ಮಿನ್ನಧಿಕರಣ

## ಬ್ರಹ್ಮಸೂತ್ರ

'ನೈಕಸ್ಮಿನ್ನಸಂಭವಾತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – नैकस्मिन्नसम्भवात् ।।**

ಒಂದೇ ವಸ್ತುವಿನಲ್ಲಿ ಏಳು ಪ್ರಕಾರಗಳು ಇರುತ್ತವೆಂದು ಜೈನರು ಹೇಳುತ್ತಾರೆ. ಈ ಏಳು ಪ್ರಕಾರಗಳಲ್ಲಿ ಪರಸ್ಪರ ವಿರೋಧವಿರುವುದರಿಂದ ಒಂದೇ ವಸ್ತುವಿನಲ್ಲಿ ಅವು ಅಸಂಭಾವಿತವಾಗಿವೆ.

ಜೈನರು ಹೇಳಿದ ಏಳು ಪ್ರಕಾರಗಳು ಏಕಸ್ಮಿನ್ = ಒಂದೇ ವಸ್ತುವಿನಲ್ಲಿ, ನ = ಯುಕ್ತವಾಗುವುದಿಲ್ಲ. ಏಕೆಂದರೆ ಅಸಂಭವಾತ್ = ಅಪ್ರಾಮಾಣಿಕವಾದ್ದರಿಂದ ಆ ಎಲ್ಲಾ ಪ್ರಕಾರಗಳು ಒಂದೇ ವಸ್ತುವಿನಲ್ಲಿ ಅಸಂಭಾವಿತವಾಗಿದೆ.

೧. ಸತ್ವ, ೨. ಅಸತ್ವ, ೩. ಸದಸತ್ವ, ೪. ಸದಸದ್ ವಿಲಕ್ಷಣತ್ವ, ೫. ಸತ್ವೇಸತಿ ಸದ್ವಿಲಕ್ಷಣತ್ವ, ೬. ಅಸತ್ವೇ ಸತಿ ಅಸದ್ವಿಲಕ್ಷಣತ್ವ, ೭. ಸದಸತ್ವೇ ಸತಿ ಸದಸದ್ವಿಲಕ್ಷಣತ್ವ. ಈ ಏಳು ಪ್ರಕಾರಗಳು ಪ್ರತಿಯೊಂದು ವಸ್ತುಗಳಲ್ಲಿ ಇರುತ್ತವೆನ್ನುವುದು ಜೈನರ ವಾದ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

ಸ್ಯಾದ್‌ವಾದಿಗಳ ಸ್ವರೂಪವೇನು ?

**ब्रह्मसूत्रभाष्यम् – स्याद्वादिमतं दूषयति –**

**।। नैकस्मिन्नसम्भवात् ।।१।।**

**सत् स्याद् असत्स्यात् सदसत् स्यात् ततोऽन्यच स्यादित्येतन्नैकस्मिन् युज्यते । अदृष्टत्वेनासम्भवात् ।।१।।**

ಅನುವಾದ - ಜಗತ್ತು ಸತ್ಯ ಆಗಲಿ, ಅಸತ್ಯ ಆಗಲಿ, ಸದಸತ್ ಆಗಲಿ, ಸದಸದ್ವಿಲಕ್ಷಣ ಆಗಲಿ, ಸತ್ವೇ ಸತಿ ಸದ್ವಿಲಕ್ಷಣ ಆಗಲಿ, ಅಸತ್ವೇ ಸತಿ ಅಸದ್ವಿಲಕ್ಷಣ ಆಗಲಿ, ಸದಸತ್ವೇ ಸತಿ ಸದಸದ್ವಿಲಕ್ಷಣ ಆಗಲಿ, ಹೀಗೆ ಏಳು ಭಂಗಿಯನ್ನು ಜೈನರು ಜಗತ್ತಿನ ವಿಷಯದಲ್ಲಿ ಹೇಳುತ್ತಾರೆ. ಅವರ ಈ ಸ್ಯಾದ್‌ವಾದವನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ.

ಪ್ರತಿಪದಾರ್ಥ -- ಜೈನಮತದ ನಿರಾಕರಣೆಗಾಗಿ ಈ ಅಧಿಕರಣವು ಹೊರಟಿದೆ. ಸತ್‌ಸ್ಯಾತ್ = ಜಗತ್ತು ಸತ್ಯವಾಗಲಿ, ಅಸತ್ ಸ್ಯಾತ್ = ಅಸತ್ಯವಾಗಲಿ, ಸದಸತ್‌ಸ್ಯಾತ್ = ಸದಸತ್ ಆಗಲಿ, ತತೋ ಅನ್ಯಚ್ಚ ಸ್ಯಾತ್ = ಸತ್ವೇ ಸತಿ ಸದ್ವಿಲಕ್ಷಣ ಆಗಲಿ, ಅಸತ್ವೇ ಸತಿ ಅಸದ್ವಿಲಕ್ಷಣ ಆಗಲಿ, ಸದಸತ್ವೇ ಸತಿ ಸದಸದ್ವಿಲಕ್ಷಣ ಆಗಲಿ, ಇತ್ಯೇತತ್ = ಹೀಗೆ ಹೇಳುವ ಸ್ಯಾದ್‌ವಾದವನ್ನು, ಏಕಸ್ಮಿನ್ = ಒಂದು ಜಗತ್ತಿನಲ್ಲಿ, ನಯುಜ್ಯತೇ = ಯುಕ್ತವಾಗುವುದಿಲ್ಲ. ಅದೃಷ್ಟತ್ವೇನ = ಈ ಸಪ್ತಭಂಗಿಗಳು ಎಲ್ಲಿಯೂ ಕಾಣದ್ದರಿಂದ, ಅಸಂಭವಾತ್ = ಅಪ್ರಾಮಾಣಿಕವಾಗಿವೆ.

## ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

# ಸತ್ತರ್ಕದೀಪಾವಳಿ

**सत्तर्कदीपावळिः –**

**वेदप्रामाण्याभ्युपगमरहितत्वाविशेषाद्बौद्धपक्षनिराकरणानन्तरं जैनपक्षमुपक्षिप्य दूषयति – स्यादित्यादिना । जगत्सत्स्यादसत्स्यात्सदसत्स्यात् सदसद्विलक्षणं च स्यादिति स्याद्वादिमतं न युज्यते । परस्परपराहतत्वात् । न हि यदेव वस्तु सत्स्यादित्युक्तं तदेव तत्रैव तस्मिन्काल एव स्वेनैव रूपेणासत्स्यादिति वक्तुं शक्यते विरोधात् ।**

ಬೌದ್ಧರಿಂದ ಜೈನರೂ ಕೂಡ ವೇದಪ್ರಾಮಾಣ್ಯವನ್ನು ಅಂಗೀಕಾರ ಮಾಡುವುದಿಲ್ಲ. ಈ ದೃಷ್ಟಿಯಿಂದ ಬೌದ್ಧರಿಗೂ, ಜೈನರಿಗೂ ಸಾಮ್ಯವಿದೆ. ಹಾಗಾಗಿ ಬೌದ್ಧಮತವನ್ನು ನಿರಾಕರಣೆ ಮಾಡಿದ ಕೂಡಲೇ ಜೈನಮತದ ನಿರಾಕರಣೆಯನ್ನು ಮಾಡುತ್ತಿದ್ದಾರೆ. ಮೊದಲು ಅವನ ಮತವನ್ನು ಅನುವಾದ ಮಾಡುತ್ತಿದ್ದಾರೆ 'ಸ್ಯಾತ್' ಇತ್ಯಾದಿ ಭಾಷ್ಯದಿಂದ.

ಜಗತ್ತು ಸತ್ ಆಗುತ್ತದೆ. ಅಸತ್ ಆಗುತ್ತದೆ, ಸದಸತ್ ಆಗುತ್ತದೆ. ಸದಸದ್ವಿಲಕ್ಷಣ ಆಗುತ್ತದೆ ಇತ್ಯಾದಿಯಾಗಿ ಹೇಳುವ ಸ್ಯಾದ್ವಾದಿಗಳ ಮತವು ಅಯುಕ್ತವಾಗಿದೆ. ಏಕೆಂದರೆ ಇದು ಪರಸ್ಪರ ವ್ಯಾಹತವಾದ ವಚನ. ಯಾವ ವಸ್ತು ಸತ್ಯವಾಗಿದೆಯೋ, ಅದೇ ವಸ್ತು, ಅದೇ ಕಾಲದಲ್ಲಿ, ಅದೇ ರೂಪದಿಂದ ಅಸತ್ ಆಗಲು ಸಾಧ್ಯವಿಲ್ಲ.

## ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

### ಜೈನರು ಹೇಳುವ ಸಪ್ತಭಂಗಿಗಳು

**तत्वप्रदीपः – अथ वेदबाह्यान्तर्भावादनन्तरमेव जैनमतं निराकरोति । नैकस्मिन्नसम्भवात् । सत्स्यादसत्स्यात्सदसत्स्यादुभयविलक्षणं च स्यात् चकारादुभयमुभयविलक्षणं च स्यात् न च तत्स्यात्, उक्तं सर्वं च स्यादिति जैना जल्पन्ति तत्तद्गतदोषपरिजिहीर्षवः सार्वत्रिकदोषसमाजभाजनीभूताः ।**

ಬೌದ್ಧರಂತೆ ಜೈನರೂ ಕೂಡ ವೇದಬಾಹ್ಯರಲ್ಲಿ ಸೇರಿದ್ದಾರೆ. ಆದಕಾರಣ ನಿರಾಕರಣೆಯನ್ನು ಮಾಡಿ, ಜೈನಮತದ ನಿರಾಕರಣೆಯನ್ನು 'ನೈಕಸ್ಮಿನ್ನಸಂಭವಾತ್' ಎಂದು ಮಾಡುತ್ತಿದ್ದಾರೆ.

೧. ಜಗತ್ತು ಸತ್ಯವೂ ಹೌದು, ೨. ಅಸತ್ಯವೂ ಹೌದು, ೩. ಸದಸತ್ವವೂ ಹೌದು, ೪. ಸದಸದ್ವಿಲಕ್ಷಣವೂ ಹೌದು, ೫. ಚಕಾರದಿಂದ ಸದಸತ್ವೇಽಸತಿ ಸದಸದ್ವಿಲಕ್ಷಣವೂ ಹೌದು. ೬. ಈ ಐದು ಪಕ್ಷಗಳು ಅಯುಕ್ತವೂ ಹೌದು, ೭. ಐದು ಪಕ್ಷಗಳು ಯುಕ್ತವೂ ಹೌದು. ಹೀಗೆ ಜೈನರು ವ್ಯರ್ಥವಾಗಿ ಸಪ್ತಭಂಗಿಗಳನ್ನು ಒಪ್ಪಿದ್ದಾರೆ. ಈ ಏಳು ಪಕ್ಷಗಳಲ್ಲಿರುವ ದೋಷಗಳನ್ನು ಪರಿಹರಿಸಿಕೊಳ್ಳಲು ಎಲ್ಲಾ ಪಕ್ಷಗಳಲ್ಲಿರುವ ದೋಷಗಳ ಸಮೂಹಕ್ಕೆ ಪಾತ್ರರಾಗಿದ್ದಾರೆ.

ವಿವರಣೆ - ಈ ಏಳು ಪ್ರಕಾರಗಳು ತತ್ವಪ್ರಕಾಶಿಕೆಯಲ್ಲಿ ಹೇಳಿದವುಗಳಲ್ಲ. ಇದು ಬೇರೆಯ ಏಳುಭಂಗಿಗಳಾಗಿವೆ. ಈ ಏಳರಲ್ಲಿ ಆರು ಮತ್ತು ಏಳರ ಪ್ರಕಾರಗಳು ವಿಭಿನ್ನವಾಗಿದೆ. ಉಳಿದವುಗಳು ತತ್ವಪ್ರಕಾಶಿಕೆಗೆ ಅನುಗುಣವಾಗಿದೆ. 'ತತೋಽನ್ಯಚ್ಚ ಸ್ಯಾತ್' ಎಂಬ ವಾಕ್ಯಕ್ಕೆ ಮುಂದೆ ಮತ್ತೊಂದು ರೀತಿಯಲ್ಲಿ ಪಂಡಿತಾಚಾರ್ಯರು ವ್ಯಾಖ್ಯಾನ ಮಾಡುತ್ತಾರೆ. ಅವು ತತ್ವಪ್ರಕಾಶಿಕಾದಲ್ಲಿ ಹೇಳಿದ ಏಳು ಭಂಗಿಗಳಾಗಿವೆ. ಈ ಸೂಕ್ಷ್ಮವನ್ನು ಗಮನಿಸಬೇಕು. ಜೈನರು ಮುಖ್ಯವಾಗಿ ಹೇಳುವ ಸಪ್ತಭಂಗಿಗಳನ್ನು ತತ್ವಪ್ರದೀಪದಲ್ಲಿ ಇಲ್ಲಿ ಉಲ್ಲೇಖ ಮಾಡಿದ್ದಾರೆ. ಅವುಗಳಲ್ಲಿರುವ ಅವಾಂತರ ಪ್ರಭೇದಗಳನ್ನು ತತ್ವಪ್ರಕಾಶಿಕಾದಲ್ಲಿ ಹೇಳಿದ್ದಾರೆಂಬ ಅಂಶವನ್ನು ಇಲ್ಲಿ ಗಮನಿಸಬೇಕು.

## ಸಪ್ತಭಂಗಿಗಳಲ್ಲಿ ಅವಾಂತರ ಪ್ರಭೇದಗಳು

**तत्वप्रदीपः – ततोऽन्यच्च स्यादित्यस्यान्योऽर्थः - उक्तं त्रयं न स्यात्, सत्स्यान्नच स्यादसत्स्यान्नच स्यात्सदसत्स्यान्न च स्यादिति, तत्रैवावान्तरभेदोऽयम् । नैतत्सप्तप्रकारत्वमेकस्मिन् वस्तुनि वक्तुं युज्यते । नह्येता भङ्गयः क्वचिदेकत्र दृष्टाः । न च सदसद्भङ्गिव्यतिरेकिण्यो भङ्गय एव दृष्टाः । अदृष्टकल्पने सप्तभङ्गिनियमोऽपि भङ्गी स्यात् ।**

'ತತೋಽನ್ಯಚ್ಚ ಸ್ಯಾತ್' ಎಂಬ ಭಾಷ್ಯಕ್ಕೆ ಮತ್ತೊಂದು ಅರ್ಥ ಹೀಗಿದೆ - ೧. ಜಗತ್ತು ಸತ್ಯವೂ ಹೌದು, ೨. ಅಸತ್ಯವೂ ಹೌದು, ೩. ಸದಸತ್ವವೂ ಹೌದು, ೪. ಸದಸದ್ವಿಲಕ್ಷಣವೂ ಹೌದು, ೫. ಸತ್ವೇಽಸತಿ ಸದ್ವಿಲಕ್ಷಣವೂ ಹೌದು, ೬. ಅಸತ್ವೇಽಸತಿ ಅಸದ್ವಿಲಕ್ಷಣವೂ ಹೌದು, ೭. ಸದಸತ್ವೇ ಸತಿ ಸದಸದ್ವಿಲಕ್ಷಣವೂ ಹೌದು, ಎಂದು ಅದರಲ್ಲೇ ಅವಾಂತರ ಪ್ರಭೇದವಿದೆ.

ಈ ಏಳು ಪ್ರಕಾರಗಳನ್ನು ಒಂದೇ ವಸ್ತುವಿನಲ್ಲಿ ಹೇಳಲು ಸಾಧ್ಯವಿಲ್ಲ. ಈ ಏಳು ಪ್ರಕಾರಗಳು ಒಂದು ಕಡೆ ಕಂಡೂ ಇಲ್ಲ. ಸತ್ವ ಹಾಗೂ ಅಸತ್ವ ಎಂಬೆರಡು ಭಂಗಿಗಳನ್ನು ಬಿಟ್ಟು, ಉಳಿದ ಭಂಗಿಗಳು ಎಲ್ಲೂ ಕೂಡ ಅನುಭವಸಿದ್ಧವಾಗಿಲ್ಲ. ಎಲ್ಲೂ ಕಾಣದಿದ್ದರೂ ಸಪ್ತಭಂಗಿಗಳನ್ನು ಅಂಗೀಕಾರ ಮಾಡಿದರೆ, ಏಳೇ ಭಂಗಿಗಳೇಕೆ ? ಇನ್ನಷ್ಟು ಭಂಗಿಗಳನ್ನು ಅಂಗೀಕರಿಸಬಹುದು. ಆಗ ಸಪ್ತಭಂಗನಿಯಮವೇ ಭಂಗವಾಗುತ್ತದೆ.

ವಿವರಣೆ - 'ಉಕ್ತಂ ತ್ರಯಂ ನ ಸ್ಯಾತ್' ಎಂದರೆ ಮೇಲೆ ಹೇಳಿದ ಮೂರು ಪಕ್ಷಗಳೂ ಕೂಡ ಅಲ್ಲ ಎಂದಷ್ಟೇ ಅರ್ಥ. 'ಸದಸತ್ವೇ ಸತಿ ಸದಸದ್ವಿಲಕ್ಷಣತ್ವಾತ್' ಎಂದರ್ಥ. 'ಸತ್ ಸ್ಯಾತ್ ನಚ ಸ್ಯಾತ್' ಎಂದರೆ 'ಸತ್ವೇ ಸತಿ ಸದ್ವಿಲಕ್ಷಣತ್ವಾತ್' ಎಂದು, 'ಅಸತ್ ನಚ ಸ್ಯಾತ್' ಎಂದರೆ 'ಅಸತ್ವೇ ಸತಿ ಅಸದ್ವಿಲಕ್ಷಣತ್ವಾತ್' ಎಂದರ್ಥ. 'ಸದಸಸ್ಯಾತ್ ನಚ ಸ್ಯಾತ್' ಎಂದರೆ 'ಸದಸತ್ವೇ ಸತಿ ಸದಸದ್ವಿಲಕ್ಷಣತ್ವಾತ್' ಎಂದರ್ಥ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

## ಜೈನಮತ ನಿರಾಕರಣೆಗಾಗಿ ನೈಕಸ್ಮಿನ್ನಧಿಕರಣ

**अधिकरणार्थं दर्शयति – स्यादिति ।। अत्रेश्वरस्य जगत्कारणत्वेजैनमतविरोधनिरासादस्ति शास्त्रादिसङ्गतिः । ईश्वरो जगत्कारणमित्युक्तम् । तच्च स्याद्वादिमतविरोधे मन्दस्यानुपपत्तिशङ्का स्यादिति तन्निरासः कर्तव्य एव । तत्परमात्मनो जगत्कारणत्वं विषयः । युक्तमयुक्तं वेति सन्देहः । समयविगानं सन्देहबीजम् ।**

ಈ ಅಧಿಕರಣದ ಪ್ರಮೇಯವನ್ನು 'ಸ್ಯಾತ್' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವದ ವಿಷಯಕ್ಕೆ ಜೈನಮತವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ಈಶ್ವರನು ಜಗತ್ಕಾರಣನಾಗಿದ್ದಾನೆಂದು ಹೇಳಲಾಯಿತು. ಈ ವಿಷಯಕ್ಕೆ ಸ್ಯಾದ್ವಾದಿಗಳ ಮತದ ವಿರೋಧವು ಪ್ರಾಪ್ತವಾದರೆ ಮಂದರಿಗೆ ಈ ಲಕ್ಷಣವು ವಿಷ್ಣುವಿನದ್ದಲ್ಲವೆಂಬ ಶಂಕೆಯು ಪ್ರಾಪ್ತವಾಗುತ್ತದೆ. ಆದ್ದರಿಂದ ಈ ಸ್ಯಾದ್ವಾದಿ ಮತವನ್ನು ನಿರಾಕರಣೆ ಮಾಡಲೇ ಬೇಕು.

ಪರಮಾತ್ಮನ ಜಗತ್ಕಾರಣತ್ವವೇ ಅಧಿಕರಣದ ವಿಷಯ. ಇದು ಯುಕ್ತವೋ ಅಯುಕ್ತವೋ? ಎಂದು ಸಂದೇಹ. ಸಮಯಗಳಲ್ಲಿರುವ ವಿವಾದವು ಸಂದೇಹಬೀಜ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
## ಭಾವದೀಪ

**भावदीपः – ।। नेकस्मिन्नसम्भवात् ।।३३।। जैनमतेति ।।** प्रागुक्तदिशा अवैदिकेषु बौद्धनिरासानन्तरं अस्यावसरप्राप्तत्वादिति भावः।

ಹಿಂದೆ ಹೇಳಿದಂತೆ ಅವೈದಿಕರಾದ ಬೌದ್ಧರನ್ನು ನಿರಾಕರಣೆ ಮಾಡಿದ ಮೇಲೆ ಜೈನಮತದ ನಿರಾಕರಣೆಯು ಪ್ರಸಂಗಾತ್ ಪ್ರಾಪ್ತವಾಗುತ್ತದೆ ಎಂದು ತಿಳಿಯಬೇಕು.

ವಿವರಣೆ - ಶೂನ್ಯವಾದಿಗಳು ಹೇಳಲ್ಪಟ್ಟ ಅಸತ್ವವು ಹಾಗೂ ವಿಜ್ಞಾನವಾದಿಗಳು ಹೇಳಲ್ಪಟ್ಟ ಸತ್ವವು ಎರಡೂ 'ಸ್ಯಾತ್' ಎಂದು ಹೇಳುವ ಜೈನರ ಪಕ್ಷದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯಸಂಗತಿಯು ಇರುತ್ತದೆ.

### ಸಪ್ತಭಂಗಿ ಹಾಗೂ ಕಾಯಪರಿಮಾಣದ ಸ್ವರೂಪ

**तत्वप्रकाशिका – न युक्तमिति पूर्वः पक्षः । सदसदुभयमुभयविलक्षणं सदसदुभयविलक्षणं नैतत्सर्वं सर्वं चेति सप्तभङ्गिजगदात्माद‍ृष्टात् परिदृष्टसाधनैश्च भविष्यति । स च कायपरिमाणः । अतः किमीश्वरेणेति लक्षणसूत्रमयुक्तमिति प्राप्ते सिद्धान्तयत्सूत्रमुपन्यस्य व्याचष्टे – नेति ।।**

ವಿಷ್ಣುವಿನ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. '೧. ಸತ್ವ, ೨ ಅಸತ್ವ. ೩ ಸದಸತ್ವ. ೪ ಸದಸದ್‌ವಿಲಕ್ಷಣತ್ವ, ೫ ಸತ್ವೇ ಸತಿ ಸದ್‌ವಿಲಕ್ಷಣತ್ವ, ೬ ಅಸತ್ವೇ ಸತಿ ಅಸದ್‌ವಿಲಕ್ಷಣತ್ವ, ೭ ಸದಸದಾತ್ಮಕತ್ವೇಸತಿ ಸದಸದ್‌ವಿಲಕ್ಷಣತ್ವ. ಹೀಗೆ ಏಳು ರೀತಿಗಳು ಜಗತ್ತಿನಲ್ಲಿ ಇವೆ. ಆತ್ಮ, ಅದೃಷ್ಟಗಳಿಂದ ಹಾಗೂ ಕಾಣಿಸುತ್ತಿರುವ ದಂಡ ಚಕ್ರಾದಿಸಾಧನಗಳಿಂದ ಈ ಜಗತ್ತು ನಿರ್ಮಾಣವಾಗುತ್ತದೆ. ಜೀವನಾದರೂ ಶರೀರದಷ್ಟೇ ಪರಿಮಾಣವುಳ್ಳವನು. ಇಂಥ ಜಗತ್ತಿಗೆ ಈಶ್ವರನಿಂದ ಆಗಲೇಬೇಕಾದದ್ದು ಏನೂ ಅಲ್ಲ.

ಆದ್ದರಿಂದ ಜಗತ್ಕಾರಣತ್ವಲಕ್ಷಣವನ್ನು ಈಶ್ವರನಿಗೆ ಹೇಳಿದ್ದು ಅಯುಕ್ತವಾಗಿದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ನೈಕಸ್ಮಿನ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – भाष्ये सत्स्यादिति स्याच्छब्दस्तिङन्तप्रतिरूपकोऽनेकार्थद्योतको निपात इति भावेन 'आह क्षपणको विश्वं सदसद्द्वयमद्वयम्। द्वयाद्वयमतत्सर्वं सप्तभङ्गिसदातनम्' इत्यनुभाष्यदिशा सप्तपक्षपरत्वेन भाष्यं व्याचष्टे॥ **सदसदुभयेत्यादिना ।।** सदित्याद्यः प्रकारः। असदिति द्वितीयः। उभयं सदसदात्मकमिति तृतीयः। उभयविलक्षणमिति चतुर्थः। सदसदुभयविलक्षणमिति पञ्चम षष्ठौ। तत्र सत्तद्विलक्षणं चेति पञ्चमः। असत्तद्विलक्षणं चेति षष्ठः। सर्वं सदसदात्मकं नैतत्सर्वं सदसद्विलक्षणमिति सप्तम उक्तो ध्येयः। एतेन भाष्ये पक्षचतुष्टयस्य स्पष्टत्वेऽपि शिष्टपक्षत्रयं तु तदन्यदित्येतच्चतुर्थप्रकारार्पकमेव पदं प्रागुक्तत्रितयशेषं कृत्वा सत्त्वे सति सद्विलक्षणं असत्त्वे सत्यसद्विलक्षणं सदसत्त्वे सति सदसद्विलक्षणमित्येवंरूपेण बोध्यमिति दर्शितम्। पूर्वाक्षेपार्थमाह – **आत्मादृष्टादित्यादि ।।** एवं चेति सूत्रनिरस्यमाह – **स चेति ।।** आत्मेत्यर्थः।

ಭಾಷ್ಯದಲ್ಲಿ 'ಸತ್‌ಸ್ಯಾತ್' ಇತ್ಯಾದಿಯಾಗಿ ಹೇಳಿದ್ದಾರೆ. ಇಲ್ಲಿರುವ ಸ್ಯಾತ್ ಎಂಬ ಶಬ್ದವು ಧಾತುವಲ್ಲ. ತಿಙಂತಪ್ರತಿರೂಪಕವಾದ ನಿಪಾತವಾಗಿದೆ. ಇದಕ್ಕೆ ಅನೇಕಾರ್ಥಗಳಿವೆ. ಅನುವ್ಯಾಖ್ಯಾನದಲ್ಲಿ 'ಕ್ಷಪಣಕೋ ವಿಶ್ವಂ ಸದಸದ್ವಯಮದ್ವಯಮ್ । ದ್ವಯಾದ್ವಯಮತ್ ಸರ್ವಂ ಸಪ್ತಭಂಗಿಸನಾತನಮ್' ಎಂದು ಹೇಳಿದ್ದಾರೆ. ಅದಕ್ಕನುಗುಣವಾಗಿ ಈ ಭಾಷ್ಯವನ್ನೂ ಕೂಡ ವ್ಯಾಖ್ಯಾನ ಮಾಡುತ್ತಿದ್ದಾರೆ. ಜೈನರು ಹೇಳುವ ಏಳು ಪ್ರಕಾರಗಳನ್ನು ಇದೇ ಭಾಷ್ಯ 'ಸದಸದುಭಯ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಇವುಗಳಲ್ಲಿ 'ಸತ್' ಎಂಬುದು ಮೊದಲನೆಯ ಪ್ರಕಾರ. 'ಅಸತ್' ಎಂಬುದು ಎರಡನೆಯ ಪ್ರಕಾರ, 'ಉಭಯಂ ಸದಸದಾತ್ಮಕಂ' ಎಂಬುದು ಮೂರನೆಯ ಪ್ರಕಾರ. 'ಉಭಯವಿಲಕ್ಷಣಮ್' ಎಂಬುದು

ನಾಕನೆಯ ಪ್ರಕಾರ. 'ಸದಸದುಭಯವಿಲಕ್ಷಣಮ್' ಎಂಬುದು ಐದು ಹಾಗೂ ಆರನೆಯ ಪ್ರಕಾರಗಳು. ಇವುಗಳಲ್ಲಿ ಸತ್ ಹಾಗೂ ತದ್ವಿಲಕ್ಷಣ ಎಂಬುದು ಐದನೆಯ ಪ್ರಕಾರ. ಅಸತ್ ಹಾಗೂ ತದ್ವಿಲಕ್ಷಣ ಎಂಬುದು ಆರನೆಯ ಪ್ರಕಾರ ಎಂದು ತಿಳಿಯಬೇಕು. ಸರ್ವಂ ಸದಸದಾತ್ಮಕಂ ನೈತತ್‌ಸರ್ವಂ ಸದಸದ್ವಿಲಕ್ಷಣಂ ಎಂಬುದು ಏಳನೆಯ ಪ್ರಕಾರ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿ ನಾಕು ಪಕ್ಷಗಳು ಸ್ಪಷ್ಟವಾಗಿ ಹೇಳಿದ್ದರೂ ಕೂಡ ಉಳಿದ ಮೂರು ಪಕ್ಷಗಳನ್ನು 'ತದನ್ಯತ್' ಎಂಬುದಾಗಿ ಹೇಳಿದ್ದಾರೆ. 'ತತೋ ಅನ್ಯಚ್ಚಸ್ಯಾತ್' ಎಂಬುದು ನಾಕನೆಯ ಪಕ್ಷವೆಂದು ತೋರುತ್ತದೆ. ಆದರೆ ಇದನ್ನೇ ಉಳಿದ ಮೂರು ಪಕ್ಷಗಳನ್ನಾಗಿ ವಿವಕ್ಷಿಸಬೇಕು. 'ಸತ್ವೇ ಸತಿ ಸದ್ವಿಲಕ್ಷಣಮ್', 'ಅಸತ್ವೇ ಸತಿ ತದ್ವಿಲಕ್ಷಣಮ್' 'ಸದಸತ್ವೇ ಸತಿ ಸದದ್ವಿಲಕ್ಷಣಮ್' ಹೀಗೆ ಆ ಉಳಿದ ಮೂರು ಪಕ್ಷಗಳನ್ನು ತಿಳಿಯಬೇಕು. ಹಿಂದಿನ ಪಕ್ಷದ ಆಕ್ಷೇಪವನ್ನು ತೋರಿಸುವುದಕ್ಕಾಗಿ 'ಆತ್ಮಾದೃಷ್ಟಾತ್' ಎಂದು ಹೇಳಿದ್ದಾರೆ. 'ಏವಂ ಚ' ಎಂಬ ಸೂತ್ರದಿಂದ ಪರಿಹಾರವಾಗುವ ಅಂಶವನ್ನು 'ಸಚ' ಎಂಬ ವಾಕ್ಯದಿಂದ ತೋರಿಸಿದ್ದಾರೆ. 'ಸಚ' ಎಂಬುದಕ್ಕೆ ಆತ್ಮನು ಎಂದರ್ಥ.

ವಿವರಣೆ - ಧರ್ಮ, ಅಧರ್ಮ, ಅದೃಷ್ಟ, ಕಾಲ, ಆಕಾಶ, ಮೊದಲಾದ ಸಾಧನೆಗಳಿಂದ ಹಾಗೂ ಕಣ್ಣಿಗೆ ಕಾಣಿಸುವ ದಂಡ ಚಕ್ರಾದಿಸಾಧನೆಗಳಿಂದ ಸಪ್ತಭಂಗಿರೂಪವಾದ ಜಗತ್ತು ನಿರ್ಮಾಣವಾಗುತ್ತದೆ. ಆದ್ದರಿಂದ ಪರಮಾತ್ಮನು ಜಗತ್ತಿನ ನಿರ್ಮಾಣಕ್ಕೆ ಅನಾವಶ್ಯಕ ಎಂಬುದು ಜೈನರ ಅಭಿಪ್ರಾಯ. ಸತ್‌ಸ್ಯಾತ್ ಅಸತ್‌ಸ್ಯಾತ್, ಇತ್ಯಾದಿಯಾಗಿ ಏಳು ಭಂಗಿಗಳನ್ನು ಹೇಳುವುದರಿಂದ ಇವರಿಗೆ ಸ್ಯಾದ್‌ವಾದಿಗಳೆಂದು ಹೆಸರು.

ಮತ್ತು ಜೀವನು ದೇಹದ ಪರಿಮಾಣ ಉಳ್ಳವನಾಗಿರುತ್ತಾನೆ. ಇರುವೆಯಲ್ಲಿ ಜೀವನು ಇರುವೆಯಷ್ಟೇ ಇರುತ್ತಾನೆ. ಮನುಷ್ಯದೇಹದಲ್ಲಿ ಮನುಷ್ಯದೇಹದಷ್ಟೇ ಪರಿಮಾಣವನ್ನು ಹೊಂದಿರುತ್ತಾನೆ ಇತ್ಯಾದಿಯಾಗಿ ಹೇಳುತ್ತಾರೆ.

## ಸ್ಯಾದ್‌ವಾದಿಗಳ ನಿರಾಕರಣೆ

**तत्वप्रकाशिका – यदुच्यते जैनैर्जगत्सप्तभङ्गीति न तद्युक्तम् । व्यावस्थितसदसत्प्रकारद्वयातिरिक्तप्रकारस्याप्रामाणिकत्वेनासम्भवात् । एकैकप्रकाराभ्युपगमे दोषदर्शनदेतदुपेयत इति न वाच्यम् । तथा सति**

**दोषभीरुणा सर्वमपि परित्याज्यं स्यात् । सदसत्प्रकारद्वये च न कोऽपि दोष इति भावः ।।**

'ಜಗತ್ತು ಸಪ್ತಭಂಗಿ' ಎಂದು ಹೇಳಿದ್ದು ಅಯುಕ್ತವಾಗಿದೆ. ಏಕೆಂದರೆ ಜಗತ್ತಿನಲ್ಲಿ ವ್ಯವಸ್ಥಿತವಾಗಿ 'ಸತ್ವ' 'ಅಸತ್ವ' ಎಂಬ ಎರಡೇ ಪ್ರಕಾರಗಳು ಇರುವುದು ಅನುಭವಸಿದ್ಧವಾಗಿದೆ. ಅದಕ್ಕಿಂತ ಅತಿರಿಕ್ತವಾದ ಉಳಿದ ಐದು ಪ್ರಕಾರಗಳು ಅಪ್ರಾಮಾಣಿಕವಾಗಿರುವುದರಿಂದ ಅಸಂಭಾವಿತವಾಗಿವೆ. ಒಂದೊಂದೇ ಪ್ರಕಾರವನ್ನು ಅಂಗೀಕಾರ ಮಾಡಿದರೆ ದೋಷ ಬರುವುದರಿಂದ ಏಳೂ ಪ್ರಕಾರಗಳನ್ನು ಒಪ್ಪಬೇಕೆಂದು ಜೈನರು ಹೇಳುತ್ತಾರೆ. ಇದು ತಪ್ಪು. ಹಾಗಾದರೆ ದೋಷದ ಹೆದರಿಕೆ ಇರುವವನು ಎಲ್ಲವನ್ನೂ ತ್ಯಾಗ ಮಾಡಲೂಬೇಕಾಗುತ್ತದೆ. ಕೇವಲ ಸತ್ವ, ಅಸತ್ವ ಎಂಬೆರಡೇ ಪ್ರಕಾರಗಳನ್ನು ಒಪ್ಪಿದರೆ ಯಾವುದೇ ದೋಷಕ್ಕೆ ಅವಕಾಶವಿಲ್ಲ.

**भावदीपः** – अनुक्तोपालम्भभ्रान्तिं निरस्यन् भाष्यं प्राग्विवृतत्वादिदानीं सामान्यतो व्याचष्टे – **यदुच्यत इति ।। व्यवस्थितेति ।।** देशकालाभ्यामिति योज्यम्। एतच्च वस्तुनो निस्स्वरूपत्वनिवृत्त्यर्थं वा अंशेऽसिद्धिनिवृत्त्यर्थं वोक्तम्। व्याहतिनिरासाय व्यवस्थितेति। अदृष्टत्वेनेत्येतत्प्रमाणसामान्याभावपरत्वेन व्याचष्टे – **अप्रामाणिकत्वेनेति ।।** 'तत्तद्दोषनिवृत्त्यर्थं स्वीकृता तत्तदात्मता। यदि तैरखिलैर्दोषैर्लिप्यते चलदर्शन' इत्याद्यनुभाष्योक्तमाह – **एकैकप्रकारेति ।। परित्याज्यमिति ।।** अन्यथा सर्वपक्षोक्तदोषलेपः स्यादिति भावः।। **सदसदिति ।।** देशकालाभ्यां व्यवस्थितेति योज्यम्।। ३३ ।।

'ಅನುಕ್ತೋಪಲಂಭ' ಎಂಬ ದೋಷವು ಬರುತ್ತದಲ್ಲವೇ? ಎಂಬ ಭ್ರಾಂತಿಯನ್ನು ನಿರಾಕರಣೆ ಮಾಡುವುದಕ್ಕಾಗಿ ಭಾಷ್ಯದಲ್ಲಿ ಹಿಂದೆ ವಿವರಿಸಿದ್ದನ್ನೇ ಈಗ ಸಾಮಾನ್ಯವಾಗಿ 'ಯದುಚ್ಯತೇ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ವ್ಯವಸ್ಥಿತ' ಎಂಬ ಪದಕ್ಕೆ ದೇಶ ಹಾಗೂ ಕಾಲಗಳಿಂದ ವ್ಯವಸ್ಥಿತವಾದ ಎಂದರ್ಥ. ವಸ್ತುವಿಗೆ ನಿಃಸ್ವರೂಪತ್ವವನ್ನು ವ್ಯಾವರ್ತ್ಯ ಮಾಡುವುದಕ್ಕಾಗಿ ಹಾಗೂ ಅಂಶತಃ

ನಾಕನೆಯ ಪ್ರಕಾರ. 'ಸದಸದುಭಯವಿಲಕ್ಷಣಮ್' ಎಂಬುದು ಐದು ಹಾಗೂ ಆರನೆಯ ಪ್ರಕಾರಗಳು. ಇವುಗಳಲ್ಲಿ ಸತ್ ಹಾಗೂ ತದ್ವಿಲಕ್ಷಣ ಎಂಬುದು ಐದನೆಯ ಪ್ರಕಾರ. ಅಸತ್ ಹಾಗೂ ತದ್ವಿಲಕ್ಷಣ ಎಂಬುದು ಆರನೆಯ ಪ್ರಕಾರ ಎಂದು ತಿಳಿಯಬೇಕು. ಸರ್ವಂ ಸದಸದಾತ್ಮಕಂ ನೈತತ್‌ಸರ್ವಂ ಸದಸದ್ವಿಲಕ್ಷಣಂ ಎಂಬುದು ಏಳನೆಯ ಪ್ರಕಾರ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿ ನಾಕು ಪಕ್ಷಗಳು ಸ್ಪಷ್ಟವಾಗಿ ಹೇಳಿದ್ದರೂ ಕೂಡ ಉಳಿದ ಮೂರು ಪಕ್ಷಗಳನ್ನು 'ತದನ್ಯತ್' ಎಂಬುದಾಗಿ ಹೇಳಿದ್ದಾರೆ. 'ತತೋ ಅನ್ಯಚ್ಚಸ್ಯಾತ್' ಎಂಬುದು ನಾಕನೆಯ ಪಕ್ಷವೆಂದು ತೋರುತ್ತದೆ. ಆದರೆ ಇದನ್ನೇ ಉಳಿದ ಮೂರು ಪಕ್ಷಗಳನ್ನಾಗಿ ವಿವಕ್ಷಿಸಬೇಕು. 'ಸತ್ವೇ ಸತಿ ಸದ್ವಿಲಕ್ಷಣಮ್', 'ಅಸತ್ವೇ ಸತಿ ತದ್ವಿಲಕ್ಷಣಮ್' 'ಸದಸತ್ವೇ ಸತಿ ಸದದ್ವಿಲಕ್ಷಣಮ್' ಹೀಗೆ ಆ ಉಳಿದ ಮೂರು ಪಕ್ಷಗಳನ್ನು ತಿಳಿಯಬೇಕು. ಹಿಂದಿನ ಪಕ್ಷದ ಆಕ್ಷೇಪವನ್ನು ತೋರಿಸುವುದಕ್ಕಾಗಿ 'ಆತ್ಮಾದೃಷ್ಟಾತ್' ಎಂದು ಹೇಳಿದ್ದಾರೆ. 'ಏವಂ ಚ' ಎಂಬ ಸೂತ್ರದಿಂದ ಪರಿಹಾರವಾಗುವ ಅಂಶವನ್ನು 'ಸಚ' ಎಂಬ ವಾಕ್ಯದಿಂದ ತೋರಿಸಿದ್ದಾರೆ. 'ಸಚ' ಎಂಬುದಕ್ಕೆ ಆತ್ಮನು ಎಂದರ್ಥ.

ವಿವರಣೆ - ಧರ್ಮ, ಅಧರ್ಮ, ಅದೃಷ್ಟ, ಕಾಲ, ಆಕಾಶ, ಮೊದಲಾದ ಸಾಧನೆಗಳಿಂದ ಹಾಗೂ ಕಣ್ಣಿಗೆ ಕಾಣಿಸುವ ದಂಡ ಚಕ್ರಾದಿಸಾಧನೆಗಳಿಂದ ಸಪ್ತಭಂಗಿರೂಪವಾದ ಜಗತ್ತು ನಿರ್ಮಾಣವಾಗುತ್ತದೆ. ಆದ್ದರಿಂದ ಪರಮಾತ್ಮನು ಜಗತ್ತಿನ ನಿರ್ಮಾಣಕ್ಕೆ ಅನಾವಶ್ಯಕ ಎಂಬುದು ಜೈನರ ಅಭಿಪ್ರಾಯ. ಸತ್‌ಸ್ಯಾತ್ ಅಸತ್‌ಸ್ಯಾತ್, ಇತ್ಯಾದಿಯಾಗಿ ಏಳು ಭಂಗಿಗಳನ್ನು ಹೇಳುವುದರಿಂದ ಇವರಿಗೆ ಸ್ಯಾದ್‌ವಾದಿಗಳೆಂದು ಹೆಸರು.

ಮತ್ತು ಜೀವನು ದೇಹದ ಪರಿಮಾಣ ಉಳ್ಳವನಾಗಿರುತ್ತಾನೆ. ಇರುವೆಯಲ್ಲಿ ಜೀವನು ಇರುವೆಯಷ್ಟೇ ಇರುತ್ತಾನೆ. ಮನುಷ್ಯದೇಹದಲ್ಲಿ ಮನುಷ್ಯದೇಹದಷ್ಟೇ ಪರಿಮಾಣವನ್ನು ಹೊಂದಿರುತ್ತಾನೆ ಇತ್ಯಾದಿಯಾಗಿ ಹೇಳುತ್ತಾರೆ.

### ಸ್ಯಾದ್‌ವಾದಿಗಳ ನಿರಾಕರಣೆ

**तत्वप्रकाशिका – यदुच्यते जैनैर्जगत्सप्तभङ्गीति न तद्युक्तम् । व्यावस्थितसदसत्प्रकारद्वयातिरिक्तप्रकारस्याप्रामाणिकत्वेनासम्भवात् । एकैकप्रकाराभ्युपगमे दोषदर्शनदेतदुपेयत इति न वाच्यम् । तथा सति**

**दोषभीरुणा सर्वमपि परित्याज्यं स्यात् । सदसत्प्रकारद्वये च न कोऽपि दोष इति भावः ।।**

'ಜಗತ್ತು ಸಪ್ತಭಂಗಿ' ಎಂದು ಹೇಳಿದ್ದು ಅಯುಕ್ತವಾಗಿದೆ. ಏಕೆಂದರೆ ಜಗತ್ತಿನಲ್ಲಿ ವ್ಯವಸ್ಥಿತವಾಗಿ 'ಸತ್ವ' 'ಅಸತ್ವ' ಎಂಬ ಎರಡೇ ಪ್ರಕಾರಗಳು ಇರುವುದು ಅನುಭವಸಿದ್ಧವಾಗಿದೆ. ಅದಕ್ಕಿಂತ ಅತಿರಿಕ್ತವಾದ ಉಳಿದ ಐದು ಪ್ರಕಾರಗಳು ಅಪ್ರಾಮಾಣಿಕವಾಗಿರುವುದರಿಂದ ಅಸಂಭಾವಿತವಾಗಿವೆ. ಒಂದೊಂದೇ ಪ್ರಕಾರವನ್ನು ಅಂಗೀಕಾರ ಮಾಡಿದರೆ ದೋಷ ಬರುವುದರಿಂದ ಏಳೂ ಪ್ರಕಾರಗಳನ್ನು ಒಪ್ಪಬೇಕೆಂದು ಜೈನರು ಹೇಳುತ್ತಾರೆ. ಇದು ತಪ್ಪು. ಹಾಗಾದರೆ ದೋಷದ ಹೆದರಿಕೆ ಇರುವವನು ಎಲ್ಲವನ್ನೂ ತ್ಯಾಗ ಮಾಡಲೂಬೇಕಾಗುತ್ತದೆ. ಕೇವಲ ಸತ್ವ, ಅಸತ್ವ ಎಂಬೆರಡೇ ಪ್ರಕಾರಗಳನ್ನು ಒಪ್ಪಿದರೆ ಯಾವುದೇ ದೋಷಕ್ಕೆ ಅವಕಾಶವಿಲ್ಲ.

**भावदीपः** – अनुक्तोपालम्भभ्रान्तिं निरस्यन् भाष्यं प्राग्विवृतत्वादिदानीं सामान्यतो व्याचष्टे – **यदुच्यत इति ।। व्यवस्थितेति ।।** देशकालाभ्यामिति योज्यम्। एतच्च वस्तुनो निस्स्वरूपत्वनिवृत्त्यर्थं वा अंशेऽसिद्धिनिवृत्त्यर्थं वोक्तम्। व्याहतिनिरासाय व्यवस्थितेति। अदृष्टत्वेनेत्येतत्प्रमाणसामान्याभावपरत्वेन व्याचष्टे – **अप्रामाणिकत्वेनेति ।।** 'तत्तद्दोषनिवृत्त्यर्थं स्वीकृता तत्तदात्मता। यदि तैरखिलैर्दोषैर्लिप्यते चलदर्शन' इत्याद्यनुभाष्योक्तमाह – **एकैकप्रकारेति ।। परित्याज्यमिति ।।** अन्यथा सर्वपक्षोक्तदोषलेपः स्यादिति भावः।। **सदसदिति ।।** देशकालाभ्यां व्यवस्थितेति योज्यम्।। ३३ ।।

'ಅನುಕ್ತೋಪಲಂಭ' ಎಂಬ ದೋಷವು ಬರುತ್ತದಲ್ಲವೇ? ಎಂಬ ಭ್ರಾಂತಿಯನ್ನು ನಿರಾಕರಣೆ ಮಾಡುವುದಕ್ಕಾಗಿ ಭಾಷ್ಯದಲ್ಲಿ ಹಿಂದೆ ವಿವರಿಸಿದ್ದನ್ನೇ ಈಗ ಸಾಮಾನ್ಯವಾಗಿ 'ಯದುಚ್ಯತೇ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ವ್ಯವಸ್ಥಿತ' ಎಂಬ ಪದಕ್ಕೆ ದೇಶ ಹಾಗೂ ಕಾಲಗಳಿಂದ ವ್ಯವಸ್ಥಿತವಾದ ಎಂದರ್ಥ. ವಸ್ತುವಿಗೆ ನಿಃಸ್ವರೂಪತ್ವವನ್ನು ವ್ಯಾವರ್ತ್ಯ ಮಾಡುವುದಕ್ಕಾಗಿ ಹಾಗೂ ಅಂಶತಃ

ಅಸಿದ್ಧಿದೋಷವನ್ನು ಪರಿಹಾರ ಮಾಡುವುದಕ್ಕಾಗಿ ದೇಶಕಾಲಗಳಿಂದ ವ್ಯವಸ್ಥಿತವಾಗಿ ಸದಸತ್ವವಿದೆಯೆಂದು ಹೇಳಿದ್ದಾರೆ. ವ್ಯಾಹತಿ ದೋಷವನ್ನು ನಿರಾಕರಣೆ ಮಾಡುವುದಕ್ಕಾಗಿ ವ್ಯವಸ್ಥಿತ ಎಂದು ಹೇಳಿದ್ದಾರೆ.

ಭಾಷ್ಯದಲ್ಲಿರುವ 'ಅದೃಷ್ಟತ್ವೇನ' ಎಂಬುದಕ್ಕೆ ಯಾವುದೇ ಪ್ರಮಾಣಗಳಿಲ್ಲ ಎಂಬರ್ಥದಲ್ಲಿ ವ್ಯಾಖ್ಯಾನ ಮಾಡಲು 'ಅಪ್ರಾಮಾಣಿಕತ್ವೇನ' ಎಂದು ಹೇಳಿದ್ದಾರೆ.

'ತತ್ತದ್ದೋಷ ನಿವೃತ್ತ್ಯರ್ಥಂ ಸ್ವೀಕೃತಾ ತತ್ತದಾತ್ಮತಾ ।
ಯದಿ ತೈರಖಿಲೈರ್ದೋಷೈರ್ಲಿಪ್ಯತೇ ಚಲದರ್ಶನೇ ॥

ಎಂಬ ಅನುವ್ಯಾಖ್ಯಾನದ ಪ್ರಕಾರ 'ಏಕೈಕಪ್ರಕಾರ' ಎಂದು ವ್ಯಾಖ್ಯಾನ ಮಾಡಿದ್ದಾರೆ. 'ಪರಿತ್ಯಾಜ್ಯಮ್' ಎಂದರೆ ಎಲ್ಲವನ್ನೂ ಕೂಡ ತ್ಯಾಗ ಮಾಡಬೇಕು. ಇಲ್ಲದಿದ್ದರೆ ಪ್ರತಿಯೊಂದು ಪಕ್ಷಗಳಲ್ಲಿರುವ ದೋಷಗಳನ್ನು ಎದುರಿಸಬೇಕಾಗುತ್ತದೆ ಎಂದಭಿಪ್ರಾಯ. 'ಸದಸತ್‌ಪ್ರಕಾರದ್ವಯೇ' ಎಂದರೆ ದೇಶ ಹಾಗೂ ಕಾಲಗಳ ವ್ಯವಸ್ಥೆಯಿಂದ ಸತ್ ಪ್ರಕಾರ ಹಾಗೂ ಅಸತ್‌ಪ್ರಕಾರಗಳನ್ನು ಅಂಗೀಕಾರ ಮಾಡಿದರೆ ಯಾವುದೇ ದೋಷ ಇಲ್ಲ ಎಂದರ್ಥ.

ವಿವರಣೆ - ಜೈನರು ಏಳು ಭಂಗಿಗಳನ್ನು ಒಪ್ಪಿದ್ದಾರೆ. ಆದರೆ 'ಸತ್ವ' 'ಅಸತ್ವ' ಎಂಬ ಎರಡೇ ಪ್ರಕಾರಗಳು ಸಾಕು; ಉಳಿದ ಐದು ಪ್ರಕಾರಗಳನ್ನು ಒಪ್ಪುವ ಅವಶ್ಯಕತೆ ಇರುವುದಿಲ್ಲ. ಘಟವು 'ಏತದ್‌ದೇಶ ಏತತ್‌ಕಾಲಾವಚ್ಛೇದೇನ' ಸತ್ಯವಾಗಿದೆ. 'ಅನ್ಯದೇಶ ಅನ್ಯಕಾಲಾವಚ್ಛೇದೇನ' ಅಸತ್ಯವಾಗಿದೆ. ಇದಕ್ಕಿಂತ ಅತಿರಿಕ್ತವಾಗಿ 'ಸದಸತ್' ಆಗಲು ಹಾಗೂ ಉಳಿದ ಪ್ರಕಾರಗಳನ್ನು ಹೊಂದಲು ಸಾಧ್ಯವಿಲ್ಲ.

ಒಂದೊಂದು ಪಕ್ಷವನ್ನು ಒಪ್ಪಿದಾಗಲೂ ದೋಷವು ಪ್ರಾಪ್ತವಾಗುತ್ತದೆ ಅಸತ್‌ನಲ್ಲಿ ಸತ್ವವಿಲ್ಲ. ಸತ್ತಿನಲ್ಲಿ ಅಸತ್ವವಿಲ್ಲ. ಇತ್ಯಾದಿಯಾಗಿ ದೋಷಗಳು ಪ್ರಾಪ್ತವಾಗುವುದರಿಂದ ಏಳು ಪ್ರಕಾರಗಳನ್ನು ಒಪ್ಪಲೇಬೇಕಲ್ಲವೆ? ಹೀಗೆ ಜೈನರು ಆಕ್ಷೇಪಿಸುತ್ತಾರೆ. ಆದರೆ ಒಂದೊಂದು ಪಕ್ಷದಲ್ಲಿ ದೋಷವಿರುವುದರಿಂದ ಏಳು ಪ್ರಕಾರಗಳನ್ನು ಒಪ್ಪಿದರೆ ಏಳೂ ದೋಷಗಳನ್ನು ಒಪ್ಪಿಕೊಂಡಂತಾಯಿತು. ಆದ್ದರಿಂದ ಯಾವ ಪಕ್ಷವನ್ನೂ ಅಂಗೀಕರಿಸಲು ಸಾಧ್ಯವಿಲ್ಲ. ಆದ್ದರಿಂದ ಕೇವಲ ಸತ್ವ, ಅಸತ್ವ ಎಂಬ ಎರಡೇ ಪ್ರಕಾರಗಳನ್ನು ಒಪ್ಪುವುದು ಉಚಿತ.

## ಭಾವದೀಪದ ವೈಶಿಷ್ಟ್ಯ

* ಭಾಷ್ಯದಲ್ಲಿ ಏಳು ಪ್ರಕಾರಗಳನ್ನು ಹೇಳದೇ ನಾಕು ಪ್ರಕಾರಗಳನ್ನು ಹೇಳಿದ್ದಾರೆ. ಆದರೆ ಜೈನರು ಏಳು ಪ್ರಕಾರಗಳನ್ನು ಅಂಗೀಕಾರ ಮಾಡಿದ್ದಾರೆ. ಹಾಗಾಗಿ ಭಾಷ್ಯದಲ್ಲಿರುವ ಮಾತಿಗೆ ಏಳು ಪ್ರಕಾರ ಎಂಬರ್ಥವನ್ನೇ ತಿಳಿಯಬೇಕೆಂದು ಅಪೂರ್ವವಾಗಿ ವ್ಯಾಖ್ಯಾನ ಮಾಡಿದ್ದಾರೆ.

* ಜೈನರು ಹೇಳದೇ ಇರುವ ಪಕ್ಷವನ್ನು ಒಪ್ಪಿ, ದೋಷವನ್ನು ನೀವು ಹೇಳುತ್ತಿದ್ದೀರಿ ಎಂಬುದಾಗಿ 'ಅನುಕ್ತೋಪಲಂಭ' ದೋಷವನ್ನು ಆಶಂಕಿಸಿ, ಉತ್ತರಿಸಿದ್ದಾರೆ.

* ಸದಸತ್ಪ್ರಕಾರಗಳನ್ನು ದೇಶಕಾಲಗಳ ವ್ಯವಸ್ಥೆಯಿಂದ ವಿವಕ್ಷಿಸಬೇಕೆಂದು ವ್ಯಾಖ್ಯಾನಿಸಿ ದೋಷವನ್ನು ಪರಿಹರಿಸಿದ್ದಾರೆ.

## ಬ್ರಹ್ಮಸೂತ್ರ

### 'ಏವಂಚಾऽತ್ಮಾಕಾತ್ಸ್ನ್ಯರ್ಂ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – एवञ्चाऽत्माकात्स्न्यर्म् ।।**

ದೇಹದ ಪರಿಮಾಣದಷ್ಟೇ ಆತ್ಮನ ಪರಿಮಾಣವಿರುತ್ತದೆ ಎಂದು ಜೈನರು ಹೇಳುತ್ತಾರೆ. ಹಾಗಾದಲ್ಲಿ ಇರುವೆಯ ಶರೀರದಲ್ಲಿರುವ ಆತ್ಮನಿಗೆ ಆನೆಯ ಶರೀರವು ಬಂದಾಗ ಆತ್ಮನು ಎಲ್ಲಾ ಅವಯವಗಳಲ್ಲಿಯೂ ಇಲ್ಲದೇ ಇರಬೇಕಾದೀತು.

ಅರ್ಥ -- ಏವಂಚ = ಜೈನರು ಹೇಳುವಂತೆ ಆತ್ಮನಿಗೆ ಶರೀರಪರಿಮಾಣವನ್ನು ಒಪ್ಪುವುದಾದರೆ, ಆತ್ಮಾಕಾತ್ಸ್ನ್ಯರ್ಂ = ಆತ್ಮನಿಗೆ ಮೊದಲು ಇರುವೆಯ ಶರೀರವು ಬಂದಾಗ ಎಷ್ಟು ಪರಿಮಾಣವಿರುತ್ತದೋ, ಅದೇ ಆತ್ಮನಿಗೆ ಮುಂದೆ ಆನೆ, ಕತ್ತೆ ಮೊದಲಾದ ಶರೀರಗಳು ಪ್ರಾಪ್ತವಾದಾಗ ಸಂಪೂರ್ಣದೇಹದಲ್ಲಿ ಇಲ್ಲದೇ ಇರಬೇಕಾದೀತು. ಇದರಂತೆ ಆನೆಯ ಶರೀರವನ್ನು ಹೊಂದಿದ ಆತ್ಮನು ಆನೆಯಷ್ಟೇ ದೊಡ್ಡವನಾದ್ದರಿಂದ ಇರುವೆಯ ಶರೀರವು ಬಂದರೆ ಶರೀರಕ್ಕಿಂತ ಹೆಚ್ಚು ಆತ್ಮನೇ ವಿಶಾಲನಾಗಿ ಇರಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

### ಜೀವನಿಗೆ ಆನೆಯ ದೇಹದ ಪರಿಮಾಣ ಹೇಗೆ ?

**ब्रह्मसूत्रभाष्यम् – ।। एवं चाऽत्माऽकात्स्न्यर्म् ।।२।।**

**जीवस्य शरीरपरिमितत्वाङ्गीकारेऽण्वादिशरीरस्थस्य हस्त्यादिशरीरेऽकात्स्न्यं स्यात् ।।२।।**

ಅನುವಾದ - ಜೀವನು ಶರೀರದ ಪರಿಮಾಣವುಳ್ಳವನೆಂದು ಅಂಗೀಕಾರ ಮಾಡಿದರೆ ಇರುವೆ ಶರೀರದಲ್ಲಿದ್ದ ಜೀವನಿಗೆ ಆನೆಯ ಶರೀರವು ಬಂದಾಗ ಆ ದೊಡ್ಡ ದೇಹವನ್ನು ಆತ್ಮನು ತುಂಬದೆ ಇರಬೇಕಾಯಿತು.

ಪ್ರತಿಪದಾರ್ಥ -- ಜೀವಸ್ಯ = ಜೀವನಿಗೆ, ಶರೀರಪರಿಮಿತತ್ವಾಂಗೀಕಾರೇ = ಶರೀರಪರಿಮಾಣವನ್ನು ಒಪ್ಪಿದರೆ, ಅಣ್ವಾದಿಶರೀರಸ್ಥಸ್ಯ = ಚಿಕ್ಕದಾದ ಇರುವೆಯ ಶರೀರದಲ್ಲಿ ಅಣುಪರಿಮಾಣದಿಂದ ಇರುವ ಜೀವನಿಗೆ, ಹಸ್ತ್ಯಾದಿಶರೀರೇ = ಆನೆಯ ಶರೀರವು ಬಂದರೆ, ಅಕಾರ್ತ್ಸ್ನ್ಯಂ = ಶರೀರದಲ್ಲಿ ಸಂಪೂರ್ಣವಾಗಿ ವ್ಯಾಪ್ತವಾಗದೆ ಇರುವಿಕೆಯು, ಸ್ಯಾತ್ = ಆಗಬೇಕಾದಿತು.

## ಸತ್ತರ್ಕದೀಪಾವಳಿ

**सत्तर्कदीपावळिः – स्याद्वादिना यदभ्युपगतं देहपरिमाणो जीव इति । तत् अनुपपन्नम् । कीटदेहपरिमाणस्य जीवस्य कर्मवशात् गजदेहे वर्तमानस्य देहाव्याप्तित्वापत्तेः । तदाह । एवं चेत्यादिना ।**

ಸ್ಯಾದ್ವಾದಿಗಳು ಜೀವನಿಗೆ ದೇಹಪರಿಮಾಣವನ್ನು ಒಪ್ಪುತ್ತಾರೆ. ಇದೂ ಕೂಡ ತಪ್ಪು. ಕೀಟದೇಹದ ಪರಿಮಾಣವನ್ನು ಹೊಂದಿರುವ ಜೀವನಿಗೆ ಕರ್ಮಾಧೀನವಾಗಿ ಆನೆಯ ದೇಹ ಬರುತ್ತದೆ. ಆಗ ಆನೆಯ ದೇಹದಷ್ಟು ಪರಿಮಾಣ ಆ ಜೀವನಿಗೆ ಬರಲು ಸಾಧ್ಯವಾಗುವುದಿಲ್ಲ. ಇದನ್ನೇ 'ಏವಂಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

## ತತ್ವಪ್ರದೀಪ

### ಜೀವನು ದೇಹಪರಿಮಾಣದವನೆಂದು ಹೇಳಲಾಗದು

**तत्वप्रदीपः – अपिचाऽहुः - अणुत्वे सर्वाङ्गवेदनानुसन्धानायुक्तेर्व्याप्तत्वे देहान्तरगतानुसन्धानप्रसङ्गाच्छरीरपरिमाणो जीव इति । अत आह - एवञ्चात्माऽकात्स्न्र्यम् । एवमङ्गीकारेऽण्वादिशरीरस्थस्य ततो हस्त्यादिशरीरप्रवेशे कृत्स्नशरीरव्याप्तिर्न स्यात् । हस्त्यादिशरीरस्थस्याण्वादिशरीरप्राप्तौ तच्छरीर एवाऽत्मनः कात्स्न्र्यं न स्यात् ।**

ಮತ್ತು ಜೈನರು ಹೀಗೆ ಹೇಳುತ್ತಾರೆ - ನಮ್ಮ ದೇಹದಲ್ಲಿರುವ ಜೀವನು ಅಣುವೆಂದು ಒಪ್ಪಿದರೆ ದೇಹದಲ್ಲಿ ಎಲ್ಲಾ ಅಂಗಗಳಿಂದ ಉಂಟಾಗುವ ದುಃಖದ ಅನುಸಂಧಾನವು ಕೂಡುವುದಿಲ್ಲ. ವ್ಯಾಪ್ತನೆಂದು ಹೇಳಿದರೆ ಬೇರೆ ದೇಹದಲ್ಲಿರುವ ದುಃಖಾದಿಗಳ ಅನುಸಂಧಾನವೂ ಕೂಡ ಬರಬೇಕಾಗುತ್ತದೆ. ಆದ್ದರಿಂದ ಆ ಜೀವನು ಶರೀರಪರಿಮಾಣ-ದವನಾಗಿದ್ದಾನೆ ಎಂದು ಹೇಳಬೇಕು.

ಜೈನರ ಈ ಅಭಿಪ್ರಾಯವನ್ನು 'ಏವಂಚಾಽತ್ಮಾಕಾರ್ತ್ಸ್ನ್ಯಮ್' ಎಂಬ ಸೂತ್ರವು ನಿರಾಕರಿಸುತ್ತಿದೆ.

ಜೈನರ ಈ ಮತವನ್ನು ಜೀವನು ದೇಹಪರಿಮಾಣವುಳ್ಳವನಾಗಿದ್ದಾನೆಂದು ಅಂಗೀಕಾರ ಮಾಡಿದರೆ, ಇರುವೆಯ ಶರೀರವನ್ನು ಹೊಂದಿದ ಜೀವನಿಗೆ ಆನೆಯ ಶರೀರವು ಬಂದರೆ, ಸಮಗ್ರ ಶರೀರದಲ್ಲಿ ಕೇವಲ ವ್ಯಾಪ್ತಿಯು ಇಲ್ಲದೇ ಇರಬೇಕಾದೀತು. ಆನೆಗೆ ಇರುವೆ ಶರೀರ ಬಂದಾಗ ಶರೀರಕ್ಕಿಂತಲೂ ಹೆಚ್ಚಿನ ಸ್ಥಳದಲ್ಲಿ ಆ ಜೀವನು ಇರಬೇಕಾದೀತು. ಆ ಶರೀರದ ಪರಿಮಾಣವನ್ನಷ್ಟೇ ಹೊಂದಿದ್ದಾನೆಂದು ಹೇಳಲು ಸಾಧ್ಯವಾಗುವುದಿಲ್ಲ.

## ತತ್ವಪ್ರಕಾಶಿಕಾ

ಜೀವನು ಶರೀರಪರಿಮಾಣವುಳ್ಳವನು ಎಂದರೇನು ?

**तत्वप्रकाशिका – यदपि जीवस्य शरीरपरिमितत्वमभ्युपेयते तत्प्रष्टव्यम्। किं तत्सर्वशरीरगतचेष्टोपपत्त्यर्थमभ्युपेयते शरीरावच्छेदमन्तरेणात्मनः परिमाणाभावप्रसङ्गभयाद्वा । तत्राद्यं पक्षं प्रतिक्षेप्तुं सूत्रमुपन्यस्य व्याचष्टे – एवं चेति ।।**

ಜೀವನು ಶರೀರಪರಿಮಾಣವುಳ್ಳವನೆಂಬುದು ಜೈನರ ಮತ್ತೊಂದು ವಾದ. ಇಂಥ ಜೈನರನ್ನು ಪ್ರಶ್ನಿಸುತ್ತೇವೆ. ಶರೀರದಲ್ಲಿರುವ ಚಲನಾದಿ ವ್ಯಾಪಾರಗಳನ್ನು ಕೂಡಿಸುವುದಕ್ಕಾಗಿ ಹೀಗೆ

ಒಪ್ಪುತ್ತೀರೋ ಅಥವಾ ಶರೀರವೆಂಬ ಅವಚ್ಛೇದಕವನ್ನು ಒಪ್ಪದೆ ಜೀವನಿಗೆ ಸ್ವತಃ ಪರಿಮಾಣವನ್ನೇ ಒಪ್ಪಲು ಆಗದಿರುವುದರಿಂದ ಶರೀರಪರಮಾಣವನ್ನು ಒಪ್ಪುತ್ತೀರೋ?

ಮೊದಲನೆಯ ಪಕ್ಷವನ್ನು ನಿರಾಕರಣೆ ಮಾಡುವುದಕ್ಕಾಗಿ 'ಏವಂ ಚ' ಇತ್ಯಾದಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಭಾವದೀಪ

**ಭಾವದೀಪः – ।। एवं चात्माकात्स्न्र्यम् ।।३४।। तत्राद्यं पक्षमिति।।** द्वितीयपक्षदूषणं तु द्वितीयपक्षं प्रतिक्षिपदित्यत्राग्रे व्यक्तम्।

'ತತ್ರಾದ್ಯಂ ಪಕ್ಷಮ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಎರಡನೆಯ ಪಕ್ಷಕ್ಕೆ ದೋಷವನ್ನು ಮುಂದೆ 'ದ್ವಿತೀಯಪಕ್ಷಂ ಪ್ರತಿಕ್ಷಿಪತ್' ಎಂಬುದಾಗಿ 'ಅಂತ್ಯಾವಸ್ಥಿತೇಃ' ಎಂಬ ಸೂತ್ರದ ಸಂದರ್ಭದಲ್ಲಿ ಹೇಳುತ್ತಾರೆ. ಅಲ್ಲಿಯತನಕ ಮೊದಲನೆಯ ಪಕ್ಷಕ್ಕೆ ಹೇಳಿದ ದೋಷವೆಂದು ತಿಳಿಯಬೇಕು.

### ಶರೀರಪರಿಮಾಣ ಒಪ್ಪಿದರೆ ಬರುವ ತೊಂದರೆ

**तत्वप्रकाशिका – जैनमतप्रसङ्गनिधापितमात्मनः शरीरपरिमाणत्वमेवमिति परामृशति । यद्यात्मा सर्वशरीरचेष्टोपपत्त्यर्थं शरीरपरिमाणोऽङ्गीक्रियते एवं तर्हि पिपीलिकादिशरीरस्थस्तत्परिमाण एवं स्यात् । तथा च तस्यैव कर्मवशात् गजगर्दभादिशरीरप्राप्तौ तत्रापूर्णता स्यात् । ततश्च न सर्वशरीरचेष्टेति भावः । गजादिरीरस्थस्याणुशरीरप्राप्तावतिरेकः स्यात् । तथा च शरीरपरिमाणत्वभङ्ग इत्यपि द्रष्टव्यम् ।।**

ಜೈನಮತವನ್ನು ನಿರಾಕರಣೆ ಮಾಡುವ ಪ್ರಸಂಗ ಇರುವುದರಿಂದ ಜೀವನಿಗಿರುವ ಶರೀರ ಪರಿಮಾಣವನ್ನೇ ಸೂತ್ರದಲ್ಲಿರುವ 'ಏವಂ' ಎನ್ನುವುದರಿಂದ ಪರಾಮರ್ಶೆ ಮಾಡಬೇಕು.

ಒಂದುವೇಳೆ ಜೀವನು ಶರೀರದಲ್ಲಿರುವ ಎಲ್ಲಾ ವ್ಯಾಪಾರಗಳ ಸಿದ್ಧಿಗೋಸ್ಕರ ಶರೀರಪರಿಮಾಣವುಳ್ಳವನೆಂದು ಹೇಳುವುದಾದರೆ ಆಗ ಇರುವೆಯ ಶರೀರ ಹೊಂದಿದ ಜೀವನು ಇರುವೆ ದೇಹದ ಪರಿಮಾಣವುಳ್ಳವನೇ ಆಗಬೇಕು. ಆಗ ಅದೇ ಜೀವನಿಗೆ ಕರ್ಮದ ಅಧೀನವಾಗಿ ಆನೆ, ಕತ್ತೆ, ಮೊದಲಾದ ಶರೀರಗಳು ಪ್ರಾಪ್ತವಾದಾಗ ಅಪೂರ್ಣವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಸರ್ವಶರೀರದ ಚೇಷ್ಟಗೋಸ್ಕರ ಎಂದು ಹೇಳಬಾರದು. ಇದರಂತೆ ಆನೆಯ ಶರೀರವನ್ನು ಹೊಂದಿದ ಜೀವನಿಗೆ ಕರ್ಮದ ಅಧೀನವಾಗಿ ಇರುವೆ ಶರೀರವು ಪ್ರಾಪ್ತವಾದಾಗ ಆನೆಯಂತೆ ಮಹತ್ತಾದ ಪರಿಮಾಣ ಇರುವುದರಿಂದ ಇರುವೆ ಶರೀರವನ್ನು ಮೀರಿ ಹೆಚ್ಚು ಪರಿಮಾಣ ಇದೆ ಎಂದಾಗಬೇಕಾಗುತ್ತದೆ. ಆದ್ದರಿಂದ ಜೀವನು ಶರೀರಪರಿಮಾಣದಷ್ಟೇ ಆಕಾರವುಳ್ಳವನು ಎನ್ನುವುದು ತಪ್ಪು.

**ಭಾವದೀಪ**: – पूर्वसूत्रे प्रकृतत्वाभावादाह –**जैनमतेति**।। जीवस्येत्यादिभाष्यं सौत्रैवंशब्दव्याख्यानमिति दर्शयितुं भाष्यं सोपस्करमनुवदति – **यद्यात्मेति**।। व्याख्येयं सौत्रपदमनुवदति – **एवमिति**।। असङ्गतिनिरासायापाद्यान्तरमुक्त्वा अकात्स्‍र्न्यापादनं योजयति । तत्परिमाण एव स्यात्तथा चेत्यादि। अण्वादिहस्त्यादिपदयोर्विनिमयेन तदेव भाष्यमन्यथापि योजयति – **गजादीति**।। भाष्ये शरीर इति सावधारणम् । अणुशरीर एवाकात्स्‍र्न्यं पूर्णता न स्यात्। अतिरेकः स्यादिति यावदिति भावः॥ ३४॥

ಹಿಂದಿನ ಸೂತ್ರದಲ್ಲಿ ಪ್ರಕೃತವಾಗದೇ ಇರುವುದರಿಂದ ಜೈನಮತ ಇತ್ಯಾದಿಯಾಗಿ ಪರಾಮರ್ಶ ಮಾಡಬೇಕಾದ್ದನ್ನು ಹೇಳುತ್ತಿದ್ದಾರೆ. 'ಜೀವಸ್ಯ' ಇತ್ಯಾದಿ ಭಾಷ್ಯವು ಸೂತ್ರದಲ್ಲಿರುವ 'ಏವಂ' ಎಂಬ ಪದದ ವ್ಯಾಖ್ಯಾನ ರೂಪವಾಗಿದೆ. ಇದನ್ನು ತೋರಿಸುವುದಕ್ಕಾಗಿ ಭಾಷ್ಯದಲ್ಲಿ ವಿವಕ್ಷಿಸಬೇಕಾದ ಪದಗಳನ್ನು ಅನುವೃತ್ತಿ ಮಾಡಿಕೊಂಡು 'ಯದಿ ಆತ್ಮಾ' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ. ವ್ಯಾಖ್ಯೇಯವಾದ ಸೂತ್ರದಲ್ಲಿರುವ ಪದವನ್ನೇ 'ಏವಂ' ಎಂದು ಈ ವಾಕ್ಯದಲ್ಲಿ ಅನುವಾದ ಮಾಡಿದ್ದಾರೆ. ಅಸಂಗತಿಯನ್ನು ನಿರಾಕರಣೆ ಮಾಡುವುದಕ್ಕಾಗಿ ಮತ್ತೊಂದು ಆಪಾದ್ಯವನ್ನು ಹೇಳಿ, 'ಅಕಾರ್ತ್ಸ್ನ್ಯ' ಎಂಬ ಪದದಿಂದ ಮಾಡಲ್ಪಟ್ಟ ಆಪಾದನೆಯನ್ನು ಯೋಜನೆ ಮಾಡಿದ್ದಾರೆ. ಆ ದೇಹದ ಪರಿಮಾಣವೇ ಜೀವನಿಗೆ ಇರಬೇಕಾದೀತು ಎಂಬುದನ್ನು 'ತಥಾ ಚ' ಇತ್ಯಾದಿಯಾಗಿ ಹೇಳಿದ್ದಾರೆ.

ಅಣ್ವಾದಿ ಮತ್ತು ಹಸ್ತ್ಯಾದಿ ಎಂಬೆರಡು ಪದಗಳನ್ನು ವಿನಿಮಯ ಮಾಡುವ ಮೂಲಕ (ಹಿಂದೆ ಮುಂದೆ ವ್ಯತ್ಯಾಸ ಮಾಡುವ ಮೂಲಕ) ಅದೇ ಭಾಷ್ಯವನ್ನೇ ಮತ್ತೊಂದು ರೀತಿಯಲ್ಲಿ 'ಗಜಾದಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯದಲ್ಲಿ ಇರುವ ಶರೀರ ಪದವು ಅವಧಾರಣಾರ್ಥದಲ್ಲಿದೆ. ಅಣುಶರೀರದಲ್ಲಷ್ಟೇ ಪೂರ್ಣತ್ವವು ಇಲ್ಲದೇ ಇರಬೇಕಾದೀತು. ಅಣುಶರೀರವನ್ನು ದಾಟಿಯೂ ಜೀವನು ಇರಬೇಕಾದೀತು. ಆದ್ದರಿಂದ ಅಣುಶರೀರದಲ್ಲಷ್ಟೇ ಪೂರ್ಣತ್ವವು ಬರುವುದಿಲ್ಲ ಎಂದಭಿಪ್ರಾಯ.

## ಭಾವದೀಪದ ವೈಶಿಷ್ಟ್ಯ

* ತತ್ವಪ್ರಕಾಶಿಕೆಯಲ್ಲಿ ಎರಡು ವಿಕಲ್ಪಗಳನ್ನು ಮಾಡಿದ್ದಾರೆ. ಮೊದಲನೆಯ ವಿಕಲ್ಪವನ್ನು ಈ ಸೂತ್ರದಲ್ಲಿ, ಎರಡನೆಯ ವಿಕಲ್ಪವನ್ನು ಎರಡು ಸೂತ್ರಗಳ ಅನಂತರ ನಿರಾಕರಣೆ ಮಾಡಲಾಗಿದೆ ಎಂದು ತಿಳಿಸಿದ್ದಾರೆ.

* ಸೂತ್ರದಲ್ಲಿರುವ 'ಏವಂ' ಎಂಬ ಪದಕ್ಕೆ ಭಾಷ್ಯದಲ್ಲಿ ಹಾಗೂ ಟೀಕೆಯಲ್ಲಿ ಹೇಗೆ ಅನುವಾದ ಮಾಡಿ, ವ್ಯಾಖ್ಯಾನ ಮಾಡಿದ್ದಾರೆಂಬುದನ್ನು ತೋರಿಸಿದ್ದಾರೆ.

* ಅಣ್ವಾದಿ, ಹಸ್ತ್ಯಾದಿ ಎಂಬೆರಡು ಪದಗಳನ್ನು ವಿನಿಮಯ ಮಾಡಿಕೊಳ್ಳುವ ಮೂಲಕ ಟೀಕೆಯಲ್ಲಿ ಮಾಡಿದ ವ್ಯಾಖ್ಯಾನ ಸ್ವಾರಸ್ಯವನ್ನು ತೋರಿಸಿದ್ದಾರೆ. 'ಅಣುಶರೀರಃ' ಆನೆಗೆ ಅಣುಶರೀರವು ಬಂದಾಗ ಪೂರ್ಣತ್ವವು ಏಕೆ ಬರುವುದಿಲ್ಲ ? ಎಂಬ ಪ್ರಶ್ನೆಗೆ ಅಣುಶರೀರದಲ್ಲಷ್ಟೇ ಪೂರ್ಣತ್ವವಿಲ್ಲ. ಅದನ್ನು ದಾಟಿಯೂ ಜೀವನಿದ್ದಾನೆ ಎಂಬ ಅಪೂರ್ವಾರ್ಥವನ್ನು ಹೇಳಿದ್ದಾರೆ.

## ಬ್ರಹ್ಮಸೂತ್ರ

### 'ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – न च पर्यायादप्यविरोधो विकारादिभ्यः ।।**

ಆಯಾ ದೇಹಗಳು ವ್ಯತ್ಯಾಸವಾದಾಗ ಆತ್ಮನ ಗಾತ್ರವೂ ಕೂಡ ವ್ಯತ್ಯಾಸವಾಗುತ್ತದೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಆತ್ಮನಿಗೆ ಹೀಗೆ ಪರಿಣಾಮವನ್ನು ಒಪ್ಪಿದರೆ ವಿಕಾರವನ್ನು ಅನಿತ್ಯತ್ವವನ್ನು ಒಪ್ಪಬೇಕಾದೀತು. ಆದ್ದರಿಂದ ಮೋಕ್ಷವೇ ಇಲ್ಲದ ಪ್ರಸಂಗ ಬರುತ್ತದೆ.

ಅರ್ಥ -- ಪರ್ಯಾಯಾದಪಿ = ಆತ್ಮನಿಗೆ ಕ್ರಮವಾಗಿ ದೇಹವು ವ್ಯತ್ಯಾಸವಾದಂತೆ ಪರಿಮಾಣವೂ ಕೂಡ ವ್ಯತ್ಯಾಸವಾಗುತ್ತದೆಂದು ಅಂಗೀಕರಿಸಿದರೂ, ಅವಿರೋಧಃ ನ ಚ = ಹಿಂದಿನ ದೋಷವು ಬರುವುದಿಲ್ಲವೆಂದು ಹೇಳಲಾಗದು. ಏಕೆಂದರೆ ವಿಕಾರಾದಿಭ್ಯಃ = ಹಾಗಾದಲ್ಲಿ ಆಯಾ ಕಾಲದ ಪರಿಮಾಣಭೇದದಿಂದ ವಸ್ತುವಿನಲ್ಲಿಯೂ ಕೂಡ ಭೇದವು ಬರುತ್ತದೆ. ಆತ್ಮನು ವಿಕಾರಿಯಾಗಬೇಕಾದ್ದರಿಂದ ದೇಹದಂತೆ ಆತ್ಮನೂ ಕೂಡ ಅನಿತ್ಯನೆಂದಾಗುತ್ತಾನೆ. ಆವಾಗ ಆತ್ಮನಿಗೆ ಮೋಕ್ಷವೇ ದೊರೆಯಲು ಸಾಧ್ಯವಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

### ದೇಹ ಪರಿಮಾಣ ಕಲ್ಪನೆ ಅಸಾಧು

**ब्रह्मसूत्रभाष्यम् –।। न च पर्यायादप्यविरोधो विकारादिभ्यः ।।३।।**

**तत्तच्छरीरस्थस्य तत्तत्परिमाणत्वमिति न मन्तव्यम् । विकारित्वाद-नित्यत्वप्रसक्तेः ।।३।।**

ಅನುವಾದ - ಜೀವನು ಬೇರೆ ಯಾವ ಯಾವ ಶರೀರವನ್ನು ಹೊಂದುತ್ತಾನೋ ಆ ಶರೀರದ ಪರಿಮಾಣವನ್ನೇ ಹೊಂದುತ್ತಾನೆ. ಹೀಗೆ ಹೇಳುವುದು ತಪ್ಪು. ಹಾಗಾದಲ್ಲಿ ಜೀವನಿಗೆ ವಿಕಾರವನ್ನು ಒಪ್ಪಿದಂತಾಗುವುದರಿಂದ ಅನಿತ್ಯನಾಗಬೇಕಾದೀತು.

ಪ್ರತಿಪದಾರ್ಥ -- ತತ್ತಚ್ಛರೀಸ್ಥಸ್ಯ = ಆಯಾ ಶರೀರವನ್ನು ಪಡೆದ ಜೀವನಿಗೆ, ತತ್ತತ್ಪರಿಮಾಣತ್ವಮ್ = ಆಯಾ ಶರೀರದ ಪರಿಮಾಣ ಬರುವಿಕೆಯನ್ನು, ಇತಿ = ಹೀಗೆ, ನ ಮಂತವ್ಯಮ್ = ಒಪ್ಪಬಾರದು, ವಿಕಾರಿತ್ವಾತ್ = ಜೀವನಿಗೆ ವಿಕಾರವನ್ನು ಒಪ್ಪಿದಂತಾಗಿ, ಅನಿತ್ಯತ್ವಪ್ರಸಕ್ತೇಃ = ಅನಿತ್ಯತ್ವನ್ನು ಒಪ್ಪಬೇಕಾಗುತ್ತದೆ.

## ಸತ್ತರ್ಕದೀಪಾವಳಿ

**सत्तर्कदीपावळिः – न च गजगर्दभादिदेहेषु वर्तमानस्य जीवस्य तत्तद्देहपरिमाणत्वं क्रमेणेति वाच्यम् । वृद्धिह्रासादि विकारित्वेन देहवदनित्यत्वप्रसक्तेः । तदाह । न चेत्यादिना ।**

ಆನೆ, ಕತ್ತೆ ಮೊದಲಾದ ದೇಹದಲ್ಲಿರುವ ಜೀವನಿಗೆ ಆಯಾ ದೇಹದ ಪರಿಮಾಣವು ಕ್ರಮವಾಗಿ ಬರುತ್ತದೆಂದು ಹೇಳಬಾರದು. ಹಾಗಾದಲ್ಲಿ ದೇಹದಂತೆ ಜೀವರಿಗೂ ಕೂಡ ವೃದ್ಧಿ ಮತ್ತು ಹ್ರಾಸಗಳೆಂಬ ವಿಕಾರವನ್ನು ಒಪ್ಪಿದಂತಾಗುತ್ತದೆ. ಆಗ ದೇಹದಂತೆ ಜೀವನೂ ಕೂಡ ಅನಿತ್ಯನಾಗುವ ಪ್ರಸಂಗ ಬರುತ್ತದೆ. ಇದನ್ನು 'ನ ಚ' ಇತ್ಯಾದಿ ಸೂತ್ರಭಾಷ್ಯದಿಂದ ಸಮರ್ಥಿಸುತ್ತಿದ್ದಾರೆ.

## ತತ್ವಪ್ರದೀಪ

### ಜೀವ ವಿಕಾರಿ ಆದರೆ ಅನಿತ್ಯನಾದಾನು

**तत्वप्रदीपः – न च पर्यायादप्यविरोधो विकारादिभ्यः । विकारत्वादनित्यत्वम्, अनित्यत्वेचानिर्मोक्षः, ततश्च शास्त्रवैफल्यं स्यात् । तत्तद्देहसंमितये सङ्कोचविकासाङ्गीकारे स्वपरिमाणमन्यद्वाच्यम् । स्थावराणामात्मवत्त्वं च स्यात् । न च तदिष्टं दिगम्बराणाम् । सङ्कोचविकसनमपि विकारव्याप्तं चेदुक्तो दोषः ॥**

ಶರೀರದಲ್ಲಿರುವ ಜೀವನಿಗೆ ವಿಕಾರವಿರುವುದರಿಂದ ಅನಿತ್ಯತ್ವವು ಬರಬೇಕಾಗುತ್ತದೆ. ಜೀವನನ್ನು ಅನಿತ್ಯನೆಂದು ಒಪ್ಪಿದರೆ ಮೋಕ್ಷವೇ ಆಗುವುದಿಲ್ಲ. ಆಗ ಯಾವ ಮೋಕ್ಷಕ್ಕೋಸ್ಕರ ಶಾಸ್ತ್ರಗಳು ಹೊರಟಿವೆಯೋ, ಅವೆಲ್ಲವೂ ವ್ಯರ್ಥವಾಗುತ್ತವೆ. ಆಯಾ ದೇಹಗಳ ಜ್ಞಾನಕ್ಕೋಸ್ಕರ ಸಂಕೋಚ ಮತ್ತು ವಿಕಾಸಗಳನ್ನು ಅಂಗೀಕಾರ ಮಾಡಿದರೆ ದೇಹ ಪರಿಮಾಣವುಳ್ಳದ್ದು ಮತ್ತೊಂದು ಪದಾರ್ಥವೆಂದು ಒಪ್ಪಬೇಕು. ಮತ್ತು ಸ್ಥಾವರ ಪದಾರ್ಥಗಳಿಗೆ ದೇಹದ ಜ್ಞಾನವೇ ಇಲ್ಲದ ಕಾರಣ ಆತ್ಮವು ಇಲ್ಲವೆಂದಾಗಬೇಕಾದೀತು. ಆದರೆ ಜೈನರಿಗೆ ಸ್ವಪರಿಮಾಣವಾದದ್ದು ಮತ್ತೊಂದಿದೆ ಎಂಬುದು ಇಷ್ಟವಲ್ಲ. ಸಂಕೋಚ ಹಾಗೂ ವಿಕಾಸಗಳೂ ಕೂಡ ವಿಕಾರದಿಂದ ವ್ಯಾಪ್ತವಾಗಿದೆ ಎಂದು ಹೇಳಿದರೆ, ಹಿಂದಿನ ದೋಷ ಪುನಃ ಬರುತ್ತದೆ.

ವಿವರಣೆ - ಸಮ್ಮಿತ ಶಬ್ದಕ್ಕೆ ಅಳತೆ ಎಂದರ್ಥ. ಆಯಾ ದೇಹಗಳ ಅಳತೆಗೋಸ್ಕರ ಆತ್ಮನಿಗೆ ಸಂಕೋಚ ಮತ್ತು ವಿಕಾಸಗಳನ್ನು ಅಂಗೀಕಾರ ಮಾಡಿದರೆ ಆತ್ಮನಿಗೊಂದು ಪರಿಮಾಣ ಬೇರೆಯೇ ಇರಬೇಕು. ಸ್ವತಃ ಆತ್ಮನಿಗೆ ಪರಿಮಾಣ ಇಲ್ಲದಿದ್ದರೆ ಸಂಕೋಚ ಮತ್ತು ವಿಕಾಸಗಳನ್ನು ಒಪ್ಪಲು ಸಾಧ್ಯವೇ ಆಗುವುದಿಲ್ಲ. ಸಂಕೋಚ ವಿಕಾಸಗಳನ್ನು ಅಂಗೀಕಾರ ಮಾಡಿದರೆ, ಮತ್ತೊಂದು ಪರಿಮಾಣವನ್ನು ಒಪ್ಪಬೇಕೆಂಬುದು ಮೊದಲನೆಯ ದೋಷ. 'ಸ್ಥಾವರಾಣಾಂ ಆತ್ಮವತ್ವಂ ಸ್ಯಾತ್' ಎಂಬ ವಾಕ್ಯದಿಂದ ಹೇಳಿರುವುದು ಎರಡನೆಯ ದೋಷ. ಜೈನರು ವೃಕ್ಷಾದಿಗಳನ್ನು ನಿರ್ಜೀವಗಳೆಂದು ಒಪ್ಪುತ್ತಾರೆ. ಕಾರಣವೇನೆಂದರೆ ವೃಕ್ಷಾದಿಗಳಿಗೂ ಕೂಡ ಜೀವವಿದೆ ಎಂದು ಒಪ್ಪಿದರೆ ಆತ್ಮನಿಗೆ ಸಂಕೋಚವಿಕಾಸವು ಬರಬೇಕಾಗುತ್ತದೆ ಎಂದು. ಈಗ ಆಯಾ ದೇಹಗಳಲ್ಲಿ ಆತ್ಮನಿಗೆ ಸಂಕೋಚವಿಕಾಸವನ್ನು ಒಪ್ಪುವುದಾದರೆ ವೃಕ್ಷಾದಿಗಳಿಗೂ ಜೀವವನ್ನು ಒಪ್ಪಲು ಯಾವುದೇ ಬಾಧಕವಿಲ್ಲ. ದಿಗಂಬರರಿಗೆ ಇದು ಇಷ್ಟವಲ್ಲ. 'ದಿಗಂಬರಾಣಾಮ್' ಎಂದು ಹೇಳಿದ್ದರಿಂದ ಶ್ವೇತಾಂಬರರು ಸ್ಥಾವರಗಳಿಗೆ ಆತ್ಮವಿದೆ ಎಂದು ಒಪ್ಪುತ್ತಾರೆಂದು ತಿಳಿಸಿದ್ದಾರೆ.

ಸಂಕೋಚ ವಿಕಾಸವನ್ನು ನಾವು ಅಂಗೀಕಾರ ಮಾಡುವುದಿಲ್ಲ. ಏಕೆಂದರೆ ಆತ್ಮನಿಗೆ ವಿಕಾರವನ್ನು ಹೇಳಬೇಕಾಗುತ್ತದೆ. ಸಂಕೋಚ ವಿಕಾಸಗಳು ವಿಕಾರ ವ್ಯಾಪ್ತವಾಗಿವೆ ಎಂದು ಆಕ್ಷೇಪ ಮಾಡಿದರೆ ಅನಿತ್ಯತ್ವವೆಂಬ ಹಿಂದೆ ಹೇಳಿದ ದೋಷ ಪುನಃ ಬರುತ್ತದೆ.

## ತತ್ತ್ವಪ್ರಕಾಶಿಕಾ

### ಜೀವನಿಗೆ ಶರೀರಾನುಗುಣವಾದ ಪರಿಮಾಣ ಒಪ್ಪಿದರೆ ಶಾಸ್ತ್ರಗಳಿಗೆ ವೈಯರ್ಥ್ಯ

**तत्वप्रकाशिका – यदा यच्छरीरं प्राप्नोति तदा तत्परिमाणोऽतो नोक्तदोष इत्याशङ्कं परिहरत्सूत्रमुपन्यस्य व्याचष्टे ।। नेति ।। न चात्मनस्तत्तच्छरीरस्थस्य तत्तत्परिमाणत्वमिति युक्तम् । तथा सति विकारित्वापत्तेः । ततश्चानित्यत्व-प्रसक्तेस्तेन चानिर्मोक्षप्रसङ्गात्तथा च शास्त्रवैयर्थ्यापातादिति भावः ।।**

ಜೀವನು ಯಾವಾಗ ಯಾವ ಶರೀರವನ್ನು ಹೊಂದುತ್ತಾನೋ ಆಗ ಅದೇ ಪರಿಮಾಣವನ್ನು ಹೊಂದುತ್ತಾನಾದ್ದರಿಂದ ಯಾವುದೇ ದೋಷವಿಲ್ಲ ಎಂಬ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ನ ಚ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಜೀವನು ಯಾವಾಗ ಎಂಥ ಶರೀರವನ್ನು ಪಡೆಯುತ್ತಾನೋ ಆಗ ಆ ದೇಹದ ಪರಿಮಾಣವುಳ್ಳವನೆಂದು ಹೇಳುವುದು ಅಯುಕ್ತ. ಹಾಗಾದಲ್ಲಿ ವಿಕಾರವನ್ನು ಜೀವನಿಗೆ ಒಪ್ಪಿದಂತಾಗುತ್ತದೆ. ಹಾಗೆ ಒಪ್ಪಿದರೆ ಜೀವನು ಕೂಡ ಅನಿತ್ಯನಾಗಬೇಕಾಗುತ್ತದೆ. ಮೋಕ್ಷವೇ ಇಲ್ಲದ ಪರಿಸ್ಥಿತಿ ಬರುವುದರಿಂದ ಶಾಸ್ತ್ರಗಳೆಲ್ಲವೂ ವ್ಯರ್ಥವಾಗುತ್ತವೆಂಬುದು ಸೂತ್ರದ ಅಭಿಪ್ರಾಯ.

## ಭಾವದೀಪ

**भावदीपः – ।। न च पर्यायादप्यविरोधो विकारादिभ्यः ।। ३५ ।।** न च पर्यायादप्यविरोध इति सौत्रशङ्काभागं विवृण्वन्नेवावतारयति – **यदा यच्छरीरमिति ।।** भाष्यं व्याचष्टे – **न चात्मन इति ।।** अन्यथाभावि यद्वस्तु तदनित्यमिति स्थितिरित्यनुभाष्यानुरोधेन भाष्योक्तौ हेतू परम्परया योजयति – **विकारित्वाप त्तेस्ततश्चानित्यत्वप्रसक्तेरिति ।।** 'नीचोच्चतैव दुःखादेर्भोग इत्यभिधीयते' इति तृतीयभाष्यादौ वक्ष्यमाणरीत्या 'अल्पतेजस्तथैवाल्पं जीवरूपं हि

संसृतौ। तथैव सुमहत्तेजः करोति भगवान्महत्' इति बृहद्भाष्ये षष्ठे अल्पजीवरूपं मुक्तौ महच्च करोतीत्युक्त्या जीवस्य नीचोच्चतादिरूपपरिमाणव्यत्ययलक्षणविकारवत्त्वेऽपि 'नानित्यतास्मत्पक्षे तु चैतन्यादेर्विशेषिणः। लक्षणस्य निवृत्तौ तु स्यान्न तच्चेतने क्वचित्' इत्यनुभाष्याद्युक्तदिशा नाऽनित्यतापत्तिरिति भावः। भाष्ये इष्टापत्तिनिरासाय सौत्रबहुवचनाशयं व्यनक्ति – **तेन चानिर्मोक्षेति**।। मोक्षाभावप्रसङ्गादित्यर्थः॥ ३५ ॥

'ಪರ್ಯಾಯಾದಪ್ಯವಿರೋಧಃ' ಎಂಬ ಸೂತ್ರದಲ್ಲಿರುವ ಆಕ್ಷೇಪಭಾಗವನ್ನು ವಿವರಣೆ ನೀಡುವುದಕ್ಕಾಗಿ ಅವತಾರಿಕೆಯನ್ನು 'ಯದಾ ಯತ್ ಶರೀರಮ್' ಎಂದು ಹೇಳುತ್ತಿದ್ದಾರೆ. ಭಾಷ್ಯದ ವ್ಯಾಖ್ಯಾನಕ್ಕಾಗಿ 'ನ ಚ ಆತ್ಮನಃ' ಎಂಬ ವಾಕ್ಯಹೊರಟಿದೆ. 'ಅನ್ಯಥಾಭಾವಿ ಯದ್ವಸ್ತು ತದನಿತ್ಯಮಿತಿ ಸ್ಥಿತಿಃ' ಯಾವುದು ಅನ್ಯಥಾಭವನವನ್ನು ಹೊಂದುತ್ತದೋ, ಆ ವಸ್ತು ಅನಿತ್ಯವಾಗುತ್ತದೆ ಎಂಬ ಅನುವ್ಯಾಖ್ಯಾನಕ್ಕೆ ಅನುಸಾರಿಯಾಗಿ ಭಾಷ್ಯದಲ್ಲಿ ಹೇಳಲ್ಪಟ್ಟ ಎರಡು ಹೇತುಗಳನ್ನು ಪರಂಪರೆಯಿಂದ ಯೋಜನೆ ಮಾಡುವುದಕ್ಕಾಗಿ 'ವಿಕಾರಿತ್ವಾಪತ್ತೇಃ ತತಶ್ಚಾನಿತ್ಯತ್ವಪ್ರಸಕ್ತೇಃ' ಎಂದು ಹೇಳಿದ್ದಾರೆ. 'ನೀಚೋಚ್ಚತ್ವೈವ ದುಃಖಾದೇರ್ಭಾಗೇ ಇತ್ಯಭಿಧೀಯತೇ' ಎಂಬುದಾಗಿ ತೃತೀಯಾಧ್ಯಾಯದ ಭಾಷ್ಯದಲ್ಲಿ ಹೇಳುವಂತೆ ಜೀವನ ಪರಿಮಾಣದಲ್ಲೂ ಕೂಡ ವ್ಯತ್ಯಾಸವಿದೆ ಎಂದು ತಿಳಿಯುತ್ತದೆ. ಮತ್ತು

'ಅಲ್ಪತೇಜಸ್ತಥೈವಾಲ್ಪಂ ಜೀವರೂಪಂ ಹಿ ಸಂಸೃತೌ।
ತಥೈವ ಸುಮಹತ್ತೇಜಃ ಕರೋತಿ ಭಗವಾನ್ಮಹತ್ ॥'

ಎಂಬುದಾಗಿ ಬೃಹದಾರಣ್ಯಕದ ಭಾಷ್ಯದಲ್ಲಿ ಆರನೆಯ ಅಧ್ಯಾಯದಲ್ಲಿ ಜೀವನು ಸಂಸಾರದಲ್ಲಿ ಅಲ್ಪನಾಗಿರುತ್ತಾನೆ. ಮೋಕ್ಷದಲ್ಲಿ ಮಹತ್ ಆಗಿರುತ್ತಾನೆ ಎಂದು ಹೇಳಲಾಗಿದೆ. ಇದರಿಂದ ನೀಚಭಾವ, ಉಚ್ಚಭಾವ ಎಂಬುದಾಗಿ ಜೀವನ ಪರಿಮಾಣವು ವ್ಯತ್ಯಾಸವಾಗುತ್ತದೆ. ಪರಿಮಾಣವ್ಯತ್ಯಯವೆಂಬ ಲಕ್ಷಣವು ಜೀವನಲ್ಲಿ ಬರುತ್ತದೆ ಅಲ್ಲವೇ ಎಂದರೆ ಇದರಿಂದ ಅನಿತ್ಯತ್ವವನ್ನು ಸರ್ವಥಾ ತಿಳಿಯಬಾರದು. ನಿತ್ಯನಾದ ಚೇತನನಲ್ಲಿ ಉಚ್ಚನೀಚಭಾವ ಬರುತ್ತದೆ. ಆದರೆ ಅನಿತ್ಯತ್ವವು ಬರುವುದಿಲ್ಲ.

'ನಾನಿತ್ಯತಾಸ್ಮತ್ಪಕ್ಷೇ ತು ಚೈತನ್ಯಾದೇರ್ವಿಶೇಷಿಣಃ।
ಲಕ್ಷಣಸ್ಯ ನಿವೃತ್ತೌ ತು ಸ್ಯಾತ್ ನ ತಚ್ಚೇತನೇ ಕ್ವಚಿತ್'

ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಕೇವಲ ಉಚ್ಚನೀಚಭಾವದಿಂದ ಅನಿತ್ಯತ್ವವು ಸರ್ವಥಾ ಬರುವುದಿಲ್ಲ. ಲಕ್ಷಣದ ನಿವೃತ್ತಿಯಾದರಷ್ಟೇ ಅನಿತ್ಯತ್ವವನ್ನು ಹೇಳಬೇಕು.

ಭಾಷ್ಯದಲ್ಲಿ ಇಷ್ಟಾಪತ್ತಿಯ ಪರಿಹಾರಕ್ಕಾಗಿ ಸೂತ್ರದಲ್ಲಿ ಬಹುವಚನ ಪ್ರಯೋಗವನ್ನು ಮಾಡಿದ್ದಾರೆ. ಅದನ್ನೇ 'ತೇನ ಚಾನಿರ್ಮೋಕ್ಷಃ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. 'ಅನಿರ್ಮೋಕ್ಷಪ್ರಸಂಗಾತ್' ಎಂದರೆ ಮೋಕ್ಷವೇ ಇಲ್ಲದಿರುವ ಪ್ರಸಂಗ ಬರುವುದರಿಂದ ಎಂದರ್ಥ.

## ಬ್ರಹ್ಮಸೂತ್ರ

### 'ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಾತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – अन्त्यावस्थितेश्चोभयनित्यत्वादविशेषात् ।।**

ಮೋಕ್ಷದಲ್ಲಿ ಆತ್ಮನಿರುತ್ತಾನೆಂದು ಹೇಳಬೇಕಾದರೆ ಅದಕ್ಕೆ ಆಶ್ರಯವಾಗಿ ಶರೀರವನ್ನೂ ಕೂಡ ಮೋಕ್ಷದಲ್ಲಿ ಹೇಳಬೇಕು. ಅಂದರೆ ಮೋಕ್ಷದಲ್ಲಿ ಶರೀರವು ಯಾವ ಪರಿಮಾಣದಲ್ಲಿರುತ್ತದೋ, ಅದೇ ಪರಿಮಾಣದಲ್ಲಿ ಆತ್ಮನು ಇರುತ್ತಾನೆಂದು ಅನಿವಾರ್ಯವಾಗಿ ಜೈನರು ಹೇಳಬೇಕು. ಆದ್ದರಿಂದ ಮೋಕ್ಷಾವಸ್ಥೆಯಲ್ಲಿ ದೇಹ ಮತ್ತು ಆತ್ಮಾ ಎರಡೂ ಕೂಡ ನಿತ್ಯವೆಂದು ಒಪ್ಪಿದಂತಾಯಿತು. ಹಾಗಾದರೆ ಸಂಸಾರಾವಸ್ಥೆಯಲ್ಲಿರುವ ದೇಹವು ಏಕೆ ಅನಿತ್ಯವಾಗುತ್ತದೆ? ಮೋಕ್ಷಾವಸ್ಥೆಯಲ್ಲಿರುವ ದೇಹಕ್ಕೂ, ಸಂಸಾರಾವಸ್ಥೆಯಲ್ಲಿರುವ ದೇಹಕ್ಕೂ ಏನು ವ್ಯತ್ಯಾಸವಿಲ್ಲದಿರುವಾಗ ಮುಕ್ತನ ದೇಹವು ನಿತ್ಯ, ಸಂಸಾರಿಯ ದೇಹವು ಅನಿತ್ಯವೆನ್ನಲು ಯಾವುದೇ ಕಾರಣವಿರುವುದಿಲ್ಲ. ಆದ್ದರಿಂದ ಮೋಕ್ಷಕ್ಕೂ, ಸಂಸಾರಕ್ಕೂ ಏನೂ ವ್ಯತ್ಯಾಸವಿಲ್ಲದ ಪ್ರಸಂಗ ಬರುತ್ತದೆ.

ಅರ್ಥ -- ಹಿಂದಿನ ಸೂತ್ರದಿಂದ 'ಏವಂ ಚ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು. 'ಅಂತ್ಯಾವಸ್ಥಿತೇಃ' ಎಂಬುದನ್ನು ಎರಡು ಬಾರಿ ಆವೃತ್ತಿ ಮಾಡಿಕೊಳ್ಳಬೇಕು. ಚ ಶಬ್ದವು ಅವಧಾರಣಾರ್ಥದಲ್ಲಿ ಮತ್ತು ಸಮುಚ್ಚಯಾರ್ಥದಲ್ಲಿ ಇರುತ್ತದೆ. ಸೂತ್ರಾರ್ಥ ಹೀಗೆ - ಆತ್ಮನು ಶರೀರ ಪರಿಮಾಣವನ್ನು ಹೊಂದಿರುತ್ತಾನೆಂದು ಅಂಗೀಕರಿಸುವುದಾದಲ್ಲಿ, ಅಂತ್ಯಾವಸ್ಥಿತೇಃ = ಮೋಕ್ಷಾವಸ್ಥೆಯಲ್ಲಿಯೂ ಆತ್ಮನಿಗೆ ಶರೀರವು ಇರುತ್ತದೆಂದು ಅಂಗೀಕರಿಸುವುದು ಅನಿವಾರ್ಯ. ಏಕೆಂದರೆ ಅಂತ್ಯಾವಸ್ಥಿತೇಶ್ಚ = ಅಂತ್ಯವೆಂದರೆ ಕೊನೆ ಎಂದರ್ಥ. ಮುಕ್ತಿಯಲ್ಲಿ ಉಳಿಯುವ ಆತ್ಮನ ಗಾತ್ರವು ಮೋಕ್ಷದಲ್ಲಿ ಇರುತ್ತದೆಂದು ಒಪ್ಪಬೇಕು. ಈ ಗಾತ್ರವು ಅವಚ್ಛೇದಕವಾದ ಶರೀರವಿಲ್ಲದೇ

ಕೂಡುವುದಿಲ್ಲ. ಆದ್ದರಿಂದ ಅವಚ್ಛೇದ್ಯನಾದ ಆತ್ಮನ ಪರಿಮಾಣಕ್ಕಾಗಿ ಅವಚ್ಛೇದಕವಾದ ಶರೀರಪರಿಮಾಣವನ್ನು ಒಪ್ಪಬೇಕು. ಪರಿಮಾಣವನ್ನೇಕೆ ಒಪ್ಪಬೇಕು ? ಎಂದರೆ ಅಂತ್ಯಾವಸ್ಥಿತೇಃ = ಮೋಕ್ಷದಲ್ಲಿರುವ ಆತ್ಮಸ್ವರೂಪವು ಇದ್ದೇ ಇರುತ್ತದೆಂದು ಅವಶ್ಯವಾಗಿ ಒಪ್ಪಬೇಕು. ಸ್ವರೂಪಸತ್ವವು ಪರಿಮಾಣವಿಲ್ಲದೇ ಜೈನರ ಮತದಲ್ಲಿ ಕೂಡುವುದಿಲ್ಲ. ಆಗಲಿ ಮೋಕ್ಷದಲ್ಲಿಯೂ ಶರೀರವನ್ನು ಒಪ್ಪುತ್ತೇವೆಂದರೆ, ಉಭಯನಿತ್ಯತ್ವಾತ್ = ಮೋಕ್ಷಕಾಲದಲ್ಲಿ ದೇಹ ಹಾಗೂ ಆತ್ಮಾ ಇಬ್ಬರಿಗೂ ನಿತ್ಯತ್ವವನ್ನು ಒಪ್ಪಬೇಕಾದ ಪ್ರಸಂಗ ಬರುತ್ತದೆ. ಆಗಲಿ ಮೋಕ್ಷಾವಸ್ಥೆಯಲ್ಲಿಯೂ ಶರೀರನಿತ್ಯತ್ವವನ್ನು ಒಪ್ಪುತ್ತೇವೆ. ಇದರಿಂದೇನಾಯಿತು? ಎಂದರೆ, ಸಕಲ ಪದಾರ್ಥಗಳಿಗೆ ನಿತ್ಯತ್ವವನ್ನೇ ಒಪ್ಪಿದಂತಾಯಿತು. ಸರ್ವನಿತ್ಯತ್ವಂ ಸ್ಯಾತ್ ಎಂಬ ಆಪಾದ್ಯವಾಕ್ಯವನ್ನು ಸೂತ್ರದಲ್ಲಿ ಆಧ್ಯಾಹಾರ ಮಾಡಿಕೊಳ್ಳಬೇಕು. ಅದಕ್ಕಾಗಿಯೇ ಸಮುಚ್ಚಯಾರ್ಥದಲ್ಲಿ ಚಶಬ್ದವಿರುತ್ತದೆ. ಆವಾಗ ಸಂಸಾರಾವಸ್ಥೆಯಲ್ಲಿರುವ ಎಲ್ಲರ ಶರೀರವು ನಿತ್ಯವಾಗುವ ಪ್ರಸಂಗ ಬರುತ್ತದೆ. ಏಕೆಂದರೆ ಅವಿಶೇಷಾತ್ = ಮೋಕ್ಷಾವಸ್ಥೆಯಲ್ಲಿರುವ ಶರೀರಕ್ಕೂ, ಸಂಸಾರಾವಸ್ಥೆಯಲ್ಲಿರುವ ಶರೀರಕ್ಕೂ ಶರೀರತ್ವ ಎಂಬ ಧರ್ಮವು ಸಮಾನವಾಗಿರುವುದರಿಂದ ಯಾವುದೇ ವ್ಯತ್ಯಾಸವಿರುವುದಿಲ್ಲ. ಆದ್ದರಿಂದ ಆತ್ಮನಿಗೆ ಶರೀರ ಪರಿಮಾಣವನ್ನು ಒಪ್ಪುವ ಜೈನಸಿದ್ಧಾಂತವು ಅತ್ಯಂತ ಅಯುಕ್ತವಾಗಿದೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ನೈಕಸ್ಮಿನ್ನಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಶರೀರವಿಲ್ಲದೆ ಸ್ವರೂಪವನ್ನು ಹೇಳಲು ಸಾಧ್ಯವೇ ?

**ब्रह्मसूत्रभाष्यम् – ।। अन्त्यावस्थितेश्चोभयनित्यत्वादविशेषात् ।।४।।**
**परिमाणाभावे स्वरूपाभावप्राप्त्याऽन्त्यपरिमाणस्थितेस्तदर्थत्वेन शरीरस्थितेरुभयनित्यत्वादविशेषेण सर्वशरीरनित्यत्वं स्यात् ।।४।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये नैकस्मिन्नधिकरणम् ।। १० ।।**

ಅನುವಾದ - ಶರೀರ ಎಷ್ಟು ಪರಿಮಾಣದಲ್ಲಿ ಇದೆಯೋ ಅಷ್ಟೇ ಪರಿಮಾಣದಲ್ಲಿ ಆತ್ಮನು ಇರುತ್ತಾನೆಂಬ ಜೈನರ ಅಭಿಪ್ರಾಯ ತಪ್ಪು. ಹಾಗೂ ಒಂದು ವೇಳೆ ಆತ್ಮನಿಗೆ ಶರೀರವಿಲ್ಲದಿದ್ದರೆ ಅದರ ಪರಿಮಾಣವೂ ಕೂಡ ಇರುವುದಿಲ್ಲ. ಪರಿಮಾಣ ಇಲ್ಲದಿದ್ದರೆ ಆತ್ಮನೂ ಇರಲು ಸಾಧ್ಯವಿಲ್ಲ. ಇದು ಜೈನರ ಅಭಿಪ್ರಾಯ. ಆದರೆ [illegible] ಸರಿಯಲ್ಲ. ಮೋಕ್ಷದಲ್ಲಿ ಆತ್ಮನಿದ್ದರೆ ಪರಿಮಾಣ ಇರಬೇಕು. ಪರಿಮಾಣಕ್ಕಾಗಿ ಮೋಕ್ಷದಲ್ಲಿಯೂ ಶರೀರ ಒಪ್ಪಬೇಕು. ಆ ಶರೀರವು ಅನಿತ್ಯವಾದರೆ ಮೋಕ್ಷವೇ ನಾಶವಾಗಬೇಕಾದೀತು. ಇನ್ನು ಶರೀರವನ್ನು ನಿತ್ಯವೆಂದರೆ ಮೋಕ್ಷದಲ್ಲಿರುವ ಶರೀರವು ನಿತ್ಯವಾದರೆ ಸಂಸಾರದಲ್ಲಿರುವ ಶರೀರಗಳು ಏಕೆ ನಿತ್ಯವಾಗಬಾರದು ? ಆದ್ದರಿಂದ ಆತ್ಮನಿಗೆ ಪರಿಮಾಣವನ್ನು ಒಪ್ಪುವ ಜೈನರು ಮತವು ಅಯುಕ್ತವಾಗಿದೆ.

ಪ್ರತಿಪದಾರ್ಥ -- ಪರಿಮಾಣಾಭಾವೇ = ಪರಿಮಾಣವೇ ಇಲ್ಲವಾದಲ್ಲಿ ಸ್ವರೂಪಾಭಾವಪ್ರಾಪ್ತ್ಯಾ = ಸ್ವರೂಪವೇ ಇಲ್ಲದಂತಾಗುತ್ತದೆ. ಅಂತ್ಯಪರಿಮಾಣಸ್ಥಿತೇಃ = ಮೋಕ್ಷದಲ್ಲಿ ಆತ್ಮನಿರುವುದರಿಂದ, ತದರ್ಥತ್ವೇನ = ಅವನ ಇರುವಿಕೆಗಾಗಿ, ಶರೀರಸ್ಥಿತೇಃ = ಶರೀರ ಇರುವುದರಿಂದ, ಉಭಯನಿತ್ಯತ್ವಾತ್ = ಎರಡೂ ನಿತ್ಯವಾದ್ದರಿಂದ, ಅವಿಶೇಷೇಣ =

ವ್ಯತ್ಯಾಸವಿಲ್ಲದ ಕಾರಣ, ಸರ್ವಶರೀರ ನಿತ್ಯತ್ವಂ = ಎಲ್ಲಾ ಶರೀರಗಳಿಗೆ ನಿತ್ಯತ್ವವನ್ನು, ಸ್ಯಾತ್ = ಒಪ್ಪಬೇಕಾಯಿತು.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ನೈಕಸ್ಮಿನ್ನಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

**सत्तर्कदीपावळिः – देहपरिमाणत्वं जीवस्य युक्त्यन्तरेणापि विघटयति । अन्त्येत्यादिना । मुक्तजीवस्य देहावच्छिन्नपरिमाणस्य परिमाणावच्छेदकेन चरमदेहेन नित्येन भाव्यम् । परिमाणरहितद्रव्यस्वरूपाभावात् । न चाणुत्वं महत्वं च जीवस्य वक्तुं शक्यते मुक्तस्य स्याद्वादिना । नित्यत्वे च चरमदेहस्य देहत्वाविशेषात् तद्वत्सर्वदेहस्य नित्यत्वं स्यादित्यर्थः ।**

ಜೀವನಿಗೆ ದೇಹಪರಿಮಾಣವಿದೆ ಎಂಬುದನ್ನು ಮತ್ತೊಂದು ಯುಕ್ತಿಯಿಂದ ನಿರಾಕರಣೆ ಮಾಡುವುದಕ್ಕಾಗಿ 'ಅಂತ್ಯಾವಸ್ಥಿತೇಃ' ಇತ್ಯಾದಿ ಸೂತ್ರಭಾಷ್ಯವು ಹೊರಟಿವೆ. ಆತ್ಮನಿಗೆ ಶರೀರವಿಲ್ಲದಿದ್ದರೆ ಪರಿಮಾಣವೂ ಕೂಡ ಇರುವುದಿಲ್ಲ ಎಂಬುದು ಜೈನರ ಅಭಿಪ್ರಾಯ. ಮುಕ್ತಜೀವನ ಪರಿಮಾಣಕ್ಕಾಗಿ ದೇಹವೊಂದನ್ನು ಒಪ್ಪಬೇಕು. ಆ ಪರಿಮಾಣಾವಚ್ಛೇದಕವಾದದ್ದು, ಚರಮದೇಹವೆಂದೇ ಹೇಳಬೇಕು. ಆ ಚರಮದೇಹವು ಅವಚ್ಛೇದಕವಾಗುವುದಕ್ಕಾಗಿ ಜೀವನಂತೆ ನಿತ್ಯವೆಂದು ಹೇಳಬೇಕು. ಏಕೆಂದರೆ ಪರಿಮಾಣವಿಲ್ಲದೇ ದ್ರವ್ಯಸ್ವರೂಪವೇ ಕೂಡುವುದಿಲ್ಲ. ಜೀವನಿಗೆ ಮೋಕ್ಷದಲ್ಲಿ ಅಣುತ್ವವನ್ನಾಗಲೀ, ಮಹತ್ವವನ್ನಾಗಲೀ ಸ್ಯಾದ್ವಾದಿಗಳಿಂದ ಉಪಪಾದನೆ ಮಾಡುವುದು ಸಾಧ್ಯವಾಗುವುದಿಲ್ಲ. ಚರಮದೇಹವು ನಿತ್ಯವೆಂದು ಹೇಳುತ್ತೇವೆ ಎಂದು ಉತ್ತರಿಸಿದರೆ, ದೇಹತ್ವವೆಂಬ ಧರ್ಮವು ಬೇರೆ ಜನ್ಮದ ದೇಹಗಳಲ್ಲೂ ಕೂಡ ಇರುವುದರಿಂದ ಚರಮದೇಹದಂತೆ ಉಳಿದವುಗಳು ಅನಿತ್ಯವಾಗಬೇಕಾಗುತ್ತದೆ. ಆದ್ದರಿಂದ ದೇಹಪರಿಮಾಣವನ್ನು ಜೀವನಿಗೆ ಹೇಳಬಾರದು.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ ನೈಕಸ್ಮಿನ್ನಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

## ತತ್ವಪ್ರದೀಪ

### ಚರಮದೇಹದ ಅನಂತರ ದೇಹ ಒಪ್ಪಿದರೆ ಬಾಧಕ

**तत्वप्रदीपः** – **अन्त्यावस्थितेश्चोभयनित्यत्वादविशेषात् । अन्त्यशरीरपातेऽपि तत्परिमाणस्थितौ प्रागपि न विपरिवर्तेत । तदा शरीरान्तरसम्बन्धाद्विपरिवृत्तिरिति चेदुपरि च सानुमीयताम् । निवारकाभावात् ।**

### ।। इति स्याद्वाद्यधिकरणम् ।।

ಕೊನೆಯ ಶರೀರ ಬಿದ್ದಾಗಲೂ ಜೀವನಿಗೆ ಪರಿಮಾಣವನ್ನು ಒಪ್ಪುವುದಾದರೆ, ಹಿಂದೆಯೂ ಆತ್ಮನ ಪರಿಮಾಣವು ವ್ಯತ್ಯಾಸ ಆಗದೇ ಇರಬೇಕಾದೀತು. ಬೇರೆ ಶರೀರಗಳು ಇರುವುದರಿಂದ ಕೊನೆಯ ಶರೀರಕ್ಕಿಂತ ಮೊದಲು ಆತ್ಮನಿಗೆ ವಿಪರಿವೃತ್ತಿಯನ್ನು ಒಪ್ಪಬೇಕೆಂದು ಹೇಳಿದರೆ, ಚರಮದೇಹದ ಅನಂತರವೂ ಕೂಡ ಶರೀರವಿದೆ ಎಂದು ಅನುಮಾನ ಮಾಡಬೇಕಾಗುತ್ತದೆ. ನಿವಾರಕವಾದ ಯಾವುದೇ ಪ್ರಮಾಣವಿರುವುದಿಲ್ಲ.

ವಿವರಣೆ - ಚರಮದೇಹದ ಅನಂತರ ಆತ್ಮನಿದ್ದಾನೆಂದು ಹೇಳಿದರೆ ಅವನಿಗೆ ಪರಿಮಾಣವನ್ನು ಒಪ್ಪಲೇಬೇಕು. ಆತ್ಮನ ಪರಿಮಾಣಕ್ಕಾಗಿ ಶರೀರ ಒಪ್ಪಬೇಕು. ಆ ಶರೀರ ಅನಿತ್ಯವಾದರೆ, ಮೋಕ್ಷವೇ ಇಲ್ಲದಾಗುತ್ತದೆ. ಆ ಶರೀರವು ನಿತ್ಯವಾದರೆ, ಇಲ್ಲಿರುವ ಬೇರೆ ಶರೀರಗಳು ಏಕೆ ಅನಿತ್ಯಗಳಾಗುತ್ತವೆ? ಸಂಸಾರದಲ್ಲಿರುವ ಶರೀರಗಳೂ ಕೂಡ ನಿತ್ಯವೇ ಆಗಬೇಕೆಂಬುದು ಅಭಿಪ್ರಾಯ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ ನೈಕಸ್ಮಿನ್ನಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

### ಮೋಕ್ಷದಲ್ಲಿ ಜೀವನಿಗೆ ಪರಿಮಾಣ ಇದೆಯೋ, ಇಲ್ಲವೋ ?

**तत्वप्रकाशिका – द्वितीयं पक्षं प्रतिक्षिपत्सूत्रं पठित्वा व्याचष्टे – अन्त्येति।। शरीरावच्छेदमन्तरेणात्मनः स्वतः परिमाणाभावात् शरीरपरिमाणत्वं वदन् प्रष्टव्यः । किं मोक्षे जीवस्य परिमाणमस्ति न वेति । न तावद् द्वितीयः। परिमाणाभावे स्वरूपाभावप्राप्तेः । न हि परिमाणशून्यं द्रव्यमस्ति । अतो मोक्षे परिमाणमभ्युपगन्तव्यमेव ।**

ಶರೀರ ಇಲ್ಲದಿದ್ದರೆ ಆತ್ಮನಿಗೆ ಪರಿಣಾಮವೇ ಕೂಡದಿರಬೇಕಾದೀತು ಎಂಬ ಎರಡನೆಯ ಪಕ್ಷವನ್ನು ನಿರಾಕರಣೆ ಮಾಡುವ ಸೂತ್ರವನ್ನು 'ಅಂತ್ಯ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಶರೀರವು ಅವಚ್ಛೇದಕವಾಗದೆ ಆತ್ಮನಿಗೆ ಸಹಜವಾದ ಪರಿಮಾಣವು ಯುಕ್ತವಾಗುವುದಿಲ್ಲ. ಆದ್ದರಿಂದ ಶರೀರಪರಿಮಾಣ ಹೇಳುವವನನ್ನು ಕುರಿತು ಪ್ರಶ್ನಿಸುತ್ತೇವೆ. ಮೋಕ್ಷದಲ್ಲಿ ಜೀವನಿಗೆ ಪರಿಮಾಣವು ಇದೆಯೋ ಇಲ್ಲವೋ? ಎಂದು. ಎರಡನೆಯ ಪಕ್ಷ ಒಪ್ಪಲಾಗದು. ಪರಿಮಾಣ ಇಲ್ಲ ಎಂದರೆ ಜೀವಸ್ವರೂಪವೇ ಇಲ್ಲ ಎಂದಂತಾಯಿತು. ಪರಿಮಾಣಶೂನ್ಯವಾದ ಒಂದು ದ್ರವ್ಯವೇ ಇರಲು ಸಾಧ್ಯವಿಲ್ಲ. ಆದ್ದರಿಂದ ಮೋಕ್ಷದಲ್ಲೂ ಕೂಡ ಪರಿಮಾಣವನ್ನು ಅಂಗೀಕಾರ ಮಾಡಲೇಬೇಕು.

### ಜೈನಮತ ವಿರೋಧವೂ ಇಲ್ಲ

**तत्वप्रकाशिका – किं चातः । तथा सति तस्य शरीरमन्तरेणानुपपत्तेः मोक्षेऽपि शरीरमुररीकरणीयं प्रसज्येत । अङ्गीक्रियत एवातो नानिष्टमिति चेत्तर्हीदं भवानपृष्टो व्याचष्टाम् । तच्छरीरमनित्यं नित्यं वा । नाद्यः । संसारसमानधर्मतापातात् । न द्वितीयः । यद्यात्मा देहश्चेत्युभयं नित्यं तर्हि इदानीन्तनसर्वशरीरैः किमपराद्धम् । तेषामपि नित्यत्वं स्यात् ।**

**शरीरत्वाविशेषादिति भावः । तस्माज्जैनमतस्यानुपपन्नत्वेनाविरोधकत्वाद्युक्तं जगत्कारणत्वलक्षणं विष्णोरिति सिद्धम् ।।**

ಇದರಿಂದ ಏನಾಯಿತು ? ಎಂದರೆ ಪರಿಮಾಣವು ಶರೀರವಿಲ್ಲದೆ ಅನುಪಪನ್ನವಾಗುತ್ತದೆ. ಆದ್ದರಿಂದ ಮೋಕ್ಷದಲ್ಲಿಯೂ ಕೂಡ ಶರೀರವನ್ನು ಅಂಗೀಕಾರ ಮಾಡಬೇಕಾಗುತ್ತದೆ.

ಅಂಗೀಕರಿಸುತ್ತೇವೆ ನಮಗೆ ಅದು ಅನಿಷ್ಟವಲ್ಲ ? ಎಂದು ಹೇಳಿದರೆ, ಇದು ತಪ್ಪು. ಹಾಗಾದರೆ ನಮ್ಮನ್ನು ಪ್ರಶ್ನಿಸಿದ ನೀನೇ ಇದನ್ನು ವ್ಯಾಖ್ಯಾನಿಸು. ಈ ಶರೀರವು ಅನಿತ್ಯವೋ? ನಿತ್ಯವೋ ? ಮುಕ್ತಿಯಲ್ಲಿರುವ ಶರೀರವು ಅನಿತ್ಯವಾದರೆ ಸಂಸಾರದ ಸಮಾನಧರ್ಮವನ್ನು ಮೋಕ್ಷದಲ್ಲಿ ಹೇಳಿದಂತೆ ಆಗುತ್ತದೆ.

ನಿತ್ಯವೆಂದೂ ಕೂಡ ಹೇಳಲಾಗದು. ಏಕೆಂದರೆ ಮೋಕ್ಷದಲ್ಲಿ ದೇಹ ಹಾಗೂ ಆತ್ಮ ಎರಡೂ ಕೂಡ ಮಿಥ್ಯಾಭೂತವಾದರೆ ಸಂಸಾರಾವಸ್ಥೆಯಲ್ಲಿ ಸಕಲ ಶರೀರಗಳಿಂದ ಮಾಡಲ್ಪಟ್ಟ ಅಪರಾಧವಾದರೂ ಏನು ? ಶರೀರತ್ವವೆಂಬ ಧರ್ಮವು ಉಭಯತ್ರ ಸಮಾನವಾದ್ದರಿಂದ ಸಂಸಾರಾವಸ್ಥೆಯಲ್ಲಿರುವ ಶರೀರವೂ ಕೂಡ ಮಿಥ್ಯಾಭೂತವೇ ಆಗಲಿ.

ಆದ್ದರಿಂದ ಜೈನಮತವು ಅನುಪಪನ್ನವಾಗಿದೆ. ಈ ಮತದ ವಿರೋಧವನ್ನು ನಮಗೆ ಹೇಳಲು ಸಾಧ್ಯವಿಲ್ಲ. ಹಾಗಾಗಿ ವಿಷ್ಣುವಿನ ಜಗತ್ಕಾರಣತ್ವಲಕ್ಷಣತ್ವವು ನಿರ್ದುಷ್ಟವೆಂದು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ
ನೈಕಸ್ಮಿನ್ನಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ಭಾವದೀಪ

**भावदीपः– ।।अन्त्यावस्थितेश्चोभयनित्यत्वादविशेषात् ।।३६ ।।**

**द्वितीयमिति ।।** शरीरावच्छेदमन्तरेणात्मनः परिमाणाभाव इति पक्षमित्यर्थः। भाष्यकारीयाद्यापदानस्यासाङ्गत्यं निरस्यन् भाष्यं व्याचष्टे – **शरीरावच्छेदमिति ।। तस्मादिति ।।** एकस्मिन्ननेकप्रकारस्यासम्भवात् आत्मनः कायपरिमाणत्वायोगाच्चेत्यर्थः ।।३६ ।।

'ದ್ವಿತೀಯಮ್' ಎಂದರೆ ಹಿಂದೆ 'ಏವಂ ಚ' ಎಂಬ ಸೂತ್ರದಲ್ಲಿ ಎರಡು ವಿಕಲ್ಪವನ್ನು ಮಾಡಲಾಗಿತ್ತು. ಅವುಗಳಲ್ಲಿ 'ಶರೀರಾವಚ್ಛೇದಮಂತರೇಣ ಆತ್ಮನಃ ಪರಿಮಾಣಾಭಾವಃ' ಎಂಬ ಎರಡನೆಯ ಪಕ್ಷವನ್ನು ವಿವಕ್ಷಿಸಬೇಕು. ಭಾಷ್ಯದಲ್ಲಿ ಅಸಾಂಗತ್ಯವನ್ನು ಪರಿಹಾರ ಮಾಡುವ ಮೂಲಕ ವ್ಯಾಖ್ಯಾನ ಮಾಡಲು 'ಶರೀರಾವಚ್ಛೇದಮ್' ಎಂಬ ಟೀಕಾವಾಕ್ಯವು ಹೊರಟಿದೆ. 'ತಸ್ಮಾತ್' ಎಂದರೆ ಒಂದರಲ್ಲಿ ಅನೇಕ ಪ್ರಕಾರವು ಅಸಂಭಾವಿತವಾದ್ದರಿಂದ ಮತ್ತು ಆತ್ಮನಿಗೆ ಕಾಯಪರಿಮಾಣವು ಅಯುಕ್ತವಾದ್ದರಿಂದ ಎಂದರ್ಥ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ನೈಕಸ್ಮಿನ್ನಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## नैकस्मिन्नधिकरणम् -१०

ಎಲ್ಲಾ ಮತವನ್ನು ಒಪ್ಪುವ ಜೈನರ ನಿರಾಕರಣೆ

।। नैकस्मिन्नसम्भवात् ।।२-२-३३।।

अत्र सर्वप्रकारोपगमान्नैकपक्षोक्तदोषोऽत्रेति प्राप्तं क्षपणकमतं निराक्रियते । सत्त्वम्, असत्त्वं, सदसत्त्वं, सदसद्विलक्षणत्वं, सत्त्वे सति सद्विलक्षणत्वमसत्त्वे सत्यसद्विलक्षणत्वं, सदसदात्मकतवे सति सदसद्विलक्षणत्वमित्यनियतसप्तप्रकारा एकस्मिन् वस्तुनि न युक्ताः । कुतः? असम्भवात् । अप्रामाणिकत्वेनासम्भावितत्वादित्यर्थः ।

ಈ ಅಧಿಕರಣದಲ್ಲಿ ಎಲ್ಲಾ ಮತದವರು ಹೇಳುವ ಎಲ್ಲಾ ಪ್ರಕಾರಗಳನ್ನು ಅಂಗೀಕಾರ ಮಾಡಲಾಗಿದೆ. ಆದ್ದರಿಂದ ಯಾವುದೇ ಒಂದು ಪಕ್ಷಕ್ಕೂ ಹೇಳಿದ ದೋಷವು ತಮಗೆ ಬರುವುದಿಲ್ಲ ಎಂಬುದಾಗಿ ಕ್ಷಪಣಕಮತವನ್ನು ನಿರಾಕರಣೆ ಮಾಡಲಾಗುತ್ತದೆ. ಅದು ಹೀಗೆ - ಸತ್ವ, ಅಸತ್ವ, ಸದಸತ್ವ, ಸದಸದ್ವಿಲಕ್ಷಣತ್ವ, ಸತ್ವೇ ಸತಿ ಸದ್ವಿಲಕ್ಷಣತ್ವಾತ್, ಅಸತ್ವೇ ಸತಿ ಅಸದ್ವಿಲಕ್ಷಣತ್ವಾತ್, ಸದಸದಾತ್ಮಕತ್ವೇಸತಿ ಸದಸದ್ವಿಲಕ್ಷಣತ್ವ ಎಂಬ ಏಳು ಪ್ರಕಾರಗಳು ಒಂದೇ ವಸ್ತುವಿನಲ್ಲಿ ಇರುತ್ತದೆಂದು ಹೇಳುತ್ತಾರೆ. ಇದು

ತಪ್ಪು. ಏಕೆಂದರೆ 'ಅಸಂಭವಾತ್' ಅಪ್ರಾಮಾಣಿಕವಾಗಿದೆ ಮತ್ತು ಅಸಂಭಾವಿತವಾಗಿದೆ ಎಂಬುದು ಸೂತ್ರಾರ್ಥ.

### ದೇಹಪರಿಮಾಣವೇ ಜೀವಪರಿಮಾಣ ಎಂಬುದರ ನಿರಾಕರಣೆ

यदपि देहपरिमाणत्वं जीवस्योपेतं तत्किं सर्वदेहगतचेष्टोपपत्त्यर्थमुपेयते । अथ देहावच्छेदकं विनात्मनः परिमाणाभावाद्वा । आद्य आह -

।। एवं चात्माऽकात्स्न्र्यम् ।।२-२-३४।।

जैनमतप्रसङ्गसन्निधापितमात्मनो देहपरिमाणत्वमेवमिति परामृश्यते । एवं च देहपरिमाणत्वे सत्यात्मनो मशकादिदेहस्थात्मनो गजादिदेह-प्राप्तवकात्स्न्र्यमपूर्णत्वं सर्वदेहाव्यापित्वं स्यादित्यर्थः । ततश्च न सर्वदेहचेष्टेति भावः । यद्वाऽऽत्मनो गजादिदेहस्थस्य मशकादिदेहप्राप्तावात्मनोऽकात्स्न्र्यं देह एव कात्स्न्र्यं न स्यादतिरेकः स्यादित्यर्थः। ततश्च कायपरिमाणत्वभङ्ग इति भावः । चशब्देनैवैषोऽप्यर्थः सङ्ग्राह्यो न वृत्त्यन्तरेणेत्येके ।।

ದೇಹದಷ್ಟೇ ಅಳತೆ ಜೀವನಿಗಿದೆ ಎಂಬುದಾಗಿ ಜೈನರು ಹೇಳುತ್ತಾರೆ. ದೇಹದ ಎಲ್ಲಾ ಭಾಗಗಳಲ್ಲಿ ಕ್ರಿಯೆಗಳನ್ನು ಉಪಪಾದನೆ ಮಾಡುವುದಕ್ಕಾಗಿ ಹೀಗೆ ಹೇಳುತ್ತೀರೋ ? ಅಥವಾ ದೇಹದ ಪರಿಮಾಣವನ್ನು ಬಿಟ್ಟು ಆತ್ಮನಿಗೆ ಬೇರೆ ಪ್ರಮಾಣವು ಇಲ್ಲ ಎಂಬ ಅಭಿಪ್ರಾಯದಿಂದ ಹೀಗೆ ಹೇಳುತ್ತೀರೋ? ಮೊದಲನೆಯ ಪಕ್ಷವನ್ನು ನಿರಾಕರಿಸುತ್ತಿದ್ದಾರೆ. 'ಏವಂ ಚಾತ್ಮಾಕಾರ್ತ್ಸ್ನ್ಯಮ್' ಎಂದು.

ಜೈನಮತದ ವಿಚಾರದಿಂದ ಆತ್ಮನಿಗೆ ದೇಹಪರಿಮಾಣವಿದೆ ಎಂಬ ವಿಚಾರವು ಅರ್ಥಾತ್ ಪ್ರಾಪ್ತವಾಗುತ್ತದೆ. ಈ ವಿಷಯವನ್ನು 'ಏವಂ' ಎಂಬ ಪದದಿಂದ ಪರಾಮರ್ಶ ಮಾಡಬೇಕು. ಏವಂ ಚ = ಜೀವನು ದೇಹಪರಿಮಾಣದಷ್ಟೇ ಪರಿಮಾಣವುಳ್ಳವನಾಗಿದ್ದಾನೆ ಎಂದು ಹೇಳಿದರೆ, ಆತ್ಮಾ = ಸೊಳ್ಳೆ ಮೊದಲಾದ ದೇಹದಲ್ಲಿರುವ ಆತ್ಮನಿಗೆ ಆನೆ ಮೊದಲಾದ ಜನ್ಮವು ಪ್ರಾಪ್ತವಾದಾಗ, ಅಕಾರ್ತ್ಸ್ನ್ಯಮ್

ಅಪೂರ್ವತ್ವವು ಬರಬೇಕಾದೀತು. ಸಮಸ್ತ ದೇಹದಲ್ಲಿ ವ್ಯಾಪ್ತನಾಗದೇ ಇರಬೇಕಾದೀತು. ಆಗ ಆನೆಗೆ ದೇಹದ ಎಲ್ಲಾ ಭಾಗದಿಂದ ಚೇಷ್ಟೆಯು ಸಾಧ್ಯವಾಗುವುದಿಲ್ಲ.

ಅಥವಾ ಆನೆಯ ದೇಹವನ್ನು ಹೊಂದಿದ ಜೀವನಿಗೆ ಸೊಳ್ಳೆಯ ದೇಹವು ಬಂದರೆ ಆತ್ಮನು ಆಕಾರ್ತ್ಸ್ನ್ಯಮ್ ದೇಹದಲ್ಲಿ ಮಾತ್ರ ಪರಿಪೂರ್ಣವಾಗಿರದೇ ಅದಕ್ಕಿಂತ ಹೆಚ್ಚಿನ ಸ್ಥಳದಲ್ಲೂ ಕೂಡ ಸ್ಥಿತಿಯನ್ನು ಹೊಂದಬೇಕಾದೀತು. ಆಗ ದೇಹಪರಿಮಾಣದಷ್ಟೇ ಜೀವನ ಪರಿಮಾಣ ಎಂಬ ಸಿದ್ಧಾಂತಕ್ಕೆ ಭಂಗ ಬರುತ್ತದೆ ಎಂದಭಿಪ್ರಾಯ. ಸೂತ್ರದಲ್ಲಿರುವ 'ಚ' ಶಬ್ದದಿಂದ ಈ ಅರ್ಥವನ್ನು ಸಂಗ್ರಹಿಸಬಹುದು. ಇನ್ನೊಂದು ರೀತಿಯಲ್ಲಿ ಸೂತ್ರಕ್ಕೆ ವ್ಯಾಖ್ಯಾನ ಮಾಡುವ ಅವಶ್ಯಕತೆಯಿಲ್ಲ ಎಂಬುದಾಗಿ ಕೆಲವರು ಹೇಳುತ್ತಾರೆ.

### ಜೈನರ ಮತದಲ್ಲಿ ಆತ್ಮನು ವಿಕಾರಿಯಾಗಬೇಕಾಗುತ್ತದೆ

यदा यद्देहमाप्नोति तदा तद्देहपरिमाण इत्यत आह -

।। न च पर्यायादप्यविरोधो विकारादिभ्यः ।।२-२-३५।।

**पर्यायादपि क्रमादपि, क्रमात् तत्तद्देहपरिमाणत्वाङ्गीकारादपि अविरोधो न च भवति । कुतः? विकारादिभ्यः विकारित्वापत्तेः । ततश्चानित्यत्वा-निर्मोक्षत्वशास्त्रवैय्यर्थ्यानि तेभ्य इत्यर्थः ।**

ಜೀವಾತ್ಮನು ಯಾವಾಗ ಯಾವ ದೇಹವನ್ನು ಪಡೆಯುತ್ತಾನೋ, ಆಗ ಆ ದೇಹದ ಪರಿಮಾಣವನ್ನೇ ಹೊಂದುತ್ತಾನೆ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - 'ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ' ಎಂದು.

ಪರ್ಯಾಯಾದಪಿ = ಕ್ರಮವಾಗಿ ಆಯಾ ದೇಹದ ಪರಿಮಾಣವು ಜೀವಾತ್ಮನಿಗೆ ಲಭ್ಯವಾಗುತ್ತದೆಂದು ಅಂಗೀಕಾರ ಮಾಡಿದರೂ, ಅವಿರೋಧಃ ನ = ವಿರೋಧವಿಲ್ಲವೆಂದು ಹೇಳಲಾಗದು. ಏಕೆಂದರೆ ವಿಕಾರಾದಿಭ್ಯಃ = ಆತ್ಮನು ವಿಕಾರಿಯಾಗಬೇಕಾದೀತು. ಆದ್ದರಿಂದ ಆತ್ಮನಿಗೆ ಅನಿತ್ಯತ್ವವು ಬರುತ್ತದೆ. ಮೋಕ್ಷ

ಇಲ್ಲದಿರುವ ಪ್ರಸಂಗ ಬರುತ್ತದೆ. ಶಾಸ್ತ್ರಗಳಿಗೆ ವೈಯ್ಯರ್ಥ್ಯವು ಬರುತ್ತದೆ. ಈ ಎಲ್ಲಾ ದೋಷಗಳು ಜೈನರ ಮತದಲ್ಲಿ ಪ್ರಾಪ್ತವಾಗಿವೆ ಎಂಬುದು ಸೂತ್ರದ ಅರ್ಥ.

### ಸಿದ್ಧಾಂತದಲ್ಲಿ ಆತ್ಮನು

**स्वमते जीवस्य सुखादिभोगकृतोच्चत्वानीचत्वरूपविकारोऽस्ति । तस्य स्वरूपविकारससङ्कोचरूपत्वात् । तथापि चैतन्यादियावद्द्रव्यभाविधर्मनिवृत्तावेवानित्यत्वो पगमान्नानित्यत्वमुक्तं सुधायाम् । उक्तं च नयचन्द्रिकायाम् सङ्कोचविकासादन्यथाभावान्नाशो नेति ।।**

ಸ್ವಮತದಲ್ಲಿ ಜೀವನಿಗೆ ಸುಖದುಃಖಾದಿಗಳ ಭೋಗದಿಂದ ಉಚ್ಚತ್ವ ನೀಚತ್ವವೆಂಬ ವಿಕಾರವಿದೆ. ಇದು ಆತ್ಮಸ್ವರೂಪದ ವಿಕಾಸ ಹಾಗೂ ಸಂಕೋಚರೂಪಗಳಾಗಿವೆ. ಅಂದಮಾತ್ರಕ್ಕೆ ಆತ್ಮನು ವಿಕಾರಿಯಾದ್ದರಿಂದ ಅನಿತ್ಯನಾಗಿದ್ದಾನೆಂದು ಹೇಳಿದಂತೆ ಆಗುವುದಿಲ್ಲ. ಚೈತನ್ಯವೇ ಮೊದಲಾದ ಯಾವದ್ ದ್ರವ್ಯಭಾವಿಯಾದ ಧರ್ಮಗಳು ನಾಶವಾದರೆ ಮಾತ್ರ ಜೀವನಿಗೆ ಅನಿತ್ಯತ್ವವು ಬರುತ್ತದೆಂದು ಒಪ್ಪಿರುವುದರಿಂದ ಆತ್ಮನಿಗೆ ಅನಿತ್ಯತ್ವವಿಲ್ಲವೆಂದು ನ್ಯಾಯಸುಧಾದಲ್ಲಿ ಸ್ಪಷ್ಟಪಡಿಸಲಾಗಿದೆ. ನಯಚಂದ್ರಿಕಾದಲ್ಲೂ ಕೂಡ ಸಂಕೋಚವಿಕಾಸಗಳಿಂದ ಆತ್ಮನಿಗೆ ಯಾವುದೇ ಪರಿಣಾಮವು ಆಗುವುದಿಲ್ಲವಾದ್ದರಿಂದ ನಾಶವಿಲ್ಲ ಎಂದು ಹೇಳಲಾಗಿದೆ.

### ಸಂಸಾರಶರೀರವು ನಿತ್ಯವಾಗಬೇಕಾದೀತು

प्रागुक्तं प्रत्यक्षं प्रत्याह -

।। अन्त्यावस्थितेश्चोभयनित्यत्वादविशेषात् ।।२-२-३६।।

अन्त्यस्य मुक्तिगतात्मपरिमाणस्यावस्थितेस्तदवच्छेदकतया नित्यदेहावश्यम्भावेनोभयस्य मुक्तावात्मतद्देहयोर्नित्यत्वादद्यतनदेहानामपिनित्यत्वं स्यादविशेषाद्देहत्वाविशेषादित्यर्थः ।

ಹಿಂದೆ ಹೇಳಿದ ಪ್ರತ್ಯಕ್ಷವನ್ನು ನಿರಾಕರಣೆ ಮಾಡುತ್ತಿದ್ದಾರೆ 'ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದ-ವಿಶೇಷಾತ್'.

ಅಂತ್ಯ = ಮುಕ್ತಿಯನ್ನು ಹೊಂದಿರುವ ಆತ್ಮನ ಪರಿಮಾಣವು, ಅವಸ್ಥಿತೇಃ = ಇರುವುದರಿಂದ ಆ ಪರಿಮಾಣಕ್ಕೆ ಅವಚ್ಛೇದಕವಾಗಿ ನಿತ್ಯದೇಹವು ಆವಶ್ಯಕವಾದ್ದರಿಂದ, ಉಭಯನಿತ್ಯತ್ವಾತ್ = ಮೋಕ್ಷದಲ್ಲಿ ಆತ್ಮ ಮತ್ತು ದೇಹ ಎರಡೂ ಕೂಡ ನಿತ್ಯವಾಗಿರುವುದರಿಂದ ಮೋಕ್ಷದ ಮೊದಲಿರುವ ದೇಹಗಳಿಗೂ ಕೂಡ ನಿತ್ಯತ್ವವನ್ನು ಒಪ್ಪಬೇಕಾದೀತು. ಅವಿಶೇಷಾತ್ = ಮೋಕ್ಷಕಾಲದಲ್ಲಿರುವ ದೇಹ, ಸಂಸಾರ-ಕಾಲದಲ್ಲಿರುವ ದೇಹ ಎರಡೂ ಕೂಡ ದೇಹವೇ ಆಗಿವೆ. ಯಾವುದೇ ವಿಶೇಷ ಇರುವುದಿಲ್ಲ ಎಂಬುದು ಸೂತ್ರದ ಅರ್ಥ.

### ಸುಧೆಯ ಪ್ರಕಾರ ಮತ್ತೊಂದು ವ್ಯಾಖ್ಯಾನ

वृत्त्यन्तरं तु, अन्त्या याऽवस्थितिः सततोर्ध्वगतिरूपा मुक्त्याव्याख्या तस्याश्च विकारात्तद्रूपादपि विकारात् आत्मनोऽनित्यत्वं स्यादिति पूर्वस्मादनुषङ्गः । न केवलं परिमाणादिति चार्थः । एवमपि तस्य नित्यत्वे उभयनित्यत्वादात्मप्रपञ्चयोर्द्वयोरपि नित्यत्वापाताद्विकारित्वमात्रस्य त्वयाऽप्रयोजकीकृतत्वाद्विकारविशेषस्य नाशव्याप्तत्वेन त्वयाऽनङ्गीकारादिति भावः ।

ನ್ಯಾಯಸುಧಾದಲ್ಲಿ ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ ಮಾಡಿರುತ್ತಾರೆ. ಅಂತ್ಯಾವಸ್ಥಿತೇಃ = ಸತತ ಊರ್ಧ್ವಗಮನರೂಪವಾದ ಮೋಕ್ಷಾವಸ್ಥೆ ಎಂಬ ವಿಕಾರದಿಂದಲೂ ಕೂಡ ಆತ್ಮನಿಗೆ ಅನಿತ್ಯತ್ವವು ಬರಬೇಕಾದೀತು. ಹಿಂದಿನ ಸೂತ್ರದಿಂದ ವಿಕಾರಾತ್, ಆತ್ಮನಃ ಅನಿತ್ಯತ್ವಂ ಸ್ಯಾತ್ ಎಂಬುದನ್ನು ಅನುವೃತ್ತಿ ಮಾಡಬೇಕು. ಕೇವಲ ಪರಿಮಾಣದಿಂದಷ್ಟೇ ಅಲ್ಲ. ಮುಕ್ತಿಯಿಂದಲೂ ಕೂಡ ಆತ್ಮನಿಗೆ ಅನಿತ್ಯತ್ವ ಬರಬೇಕಾದೀತು ಎಂಬುದು ಚಶಬ್ದದ ಅರ್ಥ. ಹೀಗೆ ವಿಕಾರವಿದ್ದರೂ ಕೂಡ ಆತ್ಮನು ನಿತ್ಯನಾಗಿದ್ದಾನೆಂದು ಒಪ್ಪಿದರೆ ಉಭಯನಿತ್ಯತ್ವಾತ್ = ಆತ್ಮ ಪ್ರಪಂಚ ಎರಡೂ ಕೂಡ ನಿತ್ಯವಾಗಬೇಕಾದೀತು. ಆತ್ಮನಿಗೆ ಪರಿಮಾಣ, ಮೋಕ್ಷ ಮೊದಲಾದ ವಿಕಾರಗಳಿದ್ದರೂ ಕೂಡ ನಾಶವು ಆಗಬೇಕಾದೀತು ಎಂಬ ವ್ಯಾಪ್ತಿಯನ್ನು ಜೈನರು ಅಂಗೀಕಾರ ಮಾಡಿರುವುದಿಲ್ಲ. ಆದ್ದರಿಂದ ವಿಕಾರ ಮಾತ್ರವು ಜಗತ್ತಿನ ಅನಿತ್ಯತ್ವವನ್ನು ಸಾಧನೆ ಮಾಡಲು ಅಪ್ರಯೋಜಕವಾಗಿದೆ ಎಂಬುದು ಸೂತ್ರದ ಅಭಿಪ್ರಾಯ.

## ವೃಕ್ಷದಲ್ಲೇಕೆ ಆತ್ಮನಿಲ್ಲ?

**यद्वा स्थास्नूनां परिमाणभेदेनात्मनो विकारापत्त्या वा देहेन्द्रियापत्तिबाधकेन वा निरात्मकत्वमुपेतम् । तच्च न । आद्ये गजादिदेहस्याविशेषात् । अन्त्ये स्थास्नूनां मानुषाद्यविशेषात् गीतादिश्रवणेन स्थास्नूनामपि विकासदृष्ट्या देहेन्द्रियाद्यनुमानादिति सुधोक्तं ध्येयम् । अत्र प्रपञ्चस्यापि नित्यत्वादिति वाच्ये उभयेत्युक्तिर्न्यायसाम्यसूचनाय ॥१०॥**

ಅಥವಾ ವೃಕ್ಷಗಳಲ್ಲಿ ಆತ್ಮನನ್ನು ಜೈನರು ಒಪ್ಪುವುದಿಲ್ಲ. ಪರಿಮಾಣದ ವ್ಯತ್ಯಾಸದಿಂದ ಆತ್ಮನಿಗೆ ವಿಕಾರ ಬರುತ್ತದೆಂಬ ಬಾಧಕದಿಂದ ಒಪ್ಪಿಲ್ಲವೋ? ಅಥವಾ ದೇಹೇಂದ್ರಿಯಾದಿಗಳು ವೃಕ್ಷಾದಿಗಳಿಗೂ ಬರಬೇಕಾದೀತು ಎಂಬ ಬಾಧಕದಿಂದಲೋ ? ಮೊದಲನೆಯ ಪಕ್ಷದಲ್ಲಿ ವೃಕ್ಷಾದಿಗಳಿಗೂ ಗಜಾದಿ ದೇಹಗಳಿಗೂ ಯಾವುದೇ ವ್ಯತ್ಯಾಸವಿಲ್ಲ. ಆದ್ದರಿಂದ ಆತ್ಮನಿಗೆ ವಿಕಾರತ್ವವು ಬಂದೇ ಬರುತ್ತದೆ. ಎರಡನೆಯ ಪಕ್ಷವೂ ಕೂಡ ತಪ್ಪು. ವೃಕ್ಷಾದಿಗಳಿಗೆ ಮನುಷ್ಯಾದಿಗಳಿಂದ ಯಾವುದೇ ವ್ಯತ್ಯಾಸವಿಲ್ಲ. ಸಂಗೀತ ಶ್ರವಣದಿಂದ ವೃಕ್ಷಾದಿಗಳಿಗೂ ಕೂಡ ಸಂತೋಷವಾಗುವುದು ಅನುಭವಸಿದ್ಧವಾಗಿದೆ. ಆದ್ದರಿಂದ ಮನುಷ್ಯರಿಗೆ ಹೇಗೆ ದೇಹೇಂದ್ರಿಯಾದಿಗಳಿವೆಯೋ, ಅದರಂತೆ ವೃಕ್ಷಾದಿಗಳಿಗೂ ದೇಹೇಂದ್ರಿಯಾದಿಗಳಿವೆ ಎಂಬುದಾಗಿ ನ್ಯಾಯಸುಧಾದಲ್ಲಿ ಸಮರ್ಥಿಸಿದ್ದಾರೆ.

ಈ ಸೂತ್ರದಲ್ಲಿ 'ಪ್ರಪಂಚಸ್ಯಾಪಿ ನಿತ್ಯತ್ವಾತ್' ಎಂದು ಹೇಳಬೇಕಾಗಿತ್ತು. ಆದರೂ 'ಉಭಯನಿತ್ಯತ್ವಾತ್' ಎಂದು ಹೇಳಿದ್ದರಿಂದ ಆತ್ಮನಿಗೂ ಪ್ರಪಂಚಕ್ಕೂ ಇರುವ ನ್ಯಾಯಸಾಮ್ಯವನ್ನು ಸೂಚನೆ ಮಾಡಿರುತ್ತಾರೆ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ನೈಕಸ್ಮಿನ್ನಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಪತ್ಯುರಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

### ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಪತ್ಯುರಧಿಕರಣ

## ಬ್ರಹ್ಮಸೂತ್ರ

'ಪತ್ಯುರಸಾಮಂಜಸ್ಯಾತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – पत्युरसामञ्जस्यात् ।।**

ಪಶುಪತಿಯೆನಿಸಿದ ರುದ್ರನಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ಪಾರತಂತ್ರ್ಯ, ಉತ್ಪತ್ತಿ ಮೊದಲಾದ ದೋಷಗಳು ಪಶುಪತಿಯಲ್ಲಿರುತ್ತವೆ.

ಅರ್ಥ -- ಪತ್ಯುಃ = ಪಶುಪತಿಯಾದ ರುದ್ರನಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ಅಸಾಮಂಜಸ್ಯಾತ್ = ಪರಾಧೀನತೆ, ಉತ್ಪತ್ತಿ ಮೊದಲಾದ ದೋಷಗಳು ಅವನಲ್ಲಿ ಇರುತ್ತವೆ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

ಪಾಶುಪತಮತ ನಿರಾಕರಣೆಗಾಗಿ ಈ ಅಧಿಕರಣ

**ब्रह्मसूत्रभाष्यम् – पाशुपतपक्षमपाकरोति –**

**।। पत्युरसामञ्जस्यात् ।।१।।**

**'यं कामये तं तमुग्रं कृणोमि तं ब्रह्माणं तमृषिं तं सुमेधाम्' (ऋ.१०.१२५.५) 'अहं रुद्राय धनुरातनोमि ब्रह्मद्विषे शरवे हन्त वा उ' (ऋ.१०.१२५.६)**

ಅನುವಾದ - ರುದ್ರನೇ ಶ್ರೇಷ್ಠನಾಗಿದ್ದಾನೆ ಎಂದು ಹೇಳುವ ಪಾಶುಪತಮತವನ್ನು ಸೂತ್ರಕಾರರು ಈ ಅಧಿಕರಣದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ.

'ನಾನು ಯಾರನ್ನು ಯಾವ ಪದವಿಯಲ್ಲಿ ಇರಿಸಲು ಬಯಸುತ್ತೇನೋ ಅವನನ್ನು ರುದ್ರನನ್ನಾಗಿ ಮಾಡುತ್ತೇನೆ. ಬ್ರಹ್ಮನನ್ನಾಗಿ ಮಾಡುತ್ತೇನೆ ಜ್ಞಾನಿಯನ್ನಾಗಿ ಮಾಡುತ್ತೇನೆ. ಅವನನ್ನು ಒಳ್ಳೆಯ ಮೇಧಾವಿಯನ್ನಾಗಿ ಮಾಡುತ್ತೇನೆ' ಹೀಗೆ ರುದ್ರನು ಲಕ್ಷ್ಮಿದೇವಿಯ ಅಧೀನವಾಗಿರುತ್ತಾನೆಂದು ಅಂಭ್ರಿಣೀಶ್ರುತಿಯು ಹೇಳುತ್ತಿದೆ.

ಹಿಂಸಕನಾದ ಚತುರ್ಮುಖನ ಐದನೇ ತಲೆಯನ್ನು ತುಂಡುಮಾಡಿರುವ ರುದ್ರನನ್ನು ಕೊಲ್ಲಲೆಂದು ಧನುಸ್ಸನ್ನು ಹೆದೆ ಏರಿಸುವೆನು ಎಂಬ ಈ ಶ್ರುತಿಯೂ ಕೂಡ ರುದ್ರನು ಲಕ್ಷ್ಮಿಯ ಅಧೀನವೆಂದು ಹೇಳುತ್ತಿದೆ.

ಪ್ರತಿಪದಾರ್ಥ -- ಶೈವಮತ ನಿರಾಕರಣೆಗಾಗಿ ಈ ಅಧಿಕರಣವು ಹೊರಟಿದೆ - ಪಾಶುಪತಮತಮ್ = ಪಶುಪತಿಯಾದ ರುದ್ರನೇ ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳುವ ಮತವನ್ನು, ಅಪಾಕರೋತಿ = ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ.

ಯಂ = ಯಾರನ್ನು, ಉಗ್ರಮ್ = ರುದ್ರನನ್ನಾಗಿ, ಕಾಮಯೇ = ಮಾಡಲು ಇಚ್ಛಿಸುತ್ತೇನೋ, ತಂ = ಅವನನ್ನು ರುದ್ರನನ್ನಾಗಿ, ಕೃಣೋಮಿ = ಮಾಡುತ್ತೇನೆ.

ಅಹಂ = ನಾನು, ಶರವೇ = ಹಂತಕನಾದ, ಬ್ರಹ್ಮದ್ವಿಷೇ = ಬ್ರಹ್ಮನ ಐದನೆ ತಲೆಯನ್ನು ಕಡಿದಿರುವ, ರುದ್ರಾಯ = ರುದ್ರನನ್ನು, ಹಂತುಂ ವಾ ಉ = ಕೊಲ್ಲುವುದಕ್ಕಾಗಿಯೇ, ಧನುಃ = ಧನುಸ್ಸನ್ನು , ಆತನೋಮಿ = ಹೆದೆ ಏರಿಸುತ್ತೇನೆ.

### ರುದ್ರನು ವಿಷ್ಣುವಿನ ಅಧೀನ

**ब्रह्मसूत्रभाष्यम् – 'अस्य देवस्य मीळ्हुषो वया विष्णोरेषस्य प्रभृथे हविर्भिः ।
विदे हि रुद्रो रुद्रियं महित्वं यासिष्टं वर्तिरश्विनाविरावत्'
(ऋ. ७.४०.५)**

ಅನುವಾದ - ಪ್ರಸಿದ್ಧನಾದ ಕ್ರೀಡಾದಿಗುಣಗಳಿಂದ ವಿಶಿಷ್ಟನಾದ ಭಕ್ತರಿಗೆ ಅಭೀಷ್ಟವನ್ನು ದಯಪಾಲಿಸುವ ಸತ್ಯಸಂಕಲ್ಪನಾದ ಪರಮಾತ್ಮನ ಪೂಜಾಸಾಮಗ್ರಿಗಳಿಂದ ಪೂಜೆಯನ್ನು ಮಾಡಿ ಅವನ ಪ್ರಸಾದದಿಂದ ಬಂಧಕನಾದ ನಾನು ರುದ್ರಪದವಿಯನ್ನು ಹೊಂದಿರುವೆನು. ಎಲೈ ಅಶ್ವಿನೀ ದೇತೆಗಳೇ ! ನೀವೂ ಕೂಡ ಸಮೃದ್ಧವಾದ ಪದವಿಯನ್ನು ಹೊಂದುತ್ತೀರಿ. ಹೀಗೆ ''ಅಸ್ಯದೇವಸ್ಯ'' ಎಂಬ ಶ್ರುತಿಯು ರುದ್ರನು ಪರಮಾತ್ಮನ ಅಧೀನನೆಂದು ಹೇಳುತ್ತಿದೆ.

ಪ್ರತಿಪದಾರ್ಥ -- ಅಸ್ಯ = ಪ್ರಸಿದ್ಧನಾದ, ದೇವಸ್ಯ = ಕ್ರೀಡಾದಿಗುಣವಿಷ್ಟನಾದ, ಮಿಳ್ಹುಷಃ = ಭಕ್ತರ ಅಭೀಷ್ಟವನ್ನು ದಯಪಾಲಿಸುವ, ಏಷಸ್ಯ = ಸತ್ಯಸಂಕಲ್ಪನಾದ ಪರಮಾತ್ಮನ, ಹವಿರ್ಭಿಃ = ಪೂಜಾಸಲಕರಣೆಗಳಿಂದ, ಪ್ರಭೃಥೇ = ಪೂಜೆಯನ್ನು ನೆರವೇರಿಸಿ ಅವನ ಪ್ರಸಾದದಿಂದ, ವಯಾ = ಬಂಧಕನಾದ ನಾನು, ರುದ್ರಿಯಂ ಮಹಿತ್ವಂ = ರುದ್ರಪದವಿಯನ್ನು, ವಿದೇ= ಹೊಂದಿರುವೆ, ಅಶ್ವಿನೌ = ಎಲೈ ಅಶ್ವಿನೀ ದೇವತೆಗಳೇ ! ನೀವು ಕೂಡ, ಇರಾವತ್ = ಸಮೃದ್ಧಿಯುಳ್ಳ, ವರ್ತಿಃ = ಪದವಿಯನ್ನು, ಯಾಸಿಷ್ಟಂ = ಹೊಂದುವಿರಿ.

## ಪ್ರಲಯದಲ್ಲಿದ್ದವನು ನಾರಾಯಣನೊಬ್ಬನೇ

**ब्रह्मसूत्रभाष्यम् – 'एको नारायण आसीन्न ब्रह्मा नेशानो नाग्नीषोमौ' (महोप. १) इत्यादिश्रुतेः पारतन्त्र्येणासमञ्जसत्वान्न पशुपतिरीश्वरो जगत्कर्ता ॥१॥**

ಅನುವಾದ - 'ಏಕೋ ನಾರಾಯಣ ಆಸೀತ್' ಎಂಬ ಶ್ರುತಿಯು ಸ್ಪಷ್ಟವಾಗಿ ರುದ್ರ ಬ್ರಹ್ಮ ಎಲ್ಲರೂ ನಾರಾಯಣನ ಅಧೀನರೆಂದು ತಿಳಿಸುತ್ತಿದೆ.

ಇವೇ ಮೊದಲಾದ ಶ್ರುತಿಗಳಿಂದ ಪಾರತಂತ್ರ್ಯದಿಂದ ಕೂಡಿರುವ ಪಶುಪತಿಯಾದ ಈಶ್ವರ ಎಂಬ ಹೆಸರುಳ್ಳ ರುದ್ರನು ಜಗತ್ತಿಗೆ ಕಾರಣನಾಗಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ನಾರಾಯಣಃ = ನಾರಾಯಣನು, ಏಕಃ = ಒಬ್ಬನೇ, ಆಸೀತ್ = ಪ್ರಳಯಕಾಲದಲ್ಲಿ ಇದ್ದನು, ಬ್ರಹ್ಮ = ಚತುರ್ಮುಖನು, ಈಶಾನಃ = ರುದ್ರನು, ನ = ಇರಲಿಲ್ಲ. ಇತ್ಯಾದಿನಾ = ಇವೇ ಮೊದಲಾದ ಶ್ರುತಿವಾಕ್ಯಗಳಿಂದ, ಪಾರತಂತ್ರ್ಯೇಣ = ಪಾರತಂತ್ರ್ಯವೆಂಬ ಧರ್ಮವನ್ನು ಹೊಂದಿರುವ ಪ್ರಯುಕ್ತ, ಅಸಮಂಜಸತ್ವಾತ್ = ದೋಷಿಯಾದ್ದರಿಂದ, ಪಶುಪತಿಃ = ಪಶುಪತಿಯಾದ, ಈಶ್ವರಃ = ಈಶ್ವರನೆಂದು ಕರೆಸಿಕೊಳ್ಳುವ ರುದ್ರನು, ಜಗತ್ಕರ್ತಾ = ಜಗತ್ತಿಗೆ ಕಾರಣವೆನ್ನುವುದು, ನ = ಯುಕ್ತವಾಗುವುದಿಲ್ಲ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

**सत्तर्कदीपावळिः – अधुना पशुपतेर्जगत्कर्तृत्वं श्रुतिभिः तावन्निराकरोति –'यं कामये' इत्यादिना ।**

ಪ್ರಕೃತ ರುದ್ರನಿಗೆ ಜಗತ್ಕರ್ತೃತ್ವವನ್ನು ಶ್ರುತಿಗಳಲ್ಲಿ ಹೇಳಲಾಗಿದೆ ಎಂದು ಪಾಶುಪತರು ಹೇಳುತ್ತಾರೆ. ಅವರ ಮತದ ನಿರಾಕರಣೆಗಾಗಿ 'ಯಂ ಕಾಮಯೇ' ಇತ್ಯಾದಿ ಶ್ರುತಿಯು ಹೊರಟಿದೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

ರುದ್ರನು ಸಕಲಗುಣಾಶ್ರಯನಲ್ಲ

**तत्वप्रदीपः – सकलगुणाश्रयः स्वतन्त्रः सर्वकर्ता पशूनां पाशबन्धमोक्षप्रदः पशुपतिरिति पाशुपताः । तत्पक्षं निराकरोति – पत्युरसामञ्जस्यात् । न च पशुपतेरीश्वर इति लोकसिद्धस्य रुद्रस्य सर्वेश्वरत्वं जगत्कर्तृत्वं च ।**

ರುದ್ರನು ಸಕಲಗುಣಪರಿಪೂರ್ಣನಾಗಿದ್ದಾನೆ. ಸ್ವತಂತ್ರನಾಗಿದ್ದಾನೆ, ಸರ್ವಕರ್ತೃ ಆಗಿದ್ದಾನೆ, ಎಲ್ಲಾ ಜೀವಿಗಳಿಗೆ ಬಂಧಮೋಕ್ಷಪ್ರದನಾಗಿದ್ದಾನೆ. ಹೀಗೆ ಪಾಶುಪತರು ಹೇಳುತ್ತಾರೆ. ಇವರ ಪಕ್ಷದ ನಿರಾಕರಣೆಗಾಗಿ 'ಪತ್ಯುರಸಾಮಂಜಸ್ಯಾತ್' ಎಂಬ ಸೂತ್ರ ಹೊರಟಿದೆ.

ಪಾಶುಪತರ ಮತ ಅಯುಕ್ತವಾಗಿದೆ. ಈಶ್ವರ ಎಂದು ಲೋಕಸಿದ್ಧನಾದ ರುದ್ರನಿಗೆ ಸರ್ವೇಶ್ವರತ್ವವಾಗಲೀ, ಜಗತ್ಕರ್ತೃತ್ವವಾಗಲೀ ಸರ್ವಥಾ ಕೂಡುವುದಿಲ್ಲ. ಈ ವಿಷಯದಲ್ಲಿ ಅನೇಕ ಶ್ರುತಿಗಳ ವಿರೋಧವಿದೆ.

'ಯಂ ಕಾಮಯೇ' ಎಂಬ ಶ್ರುತ್ಯರ್ಥ

**तत्वप्रदीपः – एवं हि श्रुत्यर्थः । यं यमुग्रं कामये तं तुमग्रं कृणोमि, यं यं ब्रह्माणं कामये तं तं ब्रह्माणं करोमीति । इह च तात्पर्यमधिकमवगम्यते । ''अहमेव स्वयमिदं वदामि, जुष्टं देवेभिरुत मानुषेभिः'' इत्यादरणीयत्ववर्णनात्। रुद्राय हन्तवे धनुरातनोमि, रुद्रं हन्तुमित्यर्थः । 'अहये हन्तवा' इतिवत् । 'शरुः' संहारशीलः । शॄ हिंसायामिति धातोः । उ एव ।**

ಭಾಷ್ಯದಲ್ಲಿ ಉದಾಹರಿಸಿದ ಶ್ರುತಿ ಹೀಗಿದೆ - ಯಾರನ್ನು ಉಗ್ರ(ರುದ್ರ)ನನ್ನಾಗಿ ಮಾಡಲು ಬಯಸುವೆನೋ, ಅವನನ್ನು ಉಗ್ರ(ರುದ್ರ)ನನ್ನಾಗಿ ಮಾಡುತ್ತೇನೆ. ಯಾರನ್ನು ಬ್ರಹ್ಮನನ್ನಾಗಿ ಮಾಡಲು ಇಚ್ಛಿಸುತ್ತೇನೋ, ಅವನನ್ನು ಬ್ರಹ್ಮನನ್ನಾಗಿ ಮಾಡುತ್ತೇನೆ ಎಂಬುದು ಶ್ರುತಿಯ ಅರ್ಥ. ಈ ಶ್ರುತಿಯ ಅಧಿಕ ತಾತ್ಪರ್ಯ ಹೀಗಿದೆ - 'ಅಹಮೇವ ಸ್ವಯಮಿದಂ ವದಾಮಿ, ಜುಷ್ಟಂ ದೇವಭಿರುತ ಮಾನುಷೇಭಿಃ' ಸ್ವತಃ ನಾನೇ ಇದನ್ನು ಹೇಳುತ್ತಿದ್ದೇನೆ. ಎಲ್ಲಾ ದೇವತೆಗಳಿಂದ ಹಾಗೂ ಮನುಷ್ಯರಿಂದ ನಾನು ಆರಾಧ್ಯನಾಗಿದ್ದೇನೆ ಎಂಬುದಾಗಿ ಆದರವನ್ನು ವರ್ಣಿಸಲಾಗಿದೆ. ರುದ್ರಾಯ = ರುದ್ರನನ್ನು, 'ಹಂತವೇ' = ಕೊಲ್ಲುವುದಕ್ಕಾಗಿ, ಧನುರಾತನೋಮಿ = ಹೆದೆಯೇರಿಸುತ್ತೇನೆ. 'ಅಹಯೇ ಹಂತವಾ' ಎಂಬ ಪ್ರಯೋಗದಂತೆ ಹಂತವಾ ಎಂಬುದಕ್ಕೆ ಕೊಲ್ಲುವುದಕ್ಕಾಗಿ ಎಂದರ್ಥ. 'ಶರುಃ' = ಸಂಹಾರಶೀಲನಾದವನು. 'ಶೃ ಹಿಂಸಾಯಾಮ್' ಎಂಬ ಧಾತುವಿನಿಂದ ಇದು ನಿಷ್ಪನ್ನವಾಗಿದೆ. 'ಉ' ಎಂದರೆ 'ಏವ' ಎಂದರ್ಥ.

ವಿವರಣೆ - 'ಯಂ ಕಾಮಯೇ' ಎಂಬ ಮಂತ್ರದ ಅರ್ಥ ಹೀಗಿದೆ - ಇದು ಋಗ್ವೇದದ ಅಂಭ್ರಣೀ ಸೂಕ್ತದಲ್ಲಿದೆ. ಸ್ವತಃ ಲಕ್ಷ್ಮೀದೇವಿಯೇ ಈ ಮಾತನ್ನು ಹೇಳುತ್ತಾಳೆ. 'ನಾನು ಯಾರನ್ನು ಬಯಸುವೆನೋ, ಅವನನ್ನು ರುದ್ರನನ್ನಾಗಿ ಮಾಡುತ್ತೇನೆ, ಬ್ರಹ್ಮನನ್ನಾಗಿ ಮಾಡುತ್ತೇನೆ, ಋಷಿಯನ್ನಾಗಿ ಮಾಡುತ್ತೇನೆ, ಮೇಧಾವಿಯನ್ನಾಗಿ ಮಾಡುತ್ತೇನೆ' ಎಂದು.

ಇದೇ ಅಂಭ್ರಣಿ ಸೂಕ್ತದ ಮುಂದಿನ ಮಂತ್ರ 'ಅಹಂ ರುದ್ರಾಯ' ಎಂಬುದು. ಶರವೇ = ಹಿಂಸಕನಾದ, ಬ್ರಹ್ಮದ್ವಿಷೇ = ಚತುರ್ಮುಖನ ಐದನೆಯ ತಲೆಯನ್ನು ತುಂಡರಿಸಿರುವುದರಿಂದ ಬ್ರಹ್ಮದ್ವಿಟ್ ಎನಿಸಿದ, ರುದ್ರಾಯ = ರುದ್ರನನ್ನು, ಹಂತ ವಾ ಉ = ಕೊಲ್ಲುವುದಕ್ಕಾಗಿಯೇ, ಧನುಃ = ಧನುಸ್ಸನ್ನು, ಆತನೋಮಿ = ಹೆದೆಯೇರಿಸುತ್ತೇನೆ.

'ಅಸ್ಯ ದೇವಸ್ಯ' ಎಂಬ ಶ್ರುತ್ಯರ್ಥ

**तत्वप्रदीपः – अस्य विष्णोरेषस्य मीळ्हुषो देवस्य हविर्भिर्मनसि प्रभरणे हि वयाः सन् रुद्रो रुद्रियं महित्वं विदे । हे अश्विनौ युवामप्यन्नवर्ती वृत्तिं हविर्भिः प्रभरणे च विष्णोः सकाशादेव यासिष्टम् । 'मीढ्वान्' समर्थः । वया बन्धकः । वय बन्धन इति धातोः । विदे लेभे विद लाभ इति धातोः । हविर्भिः प्रभरणे । कर्मणा ध्यानेन । 'प्रभृतं' प्रभरणम् । इत्थं पारतन्त्र्यादयोगो रुद्रस्य सृष्टौ ।**

ಅಸ್ಯ = ಈ, ಏಷಸ್ಯ = ಇಚ್ಛಾರೂಪನಾದ, ವಿಷ್ಣೋಃ = ವಿಷ್ಣುವಿನ, ಮೀಳ್ಹುಷಃ = ಭಕ್ತಾಭೀಷ್ಟಪ್ರದನಾದ, ದೇವಸ್ಯ = ಕ್ರೀಡಾದಿಗುಣ ವಿಶಿಷ್ಟನಾದ, ಹವಿರ್ಭಿಃ = ಪೂಜಾಸಾಮಗ್ರಿಗಳಿಂದ, ಪ್ರಭೃತೇ = ಮನಸ್ಸಿನಲ್ಲಿ ಪೂಜೆಯನ್ನು ಮಾಡಿ, ವಿಷ್ಣುವಿಗೆ ಅವನ ಪ್ರಸಾದದಿಂದ, ವಯಾಃ = ಬಂಧಕನಾದ ರುದ್ರನಾದ ನಾನು, ರುದ್ರಿಯಂ ಮಹಿತ್ವಂ = ರುದ್ರಪದವಿಯನ್ನು, ವಿದೇ = ಹೊಂದಿರುವೆನು. ಹೇ ಅಶ್ವಿನೌ = ಓ ಅಶ್ವಿನಿದೇವತೆಗಳೇ ! ನೀವೂ ಕೂಡ, ಇರಾವತ್ = ಹೊಸದಾದ ಮತ್ತು ಸಮೃದ್ಧವಾದ, ವರ್ತಿಃ = ಸ್ಥಾನವನ್ನು ಹಾಗೂ ವೃತ್ತಿಯನ್ನು, ಹವಿರ್ಭಿಃ = ಪೂಜಾಸಾಮಗ್ರಿಗಳಿಂದ ಅವನ ಪೂಜೆಯನ್ನು ಮಾಡಿ, ವಿಷ್ಣುವಿನ ಪ್ರಸಾದದಿಂದ, ಯಾಸಿಷ್ಟಂ = ಹೊಂದುವಿರಿ. ಈ ವಿಷಯದಲ್ಲಿ ನೀವು ಸಮರ್ಥರಾಗುವಿರಿ. ಮೀಢ್ವಾನ್ = ಸಮರ್ಥನಾದವನು, ವಯಾ = ಬಂಧಕನಾದವನು. 'ವಯ ಬಂಧನೇ' ಎಂಬ ಧಾತುವಿನಿಂದ ಇದು ನಿಷ್ಪನ್ನವಾಗಿದೆ. ವಿದೇ = ಪಡೆದನು. 'ವಿದ ಲಾಭೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಪ್ರಭೃಥೇ ಹವಿರ್ಭಿಃ = ಕರ್ಮರೂಪವಾದ ಧ್ಯಾನವೆಂಬ ಹವಿಸ್ಸುಗಳಿಂದ ಸಂತೋಷ ಪಡಿಸಿರುತ್ತಾನೆ ಎಂದರ್ಥ. 'ಪ್ರಭೃತೇ' ಎಂದರೆ 'ಪ್ರಭರಣ' ಎಂದರ್ಥ. ಹೀಗೆ ರುದ್ರನಲ್ಲಿ ಪಾರತಂತ್ರ್ಯವಿರುವುದರಿಂದ ಜಗತ್ತಿನ ಸೃಷ್ಟಿಕರ್ತೃತ್ವವು ರುದ್ರನಿಗೆ ಯುಕ್ತವಾಗುವುದಿಲ್ಲ.

ವಿವರಣೆ - 'ಮೀಳ್ಹುಷೇ' ಎಂಬ ಪದದ ಪ್ರಥಮಾವಿಭಕ್ತಿಯ ಏಕವಚನವನ್ನು ಪಂಡಿತಾಚಾರ್ಯರು 'ಮೀಢ್ವಾನ್' ಎಂದು ಪ್ರಯೋಗ ಮಾಡಿ, 'ಸಮರ್ಥನಾದವನು' ಎಂಬರ್ಥವನ್ನು ಬರೆದಿದ್ದಾರೆ. 'ಮೀಳ್ಹುಷಃ' ಎಂಬ ಪದಕ್ಕೆ 'ಭಕ್ತಾಭೀಷ್ಟಪ್ರದನಾದವನು'

ಎಂಬುದು ಪ್ರಸಿದ್ಧವಾದ ಅರ್ಥ. ಆದರೆ ಇಲ್ಲಿ ಪಂಡಿತಾಚಾರ್ಯರು 'ಸಮರ್ಥನಾದವನು' ಎಂಬ ಬೇರೆ ಅರ್ಥವನ್ನೇ ತಿಳಿಸಿದ್ದಾರೆ. ವಯಾ = ಎಂಬ ಪದಕ್ಕೆ 'ವಯ ಬಂಧನೇ' ಎಂಬ ಧಾತುವಿನಿಂದ ನಿಷ್ಪತ್ತಿಯನ್ನು ತೋರಿಸಿ, 'ಬಂಧಕನಾದವನು' ಎಂಬರ್ಥವನ್ನು ತಿಳಿಸಿದ್ದಾರೆ. 'ಪ್ರಭೃತೇ ಹವಿರ್ಭಿಃ' ಎಂಬುದಕ್ಕೆ ರುದ್ರದೇವರು ತಮ್ಮ ಕರ್ಮರೂಪವಾದ ಧ್ಯಾನಯೋಗದಿಂದ ಪರಮಾತ್ಮನನ್ನು ಸಂತೋಷಗೊಳಿಸಿದರು ಎಂಬುದಾಗಿ ವಿವಕ್ಷಿಸ-ಬೇಕೆಂದು ತಿಳಿಸಿದ್ದಾರೆ. ಪ್ರಭೃಥೇ ಎಂಬುದಾಗಿ ಮಹಾಪ್ರಾಣ ಥಕಾರವಿದೆ. 'ಪ್ರಭೃತಂ ಪ್ರಭರಣಂ' ಎಂಬರ್ಥವನ್ನು ತಿಳಿಸುವ ಮೂಲಕ ಅತಿಶಯಾರ್ಥದಲ್ಲಿ ಮಹಾಪ್ರಾಣ ಥಕಾರವು ಉಲ್ಲಿಖಿತವಾಗಿದೆ ಎಂದು ತಿಳಿಸಲಾಗಿದೆ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

ವೈಧಿಕಾಭಾಸರ ನಿರಾಕರಣೆ

**तत्वप्रकाशिका –**

**अधिकरणार्थं दर्शयति ।। पाशुपतेति ।। अवैदिकपाषण्डिसमय-निरासानन्तरं वैदिकाभासा निरसनीयाः । ते च पाशुपतशाक्तेयसौरस्कान्द-गाणपताः । तेषु पाशुपतस्यैव प्राबल्यात् तन्मतमादौ दूष्यत इति भावः ।**

ಅಧಿಕರಣದ ಪ್ರಮೇಯವನ್ನು 'ಪಾಶುಪತ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಅವೈದಿಕವಾದ ಪಾಷಂಡಿಗಳ ಸಮಯವನ್ನು ನಿರಾಕರಣೆ ಮಾಡಿದ ಅನಂತರ ವೈದಿಕಾಭಾಸರನ್ನು ನಿರಾಕರಣೆ ಮಾಡಬೇಕು. ಶಾಕ್ತೇಯರು, ಸೌರರು, ಸ್ಕಾಂದರು, ಗಾಣಪತರು ಎಂದು ಪಾಶುಪತರು ನಾಕುವಿಧ. ಇವರುಗಳು ವೈಧಿಕಾಭಾಸರು. ಇವರ ಮಧ್ಯದಲ್ಲಿ ಪಾಶುಪತಮತವು ಅತ್ಯಂತ ಪ್ರಬಲವಾಗಿದೆ. ಆದ್ದರಿಂದ ಪ್ರಾರಂಭದಲ್ಲಿ ಪಾಶುಪತಮತವನ್ನು ನಿರಾಕರಣೆ ಮಾಡುತ್ತಿದ್ದಾರೆಂದು ತಿಳಿಯಬೇಕು. ಪಾಶುಪತಮತವಿರೋಧ ಪರಿಹಾರ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

### ಗಾಣಪತ್ಯ ಎಂಬ ಶಬ್ದವು ಸಾಧುವಲ್ಲ

**भावदीपः – ।।पत्युरसामञ्जस्यात् ।।३७।।** सङ्गतिमाह – **अवैदिकेति ।।** अत्र गाणपतेति पाठः साधुः। गणपतिशब्दस्य पत्युत्तरपदत्वेऽपि 'दित्यादित्यपत्युत्तरपदाण्ण्यः' इति न भवति। अश्वपत्यादिभ्यश्चेति अण्प्रत्ययेनैव भाव्यत्वात्। चतुर्थाद्यपादे अश्वपत्यादिभ्यश्चेति सूत्रे मञ्जर्यां गाणपत्य इत्यपशब्द इत्युक्तत्वाच्च ।। **आदाविति ।।** अन्यमतोपलक्षणत्वेन मुखतो दूष्यत इत्यर्थः। यद्वा शक्तिमतापेक्षया आदावित्युक्तिः।

ಪತ್ಯುರಧಿಕರಣಕ್ಕೆ ಸಂಗತಿಯನ್ನು ತೋರಿಸುವುದಕ್ಕಾಗಿ 'ಅವೈದಿಕ' ಇತ್ಯಾದಿ ಮಾತು ಹೊರಟಿದೆ. 'ಗಾಣಪತ' ಎಂಬ ಪಾಠವೇ ಸಾಧುವಾಗಿದೆ. 'ಗಾಣಪತ್ಯ' ಎಂಬ ಪಾಠವು ಸಾಧುವಲ್ಲ. ಗಣಪತಿ ಶಬ್ದವು ಪತಿ ಎಂಬ ಉತ್ತರಪದವುಳ್ಳದ್ದಾಗಿದೆ. ಆದರೂ ಕೂಡ 'ದಿತ್ಯಾದಿತ್ಯಪತ್ಯುತ್ತರಪದಾಣ್ಣ್ಯಃ' ಎಂಬ ಸೂತ್ರದಿಂದ ಣ್ಯ ಎಂಬ ಪ್ರತ್ಯಯವು ಇಲ್ಲ. 'ಅಶ್ವಪತ್ಯಾದಿಭ್ಯಶ್ಚ' ಎಂಬ ಸೂತ್ರದ ಪ್ರಕಾರ ಅಣ್ ಎಂಬ ಪ್ರತ್ಯಯವು ಬರುತ್ತದೆ. ನಾಕನೆಯ ಅಧ್ಯಾಯದ ಪ್ರಥಮಪಾದದಲ್ಲಿ 'ಅಶ್ವಪತ್ಯಾದಿಭ್ಯಶ್ಚ' ಎಂಬ ಸೂತ್ರವಿದೆ. ಇದಕ್ಕೆ ವ್ಯಾಖ್ಯಾನ ಮಾಡುವ ಮಂಜರಿಯಲ್ಲಿ 'ಗಾಣಪತ್ಯ ಇತ್ಯಪಶಬ್ದಃ' ಗಾಣಪತ್ಯ ಶಬ್ದವು ಅಪಶಬ್ದವಾಗಿದೆ ಎಂದು ಹೇಳಲಾಗಿದೆ. ಆದ್ದರಿಂದ 'ಗಾಣಪತಃ' ಎಂದು ಟೀಕೆಯಲ್ಲಿ ಸರಿಯಾದ ಪಾಠವನ್ನು ತಿಳಿಯಬೇಕು. 'ಆದೌ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಬೇರೆ ಮತಗಳನ್ನು ಇಲ್ಲಿ ದೂಷಣೆ ಮಾಡಿಯೇ ಇಲ್ಲ. ಆದ್ದರಿಂದ ಬೇರೆ ಮತಗಳನ್ನು ಉಪಲಕ್ಷಣವಾಗಿ ಭಾವಿಸಿ ಈ ಅಧಿಕರಣದಲ್ಲಿ ಪಾಶುಪತಮತವನ್ನು ಮುಖತಃ ದೂಷಿಸಲಾಗಿದೆ ಎಂದು ತಿಳಿಯಬೇಕು. ಅಥವಾ ಶಕ್ತಿಮತಕ್ಕಿಂತಲೂ ಮೊದಲು ಪಾಶುಪತಮತವನ್ನು ನಿರಾಕರಿಸಿದ್ದಾರೆ ಎಂದು ತಿಳಿಯಬೇಕು.

ಅಧಿಕರಣ ಸಂಗತಿ

**तत्वप्रकाशिका – अत्र हरेर्जगत्कर्तृत्वे पाशुपतमतविरोधपरिहारादस्ति शास्त्रादिसङ्गतिः । विष्णुवाशेषजगन्कर्तेत्युक्तम् । तस्य पाशुपतमतविरोधेऽदाढ्यं स्यादिति तन्निराकर्तव्यमेव ।**

**तद्विष्णोर्जगत्कारणत्वं विषयः । युक्तमयुक्तं वेति सन्देहः । समयविप्रतिपत्तिः सन्देहबीजम् ।**

ಶ್ರೀಹರಿಯ ಜಗತ್ಕರ್ತೃತ್ವವಿಷಯದಲ್ಲಿ ಪಾಶುಪತಮತವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ವಿಷ್ಣುವೇ ಸಮಸ್ತ ಜಗತ್ತಿಗೆ ಕಾರಣಕರ್ತನಾಗಿದ್ದಾನೆಂದು ಹೇಳಲಾಯಿತು. ಇದಕ್ಕೆ ಪಾಶುಪತಮತದ ವಿರೋಧವು ಬಂದರೆ ಈ ಲಕ್ಷಣದಲ್ಲಿ ದಾರ್ಢ್ಯವು ಬರುವುದಿಲ್ಲ. ಆದ್ದರಿಂದ ಪಾಶುಪತಮತವನ್ನು ನಿರಾಕರಣೆ ಮಾಡಲೇ ಬೇಕು.

ವಿಷ್ಣುವಿನ ಜಗತ್ಕಾರಣತ್ವವು ಅಧಿಕರಣದ ವಿಷಯ. ಇದು ಯುಕ್ತವೋ ಅಯುಕ್ತವೋ? ಎಂಬುದು ಸಂದೇಹ. ಸಮಯಗಳಲ್ಲಿರುವ ವಿವಾದವು ಸಂದೇಹಬೀಜ.

ರುದ್ರನೇ ಸಮಸ್ತ ಜಗತ್ತನ್ನು ನಿರ್ಮಾಣ ಮಾಡುತ್ತಾನೆ

**तत्वप्रकाशिका – न युक्तमिति पूर्वः पक्षः । पशुपतिः खलु सार्वज्ञादिगुणशाली मायामुपादानीकृत्य हरिहिरण्यगर्भादिजगदुत्पत्त्यादि करोति । तथा श्रुतिस्मृतयोऽस्मिन्नर्थे भवन्ति । तथा च का वार्ता हरेर्जगत्कारणत्वस्यातो न लक्षणसूत्रं युक्तमिति प्राप्ते सिद्धान्तयत्सूत्रमुन्यस्य व्याचष्टे ।। पत्युरिति ।।**

ವಿಷ್ಣುವಿನ ಜಗತ್ಕಾರಣತ್ವವು ಅಯುಕ್ತವಾಗಿದೆ ಎಂಬುದು ಪೂರ್ವಪಕ್ಷ. ಪಶುಪತಿಯು ಸಾರ್ವಜ್ಞ್ಯ ಮೊದಲಾದ ಗುಣಶಾಲಿಯಾಗಿದ್ದಾನೆ. ಇವನು ಮಾಯೆಯನ್ನು ಉಪಾದಾನ-

ಕಾರಣವನ್ನಾಗಿ ಮಾಡಿಕೊಂಡು ವಿಷ್ಣು ಚತುರ್ಮುಖಬ್ರಹ್ಮ ಮೊದಲಾದವರಿಂದ ಕೂಡಿದ ಸಮಸ್ತ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಈ ವಿಷಯದಲ್ಲಿ ಶ್ರುತಿಸ್ಮೃತಿಗಳು ಆಧಾರವಾಗಿವೆ. ಆದ್ದರಿಂದ ಶ್ರೀಹರಿಯ ಜಗತ್ಕಾರಣತ್ವದಿಂದ ಏನು ಉಪಯೋಗ? ಹಾಗಾಗಿ ಲಕ್ಷಣಸೂತ್ರದಲ್ಲಿ ಹೇಳಲ್ಪಟ್ಟ ವಿಷ್ಣುವಿನ ಜಗತ್ಕಾರಣತ್ವವು ಅಯುಕ್ತವಾಗಿದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ಪತ್ಯುಃ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – 'सर्वज्ञत्वादिकैः सर्वैर्गुणैर्युक्तं सदाशिवम्' इत्यनुभाष्यदिशाऽऽह – **पशुपतिरित्यादि** ।। स्रष्टृत्वादिघटनायोक्तम्।। **सार्वज्ञादीति** ।।करणवच्चेदित्ये- तदुपयोगायाह – **मायामिति ।। तथा श्रुतिस्मृतय इति** ।। सर्वासां पाशुपतोक्तदिशा तत्परत्वादिति भावः ।।

ಸರ್ವಜ್ಞತ್ವಾದಿಕೈಃ ಸರ್ವೈರ್ಗುಣೈರ್ಯುಕ್ತಂ ಸದಾಶಿವಮ್

ಸರ್ವಜ್ಞತ್ವ ಮೊದಲಾದ ಸಕಲ ಗುಣಗಳಿಂದ ಸದಾಶಿವನು ಪರಿಪೂರ್ಣನಾಗಿದ್ದಾನೆ ಎಂದು ಅನುವ್ಯಾಖ್ಯಾನದಲ್ಲಿ ಪೂರ್ವಪಕ್ಷವನ್ನು ಉಪಸ್ಥಾಪನೆ ಮಾಡಿದ್ದಾರೆ. ಅದಕ್ಕನುಗುಣವಾಗಿ ಪ್ರಕೃತ ಟೀಕೆಯಲ್ಲಿ 'ಪಶುಪತಿಃ ಖಲು' ಎಂಬುದಾಗಿ ಪೂರ್ವಪಕ್ಷವನ್ನು ಸಮರ್ಥಿಸುತ್ತಿದ್ದಾರೆ. ಪಶುಪತಿಯಲ್ಲಿ ಜಗತ್‌ಸ್ರಷ್ಟೃತ್ವವನ್ನು ಉಪಪಾದನೆ ಮಾಡಲು ಈ ಸರ್ವಜ್ಞತ್ವಾದಿ ಗುಣಗಳನ್ನು 'ಸಾರ್ವಜ್ಞಾದಿ ಗುಣಶಾಲಿ' ಎಂದು ಹೇಳಿದ್ದಾರೆ. 'ಕರಣವಚ್ಚೇತ್' ಎಂಬ ಸೂತ್ರಕ್ಕೆ ಉಪಯೋಗವಾಗುವಂತೆ 'ಮಾಯಾಮುಪಾದಾನೀಕೃತ್ಯ' ಎಂದು ಹೇಳಿದ್ದಾರೆ. 'ತಥಾ ಶ್ರುತಿಸ್ಮೃತಯಃ' ಎಂದರೆ ಸಕಲ ಶ್ರುತಿಸ್ಮೃತಿಗಳು ಪಾಶುಪತಶಾಸ್ತ್ರಕ್ಕೆ ಅನುಗುಣವಾದ ವಿಷಯವನ್ನೇ ಹೇಳುತ್ತಿದೆ ಎಂದರ್ಥ.

ರುದ್ರನು ಪಾರತಂತ್ರ್ಯಾದಿ ದೋಷವುಳ್ಳವನು

**तत्वप्रकाशिका – न पत्युरज्ञजनप्रसिद्धेश्वरस्य पशुपतेर्जगत्कारणत्वं युक्तम्। पारतन्त्र्यजननमरणादिदोषित्वेन श्रुतत्वात् । न हि सकलकारणस्य दोषित्वं युक्तमिति भावः ।**

ಲೋಕದಲ್ಲಿ ಅಜ್ಞಾನಿಗಳಿಗೆ ಮಾತ್ರ ಈಶ್ವರನ ಜಗತ್ಕಾರಣತ್ವವು ಪ್ರಸಿದ್ಧವಾಗಿದೆ. ಆದರೆ ಇದು ಯುಕ್ತವಲ್ಲ. ಪಾರತಂತ್ರ್ಯ, ಜನನ, ಮರಣ ಇವೇ ಮೊದಲಾದ ದೋಷಗಳುಳ್ಳವನು ಪಶುಪತಿಯಾಗಿದ್ದಾನೆಂದು ಶ್ರುತಿಗಳು ಸ್ಮೃತಿಗಳು ಹೇಳುತ್ತಿವೆ. ಸಕಲ ಜಗತ್ತಿಗೆ ಕಾರಣನಾದವನು ದೋಷಿಯಾಗುವುದು ಯುಕ್ತವಾಗುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

**भावदीपः** – पूर्वसूत्रान्नञनुवृत्तिं मत्वा सूत्रभाष्ययोः प्रतिज्ञाहेत्वंशौ व्यनक्ति – **न पत्युरिति ।।** व्याहतिनिरासायाह – **अज्ञजनेति ।।**

ಪೂರ್ವಸೂತ್ರದಲ್ಲಿ ನಞ್ ಎಂಬುದನ್ನು ಈ ಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಈ ಅಭಿಪ್ರಾಯದಿಂದ ಸೂತ್ರ ಹಾಗೂ ಭಾಷ್ಯಗಳಲ್ಲಿ ಪ್ರತಿಜ್ಞಾಭಾಗ ಹಾಗೂ ಹೇತುಭಾಗಗಳನ್ನು ವ್ಯಾಖ್ಯಾನ ಮಾಡಲು 'ನ ಪತ್ಯುಃ' ಇತ್ಯಾದಿ ಗ್ರಂಥವು ಹೊರಟಿದೆ. ವ್ಯಾಹತಿಯ ಪರಿಹಾರಕ್ಕಾಗಿ 'ಅಜ್ಞಜನ ಪ್ರಸಿದ್ಧೇಃ' ಎಂದು ಹೇಳಿದ್ದಾರೆ.

### ಅಂಭೃಣೀ ಸೂಕ್ತದ ಅರ್ಥ

**तत्वप्रकाशिका – ब्रह्मद्विषे चतुर्मुखस्य पञ्चममुखच्छेत्रे । शरवे हिंसनशीलाय। हन्तवे हन्तुमेव न तु भीषणाद्यर्थमिति भावः ।**

ಬ್ರಹ್ಮದ್ವಿಷೇ - ಚತುರ್ಮುಖಬ್ರಹ್ಮನ ಐದನೆಯ ಮುಖವನ್ನು ತುಂಡುಮಾಡಿದ, ಶರವೇ - ಹಿಂಸಾಸ್ವಭಾವವುಳ್ಳ, ಹಂತವೇ - ಕೊಲ್ಲುವುದಕ್ಕಾಗಿಯೇ, ಹೊರತು ಹೆದರಿಸುವುದಕ್ಕಾಗಿ ಅಲ್ಲ ಎಂಬುದು ಶ್ರುತಿಯ ಅಭಿಪ್ರಾಯ.

**भावदीपः** – श्रौतपदानि व्याचष्टे।। **ब्रह्मद्विष इति ।।** सुधायां तु व्यत्ययमाश्रित्य ब्रह्मद्विषां शरवे हिंसकायेति व्याख्यातम्। दक्षप्रजापतिद्विष इति वेति चन्द्रिका।। **हिंसनेति ।।** शॄहिंसायामिति धातोः।। **हन्तुमेवेति ।।** 'तुमर्थे सेसेनसेऽसेन्क्सेकसेनध्यै-अध्यैन् कध्यैकध्यैन् शध्यैशध्यैन्तवैतवेङ्तवेन' इति तवैप्रत्ययः।

ಶ್ರುತಿಯಲ್ಲಿರುವ ಪದಗಳನ್ನು 'ಬ್ರಹ್ಮದ್ವಿಷೇ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಸುಧಾಗ್ರಂಥದಲ್ಲಿ ಶ್ರೌತಪದಗಳನ್ನು ವ್ಯತ್ಯಾಸ ಮಾಡಿಕೊಂಡು 'ಬ್ರಹ್ಮದ್ವಿಷಾಂ ಶರವೇ ಹಿಂಸಕಾಯ' ಎಂದು ವ್ಯಾಖ್ಯಾನ ಮಾಡಿದ್ದಾರೆ. ದಕ್ಷಪ್ರಜಾಪತಿಯನ್ನು ದ್ವೇಷ ಮಾಡುವ ಎಂಬರ್ಥವನ್ನು ತಾತ್ಪರ್ಯಚಂದ್ರಿಕೆಯಲ್ಲಿ ಹೇಳಿದ್ದಾರೆ. 'ಶರವೇ' ಎಂಬ ಪದಕ್ಕೆ ಹಿಂಸೆ ಮಾಡುವ ಸ್ವಭಾವವುಳ್ಳ ಎಂದರ್ಥ. 'ಶೃಹಿಂಸಾಯಾಮ್' ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ ಕಾರಣ ಈ ಅರ್ಥವು ದೊರೆಯುತ್ತದೆ. 'ಹಂತುಮೇವ' ಎಂಬಲ್ಲಿ 'ತವೇ' ಎಂಬ ಪ್ರತ್ಯಯವು 'ತುಮರ್ಥೇ ಸೇಸೇನಸೇಽಸೇನ್ ಸೇಕಸೇನಧ್ಯೈ ಅಧ್ಯೈನ್ ಕಧ್ಯೈಕಧ್ಯೈನ್ ಶಧ್ಯೈಶಧ್ಯೈಂತವೈತವೇಂತವೇನ' ಎಂಬ ಸೂತ್ರದಿಂದ ಪ್ರಾಪ್ತವಾಗಿದೆ.

'ಅಸ್ಯ ದೇವಸ್ಯ' ಎಂಬ ಶ್ರುತ್ಯರ್ಥ

**तत्वप्रकाशिका – अस्य आ समन्तादीशस्याभीष्टसेचकस्य विष्णोर्देवस्य हविर्भिः प्रभरणे कृते सत्यहङ्कररूपेण बन्धको रुद्रो रौद्रं महिमानं यथा लेभे तथा युवामपि विष्णुपूजयैवान्नवद्धर्तनं प्राप्तवन्तौ स्थ इत्यर्थः ।।**

ಅಸ್ಯ - ಈ, ಏಷಸ್ಯ - ಎಲ್ಲಾ ರೀತಿಯಿಂದ ಸಮರ್ಥನಾದ, ಮೀಳ್ಹುಷಃ - ಅಭೀಷ್ಟವನ್ನು ನೀಡುವ ದೇವಸ್ಯ - ದೇವನಾದ ವಿಷ್ಣುವಿಗೆ, ಹವಿರ್ಭಿಃ - ಚರು ಮೊದಲಾದ ಹವಿಸ್ಸುಗಳಿಂದ, ಪ್ರಭೃಥೇ - ಚೆನ್ನಾಗಿ ಅರ್ಪಿಸಿ ಭರಣೆ ಮಾಡಿದಾಗಲೂ , ವಯಃ - ಅಹಂಕಾರಸ್ವರೂಪನಾದ್ದರಿಂದ ಬಂಧಕನೆನಿಸಿದ, ರುದ್ರಃ - ರುದ್ರನು, ರುದ್ರಿಯಂ - ರುದ್ರಪದವಿಯನ್ನು ಹಾಗೂ ಸಂಹಾರ ಮೊದಲಾದ ಮಹಿಮೆಗಳನ್ನು ವಿದೇ - ಹೇಗೆ ಪಡೆದನೋ, ತಥಾ - ಹಾಗೆ, ಹೇ ಅಶ್ವಿನೌ - ಎಲೈ ಅಶ್ವಿನಿದೇವತೆಗಳೇ? ನೀವೂ ಕೂಡ ವಿಷ್ಣುವನ್ನು ವಿಶೇಷವಾಗಿ ಸಂತೋಷಪಡಿಸಿ ಇರಾವತ್ - ಅನ್ನಾದಿ ಪದಾರ್ಥಗಳಂತೆ, ವರ್ತಿಃ = ಸ್ಥಾನವನ್ನು, ಯಾಸಿಷ್ಟಮ್ - ಹೊಂದುವವರಾಗಿರಿ.

**भावदीपः –** एषशब्दस्य आईश इति विग्रहः। शकारस्य व्यत्ययेन षकार इति भावेनाह – **आसमन्तादीशस्येति ।।** इच्छारूपस्येति सुधायां व्याख्यानम्। मीळ्हुषोऽभीष्टसेचकस्य। मिह सेचने। प्रभृथे प्रभरणे।। **बन्धक इति ।।** वयबन्धन इति

धातोः। विदे लेभे विदिर्लाभे। इरावत् अन्नवत्। यासिष्टं अयासिष्टम्। छन्दस्यमाङ्योगेपीत्यडभावः। लुङ्मध्यमपुरुषद्विवचनम्। प्राप्तवन्तौ स्थ इति॥ ३७ ॥

'ಏಷ' ಎಂಬ ಶಬ್ದಕ್ಕೆ ಆಈಶೇ ಎಂಬುದಾಗಿ ವಿಗ್ರಹವನ್ನು ಮಾಡಬೇಕು. ತಲವ್ಯ ಶಕಾರವು ವ್ಯತ್ಯಾಸವಾಗಿ ಊರ್ಧನ್ಯ ಶಕಾರಭಾವವನ್ನು ಹೊಂದಿದೆ. ಈ ಅಭಿಪ್ರಾಯದಿಂದ 'ಆಸಮಂತಾತ್ ಈಶಸ್ಯ' ಎಂದು ಹೇಳಿದ್ದಾರೆ. ಇಚ್ಛಾರೂಪವಾಗಿ ಎಂಬರ್ಥವನ್ನು ಸುಧೆಯಲ್ಲಿ ಹೇಳಿದ್ದಾರೆ. 'ಮೀಳ್ಹುಷಃ' ಎಂಬ ಪದಕ್ಕೆ ಅಭೀಷ್ಟವನ್ನು ನೀಡುವ ಎಂದರ್ಥ. 'ಮಿಹ ಸೇಚನೇ' ಎಂಬ ಧಾತುವಿನಿಂದ ಇದು ನಿಷ್ಪನ್ನವಾಗಿದೆ. 'ಪ್ರಭೃಥೇ' ಎಂಬ ಪದಕ್ಕೆ ಭರಣೇ ಮಾಡಿದಾಗ ಎಂದರ್ಥ. 'ವಯಃ' ಎಂಬ ಪದಕ್ಕೆ ಬಂಧಕನಾದವನು ಎಂದರ್ಥ. 'ವಯಬಂಧನೇ' ಎಂಬ ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. 'ವಿದೇ' ಎಂಬ ಪದಕ್ಕೆ 'ಲೇಭೇ' ಎಂದರ್ಥ. 'ವಿದಿರ್ಲಾಭೇ'ಎಂಬ ಧಾತುವಿನಿಂದ ಇದು ನಿಷ್ಪನ್ನವಾಗಿದೆ. 'ಇರಾವತ್ ಎಂಬ ಪದಕ್ಕೆ ಅನ್ನ ಮೊದಲಾದ ಪದಾರ್ಥಗಳಂತೆ ಎಂದರ್ಥ. 'ಯಾಸಿಷ್ಠಂ' ಎಂಬ ಪದಕ್ಕೆ ಹೊಂದಿದವರಾಗಿರುವಿರಿ ಎಂದರ್ಥ. ಛಂದಸ್ಸಿನಲ್ಲಿ ಆಮಾಜ್ ಯೋಗವಿದ್ದಾಗಲೂ ಅಟ್ ಪ್ರಾಪ್ತವಾಗುವುದಿಲ್ಲ, ಲುಜ್‌ಲಕಾರದ ಮಧ್ಯಮ ಪುರುಷದ ದ್ವಿವಚನ ರೂಪವಾಗಿದೆ. ಇದರರ್ಥವನ್ನು 'ಪ್ರಾಪ್ತವಂತೌ ಸ್ಥಃ' ಎಂದು ಹೇಳಿದ್ದಾರೆ.

## ಭಾವದೀಪದ ವೈಶಿಷ್ಟ್ಯ

* 'ಗಾಣಪತ್ಯ' ಎಂಬ ಪಾಠವು ಅಸಾಧು. 'ಗಾಣಪತ' ಎಂಬ ಪಾಠವು ಸಾಧು ಎಂಬುದಾಗಿ ಪಾಠಶೋಧನೆ ಮಾಡಿದ್ದಾರೆ.
* 'ಬ್ರಹ್ಮದ್ವಿಷೇ' ಎಂಬ ಶ್ರುತಿಯಲ್ಲಿರುವ ಪದಕ್ಕೆ ಅರ್ಥವನ್ನು ಮಾಡುವಾಗ ಬ್ರಹ್ಮ ಎಂಬ ಪದಕ್ಕೆ ದಕ್ಷಪ್ರಜಾಪತಿ ಎಂಬರ್ಥವನ್ನು ಚಂದ್ರಿಕೆಯ ಆಧಾರದಲ್ಲಿ ತೋರಿಸಿದ್ದಾರೆ.
* 'ಶರವೇ' ಎಂಬ ಪದಕ್ಕೆ ದ್ವೇಷ ಮಾಡುವನು, ಅಥವಾ ಹಿಂಸೆ ಮಾಡುವನು ಎಂಬರ್ಥವು ಹೇಗೆ ದೊರೆಯುತ್ತದೆ ಎಂಬುದನ್ನು ನಿಷ್ಪತ್ತಿ ಮಾಡಿ ತೋರಿಸಿದ್ದಾರೆ. 'ಏಷ' ಎಂಬ ಪದಕ್ಕೆ ಅಪೂರ್ವವಾದ ಅರ್ಥವನ್ನು ತಿಳಿಸಿದ್ದಾರೆ.
* 'ಯಾಸಿಷ್ಟಂ' ಎಂಬಲ್ಲಿ ಅಡಾಗಮವು ಏಕೆ ಬಂದಿಲ್ಲ ? ಎಂಬುದನ್ನು ತಿಳಿಸಿದ್ದಾರೆ.

## ಬ್ರಹ್ಮಸೂತ್ರ

### 'ಸಂಬಂಧಾನುಪಪತ್ತೇಶ್ಚ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – सम्बन्धानुपपत्तेश्च ।।**

ರುದ್ರನಿಗೆ ಶರೀರವಿಲ್ಲದ ಕಾರಣ ಕಾರ್ಯಕಾರಣಭಾವರೂಪವಾದ ಸಂಬಂಧವೇ ಕೂಡುವುದಿಲ್ಲ. ಆದ್ದರಿಂದ ಜಗತ್ಕರ್ತೃತ್ವವನ್ನು ಅವನಲ್ಲಿ ಹೇಳಲಾಗದು.

ಅರ್ಥ -- ಶಿವನು ಅಶರೀರನಾದ್ದರಿಂದ ಸಂಬಂಧಾನುಪಪತ್ತೇಶ್ಚ = ಜಗತ್ತಿನ ಜೊತೆಗೆ ಸಂಬಂಧವು ಕೂಡುವುದಿಲ್ಲ. ಕಾರ್ಯಕಾರಣಭಾವರೂಪವಾದ ಸಂಬಂಧವು ಕೂಡುವುದಿಲ್ಲ

## ಬ್ರಹ್ಮಸೂತ್ರಭಾಷ್ಯ

### ಶರೀರವಿಲ್ಲದವನಿಗೆ ಸಂಬಂಧ ಹೇಗೆ ಸಾಧ್ಯ ?

**ब्रह्मसूत्रभाष्यम् – ।। सम्बन्धानुपपत्तेश्च ।।२।।**

**अशरीरत्वात् तस्य जगता सम्बन्धो न युज्यते कर्तृत्वेन मृतपुरुषवत् ।।२।।**

ಅನುವಾದ - ಶರೀರವಿಲ್ಲದ ರುದ್ರನಿಗೆ ಜಗತ್ತಿನ ಜೊತೆಗೆ ಮೃತಪುರುಷನಂತೆ ಸಂಬಂಧವೇ ಕೂಡುವುದಿಲ್ಲ. ಇನ್ನು ಜಗತ್ ಕರ್ತೃತ್ವವು ದೂರತೋಽಪಾಸ್ತ.

ಪ್ರತಿಪದಾರ್ಥ -- ಅಶರೀರತ್ವಾತ್ = ಪಾರತಂತ್ರ್ಯವೆಂಬ ದೋಷವಿರುವುದಷ್ಟೇ ಅಲ್ಲದೆ ಶರೀರವಿಲ್ಲವೆಂಬ ಕಾರಣದಿಂದಲೂ, ತಸ್ಯ = ರುದ್ರನಿಗೆ, ಜಗತಃ = ಕಾರ್ಯಭೂತವಾದ ಜಗತ್ತಿನ ಜೊತೆ, ಸಂಬಂಧಃ = ಸಂಬಂಧವು, ಮೃತಪುರುಷವತ್ = ಸತ್ತಮನುಷ್ಯನಂತೆ, ಕರ್ತೃತ್ವೇನ = ಕರ್ತೃತ್ವದ ಜೊತೆ, ಸಂಬಂಧಃ = ಸಂಬಂಧವು, ನ ಯುಜ್ಯತೇ = ಯುಕ್ತವಾಗುವುದಿಲ್ಲ.

## ಭಾವದೀಪದ ವೈಶಿಷ್ಟ್ಯ

* 'ಗಾಣಪತ್ಯ' ಎಂಬ ಪಾಠವು ಅಸಾಧು. 'ಗಾಣಪತ' ಎಂಬ ಪಾಠವು ಸಾಧು ಎಂಬುದಾಗಿ ಪಾಠಶೋಧನೆ ಮಾಡಿದ್ದಾರೆ.

* 'ಬ್ರಹ್ಮದ್ವಿಷೇ' ಎಂಬ ಶ್ರುತಿಯಲ್ಲಿರುವ ಪದಕ್ಕೆ ಅರ್ಥವನ್ನು ಮಾಡುವಾಗ ಬ್ರಹ್ಮ ಎಂಬ ಪದಕ್ಕೆ ದಕ್ಷಪ್ರಜಾಪತಿ ಎಂಬರ್ಥವನ್ನು ಚಂದ್ರಿಕೆಯ ಆಧಾರದಲ್ಲಿ ತೋರಿಸಿದ್ದಾರೆ.

* 'ಶರವೇ' ಎಂಬ ಪದಕ್ಕೆ ದ್ವೇಷ ಮಾಡುವನು, ಅಥವಾ ಹಿಂಸೆ ಮಾಡುವನು ಎಂಬರ್ಥವು ಹೇಗೆ ದೊರೆಯುತ್ತದೆ ಎಂಬುದನ್ನು ನಿಷ್ಪತ್ತಿ ಮಾಡಿ ತೋರಿಸಿದ್ದಾರೆ. 'ಏಷ' ಎಂಬ ಪದಕ್ಕೆ ಅಪೂರ್ವವಾದ ಅರ್ಥವನ್ನು ತಿಳಿಸಿದ್ದಾರೆ.

* 'ಯಾಸಿಷ್ಟಂ' ಎಂಬಲ್ಲಿ ಅಡಾಗಮವು ಏಕೆ ಬಂದಿಲ್ಲ ? ಎಂಬುದನ್ನು ತಿಳಿಸಿದ್ದಾರೆ.

## ಬ್ರಹ್ಮಸೂತ್ರ

### 'ಸಂಬಂಧಾನುಪಪತ್ತೇಶ್ಚ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – सम्बन्धानुपपत्तेश्च ।।**

ರುದ್ರನಿಗೆ ಶರೀರವಿಲ್ಲದ ಕಾರಣ ಕಾರ್ಯಕಾರಣಭಾವರೂಪವಾದ ಸಂಬಂಧವೇ ಕೂಡುವುದಿಲ್ಲ. ಆದ್ದರಿಂದ ಜಗತ್‌ಕರ್ತೃತ್ವವನ್ನು ಅವನಲ್ಲಿ ಹೇಳಲಾಗದು.

ಅರ್ಥ -- ಶಿವನು ಅಶರೀರನಾದ್ದರಿಂದ ಸಂಬಂಧಾನುಪಪತ್ತೇಶ್ಚ = ಜಗತ್ತಿನ ಜೊತೆಗೆ ಸಂಬಂಧವು ಕೂಡುವುದಿಲ್ಲ. ಕಾರ್ಯಕಾರಣಭಾವರೂಪವಾದ ಸಂಬಂಧವು ಕೂಡುವುದಿಲ್ಲ

## ಬ್ರಹ್ಮಸೂತ್ರಭಾಷ್ಯ

### ಶರೀರವಿಲ್ಲದವನಿಗೆ ಸಂಬಂಧ ಹೇಗೆ ಸಾಧ್ಯ ?

**ब्रह्मसूत्रभाष्यम् – ।। सम्बन्धानुपपत्तेश्च ।।२।।**

**अशरीरत्वात् तस्य जगता सम्बन्धो न युज्यते कर्तृत्वेन मृतपुरुषवत् ।।२।।**

ಅನುವಾದ - ಶರೀರವಿಲ್ಲದ ರುದ್ರನಿಗೆ ಜಗತ್ತಿನ ಜೊತೆಗೆ ಮೃತಪುರುಷನಂತೆ ಸಂಬಂಧವೇ ಕೂಡುವುದಿಲ್ಲ. ಇನ್ನು ಜಗತ್ ಕರ್ತೃತ್ವವು ದೂರತೋಪಾಸ್ತ.

ಪ್ರತಿಪದಾರ್ಥ -- ಅಶರೀರತ್ವಾತ್ = ಪಾರತಂತ್ರ್ಯವೆಂಬ ದೋಷವಿರುವುದಷ್ಟೇ ಅಲ್ಲದೆ ಶರೀರವಿಲ್ಲವೆಂಬ ಕಾರಣದಿಂದಲೂ, ತಸ್ಯ = ರುದ್ರನಿಗೆ, ಜಗತಃ = ಕಾರ್ಯಭೂತವಾದ ಜಗತ್ತಿನ ಜೊತೆ, ಸಂಬಂಧಃ = ಸಂಬಂಧವು, ಮೃತಪುರುಷವತ್ = ಸತ್ತಮನುಷ್ಯನಂತೆ, ಕರ್ತೃತ್ವೇನ = ಕರ್ತೃತ್ವದ ಜೊತೆ, ಸಂಬಂಧಃ = ಸಂಬಂಧವು, ನ ಯುಜ್ಯತೇ = ಯುಕ್ತವಾಗುವುದಿಲ್ಲ.

## ಸತ್ತರ್ಕದೀಪಾವಳಿ

**सत्तर्कदीपावळिः – श्रुतिभिर्निराकृतं युक्तिभिश्च निराकरोति । सम्बन्धानुपपत्तेरित्यादिना । वैशेषिकादिवत्पशुपतेरीश्वरस्याशरीरत्वेन अङ्गीकृतत्वान् । प्राक् सृष्टेषु भौतिकाभावेन लीलागृहीतदेहासम्भवात् ।**

ಶ್ರುತಿಗಳಿಂದ ನಿರಾಕೃತವಾದದ್ದನ್ನು ಯುಕ್ತಿಗಳಿಂದ ನಿರಾಕರಿಸುವುದಕ್ಕಾಗಿ 'ಸಂಬಂಧಾನುಪಪತ್ತೇಃ' ಇತ್ಯಾದಿ ಸೂತ್ರಭಾಷ್ಯವು ಹೊರಟಿದೆ. ವೈಶೇಷಿಕಾದಿಗಳಂತೆ ಪಾಶುಪತರೂ ಕೂಡ ರುದ್ರನಿಗೆ ಶರೀರವನ್ನು ಅಂಗೀಕಾರ ಮಾಡುವುದಿಲ್ಲ. ಮೊದಲು ಹುಟ್ಟಿದ ಪದಾರ್ಥಗಳು ಭೌತಿಕವಲ್ಲದ ಕಾರಣ ಲೀಲೆಯಿಂದ ಅಂಥ ದೇಹದ ಸ್ವೀಕಾರವೂ ಕೂಡ ಯುಕ್ತವಾಗುವುದಿಲ್ಲ.

## ತತ್ವಪ್ರದೀಪ

**तत्वप्रदीपः – सशरीरस्य हि कुलालादेः कर्तृत्वेन सम्बन्धो दृष्टः ।**

ಶರೀರವುಳ್ಳ ಕುಲಾಲಾದಿಗಳಲ್ಲಿ ಮಾತ್ರ ಕರ್ತೃತ್ವೇನ ಸಂಬಂಧವು ಕಾಣಸುತ್ತಿದೆ.

ವಿವರಣೆ - ಶರೀರವಿದ್ದರೆ ಪದಾರ್ಥಗಳನ್ನು ನಿರ್ಮಾಣ ಮಾಡುವುದು ಲೋಕದಲ್ಲಿ ಕಂಡಿದೆ. ಕುಲಾಲಾದಿಗಳಿಗೆ ಶರೀರವಿದೆ. ಘಟಾದಿ ಕರ್ತೃತ್ವವೂ ಕೂಡ ಇದೆ. ರುದ್ರನಿಗೆ ಶರೀರವೇ ಇಲ್ಲ. ಹೀಗಿರುವಾಗ ಜಗತ್ತನ್ನು ನಿರ್ಮಾಣ ಮಾಡಲು ಸಮರ್ಥನಾಗುವುದಿಲ್ಲ. ಅಶರೀರನಾದ್ದರಿಂದ ಜಗತ್ತಿನ ಜೊತೆ ಸಂಬಂಧವೂ ಕೂಡ ರುದ್ರನಿಗೆ ಸಾಧ್ಯವಿಲ್ಲ. ಸಂಬಂಧವೆಂದರೆ ಕರ್ತೃತ್ವೇನ ಸಂಬಂಧ ಎಂದು ತಿಳಿಯಬೇಕು. ಜಗತ್ತಿಗೂ ರುದ್ರನಿಗೂ ಕರ್ತೃಕಾರ್ಯಭಾವರೂಪವಾದ ಸಂಬಂಧವನ್ನು ಹೇಳಲು ಸಾಧ್ಯವಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

## ತತ್ವಪ್ರಕಾಶಿಕಾ

### ಕಾರ್ಯಕರ್ತೃಭಾವರೂಪವಾದ ಸಂಬಂಧ ರುದ್ರನಿಗಿಲ್ಲ

**तत्वप्रकाशिका – युक्त्यन्तरेण पशुपतेर्जगत्कारणत्वं पराकुर्वत्सूत्रमुपन्यस्य व्याचष्टे – सम्बन्धेति ।। जगता सम्बन्धमात्रमशरीरस्यापि सम्भवतीत्युक्तः कोऽसौ सम्बन्ध इत्यतः कार्यकर्तृभाव इति भावेनेक्तम् ।। कर्तृत्वेनेति ।। इदमुक्तं भवति – रुद्रो न कर्ता अशरीरत्वान्मृतपुरुषवदिति ।।**

ಮತ್ತೊಂದು ಯುಕ್ತಿಯಿಂದ ರುದ್ರನಿಗೆ ಜಗತ್ಕಾರಣತ್ವವನ್ನು ನಿರಾಕರಣೆ ಮಾಡುವ ಸೂತ್ರವನ್ನು ಪಠಿಸಿ 'ಸಂಬಂಧ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಶರೀರ ಇಲ್ಲದ್ದಕ್ಕೂ ಕೂಡ ಜಗತ್ತಿನ ಜೊತೆ ಸಂಬಂಧ ಇರುತ್ತದೆ. ಆದ್ದರಿಂದ ರುದ್ರನಿಗೆ ಸಂಬಂಧ ಇಲ್ಲವೆಂಬುದಕ್ಕೆ ಏನರ್ಥ? ಈ ಆಶಂಕೆಗೆ ಕಾರ್ಯಕರ್ತೃಭಾವರೂಪವಾದ ಸಂಬಂಧವಿಲ್ಲ ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ 'ಕರ್ತೃತ್ವೇನ' ಇತ್ಯಾದಿಯಾಗಿ ಹೇಳಿದ್ದಾರೆ.

ಇಷ್ಟು ಹೇಳಿದಂತಾಯಿತು. 'ರುದ್ರಃ ನ ಜಗತ್ಕರ್ತಾ ಶರೀರತ್ವಾತ್ ಮೃತಪುರುಷವತ್' ಮೃತಪುರುಷನು ಶರೀರವುಳ್ಳವನಲ್ಲ ಕರ್ತೃತ್ವವು ಕೂಡ ಅವನಲ್ಲಿ ಇಲ್ಲ. ಅದರಂತೆ ರುದ್ರನು ಶರೀರ ಇಲ್ಲದವನಾದ್ದರಿಂದ ಕರ್ತೃ ಆಗಲು ಸಾಧ್ಯವಿಲ್ಲ ಎಂದು.

## ಭಾವದೀಪ

**भावदीपः – ।। सम्बन्धानुपपत्तेश्च ।।३८।।** सूत्रे चशब्दादाह – **युक्त्यन्तरेणेति।।** पारतन्त्र्यादियुक्त्यपेक्षयेति भावः । किं तद्युक्त्यन्तरमित्यतो निर्धारयति – **इदमुक्तमिति ।। मृतपुरुषवदिति ।।** त्यक्तदेहजीववत्॥ ३८ ॥

'ಯುಕ್ತ್ಯಂತರೇಣ' ಎಂಬ ಪದಕ್ಕೆ ಪಾರತಂತ್ರ್ಯಾದಿ ಯುಕ್ತಿಯ ಮೂಲಕ ಎಂದರ್ಥ. ಆ ಯುಕ್ತ್ಯಂತರ ಯಾವುದು? ಎಂಬ ಪ್ರಶ್ನೆಗೆ ನಿರ್ಧಾರಾತ್ಮಕವಾಗಿ ಉತ್ತರಿಸಲು 'ಇದಮುಕ್ತಂ ಭವತಿ' ಎಂದು ಹೇಳಿದ್ದಾರೆ. 'ಮೃತಪುರುಷವತ್' ಎಂದರೆ ದೇಹವನ್ನು ಬಿಟ್ಟಿರುವ ಜೀವನೆಂದರ್ಥ.

## ಬ್ರಹ್ಮಸೂತ್ರ

### 'ಅಧಿಷ್ಠಾನಾನುಪಪತ್ತೇಶ್ಚ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – अधिष्ठानानुपपत्तेश्च ।।**

ಪೃಥಿವೀ ಮೊದಲಾದ ಆಶ್ರಯವು ಇಲ್ಲದ ಕಾರಣ ಈಶ್ವರನು ಜಗತ್ತಿಗೆ ಕಾರಣನಾಗಲಾರನು.

ಅರ್ಥ -- ಅಧಿಷ್ಠಾನಾನುಪಪತ್ತೇಶ್ಚ = ಪ್ರಲಯಕಾಲದಲ್ಲಿ ಸಕಲ ಪದಾರ್ಥಗಳು ನಾಶವಾಗಿರುವುದರಿಂದ ಪುನಃ ಸೃಷ್ಟಿಕಾಲದಲ್ಲಿ ಪಶುಪತಿಗೆ ಪೃಥಿವೀ ಮೊದಲಾದವುಗಳನ್ನು ಆಶ್ರಯಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ತಾನೇ ನಿಂತುಕೊಳ್ಳಲು ಸ್ಥಳವಿಲ್ಲದಿದ್ದಾಗ ಜಗತ್ತಿಗೆ ಹೇಗೆ ಕಾರಣನಾಗುತ್ತಾನೆ ?

## ಬ್ರಹ್ಮಸೂತ್ರಭಾಷ್ಯ

### ಪ್ರಲಯದಲ್ಲಿ ಅಧಿಷ್ಠಾನ ಯಾವುದು ?

**ब्रह्मसूत्रभाष्यम् –।। अधिष्ठानानुपपत्तेश्च ।।३।।**

**पृथिव्याद्यधिष्ठाने स्थितो हि कुलालादिः कार्यं करोति, न चास्य तदस्ति ।।३।।**

ಅನುವಾದ - ಭೂಮಿಯೆಂಬ ಅಧಿಷ್ಠಾನವಿದ್ದರೆ ಅದರಲ್ಲಿ ನಿಂತುಕೊಂಡು ಕುಲಾಲ ಮೊದಲಾದವರು ಘಟ ಮೊದಲಾದ ಕಾರ್ಯಗಳನ್ನು ಮಾಡಲು ಸಮರ್ಥರಾಗುತ್ತಾರೆ. ರುದ್ರನಿಗೆ ಸೃಷ್ಟಿಯ ಪ್ರಾರಂಭದಲ್ಲಿ ಯಾವ ಅಧಿಷ್ಠಾನವೂ ಇರಲಿಲ್ಲ. ಹೀಗಿರುವಾಗ ಜಗತ್ತನ್ನು ಎಲ್ಲಿ ನಿಂತುಕೊಂಡು ಸೃಷ್ಟಿ ಮಾಡುತ್ತಾನೆ.

ಪ್ರತಿಪದಾರ್ಥ -- ಪೃಥಿವ್ಯಾದ್ಯಧಿಷ್ಠಾನೇ = ಪೃಥಿವೀ ಮೊದಲಾದ ಅಧಿಷ್ಠಾನಗಳಲ್ಲಿ, ಸ್ಥಿತಃ = ನಿಂತುಕೊಂಡು, ಕುಲಾಲಾದಿಃ = ಕುಂಬಾರ ಮೊದಲಾದವರು, ಕಾರ್ಯಂ = ಘಟ ಮೊದಲಾದ ಕಾರ್ಯಗಳನ್ನು,

ಕರೋತಿ = ಮಾಡುತ್ತಾರೆ. ಅಸ್ಯ = ರುದ್ರನಿಗೆ, ತತ್ = ಆ ಅಧಿಷ್ಠಾನವು, ನ ಚ ಅಸ್ತಿ = ಇರುವುದಿಲ್ಲವಷ್ಟೆ.

### ಸತ್ತರ್ಕದೀಪಾವಳಿ

**सत्तर्कदीपावळिः – अधिष्ठानासम्भवाच्च नासौ जगत्कर्ता । न हि देहरहितस्य अधिष्ठानरहितस्य कर्तृत्वं क्वचिद्दृष्टम् ।**

ರುದ್ರನಿಗೆ ಅಧಿಷ್ಠಾನವೂ ಕೂಡ ಅಸಂಭಾವಿತವಾದ್ದರಿಂದ ಜಗತ್ಕರ್ತೃತ್ವವು ಕೂಡುವುದಿಲ್ಲ. ದೇಹವಿಲ್ಲದ ಅಧಿಷ್ಠಾನವೇ ಇಲ್ಲದ ಒಬ್ಬ ವ್ಯಕ್ತಿಗೆ ಕರ್ತೃತ್ವವಿರುವುದು ಜಗತ್ತಿನಲ್ಲಿ ಎಲ್ಲೂ ಕಂಡಿಲ್ಲ.

### ತತ್ವಪ್ರಕಾಶಿಕಾ

### ರುದ್ರನು ಜಗತ್ಕರ್ತೃವಲ್ಲ

**तत्वप्रकाशिका – हेत्वन्तरेण पशुपतेर्जगत्कर्तृत्वं निराकुर्वत्सूत्रमुपन्यस्य व्याचष्टे – अधिष्ठनेति।। न रुद्रः कर्ता निरधिष्ठानत्वात् । यः कर्ता सः साधिष्ठानो यथा कुलालादिरित्यर्थः ।।**

ಮತ್ತೊಂದು ಹೇತುವಿನಿಂದ ರುದ್ರನಿಗೆ ಜಗತ್ಕರ್ತೃತ್ವವನ್ನು ನಿರಾಕರಣೆ ಮಾಡುವ ಸೂತ್ರವನ್ನು ಪಠಿಸಿ 'ಅಧಿಷ್ಠಾನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

'ರುದ್ರಃ ನ ಕರ್ತಾ ನಿರಧಿಷ್ಠಾನತ್ವಾತ್ ಯಃ ಕರ್ತಾ ಸಃ ಸಾಧಿಷ್ಠಾನಃ ಯಥಾ ಕುಲಾಲಾದಿಃ' ಯಾರು ಕರ್ತೃವೋ ಅವನು ಅಧಿಷ್ಠಾನವುಳ್ಳವನಾಗಿರುತ್ತಾನೆ. ಕುಲಾಲನು ಕರ್ತೃವಾಗಿದ್ದಾನೆ. ಭೂತಲವೆಂಬ ಅಧಿಷ್ಠಾನವುಳ್ಳವನಾಗಿದ್ದಾನೆ. ಆದರೆ ರುದ್ರನು ಯಾವುದೇ ಅಧಿಷ್ಠಾನ ಇರುವವನಲ್ಲ. ಆದ್ದರಿಂದ ಜಗತ್ಕರ್ತೃ ಆಗಲು ಸಾಧ್ಯವಿಲ್ಲ.

## ಭಾವದೀಪ

**भावदीपः – ।। अधिष्ठानानुपपत्तेश्च ।।३९।।** हेत्वन्तरमित्युक्तमवधारयति।। **न रुद्र इति ।।** अन्वयव्याप्तौ दृष्टान्ताभावादाह।। **यः कर्तेति**।। ३९ ।।

ಹೇತ್ವಂತರೇ ಎಂದು ಹೇಳಿದ್ದನ್ನೇ ನಿರ್ಧಾರಾತ್ಮಕವಾಗಿ ಪ್ರತಿಪಾದನೆ ಮಾಡಲು 'ನ ರುದ್ರಃ' ಎಂಬ ವಾಕ್ಯವು ಹೊರಟಿದೆ. ಅನ್ವಯವ್ಯಾಪ್ತಿಯಲ್ಲಿ ದೃಷ್ಟಾಂತವಿಲ್ಲದ ಕಾರಣ ವ್ಯತಿರೇಕವ್ಯಾಪ್ತಿಯನ್ನು 'ಯಃ ಕರ್ತಾ' ಎಂದು ಹೇಳಿದ್ದಾರೆ.

## ಬ್ರಹ್ಮಸೂತ್ರ

### 'ಕರಣವಚ್ಚೇನ್ನ ಭೋಗಾದಿಭ್ಯಃ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – करणवच्चेन्न भोगादिभ्यः ।।**

ಜಗತ್ತಿನಲ್ಲಿರುವ ವಿವಿಧ ಸಾಧನಗಳು ಪಶುಪತಿಯ ದೇಹರೂಪವಾಗಿವೆ. ಮತ್ತು ಅಧಿಷ್ಠಾನರೂಪವಾಗಿವೆ ಎಂದು ಹೇಳಬಾರದು. ಹಾಗಾದರೆ ಅವನಿಗೂ ಉತ್ಪತ್ತಿನಾಶಗಳೆಂಬ ಮತ್ತು ಸುಖ-ದುಃಖಗಳೆಂಬ ದೋಷವು ಬರಬೇಕಾಗುತ್ತದೆ.

ಅರ್ಥ --ಕರಣವತ್ = ಪ್ರಪಂಚದಲ್ಲಿರುವ ಸಾಧನಗಳೆಲ್ಲವೂ ರುದ್ರನ ಶರೀರದಂತಿವೆ. ಮತ್ತು ಅಧಿಷ್ಠಾನದಂತಿದೆ. ಆದ್ದರಿಂದ ಶರೀರವೇ ಇಲ್ಲ, ಅಧಿಷ್ಠಾನವೇ ಇಲ್ಲವೆಂಬ ದೋಷಕ್ಕೆ ಅವಕಾಶವಿಲ್ಲವೇ? ಇತಿ ಚೇನ್ನ = ಹೀಗೆ ಹೇಳಬಾರದು. ಏಕೆಂದರೆ ಭೋಗಾದಿಭ್ಯಃ = ಶರೀರದಿಂದ ದೊರೆಯುವ ಸುಖ-ದುಃಖಾದಿ ಅನುಭವರೂಪವಾದ ಮತ್ತು ಉತ್ಪತ್ತಿನಾಶಗಳೆಂಬ ದೋಷವು ಬರಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

### ರುದ್ರನಿಗೆ ಪ್ರಳಯದಲ್ಲಿ ಶರೀರಾದಿಗಳಿರುವುದಿಲ್ಲ

**ब्रह्मसूत्रभाष्यम् — ।। करणवच्चेन्न भोगादिभ्यः ।।४।।**

**इदमेव जगत् तस्य करणवदधिष्ठानादिरूपं नित्यस्यापि कस्यचिद्भावाद् युज्यत इति चेत् — न, भोगादिप्राप्तेः । उत्पत्तिनाशौ सुखदुःखभोगाश्च प्राप्यन्ते तद्गताः ।।४।।**

ಅನುವಾದ - ಯಾವ ಪ್ರಕೃತ್ಯಾದಿಗಳು ಜಗತ್ತಿಗೆ ಕಾರಣವಾಗಿವೆಯೋ ಅವುಗಳು ರುದ್ರನಿಗೆ ಅಧಿಷ್ಠಾನವಾಗಬಹುದು. ಪ್ರಳಯಕಾಲದಲ್ಲಿ ಪ್ರಕೃತಿಯೂ ಕೂಡ ನಾಶವಾಗಿದೆ ಎಂದು ಆಶಂಕಿಸಬಾರದು. ನಿತ್ಯವಾದ ಯಾವುದಾದರೂ ಅಧಿಷ್ಠಾನ ಪ್ರಳಯಕಾಲದಲ್ಲಿ ಇರಬಹುದು. ಈ ಶಂಕೆಯು ತಪ್ಪು. ಒಂದುವೇಳೆ ರುದ್ರನಿಗೆ ಶರೀರವಿದ್ದರೆ ಭೋಗವಿರಬೇಕಾಗುತ್ತದೆ. ಮತ್ತು ಶರೀರದ ಉತ್ಪತ್ತಿ ನಾಶಗಳು ಆ ಶರೀರದಿಂದ ಸುಖದುಃಖಗಳ ಭೋಗ ಇವೆಲ್ಲವೂ ಪ್ರಳಯಕಾಲದಲ್ಲಿ ಇವೆ ಎಂದು ಒಪ್ಪಬೇಕಾಗುತ್ತದೆ.

ಪ್ರತಿಪದಾರ್ಥ -- ಇದಮೇವ ಜಗತ್ = ಈ ಜಗತ್ತು, ತಸ್ಯ = ರುದ್ರನಿಗೆ, ಕರಣವತ್ = ಪ್ರಕೃತ್ಯಾದಿಗಳಂತೆ. ಅಧಿಷ್ಠಾನಾದಿರೂಪಂ = ಅಧಿಷ್ಠಾನಾದಿ-ರೂಪವನ್ನು ತಾಳಬಹುದು. ಕಸ್ಯಚಿತ್ ಅಪಿ = ಯಾವುದಾದರು, ನಿತ್ಯಸ್ಯಾಪಿ = ನಿತ್ಯಪದಾರ್ಥವು, ಭಾವಾತ್ = ಪ್ರಳಯಕಾಲದಲ್ಲಿ ಇದೆ ಆದ್ದರಿಂದ ಯುಜ್ಯತೇ = ಕರ್ತೃತ್ವವು ಯುಕ್ತವಾಗುತ್ತದೆ. ಇತಿ ಚೇತ್ = ಈ ಆಕ್ಷೇಪ, ನ = ತಪ್ಪು. ಹಾಗೆ ಒಪ್ಪಿದರೆ ಭೋಗಾದಿಪ್ರಾಪ್ತೇಃ = ರುದ್ರನಿಗೆ ಭೋಗವನ್ನು ಒಪ್ಪಬೇಕಾಗುತ್ತದೆ. ಉತ್ಪತ್ತಿವಿನಾಶೌ = ದೇಹಕ್ಕೆ ಉತ್ಪತ್ತಿ ಮತ್ತು ನಾಶಗಳು, ಸುಖದುಃಖಭೋಗಾಶ್ಚ = ಸುಖದುಃಖಗಳ ಭೋಗಗಳು, ತದ್ಗತಾಃ = ರುದ್ರನಲ್ಲಿ, ಪ್ರಾಪ್ಯಂತೇ = ಇವೆಯೆಂದು ಹೇಳಬೇಕಾಗುತ್ತದೆ.

### ಸತ್ತರ್ಕದೀಪಾವಳಿ

**सत्तर्कदीपावलिः – यदि भौतिकाभावेऽपि तदुपादानस्य प्रधानस्य प्रलये विद्यमानत्वात्तदेव पशुपतेर्देहभूतमाधारभूतरं भविष्यतीत्युच्यते । तर्हि पशुपतेर्जडदेहधारित्वेन देवदत्तवज्जन्ममरण सुखदुःखाद्यनुभवितृत्वं स्यात् ।**

ಒಂದು ವೇಳೆ ಭೌತಿಕವಾದ ಯಾವುದೇ ಪದಾರ್ಥವು ಇಲ್ಲದಿದ್ದರೂ ಕೂಡ ತದುಪಾದಾನಕವಾದ ಪ್ರಧಾನವು ಪ್ರಳಯ ಕಾಲದಲ್ಲಿ ಇರುತ್ತದೆ. ಈ ಪ್ರಧಾನವೇ ರುದ್ರನಿಗೆ ದೇಹವಾಗಿದೆ. ಮತ್ತು ಆಧಾರವಾಗಿದೆ. ಆದ್ದರಿಂದ ಹಿಂದಿನ ಎರಡು ಸೂತ್ರಗಳಲ್ಲಿ ಹೇಳಿದ ದೋಷವು ಬರುವುದಿಲ್ಲ. ಹೀಗೆ ಶೈವರು ಸಮರ್ಥನೆ ಮಾಡಬಹುದು. ಇದೂ ಕೂಡ ತಪ್ಪು. ಹಾಗಾದರೆ ರುದ್ರನಿಗೆ ಜಡವಾದ ದೇಹವಿದೆ ಎಂದು ಹೇಳಿದಂತಾಯಿತು. ಆಗ ದೇವದತ್ತಾದಿಗಳಂತೆ ರುದ್ರನಿಗೂ ಕೂಡ ಜನನ ಮರಣಗಳಿವೆ ತತ್ಪ್ರಯುಕ್ತವಾಗಿ ಸುಖ-ದುಃಖಾದ್ಯನುಭವಗಳೂ ಕೂಡ ಇವೆ ಎಂದು ಒಪ್ಪಿದಂತಾಯಿತು.

### ತತ್ವಪ್ರದೀಪ

#### ಸಂವೇದನಾಶೀಲನಿಗೆ ಜಗತ್ಕರ್ತೃತ್ವ ಕೂಡದು

**तत्वप्रदीपः – इदमेव जगत्तस्य शरीरेन्द्रियवदधिष्ठानरूपं शरीररूपं वा । नित्यस्यापि कस्यचिदुपादानस्यान्यस्य वा भावाद्युज्यत इति चेन्न । भोगादिप्राप्तेः । अस्य पदस्य वर्णनारूपमुत्तरभाष्यम्। विकारात्मकोपादानशरी रत्वात्तदुत्पत्त्यादयस्तस्य प्राप्यन्ते ।**

ಈ ಜಗತ್ತಿಗೆ ಕಾರಣವಾದ ಪ್ರಕೃತ್ಯಾದಿಗಳೇ ಆವನಿಗೆ ಶರೀರಾದಿಗಳಂತೆ ಅಧಿಷ್ಠಾನರೂಪವೂ ಆಗಿರಬಹುದು. ಶರೀರರೂಪವೂ ಆಗಿರಬಹುದು. ನಿತ್ಯವಾದರೂ ಕೂಡ ಯಾವುದಾದರೂ ಉಪಾದಾನವು ಇರುವುದರಿಂದ ಇಷ್ಟು ಆಕ್ಷೇಪ.

ಇದು ತಪ್ಪು. 'ಭೋಗಾದಿಭ್ಯಃ' = ರುದ್ರನಿಗೆ ಶರೀರವಿದ್ದರೆ ಭೋಗವು ಇರಬೇಕಾದೀತು.

ಈ ಪದದ ವರ್ಣನೆಗಾಗಿಯೇ ಮುಂದಿನ ಭಾಷ್ಯವು ಹೊರಟಿದೆ. ವಿಕಾರಸ್ವರೂಪವಾದ ಉಪಾದಾನಕಾರಣವೆನಿಸಿದ ಶರೀರವಿರುವುದರಿಂದ ಅದರ ಉತ್ಪತ್ತಿಯು ರುದ್ರನಿಗೆ ಪ್ರಾಪ್ತವಾಗುತ್ತದೆ.

ವಿವರಣೆ - ರುದ್ರನಿಗೆ ಶರೀರವಿಲ್ಲದಿದ್ದರೂ ಕೂಡ ಜಗತ್‌ಕರ್ತೃತ್ವವು ಕೂಡುತ್ತದೆಂದು ಈ ಸೂತ್ರದಲ್ಲಿ ಆಕ್ಷೇಪ ಮಾಡಲಾಗಿದೆ. ರುದ್ರನ ಪ್ರಯತ್ನದಿಂದ ಪ್ರಕೃತಿಯು ಕ್ರಿಯಾಶೀಲವಾಗುತ್ತದೆ. ಈ ಪ್ರಕೃತಿಯೇ ರುದ್ರನ ಶರೀರ ಎನಿಸುತ್ತದೆ. ಅಥವಾ ನಿತ್ಯವಾದ ಶರೀರವೇ ರುದ್ರನಿಗಿದೆ ಎಂದೂ ಕೂಡ ಹೇಳುತ್ತೇವೆ. ಆದ್ದರಿಂದ ಶರೀರವಿರುವ ಕಾರಣ ರುದ್ರನು ಜಗತ್ತನ್ನು ಸೃಷ್ಟಿ ಮಾಡಬಹುದು. ಇಷ್ಟು ಪೂರ್ವಪಕ್ಷ.

ಶರೀರವಿದ್ದರೆ ನಾಶವನ್ನು ಒಪ್ಪಲೇ ಬೇಕು. ವಿಕಾರರೂಪವಾದ ಉಪಾದಾನರೂಪವಾದ ಶರೀರವು ಹುಟ್ಟು ಸಾವುಗಳನ್ನು ಹೊಂದುತ್ತದೆ. ತನ್ಮೂಲಕ ರುದ್ರನಿಗೂ ಕೂಡ ಸುಖ-ದುಃಖಾದಿಗಳು ಪ್ರಾಪ್ತವಾಗುತ್ತವೆ. ಸುಖದುಃಖಗಳ ಸಂವೇದನೆಯಿದ್ದರೆ ರುದ್ರನು ಜಗತ್ ಕರ್ತೃ ಆಗಲಾರ.

## ತತ್ವಪ್ರಕಾಶಿಕಾ

### ಕರ್ತೃತ್ವ ಸಂಬಂಧ ಅನುಪಪತ್ತಿಯ ಸಮರ್ಥನೆ

**तत्वप्रकाशिका – उक्तमाक्षिप्य समादधत्सूत्रं पठित्वाऽऽक्षेपांशं तावद् व्याचष्टे – करणवदिति ।। न पशुपतेः शरीराधिष्ठानाभावेन कर्तृत्वानुपपत्तिः। कारकग्रामस्यैव साक्षात्प्रयत्नाधिष्ठेयतया अस्मदादिशरीरसमानत्वेन शरीरान्तरापेक्षाभावात् । साक्षात् प्रयत्नाधिष्ठेयविषयेऽपि शरीरान्तरापेक्षायां तत्रापि तत्प्रसङ्गात् तस्यैव चाधिष्ठानत्वमुपपद्यते ।**

ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು 'ಕರಣವತ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಪಶುಪತಿಗೆ ಅಧಿಷ್ಠಾನವೇ ಇಲ್ಲದ್ದರಿಂದ ಕರ್ತೃತ್ವವು ಅನುಪಪನ್ನವಾಗುತ್ತದೆ. ಪ್ರಯತ್ನಕ್ಕೆ ಸಾಕ್ಷಾತ್ತಾಗಿ

ಅಧಿಷ್ಠೇಯವಾದದ್ದು ಕಾರಕಗಳ ಸಮೂಹ. ಆದ್ದರಿಂದ ನಮ್ಮ ಶರೀರಕ್ಕೆ ಸಮಾನವಾದ್ದರಿಂದ ಮತ್ತೊಂದು ಶರೀರದ ಅಪೇಕ್ಷೆ ರುದ್ರನಿಗೆ ಇರುವುದಿಲ್ಲ. ಪ್ರಯತ್ನಾದಿಗಳಿಗೆ ಸಾಕ್ಷಾತ್ತಾಗಿ ಅಧಿಷ್ಠೇಯವಾದರೂ ಮತ್ತೊಂದು ಶರೀರವನ್ನು ಅಪೇಕ್ಷೆ ಪಡುವುದಾದರೆ ಅನವಸ್ಥಾದೋಷವು ಬರುತ್ತದೆ. ಆದ್ದರಿಂದ ಪ್ರಯತ್ನಾದಿಗಳಿಗೆ ಅಧಿಷ್ಠೇಯವಾದದ್ದು ಶರೀರವೆಂದೇ ಹೇಳಬೇಕು.

ವಿವರಣೆ - ಹಿಂದಿನ ಸೂತ್ರದಲ್ಲಿ ಶಿವನಿಗೆ ಕರ್ತೃತ್ವಸಂಬಂಧವು ಯುಕ್ತವಾಗುವುದಿಲ್ಲವೆಂದು ಹೇಳಲಾಯಿತು. ಇದರ ಮೇಲೆ ಶೈವರ ಆಕ್ಷೇಪವನ್ನು ಉಪಸ್ಥಾಪನೆ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ.

ಶೈವರು ಹೀಗೆ ಹೇಳುತ್ತಾರೆ - ಶರೀರ ಹಾಗೂ ಅಧಿಷ್ಠಾನಗಳಿಲ್ಲದಿದ್ದರೆ ಕರ್ತೃತ್ವವೇ ಕೂಡುವುದಿಲ್ಲ ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಸಮಸ್ತ ಈ ಜಗತ್ತು ರುದ್ರನಿಗೆ ಶರೀರದಂತಿದೆ. ಈ ಜಗತ್ತಾದರೂ ಕರ್ತೃ,ಕರ್ಮ, ಕರಣ ಮೊದಲಾದ ಕಾರಕಗಳ ಸಮೂಹಾತ್ಮಕವಾಗಿದೆ. ರುದ್ರನ ಪ್ರಯತ್ನಕ್ಕೆ ಇದು ನೇರವಾಗಿಯೇ ಅಧಿಷ್ಠಾನವಾಗಬಹುದು. ಹೀಗೆ ಕಾರಕಸಮೂಹವೇ ರುದ್ರನ ಶರೀರವೆಂದು ಹೇಳಬಹುದಾದ್ದರಿಂದ ನಮ್ಮೆಲ್ಲರ ಶರೀರವೇ ರುದ್ರನ ಶರೀರವಾಗುತ್ತವೆ. ಹೀಗಿರುವಾಗ ನಮ್ಮ ಶರೀರಗಳಿಗಿಂತ ಅತಿರಿಕ್ತವಾಗಿ ರುದ್ರನಿಗೊಂದು ಶರೀರವನ್ನು ಒಪ್ಪುವ ಆವಶ್ಯಕತೆ ಇರುವುದಿಲ್ಲ. ಒಂದುವೇಳೆ ಕಾರಕಗಳ ಸಮೂಹವಿಷಯಕ್ಕೂ ಮತ್ತೊಂದು ಶರೀರವನ್ನು ಒಪ್ಪುವುದಾದರೆ ಆ ಶರೀರಗಳ ವಿಷಯದಲ್ಲೂ ಮತ್ತೊಂದು ಶರೀರವನ್ನು ಒಪ್ಪಬೇಕಾಗುತ್ತದೆ. ಪ್ರಯತ್ನಕ್ಕೆ ಅಧಿಷ್ಠಿತವಾಗಿ ಪ್ರಯತ್ನಕ್ಕೆ ಪ್ರೇರ್ಯವಾಗಿ ಆ ದೇಹ ವಿಷಯದಲ್ಲೂ ಮತ್ತೊಂದು ದೇಹವಿಷಯವು ಬರುತ್ತದೆಂದು ಅಭಿಪ್ರಾಯ. ಆಗ ಅನವಸ್ಥಾದೋಷ ಬರುತ್ತದೆ. ಆದ್ದರಿಂದ ಸಾಕ್ಷಾತ್ ಪ್ರಯತ್ನಕ್ಕೆ ಅಧಿಷ್ಠಾನವಾದದ್ದನ್ನೇ ಶರೀರವೆಂದು ಹೇಳಬೇಕು.

ಮಾಯೆಯೇಕೆ ಅಧಿಷ್ಠಾನವಲ್ಲ ?

**तत्वप्रकाशिका – न च वक्तव्यं प्रलये सर्वस्यापि विनाशान्न कारकसूहस्याप्यधिष्ठानत्वादि युज्यत इति । प्रलयेऽपि मायादेः कारककलापस्य नित्यस्य विद्यमानत्वात् । अन्यथा कार्यजन्मासम्भवादिति भावः ।**

ಪ್ರಳಯಕಾಲದಲ್ಲಿ ಸಕಲ ವಸ್ತುಗಳೂ ನಾಶವನ್ನು ಹೊಂದುವುದರಿಂದ ಕಾರಕ ಸಮೂಹವೇ ಇಲ್ಲದಿರುವುವಾಗ ಅವುಗಳು ಅಧಿಷ್ಠಾನವೂ ಕೂಡ ಆಗಬಹುದಲ್ಲವೆ? ಎಂದು ಪ್ರಶ್ನಿಸಬಾರದು.

ಪ್ರಳಯದಲ್ಲೂ ಕೂಡ ಮಾಯಾ ಮೊದಲಾದ ಕಾರಕಕಲಾಪಗಳು ನಿತ್ಯವಾಗಿ ಇದ್ದೇ ಇರುತ್ತವೆ. ಹೀಗೆ ಒಪ್ಪದಿದ್ದರೆ ಘಟಪಟಾದಿಗಳ ಸೃಷ್ಟಿಯೇ ಆಗದಿರಬೇಕಾದೀತು ಎಂದು ಅಭಿಪ್ರಾಯ.

ವಿವರಣೆ - ಪ್ರಳಯಕಾಲದಲ್ಲಿ ಯಾವುದೇ ಕಾರಕಗಳು ಇರುವುದಿಲ್ಲ. ಆದ್ದರಿಂದ ರುದ್ರನಿಗೆ ಅಧಿಷ್ಠಾನಾದಿಗಳನ್ನು ಹೇಗೆ ಹೇಳುತ್ತೀರಿ? ಎಂಬುದಾಗಿ ಶೈವರನ್ನು ಕುರಿತು ಆಕ್ಷೇಪ ಮಾಡಿದರೆ ಮಾಯಾಧಿಷ್ಠಾನವನ್ನು ಒಪ್ಪುವುದರಿಂದ ಮುಂದಿನ ಸೃಷ್ಟಿಯು ಯುಕ್ತವಾಗುತ್ತದೆಂದು ಹೇಳುತ್ತಾರೆ.

### ಪ್ರಕೃತ್ಯಾದಿಗಳೂ ಅಧಿಷ್ಠಾನವಲ್ಲ

**तत्वप्रकाशिका – परिहारांशं व्याचष्टे – नेति ।। तदेव सफुटीकरोति ।। उत्पत्तीति ।। यदि कारकव्रातस्यैव साक्षात्प्रयत्नाधिष्ठेयतया शरीरादिवदेव कर्तृत्वोपयोगिता तर्हि तदुपादानहाननिमित्तोत्पत्तिमरणे च पशुपतेः स्याताम्। साक्षात्प्रयत्नाधिष्ठेयशरीरोपादानहानयोस्तद्दर्शनात् । तथा च सुखदुःखभोगप्राप्तिः स्यात् तच्च न कर्तृत्वमिति भावः ।।**

ಸೂತ್ರದ ಪರಿಹಾರಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಅದನ್ನೇ ಉತ್ಪತ್ತಿ ಎಂಬುದಾಗಿ ಸ್ಪಷ್ಟಪಡಿಸುತ್ತಿದ್ದಾರೆ. ಒಂದು ವೇಳೆ ಕಾರಕಗಳ ಸಮೂಹವನ್ನು ಸಾಕ್ಷಾತ್ತಾದ ಪ್ರಯತ್ನಗಳಿಗೆ ಅಧಿಷ್ಠೇಯವನ್ನಾಗಿ ಶರೀರಾದಿಗಳಂತೆ ಕರ್ತೃತ್ವಕ್ಕೆ ಉಪಯೋಗಿಯಾಗಿ ಒಪ್ಪಿದರೆ ಕಾರಕ ಸಮೂಹಗಳ ಉಪಾದಾನದಿಂದ ಉತ್ಪತ್ತಿಯು ಹಾಗೂ ಕಾರಕಗಳ ತ್ಯಾಗದಿಂದ ಹಾನಿಯನ್ನು ಒಪ್ಪಿದಾಗ ಪಶುಪತಿಗೆ ಮರಣವನ್ನು ಹೇಳಿದಂತಾಗುತ್ತದೆ. ಏಕೆಂದರೆ ಕಾರಕಸಮೂಹಗಳ ಸ್ವೀಕಾರದಿಂದ ಮತ್ತು ಅದರ ಹಾನಿಯಿಂದ ಮರಣವು ಅಧಿಷ್ಠೇಯವಾದ ಶರೀರದಲ್ಲಿ ನಮಗಿರುವುದು ಅನುಭೂತವಾಗಿದೆ. ಆದ್ದರಿಂದ ಸುಖದುಃಖಗಳೆಂಬ ಭೋಗಪ್ರಾಪ್ತಿಯು ಪಶುಪತಿಗೆ ಆಗುತ್ತದೆ. ಹಾಗಾಗಿ ಕರ್ತೃತ್ವವನ್ನು ಒಪ್ಪಲು ಸಾಧ್ಯವಾಗುವುದಿಲ್ಲ.

ವಿವರಣೆ - ಪ್ರಕೃತ್ಯಾದಿಗಳ ಸಮೂಹವೇ ರುದ್ರನ ಪ್ರಯತ್ನಕ್ಕೆ ಅಧಿಷ್ಠೇಯವಾದ ಶರೀರವೆಂದು ಹೇಳಿದರೆ ಸುಖದುಃಖಗಳ ಅನುಭವವೂ ಕೂಡ ಅವನಿಗೆ ಬರುತ್ತದೆಂದು

ಹೇಳಿದಂತಾಯಿತು. ಮತ್ತು ಆ ಶರೀರಕ್ಕೆ ನಮ್ಮ ಶರೀರದಂತೆ ಉತ್ಪತ್ತಿ ಮರಣಗಳನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ರುದ್ರನಿಗೆ ಕರ್ತೃತ್ವವು ಯುಕ್ತವಾಗುವುದಿಲ್ಲ.

ಕೈ, ಕಾಲು ಮೊದಲಾದ ಅವಯವಗಳಿದ್ದರೆ ಮಾತ್ರ ಸುಖದುಃಖಾದಿಗಳ ಭೋಗವು ಉಂಟಾಗುತ್ತದೆ. ಆದರೆ ರುದ್ರನಿಗೆ ಅವಯವಗಳೇ ಇಲ್ಲದ್ದರಿಂದ ಸುಖದುಃಖಾದಿಗಳ ಭೋಗವು ಉಂಟಾಗುವುದಿಲ್ಲವೆಂದು ಪೂರ್ವಪಕ್ಷಕಾರರು ಹೇಳಬಹುದು. ಆದರೆ ಭೂದೇವತೆಗೆ ಹಸ್ತಪಾದಾದಿಗಳು ಇಲ್ಲದಿದ್ದರೂ ಭೂಮಿಗೆ ಅಭಿಮಾನಿಯಾಗಿದ್ದಾಳೆಂಬ ಕಾರಣದಿಂದ ಭೂಭಾರದಿಂದ ದುಃಖದ ಅನುಭವ ಆಗಿರುವುದೂ ಕಂಡಿದೆ.

## ಭಾವದೀಪ

**भावदीपः – ।। करणवच्चेन्न भोगादिभ्यः ।।४० ।।** पूर्वसूत्रद्वयोक्तदोषाक्षेपसमाधिपरत्वमस्य व्यञ्जयन् भाष्यं व्याचष्टे ।। **नेति ।।** भाष्यस्थजगच्छब्दार्थमाह – **कारकग्रामस्येति ।।** सूत्रे करणशब्दः शरीरपरः। सृष्टौ शरीरस्य सहकारित्वादिति भावेनाह – **अस्मदादिशरीरेति ।।** वतिप्रत्ययार्थः ।। **समानत्वेनेति ।।** तस्यैव चेति ।। कारकव्रातस्येत्यर्थः ।। ४० ।।

ಹಿಂದಿನ ಎರಡು ಸೂತ್ರಗಳಲ್ಲಿ ಹೇಳಿದ ದೋಷಗಳಿಗೆ ಶೈವರು ಆಕ್ಷೇಪವನ್ನು ಮಾಡುತ್ತಾರೆ. ಅದಕ್ಕೆ ಸಮಾಧಾನವನ್ನು ಹೇಳುವುದಕ್ಕಾಗಿ ಭಾಷ್ಯವನ್ನು ವ್ಯಾಖ್ಯಾನಿಸಲು 'ನ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಭಾಷ್ಯದಲ್ಲಿರುವ ಜಗತ್ ಎಂಬ ಪದದ ಅರ್ಥವನ್ನು 'ಕಾರಕಗ್ರಾಮಸ್ಯ' ಎಂದು ಹೇಳಿದ್ದಾರೆ. ಸೂತ್ರದಲ್ಲಿರುವ ಕರಣಶಬ್ದವು ಶರೀರಪರವಾಗಿದೆ. ಸೃಷ್ಟಿಯಲ್ಲಿ ಶರೀರವು ಸಹಕಾರಿಯಾಗಿದೆ ಎಂಬ ಅಭಿಪ್ರಾಯದಿಂದ 'ಅಸ್ಮದಾದಿಶರೀರ' ಎಂದು ಹೇಳಿದ್ದಾರೆ. 'ವತಿ' ಎಂಬ ಪ್ರತ್ಯಯದ ಅರ್ಥವನ್ನು 'ಸಮಾನತ್ವೇನ' ಎಂದು ಹೇಳಿದ್ದಾರೆ. 'ತಸ್ಯೈವ ಚ' ಎಂದರೆ ಆ ಕಾರಕಗಳ ಸಮುದಾಯವೇ ಎಂದರ್ಥ.

## ಬ್ರಹ್ಮಸೂತ್ರ

### 'ಅಂತವತ್ತ್ವಮಸರ್ವಜ್ಞತಾ ವಾ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – अन्तवत्त्वमसर्वज्ञता वा ।।**

ರುದ್ರನಿಗೆ ದೇಹವನ್ನು ಒಪ್ಪಿದರೆ ಪರಿಮಿತವಾದ ಪರಿಮಾಣವುಳ್ಳವನಾಗುತ್ತಾನೆ. ದೇಹವನ್ನು ಒಪ್ಪದಿದ್ದರೆ ಸರ್ವಜ್ಞನೆಂದೇ ಹೇಳಲು ಸಾಧ್ಯವಾಗುವುದಿಲ್ಲ.

ಅರ್ಥ -- ಯಾವ ಕಾರಣದಿಂದ ರುದ್ರನಿಗೆ ದೇಹವನ್ನು ಒಪ್ಪಿದರೆ ಅಥವಾ ಒಪ್ಪದಿದ್ದರೆ ಕ್ರಮವಾಗಿ ಅಂತವತ್ತ್ವಂ = ನಾಶವು ಬರುತ್ತದೆ. ಅಸರ್ವಜ್ಞತಾ = ಸರ್ವಜ್ಞತ್ವವು ಬರುವುದಿಲ್ಲ.

ರುದ್ರನಿಗೆ ಶರೀರವಿದೆಯೋ, ಇಲ್ಲವೋ, ಶರೀರವಿರುವುದಾದರೆ ನಮ್ಮ ಶರೀರದಷ್ಟೇ ಪರಿಮಾಣವಿರುವುದರಿಂದ ನಾಶವನ್ನೂ ಕೂಡ ಒಪ್ಪಬೇಕಾಗುತ್ತದೆ. ಶರೀರವಿಲ್ಲವೆಂದರೆ ಜ್ಞಾನವೇ ಇಲ್ಲದಿರುವುದರಿಂದ ಸರ್ವಜ್ಞತ್ವವು ಕೂಡುವುದಿಲ್ಲ. ಆದ್ದರಿಂದ ಜಗತ್ಕಾರಣತ್ವವು ರುದ್ರನಿಗೆ ಸರ್ವಥಾ ಯುಕ್ತವಾಗುವುದಿಲ್ಲ ಎಂದರ್ಥ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಪತ್ಯುರಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ದೇಹ ಇದ್ದರೆ ಮಾತ್ರವೇ ಜ್ಞಾನ ಬರಲು ಸಾಧ್ಯ

**ब्रह्मसूत्रभाष्यम् – ।। अन्तवत्त्वमसर्वज्ञता वा ।।९।।**

**देहवत्त्वेऽन्तवत्वम् । अन्यथा ज्ञानाभावः । शरीरिण एव हि ज्ञानोत्पत्तिर्दृष्टा ।**

ಅನುವಾದ - ರುದ್ರನಿಗೆ ದೇಹವಿದೆ ಎಂದು ಒಪ್ಪಿದರೆ ಪರಿಚ್ಛಿನ್ನತ್ವವನ್ನು ಒಪ್ಪಬೇಕಾಗುತ್ತದೆ. ದೇಹವಿಲ್ಲವೆಂದು ಹೇಳಿದರೆ ಜ್ಞಾನವೇ ಇಲ್ಲವೆಂದು ಒಪ್ಪಬೇಕಾಗುತ್ತದೆ. ಯಾರಿಗೆ ಶರೀರವಿದೆಯೋ ಅವನಿಗೆ ಮಾತ್ರ ಜ್ಞಾನವಿರುವುದು ಲೋಕದಲ್ಲಿ ಕಂಡಿದೆ. ಈ ಎಲ್ಲ ವಿರೋಧಗಳಿರುವುದರಿಂದ ರುದ್ರನಿಗೆ ಜಗತ್ಕಾರಣತ್ವವನ್ನು ಒಪ್ಪಲಾಗದು.

ಪ್ರತಿಪದಾರ್ಥ -- ದೇಹವತ್ತ್ವೇ = ರುದ್ರನಿಗೆ ದೇಹವನ್ನು ಒಪ್ಪಿದರೆ, ಅಂತವತ್ವಮ್ = ಪರಿಚ್ಛೇದವನ್ನು ಒಪ್ಪಬೇಕಾಗುತ್ತದೆ. ಅನ್ಯಥಾ = ದೇಹವಿಲ್ಲವೆಂದು ಹೇಳಿದರೆ, ಜ್ಞಾನಾಭಾವಃ = ಜ್ಞಾನವೇ ಇಲ್ಲದಿರಬೇಕಾದೀತು. ಶರೀರಣ ಏವ = ಶರೀರ ಇದ್ದವರಿಗೆ ಮಾತ್ರವೇ, ಜ್ಞಾನೋತ್ಪತ್ತಿಃ = ಜ್ಞಾನ ಹುಟ್ಟುವುದು, ದೃಷ್ಟಾ = ಕಂಡಿದೆ.

ಭಗವಂತನ ಕರ್ತೃತ್ವಕ್ಕೆ ಯಾವ ವಿರೋಧವೂ ಇಲ್ಲ

**ब्रह्मसूत्रभाष्यम् – विष्णोस्तु श्रुत्यैव विरोधाः परिहृताः । 'यदात्मको भगवांस्तदात्मिका व्यक्तिः । किमात्मको भगवान् ? ज्ञानात्मक ऐश्वर्यात्मकः शक्त्यात्मक इति ।**

ಅನುವಾದ - ವಿಷ್ಣುವು ಜಗತ್ಕಾರಣನಾಗಿದ್ದಾನೆಂದು ಹೇಳಿದರೆ ಹಿಂದೆ ಹೇಳಿದ ಯಾವ ವಿರೋಧಗಳೂ ಸಹ ಬರುವುದಿಲ್ಲ. ಶ್ರುತಿಯಿಂದಲೇ ಆ ಎಲ್ಲ ವಿರೋಧಗಳನ್ನು ಪರಿಹರಿಸಿದ್ದಾಗಿದೆ.

ಪರಮಾತ್ಮನು ಯಾವ ಸ್ವರೂಪವನ್ನು ಹೊಂದಿದ್ದಾನೊ ಅವನ ದೇಹವೂ ಕೂಡ ಅದೇ ಸ್ವರೂಪವನ್ನು ಹೊಂದಿದೆ. ಪರಮಾತ್ಮನ ಸ್ವರೂಪವು ಎಂಥಹದ್ದು? ಜ್ಞಾನಸ್ವರೂಪ ಐಶ್ವರ್ಯಸ್ವರೂಪ ಶಕ್ತಿಸ್ವರೂಪ. ಅವನ ದೇಹವೂ ಕೂಡ ಹೀಗಿಯೆ.

ಪ್ರತಿಪದಾರ್ಥ -- ವಿಷ್ಣೋಸ್ತು = ವಿಷ್ಣುವಿಗಾದರೂ, ಶ್ರುತ್ಯೇವ = ಶ್ರುತಿಯಿಂದಲೇ, ವಿರೋಧಾಃ = ಜಗತ್‌ಕಾರಣತ್ವವಿರೋಧಿಯಾದ ವಿರೋಧಗಳು, ಪರಿಹೃತಾಃ = ಪರಿಹಾರ ಮಾಡಲ್ಪಟ್ಟಿವೆ. ಭಗವಾನ್ = ಭಗವಂತನು, ಯದಾತ್ಮಕಃ = ಯಾವ ಸ್ವರೂಪವುಳ್ಳವನೋ, ತದಾತ್ಮಿಕಾವ್ಯಕ್ತಿಃ = ಅವನ ದೇಹವೂ ಕೂಡ ಅದೇ

ಸ್ವರೂಪವುಳ್ಳದ್ದು, ಭಗವಾನ್ = ಪರಮಾತ್ಮನು, ಕಿಮಾತ್ಮಕಃ = ಎಂಥ ಸ್ವರೂಪವುಳ್ಳವನು? ಜ್ಞಾನಾತ್ಮಕಃ = ಜ್ಞಾನಸ್ವರೂಪನು, ಐಶ್ವರ್ಯಾತ್ಮಕಃ = ಐಶ್ವರ್ಯಸ್ವರೂಪನು, ಶಕ್ತ್ಯಾತ್ಮಕಃ = ಶಕ್ತಿಸ್ವರೂಪನು, ಇತಿ = ಹೀಗೆ

ಭಗವಂತನು ಬುದ್ಧಿ, ಅಂಗ, ಪ್ರತ್ಯಂಗ ಸಹಿತನೆ ?

**ब्रह्मसूत्रभाष्यम् – 'बुद्धिमनोऽङ्गप्रत्यङ्गवतां भगवतो लक्षयामहे । बुद्धिमान्मनोवान् अङ्गवान्प्रत्यङ्गवान्' इति ।**

ಅನುವಾದ - ಬುದ್ಧಿ ಮನಸ್ಸು ದೇಹ ಹಸ್ತಾದಿಪ್ರತ್ಯಂಗಗಳು ಇವೆಲ್ಲವೂ ಕೂಡ ಪರಮಾತ್ಮನಿಗಿವೆ. ಆದ್ದರಿಂದ ಅವನು ಬುದ್ಧಿಯುಳ್ಳವನು ಮನಸ್ಸುಳ್ಳವನು ದೇಹವುಳ್ಳವನು ಹಸ್ತಾದಿಗಳುಳ್ಳವನೆಂದು ಕರೆಸಿಕೊಳ್ಳುತ್ತಾನೆ.

ಪ್ರತಿಪದಾರ್ಥ -- ಬುದ್ಧಿಮನೋऽಂಗಪ್ರತ್ಯಂಗವತಾಂ = ಬುದ್ಧಿ, ಮನಸ್ಸು, ದೇಹವೆಂಬ ಅಂಗ ಹಸ್ತಗಳೆಂಬ ಪ್ರತ್ಯಂಗಗಳ ಇರುವಿಕೆಯನ್ನು, ಭಗವತಃ = ಭಗವಂತನಿಗೆ, ಲಕ್ಷಯಾಮಹೇ = ತಿಳಿಯುತ್ತೇವೆ, ಬುದ್ಧಿಮಾನ್ = ಬುದ್ಧಿಯುಳ್ಳವನು, ಮನೋಮಾನ್ = ಮನಸ್ಸುಳ್ಳವನು, ಅಂಗವಾನ್ = ದೇಹವುಳ್ಳವನು, ಪ್ರತ್ಯಂಗವಾನ್ = ಹಸ್ತಾದಿಗಳುಳ್ಳವನು, ಇತಿ = ಹೀಗೆ ತಿಳಿಯಬೇಕು.

ಪರಮಾತ್ಮನ ದೇಹ ಅಪ್ರಾಕೃತ

**ब्रह्मसूत्रभाष्यम् – 'सद्देहः सुखगन्धश्च ज्ञानभाः सत्पराक्रमः । ज्ञानज्ञानः सुखसुखः स विष्णुः परमोऽक्षरः' (पैङ्गिश्रुतिः) इत्यादिकया ।।५।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये पत्युरधिकरणम् ।। ११ ।।**

ಅನುವಾದ - ಪರಮಾತ್ಮನ ದೇಹವು ಅಪ್ರಾಕೃತವಾಗಿದೆ ಸುಖಸ್ವರೂಪವಾಗಿದೆ ಜ್ಞಾನಸ್ವರೂಪವಾಗಿದೆ ಎದುರಾಳಿಗಳಿಲ್ಲದ ಪರಾಕ್ರಮ ಶಾಲಿಯಾಗಿದೆ. ಅಪರಿಮಿತ ಸುಖಾತ್ಮಕವಾಗಿದೆ. ಉತ್ತಮಳಾದ ಲಕ್ಷ್ಮಿಗಿಂತಲೂ ಶ್ರೇಷ್ಠವಾಗಿದೆ. ಅಂಥ ಪರಮಾತ್ಮನು ಅಕ್ಷರ ಎಂದು ಕರೆಸಿಕೊಳ್ಳುತ್ತಾನೆ. ಇವೇ ಮೊದಲಾದ ಶ್ರುತಿಗಳಿಂದ ಪರಮಾತ್ಮನಲ್ಲಿ ವಿರೋಧಗಳು ಪರಿಹಾರವಾಗುತ್ತವೆ.

ಪ್ರತಿಪದಾರ್ಥ -- ಸದ್ದೇಹಃ = ಪರಮಾತ್ಮನ ದೇಹವು ನಿರ್ದುಷ್ಟವಾಗಿದೆ, ಸುಖಗಂಧಶ್ಚ = ಸುಖರೂಪವಾಗಿದೆ ಸುವಾಸನೆಯುಕ್ತವಾಗಿದೆ, ಜ್ಞಾನಭಾಃ = ಜ್ಞಾನಪ್ರಭೆಯಿಂದ ಕಂಗೊಳಿಸುತ್ತಿದೆ, ಸತ್ಪರಾಕ್ರಮಃ = ಎದುರಾಳಿಗಳಿಲ್ಲದ ಪರಾಕ್ರಮಶಾಲಿಯಾಗಿದೆ. ಜ್ಞಾನಜ್ಞಾನಃ = ಅಪರಿಮಿತವಾದ ಜ್ಞಾನಸ್ವರೂಪವಾಗಿದೆ, ಸುಖಸುಖಃ = ಅಮಿತವಾದ ಸುಖಸ್ವರೂಪವಾಗಿದೆ, ಸಃ = ಅಂಥ ಶರೀರವುಳ್ಳ, ವಿಷ್ಣುಃ = ವಿಷ್ಣುವು, ಪರಮಃ = ಲಕ್ಷ್ಮಿಗಿಂತಲೂ ಶ್ರೇಷ್ಠನು, ಅಕ್ಷರಃ = ಅಕ್ಷರಶಬ್ದವಾಚ್ಯನು. ಇತ್ಯಾದಿಕಯಾ = ಇವೇ ಮೊದಲಾದ ಶ್ರುತಿಗಳಿಂದ ಪರಮಾತ್ಮನಲ್ಲಿ ವಿರೋಧವು ಪರಿಹಾರವಾಗುತ್ತದೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಪತ್ಯುರಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

**सत्तर्कदीपावलिः – यदि मरणादिभयाद्देहो नास्तीत्युच्यते तर्हि घटादिवत्सर्वज्ञत्वं न स्यात् । देहिन एव घटादिज्ञानं दृष्टं नादेहिनः इत्यर्थः । सम्बन्धानुपपत्तेरित्यादिनोक्तदोषः जगत्कर्तृविष्णोः किं न स्यादिति शङ्कां परिहरति । विष्णोरित्यादिना । अप्राकृतदेहत्वेन विष्णोर्देहप्रयुक्तदोषासम्भव इत्यर्थः ।।**

ಒಂದುವೇಳೆ ಮರಣಾದಿ ಭಯದಿಂದ ದೇಹವೇ ಇಲ್ಲ ಎಂದು ಹೇಳುವುದಾದರೆ, ಆಗ ಘಟಾದಿಗಳಂತೆ ರುದ್ರನೂ ಕೂಡ ಸರ್ವಜ್ಞನಾಗದೇ ಇರಬೇಕಾದೀತು. ದೇಹವಿರುವವರಿಗೆ ಮಾತ್ರ ಘಟಾದಿಜ್ಞಾನವು ಬರುವುದು ಕಂಡಿದೆ. ದೇಹ ಇಲ್ಲದವನಿಗೆ ಘಟಾದಿಗಳ ಜ್ಞಾನ ಬರುವುದಿಲ್ಲ.

'ಸಂಬಂಧಾನುಪಪತ್ತೇಶ್ಚ' ಇತ್ಯಾದಿ ಸೂತ್ರಗಳಿಂದ ಶೈವರಿಗೆ ಹೇಳಲ್ಪಟ್ಟ ದೋಷಗಳು ವಿಷ್ಣುವೇ ಜಗತ್‌ಕರ್ತೃವಾಗಿದ್ದಾನೆ ಎಂಬ ಪಕ್ಷದಲ್ಲಿ ಏಕೆ ಬರುವುದಿಲ್ಲ? ಎಂಬ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ 'ವಿಷ್ಣೋಃ' ಇತ್ಯಾದಿ ಭಾಷ್ಯವು ಹೊರಟಿದೆ. ನಾವು ಅಂಗೀಕರಿಸಿದ ವಿಷ್ಣುವಿಗೆ ಅಪ್ರಾಕೃತವಾದ ದೇಹವಿದೆ. ದೇಹಪ್ರಯುಕ್ತವಾದ ಯಾವುದೇ ದೋಷಗಳೂ ಕೂಡ ಅವನಲ್ಲಿ ಇರುವುದಿಲ್ಲ. ಆದ್ದರಿಂದ ರುದ್ರನಂತೆ ವಿಷ್ಣುವು ಜಗತ್‌ಕರ್ತೃವಾದಾಗ ದೋಷಗಳಿಗೆ ಅವಕಾಶವಿಲ್ಲ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಪತ್ಯುರಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

## ತತ್ವಪ್ರದೀಪ

### 'ಜ್ಞಾನಜ್ಞಾನಃ' ಎಂಬ ಶ್ರುತ್ಯರ್ಥ

**तत्वप्रदीपः – अन्तवत्त्वमसर्वज्ञता वा । सद्देहो निर्दोषदेहः । ज्ञानज्ञानः नाज्ञानमिश्रज्ञानः । सुखसुखः न दुःखमिश्रितसुख इत्यर्थः । आदिशब्दात् ''स्वे महिम्नि'' ''किं स्विदासीदधिष्ठानम्'' ''आत्मेश्वरम्'' इत्यादयो द्रष्टव्याः ।**

ಸದ್ದೇಹಃ = ನಿರ್ದುಷ್ಟವಾದ ದೇಹವುಳ್ಳವನು. ಜ್ಞಾನಜ್ಞಾನಃ = ಅಜ್ಞಾನದ ಮಿಶ್ರಣವಿಲ್ಲದ ಜ್ಞಾನವುಳ್ಳವನು. ಸುಖಸುಖಃ = ದುಃಖಮಿಶ್ರಣವಾಗದ ಸುಖವುಳ್ಳವನು ಎಂಬುದು ಶ್ರುತಿಯ ಅರ್ಥ. ಆದಿಶಬ್ದದಿಂದ 'ಸ್ವೇಮಹಿಮ್ನಿ' ಹಾಗೂ 'ಕಿಂ ಸ್ವಿದಾಸೀದಧಿಷ್ಠಾನಮ್' 'ಆತ್ಮೇಶ್ವರಮ್'

ಇವೇ ಮೊದಲಾದ ಶ್ರುತಿಗಳನ್ನು ವಿವಕ್ಷಿಸಬೇಕು. ಇದೇ ವಿಷಯದಲ್ಲಿ ಅನೇಕ ಸ್ಮೃತಿವಾಕ್ಯಗಳು ಪ್ರಮಾಣವಾಗಿವೆ.

ದೇವರಿಗೆ ಯಾರೂ ಆಶ್ರಯರಲ್ಲ

**''रुद्रं समाश्रिता देवा रुद्रो ब्रह्मणमाश्रितः ।**
**ब्रह्मा मामाश्रितो नित्यं नाहं कश्चिदुपाश्रितः ।।'' इति भगवद्वचनम् ।**

ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಣಮಾಶ್ರಿತಃ।
ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ ॥

ಸಕಲದೇವತೆಗಳು ರುದ್ರನನ್ನು ಆಶ್ರಯಿಸಿದ್ದಾರೆ. ರುದ್ರದೇವರು ಚತುರ್ಮುಖ ಬ್ರಹ್ಮದೇವರನ್ನು ಆಶ್ರಯಿಸಿದ್ದಾರೆ. ಚತುರ್ಮುಖ ಬ್ರಹ್ಮದೇವರು ನನ್ನನ್ನು ಆಶ್ರಯಿಸಿದ್ದಾರೆ. ಆದರೆ ನಾನು ಯಾರನ್ನೂ ಕೂಡ ಆಶ್ರಯಿಸಿಲ್ಲ ಎಂಬುದಾಗಿ ಸಾಕ್ಷಾತ್ ಪರಮಾತ್ಮನೇ ಹೇಳಿರುತ್ತಾನೆ.

ದೇವರ ಬಲ ಸ್ವತಂತ್ರ

**''बलमिन्द्रस्य गिरिशो गिरिशस्य बलं मरुत् ।**
**बलं तस्य हरिः साक्षान्न हरेर्बलमन्यतः'' ।। इति भारते ।**

ಬಲಮಿಂದ್ರಸ್ಯ ಗಿರಿಶೋ ಗಿರಿಶಸ್ಯ ಬಲಂ ಮರುತ್ ।
ಬಲಂ ತಸ್ಯ ಹರಿಃ ಸಾಕ್ಷಾನ್ನ ಹರೇರ್ಬಲಮನ್ಯತಃ ॥

ಇಂದ್ರದೇವರಿಗೆ ರುದ್ರದೇವರಿಂದ ಬಲವು ಪ್ರಾಪ್ತವಾಗಿದೆ. ರುದ್ರದೇವರಿಗೆ ವಾಯುದೇವರಿಂದ ಬಲವು ಪ್ರಾಪ್ತವಾಗಿದೆ. ವಾಯುದೇವರಿಗೆ ಶ್ರೀಹರಿಯಿಂದ ಬಲವು ಪ್ರಾಪ್ತವಾಗಿದೆ. ಆದರೆ ಶ್ರೀಹರಿಗೆ ಮತ್ತೊಬ್ಬರಿಂದ ಬಲವು ಬಂದಿರುವುದಲ್ಲ ಸ್ವಾಭಾವಿಕವಾಗಿಯೇ ಇದೆ. ಹೀಗೆ ಮಹಾಭಾರತವು ಹೇಳಿದೆ.

### ಗುಣಗುಣಿಗಳಿಗೆ ಅಭೇದ

''अवयव्यवयवानां तु गुणानां गुणिनस्तथा ।
शक्तिशक्तिमतोश्चैव क्रियायास्तद्वतस्तथा ।।

ಅವಯವ್ಯವಯವಾನಾಂ ತು ಗುಣಾನಾಂ ಗುಣಿನಸ್ತಥಾ ।
ಶಕ್ತಿಶಕ್ತಿಮತೋಶ್ಚೈವ ಕ್ರಿಯಾಯಾಸ್ತದ್ವತಸ್ತಥಾ ॥

ಅವಯವ ಮತ್ತು ಅವಯವಿಗಳಿಗೆ, ಗುಣ ಮತ್ತು ಗುಣಿಗಳಿಗೆ, ಶಕ್ತಿ ಮತ್ತು ಶಕ್ತಿಮತ್‌ಗಳಿವೆ, ಕ್ರಿಯಾ ಮತ್ತು ಕ್ರಿಯಾವತ್‌ಗಳಿಗೆ ನಿತ್ಯವಾಗಿ ಅಭೇದವೇ ಇರುತ್ತದೆ.

### ಮೂರು ಸ್ಥಳಗಳಲ್ಲಿ ಅಭೇದ

स्वरूपांशांशिनोश्चैव नित्याभेदो जनार्दने ।
जीवस्वरूपेषु तथा तथैव प्रकृतावपि ।।

ಸ್ವರೂಪಾಂಶಾಂಶಿನೋಶ್ಚೈವ ನಿತ್ಯಾಭೇದೋ ಜನಾರ್ದನೇ ।
ಜೀವಸ್ವರೂಪೇಷು ತಥಾ ತಥೈವ ಪ್ರಕೃತಾವಪಿ ॥

ಜೀವಸ್ವರೂಪದ ಅಂಶಾಂಶಗಳಿಗೆ ನಿತ್ಯವಾಗಿ ಅಭೇದವಿರುತ್ತದೆ. ಪರಮಾತ್ಮನ ಅಂಶಾಂಶಗಳಿಗೂ ಕೂಡ ನಿತ್ಯವಾಗಿ ಅಭೇದವೇ ಇರುತ್ತದೆ. ಅದರಂತೆ ಚಿತ್‌ಪ್ರಕೃತಿ ಅಂಶಾಂಶಗಳಿಗೂ ಕೂಡ ಅಭೇದವೇ ಇರುತ್ತದೆ.

### ನಿರ್ಗುಣತ್ವ ಶ್ರುತಿಗೆ ಅರ್ಥ

चिद्रूपायामतोऽनंशा अगुणा अक्रिया इति ।
हीना अवयवैश्चेति कथ्यन्ते तेऽत्यभेदतः ।।

ಚಿದ್ರೂಪಾಯಾಮತೋಽನಂಶಾ ಅಗುಣಾ ಅಕ್ರಿಯಾ ಇತಿ ।
ಹೀನಾ ಅವಯವೈಶ್ಚೇತಿ ಕಥ್ಯಂತೇ ತೇಽತ್ಯಭೇದತಃ ॥

ಜನಾರ್ದನ, ಜೀವ ಹಾಗೂ ಚಿತ್‌ಪ್ರಕೃತಿ ಇವುಗಳ ಅಂಶಾಂಶಗಳಿಗೆ ಅಭೇದವಿರುವುದರಿಂದ ಗುಣ ಮತ್ತು ಕ್ರಿಯೆಗಳಿಂದ ಅಭೇದವಿರುವುದರಿಂದ ಶ್ರುತಿಗಳಲ್ಲಿ ಅಗುಣ ಎಂದು, ಅಕ್ರಿಯಾ ಎಂದು ಅವಯವಗಳಿಲ್ಲವೆಂದು ಹೇಳಲ್ಪಡುತ್ತದೆ. ಹೀಗೆ ಹೇಳಲು ಅಭೇದವಿರುವುದೇ ಕಾರಣ.

### ಅಚಿಂತ್ಯಶಕ್ತಿಯ ವೈಶಿಷ್ಟ್ಯ

**पृथग्गुणाद्यभावाच्च नित्यत्वादुभयोरपि ।**
**विष्णोरचिन्त्यशक्तेश्च सर्वं सम्भवति ध्रुवम् ।।**

ಪೃಥಕ್‌ಗುಣಾದ್ಯಭಾವಾಚ್ಚ ನಿತ್ಯತ್ವಾದುಭಯೋರಪಿ ।
ವಿಷ್ಣೋರಚಿಂತ್ಯಶಕ್ತೇಶ್ಚ ಸರ್ವಂ ಸಂಭವತಿ ಧ್ರುವಮ್ ॥

ಗುಣಗಳು ಪ್ರತ್ಯೇಕವಾಗಿ ಇಲ್ಲದ ಕಾರಣ ಗುಣಕ್ರಿಯಾದಿಗಳು ನಿತ್ಯವಾಗಿರುವುದರಿಂದ ಅಭೇದಪ್ರಯೋಗವು ಯುಕ್ತವಾಗುತ್ತದೆ. ಇದೆಲ್ಲವೂ ವಿಷ್ಣುವಿನ ಅಚಿಂತ್ಯಶಕ್ತಿಯಿಂದ ವಿರೋಧ ಬಾರದಂತೆ ಸಂಭವಿಸುತ್ತವೆ.

### ಗುಣಗಳು ನಿತ್ಯವಾದರೂ ದೋಷವಿಲ್ಲ

**क्रियादेरपि नित्यत्वं व्यक्त्यव्यक्तिविशेषणम् ।**
**भावाभावविशेषेण व्यवहारश्च तादृशः ।।**

ಕ್ರಿಯಾದೇರಪಿ ನಿತ್ಯತ್ವಂ ವ್ಯಕ್ತ್ಯವ್ಯಕ್ತಿವಿಶೇಷಣಮ್ ।
ಭಾವಾಭಾವವಿಶೇಷೇಣ ವ್ಯವಹಾರಶ್ಚ ತಾದೃಶಃ ॥

ಕ್ರಿಯೆಗಳೆಲ್ಲವೂ ನಿತ್ಯವೇ ಆಗಿರುತ್ತವೆ. ಅಭಿವ್ಯಕ್ತಿಯಾಗುವಿಕೆ, ಅಭಿವ್ಯಕ್ತಿಯಾಗದಿರುವಿಕೆ ಎಂಬುದರಿಂದ ಅವುಗಳನ್ನು ಕೂಡಿಸಬೇಕು. ಹಾಗೂ ಕ್ರಿಯೆಗಳಿವೆ, ಕ್ರಿಯೆಗಳಿಲ್ಲ ಎಂಬ ವ್ಯವಹಾರವನ್ನೂ ಕೂಡ ಅಭಿವ್ಯಕ್ತಿಯ ಹಾಗೂ ಅಭಿವ್ಯಕ್ತಿಯ ಅಭಾವದಿಂದಲೇ ಕೂಡಿಸಬೇಕು.

ವಿಶೇಷ್ಯ-ವಿಶಿಷ್ಟಗಳಿಗೆ ಅಭೇದ

**विशेष्यस्य विशिष्टस्याप्यभेदस्तद्वदेव तु ।**
**सर्वं चाचिन्त्यशक्तित्वाद्युज्यते परमेश्वरे ।।**

ವಿಶೇಷ್ಯಸ್ಯ ವಿಶಿಷ್ಟಸ್ಯಾಪ್ಯಭೇದಸ್ತದ್ವದೇವ ತು ।
ಸರ್ವಂ ಚಾಚಿಂತ್ಯಶಕ್ತಿತ್ವಾದ್ಯುಜ್ಯತೇ ಪರಮೇಶ್ವರೇ ॥

ವಿಶೇಷ್ಯ ಹಾಗೂ ವಿಶಿಷ್ಟಗಳಿಗೆ ಅಭೇದವನ್ನೂ ಕೂಡ ಭೇದವನ್ನು ಒಪ್ಪದೇ ಕೂಡಿಸಬೇಕು. ಇದೆಲ್ಲವೂ ಕೂಡ ಪರಮಾತ್ಮನ ಅಚಿಂತ್ಯಾದ್ಭುತಶಕ್ತಿಯಿಂದ ಯುಕ್ತವಾಗುತ್ತದೆ. (ಜ್ಞಾನೀ ಪರಮಾತ್ಮಾ ಎಂದು ಹೇಳಿದಾಗ ಜ್ಞಾನ ಎಂಬ ವಿಶೇಷಣವು ಜ್ಞಾನಕ್ಕೂ ಪರಮಾತ್ಮನಿಗೂ ಭೇದವೇ ಇರುತ್ತದೆ.)

ಅಯಾವದ್ ದ್ರವ್ಯಗಳಲ್ಲಿ ಭೇದಾಭೇದ

**तच्छक्त्यैव तु जीवेषु चिद्रूपप्रकृतावपि ।**
**भेदाभेदौ तदन्यत्र ह्युभयोरपि दर्शनात् ।**
**कार्यकारणयोश्चापि निमित्तं कारणं विना'' इति ब्रह्मतर्के ।।**

ತತ್‌ಶಕ್ತ್ಯೈವ ತು ಜೀವೇಷು ಚಿದ್ರೂಪಪ್ರಕೃತಾವಪಿ ।
ಭೇದಾಭೇದೌ ತದನ್ಯತ್ರ ಹ್ಯುಭಯೋರಪಿ ದರ್ಶನಾತ್ ।
ಕಾರ್ಯಕಾರಣಯೋಶ್ಚಾಪಿ ನಿಮಿತ್ತಂ ಕಾರಣಂ ವಿನಾ ॥ ಇತಿ ಬ್ರಹ್ಮತರ್ಕೇ

ಆ ಪರಮಾತ್ಮನ ಅಚಿಂತ್ಯಶಕ್ತಿಯಿಂದಲೇ ಈಶ್ವರ, ಜೀವ, ಪ್ರಕೃತಿ ಈ ಮೂರರಲ್ಲಿ ಅಭೇದವನ್ನೇ ಹೇಳಬೇಕು. ಈ ಮೂರನ್ನು ಬಿಟ್ಟು ಬೇರೆ ಪದಾರ್ಥಗಳಲ್ಲಿ ಅಯಾವದ್ ದ್ರವ್ಯಭಾವಿ - ಪದಾರ್ಥಗಳಿಗೆ ಭೇದಾಭೇದವನ್ನೇ ಹೇಳಬೇಕು. ಕಾರ್ಯ ಹಾಗೂ ಕಾರಣಗಳಿಗೂ ಕೂಡ ಭೇದಾಭೇದವನ್ನೇ ಹೇಳಬೇಕು. ಆದರೆ ನಿಮಿತ್ತಕಾರಣಕ್ಕೂ, ಕಾರ್ಯಕ್ಕೂ ಭೇದವನ್ನೇ ಹೇಳಬೇಕು. ಹೀಗೆ ಬ್ರಹ್ಮತರ್ಕದಲ್ಲಿ ಹೇಳಲಾಗಿದೆ.

ಅಧಿಕರಣ ಪ್ರಮೇಯ

**तस्मान्न रुद्रः सर्वकर्तेति सिद्धम् । अनयैव न्यायेन स्कान्दादिमतान्यपि निराकृतानि प्रधानमल्लनिबर्हणन्यायानुसारेण ।**

**।। इति पशुपत्यधिकरणम् ।।**

ಆದ್ದರಿಂದ ರುದ್ರನು ಸರ್ವಕರ್ತೃವಲ್ಲ ಎಂಬುದು ಸಿದ್ಧವಾಯಿತು. ಇದೇ ನ್ಯಾಯದಿಂದ ಸ್ಕಾಂದ, ಗಾಣಪತ ಮೊದಲಾದ ಮತಗಳನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಮಹಾಮಲ್ಲಭಂಗನ್ಯಾಯಕ್ಕೆ ಅನುಸಾರಿಯಾಗಿ ಬೃಹತ್ತಾದ ಶೈವಮತವನ್ನೇ ನಿರಾಕರಣೆ ಮಾಡಿದ ಮೇಲೆ ಉಳಿದ ಮತಗಳ ನಿರಾಕರಣೆಯು ಅರ್ಥಾತ್ ಸಿದ್ಧವಾಯಿತು.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ
ಪತ್ಯುರಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

ತತ್ವಪ್ರಕಾಶಿಕಾ

ಹಿಂದಿನ ಎರಡು ಪಕ್ಷಗಳ ಮೇಲೆ ವಿಕಲ್ಪದ ನಿರಾಸ

**तत्वप्रकाशिका – उक्तपक्षावेव विकल्पभङ्ग्या दोषान्तरेण दूषयत्सूत्रं पठित्वा व्याचष्टे – अन्तवत्त्वमिति ।।**

ಹಿಂದೆ ಹೇಳಿದ ಎರಡು ಪಕ್ಷಗಳನ್ನೇ ಬೇರೆ ರೀತಿಯ ವಿಕಲ್ಪ ಮಾಡಿ ಆ ಪಕ್ಷಗಳಿಗೆ ಬೇರೆ ಬೇರೆ ದೋಷವನ್ನು ಹೇಳಿ ನಿರಾಕರಣೆ ಮಾಡುವ ಸೂತ್ರವನ್ನು ಪಠಿಸಿ 'ಅಂತವತ್ತ್ವಂ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಭಾವದೀಪ

**भावदीपः – ।। अन्तवत्त्वमसर्वज्ञता वा ।। ४१ ।। उक्तपक्षावेवेति ।।** सम्बन्धानुपपत्तिसूत्रोक्तशरीराभावपक्षं करणवच्चेदित्युक्तशरीरवत्त्वपक्षं चेत्यर्थः ॥

'ಸಂಬಂಧಾನುಪಪತ್ತೇಶ್ಚ' ಸೂತ್ರದಲ್ಲಿ ಹೇಳಲ್ಪಟ್ಟ ಶರೀರಾಭಾವ ಪಕ್ಷವನ್ನು ಮತ್ತು 'ಕರಣವಚ್ಚೇತ್' ಇತ್ಯಾದಿ ಸೂತ್ರದಲ್ಲಿ ಹೇಳಲ್ಪಟ್ಟ ಶರೀರವತ್ತ್ವಪಕ್ಷವನ್ನು 'ಉಕ್ತಪಕ್ಷ' ಎಂಬುದರಿಂದ ಉಲ್ಲೇಖ ಮಾಡಿದ್ದಾರೆ.

ವಿವರಣೆ - 'ಕರಣವಚ್ಚೇನ್ನ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಶರೀರವತ್ತ್ವವನ್ನು 'ಸಂಬಂಧಾನುಪತ್ತೇಶ್ಚ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಶರೀರಾಭಾವಪಕ್ಷವನ್ನು ವಿಕಲ್ಪ ಮಾಡಿ ಎರಡೂ ಪಕ್ಷದಲ್ಲಿ ದೋಷವನ್ನು ಹೇಳುತ್ತಿದ್ದಾರೆ.

ರುದ್ರನಿಗೆ ಶರೀರ ಇದೆಯೋ ಇಲ್ಲವೋ?

**तत्वप्रकाशिका – पशुपतिः कर्तेति वदन् प्रष्टव्यो जायते किमसौ शरीरी न वेति । शरीरी चेत्परिच्छिन्नः स्याद्यज्ञदत्तवत् । तथा च न जगत्कर्तृत्त्वम् । यदि न शरीरी तर्हि तस्य ज्ञानमेव न स्यात् कुतः सार्वज्ञमिति च न जगत्करणत्वमिति भावः ।**

ಪಶುಪತಿಯೇ ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳುವ ಶೈವನನ್ನು ಕುರಿತು ಪ್ರಶ್ನಿಸುತ್ತೇವೆ. ಆ ಪಶುಪತಿಗೆ ಶರೀರ ಇದೆಯೋ? ಇಲ್ಲವೋ? ಶರೀರ ಇದೆ ಎಂದು ಹೇಳಿದರೆ ಯಜ್ಞದತ್ತಾದಿಗಳಂತೆ ಪರಿಚ್ಛಿನ್ನನಾಗಿದ್ದಾನೆಂದಂತಾಯಿತು. ಆಗ ಸಮಸ್ತ ಜಗತ್‌ಕರ್ತೃತ್ವವು ಯುಕ್ತವಾಗುವುದಿಲ್ಲ. ಒಂದುವೇಳೆ ಶರೀರ ಇರುವುದಿಲ್ಲ ಎಂದು ಹೇಳಿದರೆ ಆಗ ಅವನಿಗೆ ಜ್ಞಾನವೇ ಇಲ್ಲವೆಂದಂತಾಯಿತು. ಹೀಗಿರುವಾಗ ಸಾರ್ವಜ್ಞ್ಯವನ್ನು ಅವನಲ್ಲಿ ಹೇಳಲು ಹೇಗೆ ಸಾಧ್ಯವಾಗುತ್ತದೆ ? ಆದ್ದರಿಂದ ಜಗತ್ಕಾರಣತ್ವವು ರುದ್ರನಲ್ಲಿ ಬರುವುದಿಲ್ಲ.

**भावदीपः – शरीरी न वेति ।।** भावरूपत्वात्सूत्रे पूर्वं शरीरत्वपक्षदोषोक्तिरिति सूचितम्। पूर्वेणापौनरुक्त्यायान्तवत्त्वशब्दार्थमाह **– परिच्छिन्न इति ।।** न च शरीरित्वेऽ

पि न्यायमते जीवात्मन इवापरिच्छिन्नत्वमिति वाच्यम् । तस्यैव दूष्यत्वात्। तन्मतेऽपि शरीरावच्छिन्नस्यैव कर्तृत्वेन तस्य परिच्छिन्नत्वात्। तादृशस्य सार्वदैशिकसर्वकर्तृत्वायोग इत्यर्थः। जीवाणुत्वमते देशान्तरकार्यस्य जीवकर्तृत्वाङ्गीकारेऽपि अदृष्टद्वारेव न साक्षादित्यभ्युपगमात्। इति च न जगत्कारणत्वमितीतिशब्दो हेत्वर्थः। न केवलं सम्बन्धानुपपत्तिभोगादिप्राप्तिभ्याम्। किन्तु असार्वज्ञं परिच्छिन्नत्वरूपहेतुबलाच्चेत्यर्थः॥

ಭಾವರೂಪವಾಗಿರುವುದರಿಂದ ಸೂತ್ರದಲ್ಲಿ ಮೊದಲು ಶರೀರತ್ವಪಕ್ಷದಲ್ಲಿ ದೋಷವನ್ನು ಹೇಳಲಾಗಿದೆ ಎಂದು ಸೂಚಿಸಿದ್ದಾರೆ. ಹಿಂದಿನ ಸೂತ್ರದಿಂದ ಪುನರುಕ್ತಿ ಬರುವುದಿಲ್ಲವೆಂದು ತಿಳಿಸುವುದಕ್ಕಾಗಿ 'ಅಂತವತ್ತ್ವ' ಶಬ್ದದ ಅರ್ಥವನ್ನು 'ಪರಿಚ್ಛಿನ್ನಃ' ಎಂದು ಹೇಳಿದ್ದಾರೆ. ರುದ್ರನಿಗೆ ಶರೀರವಿದೆ ಎಂದು ಒಪ್ಪುತ್ತೇವೆ. ಅಂದಮಾತ್ರಕ್ಕೆ ಪರಿಚ್ಛಿನ್ನನಾಗಬೇಕಾಗಿಲ್ಲ. ಹೇಗೆ ತಾರ್ಕಿಕರು ಜೀವನನ್ನು ಅಪರಿಚ್ಛಿನ್ನ ಎಂದು ಹೇಳುತ್ತಾರೋ, ಅದರಂತೆ ನಾವೂ ಕೂಡ ರುದ್ರನನ್ನು ಅಪರಿಚ್ಛಿನ್ನವೆನ್ನುತ್ತೇವೆ. ಹೀಗೆ ಪ್ರಶ್ನಿಸಬಾರದು. ಏಕೆಂದರೆ ಜೀವಾತ್ಮನು ಅಪರಿಚ್ಛಿನ್ನನಾಗಿದ್ದಾನೆಂಬ ತಾರ್ಕಿಕಮತವನ್ನು ಈಗಾಗಲೇ ನಾವು ನಿರಾಕರಣೆ ಮಾಡಿದ್ದೇವೆ. ಮತ್ತು ತಾರ್ಕಿಕಮತದಲ್ಲೂ ಕೂಡ ಶರೀರಾವಚ್ಛಿನ್ನನಾದ ಆತ್ಮನಿಗೆ ಮಾತ್ರ ಕರ್ತೃತ್ವವನ್ನು ಅಂಗೀಕರಿಸಲಾಗಿದೆ. ಶರೀರ ಬಿಟ್ಟು ಹೊರಗೆ ಇರುವ ಆತ್ಮನಿಗೆ ಮಾತ್ರ ಕರ್ತೃತ್ವವನ್ನು ಅಂಗೀಕರಿಸಲಾಗಿದೆ. ಶರೀರಬಿಟ್ಟು ಹೊರಗೆ ಇರುವ ಆತ್ಮನಿಗೆ ಕರ್ತೃತ್ವವನ್ನು ಅಂಗೀಕಾರ ಮಾಡಿಲ್ಲ. ಆದ್ದರಿಂದ ವಿಚಾರ ಮಾಡಿದರೆ ಕರ್ತೃವಾದ ಜೀವನಿಗೆ ತಾರ್ಕಿಕರು ಪರಿಚ್ಛೇದವನ್ನು ಒಪ್ಪಿದ್ದಾರೆ. ಹೀಗೆ ಶರೀರಾವಚ್ಛಿನ್ನನಾದ ರುದ್ರನಿಗೆ ಸಾರ್ವದೇಶಿಕವಾದ ಸರ್ವಕರ್ತೃತ್ವವು ಯುಕ್ತವಾಗುವುದಿಲ್ಲ ಎಂದರ್ಥ.

ಯಾವ ಮತದಲ್ಲಿ ಜೀವನನ್ನು ಅಣುವೆಂದು ಅಂಗೀಕರಿಸಲಾಗುತ್ತದೋ, ಅವರ ಪ್ರಕಾರ ಮತ್ತೊಂದು ದೇಶದಲ್ಲಿ ನಡೆಯುವ ಕಾರ್ಯಕ್ಕೆ ಜೀವನು ಕರ್ತೃವಾಗಿದ್ದಾನೆಂದು ಒಪ್ಪುತ್ತಾರೆ. ಆದರೆ ಅದೃಷ್ಟದ ಮೂಲಕ ಕರ್ತೃವಾಗಿದ್ದಾನೆಂದು ಹೇಳುತ್ತಾರೆ ಹೊರತು, ನೇರವಾಗಿ ಕರ್ತೃವಾಗಿದ್ದಾನೆಂದು ಒಪ್ಪುವುದಿಲ್ಲ. ರುದ್ರನು ಅಣುವೆಂದು ಅಂಗೀಕರಿಸಿದರೆ ಸಕಲ ಜಗತ್ತಿಗೆ ನೇರವಾಗಿ ಕರ್ತೃವೆಂದು ಸಮರ್ಥನೆ ಮಾಡಲು ಸಾಧ್ಯವಾಗುವುದಿಲ್ಲ. ಈ ಕಾರಣದಿಂದಲೂ ರುದ್ರನಿಗೆ ಜಗತ್ಕಾರಣತ್ವವು ಕೂಡುವುದಿಲ್ಲ. 'ಇತಿ ಚ ನ ಜಗತ್ಕಾರಣತ್ವಮಿತಿ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇಲ್ಲಿರುವ 'ಇತಿ' ಶಬ್ದವು ಹೇತ್ವರ್ಥದಲ್ಲಿದೆ

ಎಂದು ಇದರಿಂದ ತಿಳಿಯುತ್ತದೆ. ಕೇವಲ ಸಂಬಂಧಾನುಪಪತ್ತಿ ಹಾಗೂ ಭೋಗಾದಿ ಪ್ರಾಪ್ತಿ ಎಂಬೆರಡು ಹೇತುಗಳಿಂದಷ್ಟೇ ಜಗತ್ಕಾರಣನಲ್ಲ ಎಂದು ಸಿದ್ಧವಾಗುವುದಲ್ಲ. ಅಸಾರ್ವಜ್ಞ್ಯ ಹಾಗೂ ಪರಿಚ್ಛಿನ್ನತ್ವವೆಂಬ ಹೇತುಗಳ ಬಲದಿಂದಲೂ ಕೂಡ ರುದ್ರನು ಜಗತ್ಕಾರಣನಲ್ಲ ಎಂದು ಸಿದ್ಧವಾಗುತ್ತದೆ.

ಜ್ಞಾನಾದಿಗಳಿಗಾಗಿ ಶರೀರ ಅತ್ಯಾವಶ್ಯಕ

**तत्वप्रकाशिका – शरीराभावे कुतो ज्ञानाभाव इत्यतो व्यतिरेकव्याप्तिं दर्शयति – शरीरिण एवेति ।। न च वक्तव्यमिच्छागृहीतविग्रहत्वान्नान्तवत्त्वादीति। अशरीरस्येच्छायोगात् । अनेन शरीरानपेक्षं ज्ञानं नित्यत्वादिति परस्तम् ।**

ರುದ್ರನಿಗೆ ಶರೀರ ಇಲ್ಲವೆಂದು ಹೇಳಿದರೆ ಜ್ಞಾನ ಇಲ್ಲ ಎಂದು ಹೇಗೆ ಹೇಳಿದಂತಾಗುತ್ತದೆ? ಎಂಬ ಪ್ರಶ್ನೆಗೆ ವ್ಯತಿರೇಕವ್ಯಾಪ್ತಿಯನ್ನು 'ಶರೀರಿಣಃ ಏವ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಸ್ವೇಚ್ಛೆಯಿಂದ ಅವನು ಶರೀರವನ್ನು ಸ್ವೀಕರಿಸುತ್ತಾನೆ. ಆದ್ದರಿಂದ ಮರಣಾದಿದೋಷಗಳು ಅವನಿಗೆ ಬರುವುದಿಲ್ಲ. ಹೀಗೆ ಶೈವರು ಆಕ್ಷೇಪ ಮಾಡಬಹುದು. ಇದು ತಪ್ಪು. ಹಾಗೆ ಇಚ್ಛೆ ಮಾಡಬೇಕಾದರೂ ಶರೀರವು ಬೇಕಾಗುತ್ತದೆ. ಶರೀರ ಇಲ್ಲದವನಿಗೆ ಇಚ್ಛೆಯೇ ಕೂಡುವುದಿಲ್ಲ.

ಶರೀರದ ಅಪೇಕ್ಷೆ ಇಲ್ಲದೆ ಜ್ಞಾನವು ನಿತ್ಯವಾಗಿದೆ ಎಂದು ಹೇಳಿದ್ದು ತಪ್ಪು. ಜ್ಞಾನವಿರಬೇಕಾದರೂ ಕೂಡ ಶರೀರ ಇರಲೇ ಬೇಕು.

**भावदीपः –अनेनेति ।।** शरीरिण एव ज्ञानदर्शनभाषणेनेत्यर्थः ।।

'ಅನೇನ' ಎಂಬ ಪದಕ್ಕೆ ಶರೀರ ಇರುವವನಲ್ಲಿ ಮಾತ್ರ ಜ್ಞಾನವಿರುತ್ತದೆಂದು ಹೇಳಿದ್ದರಿಂದ ಎಂದರ್ಥ.

ವಿಷ್ಣುವಿನಲ್ಲಿ ಯಾವ ದೋಷ ವಿಶೇಷಗಳೂ ಇಲ್ಲ

**तत्वप्रकाशिका – ननु विष्णावप्येते दोषाः प्रसरन्त्येवेति कर्तृत्वानुपपत्तिरित्याशङ्कां सूत्रकृता निरस्तामपि पुनः प्रमाणविशेषैः परिहरति – विष्णोस्त्विति ।।**

ವಿಷ್ಣುವಿನಲ್ಲೂ ಈ ದೋಷಗಳು ಸಮಾನವಾಗಿವೆ. ಆದ್ದರಿಂದ ವಿಷ್ಣುವಿನಲ್ಲೂ ಕರ್ತೃತ್ವವು ಅನುಪಪನ್ನವಾಗುತ್ತದಲ್ಲವೆ? ಈ ಆಶಂಕೆಯನ್ನು ಸೂತ್ರಕಾರರು ಈ ಹಿಂದೆ ನಿರಾಕರಣೆ ಮಾಡಿದ್ದರೂ ಕೂಡ ಪುನಃ ಪ್ರಮಾಣವಿಶೇಷಗಳಿಂದ 'ವಿಷ್ಣೋಸ್ತು' ಇತ್ಯಾದಿಯಾಗಿ ಭಾಷ್ಯಕಾರರು ನಿರಾಕರಣೆ ಮಾಡುತ್ತಿದ್ದಾರೆ.

**भावदीपः – सूत्रकृतेति ।।** आत्मनि चैवं विचित्राश्च हि। सर्वोपेता च तद्दर्शनात्। विकरणत्वान्नेति चेत्तदुक्तमित्यादिसूत्रेष्विति भावः। तद्दर्शनादित्याद्युक्त्या प्रमाणैरपि परिहृतत्वादाह – **प्रमाणविशेषैरिति ।।**

ಸೂತ್ರಕಾರರು ಈ ಯಾವುದೇ ದೋಷಗಳಿಲ್ಲ ಎಂಬುದನ್ನು ಈಗಾಗಲೇ ಉಪಪಾದನೆ ಮಾಡಿದ್ದಾರೆ. 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' 'ಸರ್ವೋಪೇತಾ ಚ ತದ್ದರ್ಶನಾತ್' 'ವಿಕರಣತ್ವಾನ್ನೇತಿ ಚೇತ್ತದುಕ್ತಮ್' ಇವೇ ಮೊದಲಾದ ಸೂತ್ರದಲ್ಲಿ ರುದ್ರನಲ್ಲಿ ಪ್ರಾಪ್ತವಾಗುವ ದೋಷಗಳಿಗೆ ವಿಷ್ಣುವಿನಲ್ಲಿ ಅವಕಾಶವಿಲ್ಲವೆಂದು ತಿಳಿಸಲಾಗಿದೆ. 'ತದ್ದರ್ಶನಾತ್' ಎಂದು ಹೇಳಿದ್ದರಿಂದ ಪ್ರಮಾಣಗಳಿಂದಲೂ ಕೂಡ ವಿಷ್ಣುವಿನಲ್ಲಿ ದೋಷಗಳನ್ನು ಪರಿಹರಿಸಲಾಗಿದೆ ಎಂದು ತಿಳಿಸಲಾಗಿದೆ. ಅದನ್ನೇ ಟೀಕೆಯಲ್ಲಿ 'ಪ್ರಮಾಣವಿಶೇಷೈಃ' ಎಂದು ಹೇಳಿದ್ದಾರೆ.

## ಪಾಶುಪತಮತದ ವಿರೋಧವೂ ಬರುವುದಿಲ್ಲ

**तत्वप्रकाशिका – बुद्धीति श्रुत्येश्वरस्य शरीरित्वाभिधात्र्या ज्ञानाभावादिदोषाः परिहृताः । 'यदात्मकः' इत्यादिकया तु तद्देहस्य ज्ञानाद्यात्मकभगवत्स्वरूपाभिधात्र्याऽन्तवत्त्वादिदोषाः परिहृताः । एवं पाशुपतमतनिरासन्यायेनान्येऽपि चत्वारः समया निराकृता वेदितव्याः । तस्मात् पाशुपतसमयस्यानुपपन्नत्वेनाविरोधकत्वाद्युक्तं लक्षणसूत्रमिति सिद्धम् ।।**

'ಬುದ್ಧಿ' ಇತ್ಯಾದಿ ಶ್ರುತಿಯಿಂದ ಈಶ್ವರನಿಗೆ ಶರೀರಿತ್ವವನ್ನು ಹೇಳುವ ಶ್ರುತಿಗಳಿಂದ 'ಜ್ಞಾನವೇ ಇರುವುದಿಲ್ಲ' ಇತ್ಯಾದಿ ದೋಷಗಳನ್ನು ಪರಿಹರಿಸಿದಂತಾಯಿತು.

'ಯದಾತ್ಮಕಃ' ಇತ್ಯಾದಿ ಶ್ರುತಿಗಳಿಂದ ಆವನ ಶರೀರವು ಜ್ಞಾನಾನಂದಾತ್ಮಕವಾಗಿದೆ. ಭಗವತ್ ಸ್ವರೂಪವಾಗಿದೆ ಎಂದು ಜ್ಞಾನಾದ್ಯಾತ್ಮಕಸ್ವರೂಪವನ್ನು ಹೇಳುವ ಶ್ರುತಿಗಳಿಂದ ಅಂತವತ್ತ್ವ, ಮೊದಲಾದ ದೋಷಗಳನ್ನು ಪರಿಹರಿಸಿದಂತಾಯಿತು.

ಹೀಗೆ ಪಾಶುಪತಮತವನ್ನು ನಿರಾಕರಣೆ ಮಾಡುವ ಯುಕ್ತಿಗಳಿಂದ ಉಳಿದ ನಾಕು ಮತಗಳ ನಿರಾಕರಣೆಯನ್ನೂ ತಿಳಿಯಬೇಕು. ಆದ್ದರಿಂದ ಪಾಶುಪತಸಮಯವು ಅನುಪಪನ್ನ- ವಾಗಿರುವುದರಿಂದ ಇದರ ವಿರೋಧವು ಬರುವುದಿಲ್ಲ. ಆದ್ದರಿಂದ ವಿಷ್ಣುವೇ ಜಗಜ್ಜನ್ಮಾದಿ- ಕಾರಣನಾಗಿದ್ದಾನೆಂಬ ಲಕ್ಷಣವು ಸಾಧುವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ತ್ವಪ್ರಕಾಶಿಕಾಟೀಕೆಯಲ್ಲಿ
ಪತ್ಯುರಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

**भावदीप:** – 'स्कन्दसूर्यगणेशादिमतानि न्यायतोऽमुतः। निराकृतान्यशेषेण सिद्धा तस्याविशेषतः' इत्यनुभाष्योक्तमाह – **एवमिति तस्मादिति।।** पारतन्त्र्यादिना शिवकर्तृत्वानुपपत्तेरित्यर्थः॥ ४१ ॥

ಸ್ಕಂಧಸೂರ್ಯಗಣೇಶಾದಿಮತಾನಿ ನ್ಯಾಯತೋಽಮುತಃ।
ನಿರಾಕೃತಾನ್ಯಶೇಷೇಣ ಸಿದ್ಧಾ ತಸ್ಯಾವಿಶೇಷತಃ' ॥

ಇದೇ ನ್ಯಾಯದಿಂದ ಸ್ಕಾಂದಮತ, ಸೌರಮತ, ಗಾಣಪತಮತ ಮೊದಲಾದವುಗಳನ್ನು ನಿರಾಕರಣೆ ಮಾಡಿದಂತಾಯಿತು. ಪಾಶುಪತಮತದವರು ಹೇಳುವ ನ್ಯಾಯಕ್ಕೂ, ಇವರುಗಳು ಹೇಳುವ ನ್ಯಾಯಕ್ಕೂ ಯಾವುದೇ ವ್ಯತ್ಯಾಸವಿಲ್ಲ. ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಅದರ ಪ್ರಕಾರ ಟೀಕೆಯಲ್ಲಿ 'ಏವಂ' ಎಂಬ ವಾಕ್ಯವು ಹೊರಟಿದೆ. 'ತಸ್ಮಾತ್' ಎಂಬ ಪದಕ್ಕೆ ಪಾರತಂತ್ರ್ಯಾದಿಗಳಿರುವುದರಿಂದ ಶಿವಕರ್ತೃತ್ವವು ಅನುಪಪನ್ನವಾಗುವುದರಿಂದ ಎಂದರ್ಥ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಪತ್ಯುರಧಿಕರಣದ ಕನ್ನಡ ಅನುವಾದವು ಮುಗಿಯಿತು ॥

## ಭಾವದೀಪದ ವೈಶಿಷ್ಟ್ಯ

* ತಾರ್ಕಿಕರು ಜೀವನನ್ನು ವ್ಯಾಪ್ತನೆಂದು ಹೇಳುತ್ತಾರೆ. ಅದರಂತೆ ರುದ್ರನಿಗೆ ಶರೀರವಿದ್ದರೂ ಕೂಡ ಸರ್ವತ್ರ ವ್ಯಾಪ್ತಿಯನ್ನು ಹೇಳಬಹುದಲ್ಲವೇ? ಎಂಬ ಆಕ್ಷೇಪವನ್ನು ತೋರಿಸಿದ್ದಾರೆ.

* ಜೀವನು ಅಣುವೆಂದು ಒಪ್ಪುವವರೂ ಕೂಡ ಬೇರೆ ದೇಶದಲ್ಲಿ ನಡೆಯುವ ಕಾರ್ಯವು ಅದೃಷ್ಟದ ಮೂಲಕ ಹೊರತು, ಸಾಕ್ಷಾತ್ತಲ್ಲ. ಆದ್ದರಿಂದ ರುದ್ರನಿಗೂ ಕೂಡ ಅದೃಷ್ಟದ ಮೂಲಕವೇ ಜಗತ್ಕರ್ತೃತ್ವವೇ ಬರುತ್ತದೆ. ನೇರವಾಗಿ ಬರುವುದಿಲ್ಲ ಎಂಬ ದೋಷವನ್ನು ಅಧಿಕವಾಗಿ ಹೇಳಿದ್ದಾರೆ.

* ಅನುವ್ಯಾಖ್ಯಾನದಲ್ಲಿ ಸ್ಕಾಂದ, ಸೌರ ಮೊದಲಾದ ಮತಗಳ ನಿರಾಕರಣೆಯು ಇದರಿಂದಲೇ ಆಗಿದೆಯೆಂದು ಹೇಳಿದ್ದಾರೆ. ಅದನ್ನೇ ಇಲ್ಲಿ ನೆನಪಿಸಿದ್ದಾರೆ.

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## पत्युरधिकरणम् -११

ಜೈನರಿಗೆ ಬಂದ ದೋಷ ನಮಗಿಲ್ಲ

।। पत्युरसामञ्जस्यात् ।।२-२-३७।।

अत्र नये नैकस्मिन्नित्युक्तदोषोऽत्र नेति प्राप्तं सौरादिमतोपलक्षणत्वेन शैवमतं निरस्यते । नेति कारणत्वमिति च वर्तते । पत्युः पशुपतेः न जगत्कारणत्वं युक्तम् । कुतः? पत्युरसामञ्जस्यात् पारतन्त्र्यजनिमृत्यादि-दोषित्वादित्यर्थः । तच्च श्रुत्यादिसिद्धमिति भावः । पत्युरित्युभयत्रान्वेति।।

ಈ ಅಧಿಕರಣದಲ್ಲಿ 'ನೈಕಸ್ಮಿನ್ನಸಂಭವಾತ್' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ದೋಷವು ತಮಗೆ ಬರುವುದಿಲ್ಲವೆಂದು ಶೈವರು ಹೇಳುತ್ತಾರೆ. ಆ ಶೈವಮತವನ್ನು ಈಗ ನಿರಾಕರಣೆ ಮಾಡುತ್ತಿದ್ದಾರೆ. ಉಪಲಕ್ಷಣಯಾ ಸೌರಮತ ಮೊದಲಾದ ಬೇರೆ ಮತಗಳ ನಿರಾಕರಣೆಯೂ ಕೂಡ ಇದರಂತೆ ತಿಳಿಯಬೇಕು ಎಂದು ಸೂಚಿಸಿದ್ದಾರೆ. ಈ ಸೂತ್ರದಲ್ಲಿ ನ ಎಂಬ ಪದವನ್ನು ಕಾರಣತ್ವಂ ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು.

ಪತ್ಯುಃ = ರುದ್ರನಿಗೆ, ನ ಕಾರಣತ್ವಂ = ಜಗತ್‌ಕಾರಣತ್ವವು ಯುಕ್ತವಲ್ಲ ಏಕೆಂದರೆ ಪತ್ಯುರಸಾಮಂಜಸ್ಯಾತ್ = ಪಶುಪತಿಗೆ ಪಾರತಂತ್ರ್ಯ, ಜನನ, ಮರಣ ಮೊದಲಾದ ದೋಷಗಳು ಇರುತ್ತವೆ. ಇಷ್ಟು ಸೂತ್ರಾರ್ಥ. ಈ ದೋಷಗಳು ಪಶುಪತಿಯಲ್ಲಿವೆ ಎನ್ನಲು ಶ್ರುತ್ಯಾದಿಗಳೇ ಪ್ರಮಾಣವಾಗಿವೆ ಎಂಬುದು ಅಭಿಪ್ರಾಯ. 'ಪತ್ಯುಃ' ಎಂಬ ಪದಕ್ಕೆ ಎರಡು ಕಡೆ ಅನ್ವಯವನ್ನು ತಿಳಿಯಬೇಕು.

ವಿವರಣೆ - ರುದ್ರನಲ್ಲಿ ಪಾರತಂತ್ರ್ಯಾದಿ ದೋಷಗಳಿರುವುದರಿಂದ ಜಗತ್‌ಕಾರಣತ್ವವು ಅಯುಕ್ತವಾಗುತ್ತದೆಂಬುದು ಸೂತ್ರದ ಅಭಿಪ್ರಾಯ. 'ಪತ್ಯುಃ' ಎಂಬ ಪದವನ್ನು ಎರಡು ಕಡೆ ಅನ್ವಯವನ್ನು ಮಾಡಬೇಕು. ಆಗ 'ಪತ್ಯುಃ ನ ಜಗತ್‌ಕಾರಣತ್ವಂ ಪತ್ಯುಃ ಅಸಾಮಂಜಸ್ಯಾತ್' ಎಂದು ಅನ್ವಯವನ್ನು ಹೇಳಿದಂತಾಗುತ್ತದೆ.

### ರುದ್ರನ ಜಗತ್ಕಾರಣತ್ವ ನಿರಾಕರಣೆಗೆ ಮತ್ತೊಂದು ಹೇತು

इतश्च न युक्तमित्याह -

।। सम्बन्धानुपपत्तेश्च ।।२-२-३८।।

पत्युरित्यस्ति । पत्युरशरीरत्वाज्जगता कार्यकर्तृभावरूपसम्बन्धानुपपत्तेश्च न पत्युः कर्तृत्वमित्यर्थः ।।

ಮುಂದೆ ಹೇಳುವ ಕಾರಣದಿಂದಲೂ ಕೂಡ ಪಶುಪತಿಗೆ ಜಗತ್‌ಕಾರಣತ್ವವು ಯುಕ್ತವಾಗುವುದಿಲ್ಲ - 'ಸಂಬಂಧಾನುಪಪತ್ತೇಶ್ಚ'

'ಪತ್ಯುಃ' ಎಂಬ ಪದವು ಇಲ್ಲೂ ಕೂಡ ಅನುವೃತ್ತವಾಗುತ್ತದೆ. ಪತ್ಯುಃ = ಪಶುಪತಿಗೆ ಶರೀರವಿಲ್ಲದ ಕಾರಣ ಕಾರ್ಯಕರ್ತೃಭಾವರೂಪವಾದ ಸಂಬಂಧವು ಪಶುಪತಿಗೂ ಹಾಗೂ ಜಗತ್ತಿಗೂ ಉಪಪನ್ನವಾಗುವುದಿಲ್ಲ. ಆ ಕಾರಣದಿಂದ ಪಶುಪತಿಗೆ ಜಗತ್‌ಕರ್ತೃತ್ವವು ಇರುವುದಿಲ್ಲ ಎಂಬುದು ಸೂತ್ರಾರ್ಥ.

ಮತಿಯೇ ಇಲ್ಲದವನು ಒಡೆಯ ಹೇಗಾಗುವನು ?

इतश्चैवमित्याह -

।। अधिष्ठानानुपपत्तेश्च ।।२-२-३९।।

पृथिव्याद्यधिष्ठानानुपपत्तेश्च न पत्युः कारणत्वमित्यर्थः । भूतानां प्रलीनत्वेन सृष्ट्यादिकालेऽभावादिति भावः । अभावादिति वाच्येऽनुपपत्तेरित्युक्तिः कारकत्वात् तस्यैवाधिष्ठानत्वे चेतानन्तरवद्भोग-प्राप्त्या तदनुपपत्तेरित्यग्रेनतनदोषसूचनाय ।।

ಮತ್ತೊಂದು ಕಾರಣದಿಂದಲೂ ಪಶುಪತಿಗೆ ಜಗತ್ಕಾರಣತ್ವವಿಲ್ಲವೆಂದು ಹೇಳುತ್ತಿದ್ದಾರೆ - 'ಅಧಿಷ್ಠಾನಾನುಪಪತ್ತೇಶ್ಚ'

ಅಧಿಷ್ಠಾನಾನುಪಪತ್ತೇಶ್ಚ = ಪ್ರಥಿವೀ ಮೊದಲಾದ ಆಶ್ರಯವೇ ಅನುಪಪನ್ನವಾಗಿರುವುದರಿಂದ ಪಶುಪತಿಗೆ ಜಗತ್ಕಾರಣತ್ವವು ಯುಕ್ತವಲ್ಲ ಎಂಬುದು ಸೂತ್ರಾರ್ಥ. ಪ್ರತಿಯೊಂದು ಭೂತಗಳು ಲಯವನ್ನು ಹೊಂದುತ್ತವೆ. ಆದ್ದರಿಂದ ಸೃಷ್ಟಿಯ ಆದಿಕಾಲದಲ್ಲಿ ಪಶುಪತಿಗೆ ಆಶ್ರಯವೇ ಇಲ್ಲ ಎಂದಾಯಿತು.

ಸೂತ್ರದಲ್ಲಿ 'ಅಧಿಷ್ಠಾನಾಭಾವಾತ್' ಎಂದು ಹೇಳಬೇಕಿತ್ತು. 'ಅನುಪಪತ್ತೇಶ್ಚ' ಎಂದೇಕೆ ಹೇಳಿದರು? ಎಂದರೆ ಸೃಷ್ಟಿಕ್ರಿಯೆಗೆ ಕಾರಣನಾಗಿರುವುದರಿಂದ ರುದ್ರನನ್ನೇ ಅಧಿಷ್ಠಾನವೆಂದು ಹೇಳಬೇಕು. ಹಾಗೆ ಹೇಳಿದಾಗ ಬೇರೆ ಚೇತನರಂತೆ ರುದ್ರನಿಗೂ ಕೂಡ ಸುಖ-ದುಃಖಾನುಭವರೂಪವಾದ ಭೋಗವು ಉಂಟಾಗಬೇಕಾದೀತು. ಆದ್ದರಿಂದ ರುದ್ರನಿಗೆ ಅಧಿಷ್ಠಾನವು ಅನುಪಪನ್ನವೆಂದು ಮುಂದೆ ಹೇಳುವ ದೋಷವನ್ನು ಸೂಚನೆ ಮಾಡುವುದಕ್ಕಾಗಿ 'ಅಭಾವಾತ್' ಎಂದು ಹೇಳದೇ 'ಅನುಪಪತ್ತೇಃ' ಎಂದು ಹೇಳಿರುತ್ತಾರೆ.

ಆಕ್ಷೇಪದ್ವಯಗಳಿಗೆ ಉತ್ತರ

योगद्वयोक्तमाक्षिप्याह -

।। करणवच्चेन्न भोगादिभ्यः ।।२-२-४०।।

करणमिति देह उच्यते । जीवस्य तत्तत्कार्यजनने तस्य सहकारित्वात्। एतच्चोपलक्षणम् । अस्मदादिशरीरवदिदं कारकजातं साक्षात् प्रयत्नाधिष्ठेयतया पत्युः शरीररूपमधिष्ठानरूपं चेति न । सम्बन्धानुपपत्त्यादिति चेन्न । भोगादिभ्यः सुखदुःखानुभवरूपभोगोत्पत्तिमरणाख्यदोषेभ्य इत्यर्थः । कारकजातस्य शरीरत्वे तद्धर्मप्राप्तेरनिवारणादिति भावः ।।

ಹಿಂದಿನ ಎರಡು ಸೂತ್ರಗಳಲ್ಲಿ ಹೇಳಿದ್ದನ್ನೇ ಆಕ್ಷೇಪ ಮಾಡಿ ಉತ್ತರವನ್ನು ನೀಡುತ್ತಿದ್ದಾರೆ - 'ಕರಣವಚ್ಚೇನ್ನ ಭೋಗಾದಿಭ್ಯಃ'.

'ಕರಣಮ್' ಎಂಬ ಪದವು ದೇಹವನ್ನು ಹೇಳುತ್ತಿದೆ. ಜೀವನಿಗೆ ಆಯಾ ಕಾರ್ಯಗಳು ಉಂಟಾಗಬೇಕಾದರೆ ದೇಹವು ಸಹಕಾರಿಯಾಗಿದೆ. ಆದ್ದರಿಂದ ದೇಹವನ್ನೇ ಕರಣಪದದಿಂದ ವಿವಕ್ಷಿಸಬೇಕು. ಇದು ಕೇವಲ ಉಪಲಕ್ಷಣ. ಜೀವರುಗಳ ಶರೀರದಂತೆ ಜಗತ್ತಿನ ಸೃಷ್ಟಿಗೆ ಆವಶ್ಯಕವಾದ ಎಲ್ಲಾ ಕಾರಣಗಳು ನೇರವಾಗಿ ಪಶುಪತಿಯ ಪ್ರಯತ್ನಕ್ಕೆ ಅಧಿಷ್ಠೇಯವಾಗಿರುವುದರಿಂದ ಶಿವನ ಶರೀರವೂ ಕೂಡ ಅಧಿಷ್ಠಾನವಾಯಿತು. ಆದ್ದರಿಂದ ರುದ್ರನಿಗೆ ಸಂಬಂಧಾನುಪಪತ್ತಿ ಹಾಗೂ ಅಧಿಷ್ಠಾನುಪಪತ್ತಿಗಳು ದೋಷವೇ ಅಲ್ಲ ಎಂದು ಹೇಳಬಾರದು. ಭೋಗಾದಿಭ್ಯಃ = ಸುಖದುಃಖಾನುರೂಪವಾದ ಭೋಗ, ಜನನ, ಮರಣ ಇತ್ಯಾದಿ ದೋಷಗಳಿರುವುದರಿಂದ ಎಂಬುದು ಸೂತ್ರಾರ್ಥ. ಜಗತ್ತಿನ ಸೃಷ್ಟಿಗೆ ಆವಶ್ಯಕವಾದ ಎಲ್ಲಾ ಕಾರಣಗಳು ಶಿವನ ಶರೀರವೇ ಆದರೆ ಶರೀರಧರ್ಮವಾದ ಭೋಗಾದಿದೋಷಗಳನ್ನು ಪರಿಹರಿಸಲು ಸಾಧ್ಯವಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ - ಕರಣಶಬ್ದದಿಂದ ದೇಹವನ್ನಷ್ಟೇ ವಿವಕ್ಷಿಸದೇ ಅಧಿಷ್ಠಾನವನ್ನೂ ಕೂಡ ವಿವಕ್ಷಿಸಬೇಕು. ಜಗತ್ತಿನ ಸೃಷ್ಟಿಗೆ ಆವಶ್ಯಕವಾದ ಯಾವ ಕಾರಣ ಸಮೂಹವಿದೆಯೋ, ಅದು ನಮ್ಮ ಪ್ರಯತ್ನಾಧಿಷ್ಠೇಯವಾಗಿ ಇರುವ ಶರೀರದಂತೆ ಶಿವನ ಸೃಷ್ಟಿಯ ಪ್ರಯತ್ನಕ್ಕೆ ಸಾಕ್ಷಾತ್ ಅಧಿಷ್ಠೇಯವಾದ್ದರಿಂದ ಶಿವನ ಶರೀರವೂ ಕೂಡ ಅಧಿಷ್ಠಾನವಾಗಿದೆ. ಆದ್ದರಿಂದ ಸಂಬಂಧಾನುಪಪತ್ತಿ ಹಾಗೂ ಅಧಿಷ್ಠಾನುಪಪತ್ತಿ ದೋಷಗಳು ಇಲ್ಲವೆಂದು ಶೈವರು ಹೇಳುತ್ತಾರೆ. ಇದು ತಪ್ಪು. ಕಾರಣ ಸಮೂಹವೆಲ್ಲವನ್ನು ಶಿವನ ಶರೀರವೆಂದು ಹೇಳುತ್ತಿದ್ದೀರಿ.

ಹಾಗಾದರೆ ಭೋಗಾದಿ ದೋಷಗಳನ್ನೂ ಕೂಡ ಶಿವನಿಗೆ ಒಪ್ಪಬೇಕು ಎಂಬುದು ಸೂತ್ರದ ಅಭಿಪ್ರಾಯ.

### ಶರೀರ ಇದ್ದರೆ ಮರಣ ಒಪ್ಪಲೇ ಬೇಕು

करणवच्चेदित्युक्तं देहवत्त्वपक्षं सम्बन्धेत्युक्तं तदभावपक्षं च दोषान्तरेण निरस्यति -

।। अन्तवत्त्वमसर्वज्ञता वा ।।२-२-४१।।

पत्युरित्यस्ति । शिवो देहवान् न वा । आद्ये पत्युरन्तवत्त्वं परिच्छिन्नत्वं स्यात् । अन्त्ये सर्वज्ञता न स्यात् । अशरीरिणो ज्ञानस्यैवाभावादिति भावः । वाशब्दो विकल्पार्थः । न हि तादृशस्य चैत्रादिवत् कर्तृत्वं युक्तमिति भावः । एतेन लीलाविग्रहोपादानमस्तीति प्रत्युक्तम् । तस्यापि देहत्त्वेन मृतिरूपान्तवत्त्वानिस्तारात् । स्वमते चैते दोषा आत्मनि चैवमित्यादिसूत्रैरेव श्रुतिबलान्निरस्ता इत्याकूतम् ।।११।।

'ಕರಣವಚ್ಚೇತ್' ಎಂಬಲ್ಲಿ ಹೇಳಲ್ಪಟ್ಟ ಶಿವನಿಗೆ ದೇಹವಿದೆ ಎಂಬ ಪಕ್ಷವನ್ನು, 'ಸಂಬಂಧಾನುಪಪತ್ತೇಶ್ಚ' ಎಂಬಲ್ಲಿ ಹೇಳಲ್ಪಟ್ಟ ಶಿವನಿಗೆ ದೇಹವಿಲ್ಲ ಎಂಬ ಪಕ್ಷವನ್ನು ಮತ್ತೊಂದು ದೋಷದಿಂದ ಪರಿಹರಿಸುತ್ತಿದ್ದಾರೆ - 'ಅಂತವತ್ತ್ವಮಸರ್ವಜ್ಞತಾ ವಾ'.

'ಪತ್ಯುಃ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಶಿವನು ದೇಹವುಳ್ಳವನೋ, ಅಲ್ಲವೋ, ಮೊದಲನೆಯ ಪಕ್ಷದಲ್ಲಿ ಪಶುಪತಿಗೆ 'ಅಂತವತ್ತ್ವಂ' = ಪರಿಚ್ಛಿನ್ನತ್ವವು ಬರಬೇಕಾದೀತು. ದೇಹವಿಲ್ಲವೆಂಬ ಎರಡನೆಯ ಪಕ್ಷದಲ್ಲಿ ಸಾರ್ವಜ್ಞ್ಯವು ಬರದೇ ಇರಬೇಕಾದೀತು. ಶರೀರ ಇಲ್ಲದವನಿಗೆ ಜ್ಞಾನವು ಇರಲು ಸಾಧ್ಯವಿಲ್ಲ ಎಂಬುದು ಸೂತ್ರದ ಅಭಿಪ್ರಾಯ. ಸೂತ್ರದಲ್ಲಿರುವ 'ವಾ' ಶಬ್ದವು ವಿಕಲ್ಪಾರ್ಥದಲ್ಲಿದೆ. ಯಾರು ಸರ್ವಜ್ಞರಲ್ಲವೋ, ಅಂಥ ಚೈತ್ರಾದಿಗಳಿಗೆ ಕರ್ತೃತ್ವವೂ ಕೂಡ ಇರುವುದಿಲ್ಲ. ಹಾಗೇ ಈ ಶಿವನಿಗೂ ಕೂಡ ಕರ್ತೃತ್ವವು ಯುಕ್ತವಾಗುವುದಿಲ್ಲ ಎಂದಭಿಪ್ರಾಯ.

ಹೀಗೆ ಹೇಳಿದ್ದರಿಂದ ಲೀಲಾಶರೀರವನ್ನು ಸ್ವೀಕಾರ ಮಾಡುತ್ತಾನೆಂಬ ಶೈವರ ಮತ್ತೊಂದು ವಾದವನ್ನು ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಆ ಲೀಲಾಶರೀರವೂ ಕೂಡ ಶರೀರವೇ ಆಗಿರುವುದರಿಂದ ಮರಣರೂಪವಾದ ಅಂತವತ್ತ್ವವನ್ನು ನಿರಾಕರಣೆ ಮಾಡಲು ಸಾಧ್ಯವೇ ಆಗುವುದಿಲ್ಲ. ಲೀಲಾಶರೀರವೂ ಕೂಡ ಶರೀರವೇ ಆಗಿರುವುದರಿಂದ ಮರಣರೂಪವಾದ ಅಂತವತ್ತ್ವದೋಷವು ಬಂದೇ ಬರುತ್ತದೆ. ಸಿದ್ಧಾಂತದಲ್ಲಿ ಯಾವುದೇ ದೋಷಗಳು ಈಶ್ವರನಿಗೆ ಬರುವುದಿಲ್ಲ ಎಂಬುದನ್ನು 'ಆತ್ಮನಿ ಚೈವಂ' ಎಂಬ ಸೂತ್ರದಲ್ಲಿ ಅನೇಕ ಶ್ರುತಿಗಳ ಆಧಾರದಿಂದ ಸಮರ್ಥಿಸಲಾಗಿದೆ ಎಂಬುದು ಆಂತರ್ಯ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಪತ್ಯುರಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಉತ್ಪತ್ತ್ಯಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ, ತಂತ್ರದೀಪಿಕಾ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಉತ್ಪತ್ತ್ಯಧಿಕರಣ

## ಬ್ರಹ್ಮಸೂತ್ರ

'ಉತ್ಪತ್ತ್ಯಸಂಭವಾತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – उत्पत्त्यसम्भवात् ।।**

ಶಕ್ತಿಯು ಜಗತ್ತಿಗೆ ಕಾರಣವಲ್ಲ. ಏಕೆಂದರೆ ಪುರುಷನಿಲ್ಲದೇ ಕೇವಲ ಸ್ತ್ರೀಯಿಂದ ಸಂತತಿಯ ಉತ್ಪತ್ತಿಯು ಅತ್ಯಂತ ಅಸಂಭಾವಿತವಾಗಿದೆ. ಶಕ್ತಿದೇವತೆಯು ಸ್ತ್ರೀಯಾದ್ದರಿಂದ ಪುರುಷನಿಲ್ಲದೇ ಜಗತ್ತಿಗೆ ಕಾರಣಳು ಆಗುವುದಿಲ್ಲ.

ಅರ್ಥ --ಶಕ್ತಿಯು ಜಗತ್ತಿಗೆ ಕಾರಣವಲ್ಲ. ಏಕೆಂದರೆ ಉತ್ಪತ್ತ್ಯಸಂಭವಾತ್ = ಶಕ್ತಿಶಬ್ದದಿಂದ ಪ್ರತಿಪಾದ್ಯವಾದ ಕೇವಲ ಸ್ತ್ರೀಯಿಂದ ಮಗುವಿನ ಜನನವು ಅಯುಕ್ತವಾಗಿದೆ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

ಸ್ತ್ರೀಶಕ್ತಿವಾದದ ನಿರಾಕರಣೆಗಾಗಿ ಈ ಅಧಿಕರಣ

**ब्रह्मसूत्रभाष्यम् – शक्तिपक्षं दूषयति –**

**।। उत्पत्त्यसम्भवात् ।।१।।**

**न हि पुरुषाननुगृहीतस्त्रीभ्य उत्पत्तिर्दृश्यते ।।१।।**

ಅನುವಾದ - ಶಕ್ತಿ ಎಂಬ ಸ್ತ್ರೀದೇವತೆ ಜಗತ್ತಿಗೆ ಕಾರಣವಾಗಿದ್ದಾಳೆ ಎಂಬ ಮತವನ್ನು ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ. ಪುರುಷನ ಸಹಾಯವಿಲ್ಲದ ಕೇವಲ ಸ್ತ್ರೀಯಿಂದ ಉತ್ಪತ್ತಿ ಆಗುವುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ.

ಪ್ರತಿಪದಾರ್ಥ -- ಶಾಕ್ತಮತದ ನಿರಾಕರಣೆಗಾಗಿ ಅಧಿಕರಣ ಹೊರಟಿದೆ - ಶಕ್ತಿಪಕ್ಷಂ = ಸ್ತ್ರೀಶಕ್ತಿಯೇ ಜಗತ್ತಿಗೆ ಕಾರಣ ಎಂಬ ಪಕ್ಷವನ್ನು, ದೂಷಯತಿ = ಸೂತ್ರಕಾರರು ದೂಷಣೆ ಮಾಡುತ್ತಿದ್ದಾರೆ.

ಪುರುಷಾನನುಗೃಹೀತ = ಪುರುಷನ ಸಹಾಯವಿಲ್ಲದ, ಸ್ತ್ರೀಭ್ಯಃ = ಕೇವಲ ಹೆಣ್ಣಿನಿಂದ, ಉತ್ಪತ್ತಿಃ = ಯಾವುದೇ ಹುಟ್ಟುವಿಕೆಯು, ನಹಿ ದೃಶ್ಯತೇ = ಲೋಕದಲ್ಲಿ ಕಂಡಿರುವುದಿಲ್ಲ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

# ಸತ್ತರ್ಕದೀಪಾವಳಿ

**सत्तर्कदीपावळिः –**

**पाशुपतपक्षनिराकरणन्यायेन स्कन्दसूर्यगणेशादिमतान्यपि निराकृतानि वेदितव्यानि । शाक्ते पक्षे तु दोषविशेषसम्भवात् तं दूषयति – शक्तिपक्ष इत्यादिना । त्रिपुरी भैरवीत्यादिनाभिधेया शक्तिः केवला शक्तिः न ब्रह्मादिजगदुत्पादिका पुरुषपरहितत्वात् । न हि पुरुषाननुगृहीतस्त्रीभ्य उत्पत्तिर्दृश्यते ।**

ಪಾಶುಪತಪಕ್ಷವನ್ನು ಯಾವ ನ್ಯಾಯದಿಂದ ನಿರಾಕರಣೆ ಮಾಡಲಾಯಿತೋ, ಅದೇ ನ್ಯಾಯದಿಂದ, ಸ್ಕಾಂದಮತ, ಸೌರಮತ, ಗಾಣಪತಮತ ಇವುಗಳನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಆದರೆ ಶಾಕ್ತಪಕ್ಷದಲ್ಲಿ ಒಂದು ಹೆಚ್ಚಿನ ದೋಷವಿದೆ. ಅದಕ್ಕಾಗಿ 'ಶಕ್ತಿಪಕ್ಷ' ಇತ್ಯಾದಿಯಾದ ಸೂತ್ರಭಾಷ್ಯವು ಪ್ರವೃತ್ತವಾಗಿವೆ. ತ್ರಿಪುರೀ, ಭೈರವೀ ಇವೇ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾದ ಕೇವಲ ಶಕ್ತಿಯು ಬ್ರಹ್ಮಾದಿಜಗತ್ತನ್ನು ಸೃಷ್ಟಿ ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಈ ಶಕ್ತಿದೇವತೆಗೆ ಪುರುಷನ ಅನುಗ್ರಹವೇ ಇರುವುದಿಲ್ಲ. ಪುರುಷನ ಅನುಗ್ರಹವಿಲ್ಲದ ಕೇವಲ ಸ್ತ್ರೀಯಿಂದ ಸಂತಾನದ ಉತ್ಪತ್ತಿಯಾಗುವುದು ಎಲ್ಲಿಯೂ ಕಂಡಿಲ್ಲ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

### ಅಂಗನೂ ಸಹ ಕೇವಲ ಸ್ತ್ರೀಯಿಂದ ಹುಟ್ಟಿರುವುದಿಲ್ಲ

**तत्वप्रदीपः – उक्तन्यायेन निरस्तेऽपि शाक्ते समयेऽधिकदूषणविवक्षया पुनरारम्भः । शक्तिस्सर्वज्ञा सर्वेश्वरी सर्वकर्त्री, सदाशिवप्रधानाः सर्वे तदधीना इति शाक्तेया मन्यन्ते । तेऽपि महान्तो मध्यमाः क्षुद्रा इति त्रिविधाः । तत्राऽद्ये पक्षे शक्तिरीषदपि पुरुषाकांक्षिणी नेष्यते । अपरे तदङ्गभूतो दयितः शिवः । चरमे स एव सर्वज्ञादिगुणवान् सदृशो रमणः । तत्र प्रथमतः प्रथमं प्रतिक्षिपति। उत्पत्त्यसम्भवात् । पुरुषेभ्यः स्त्रीपुरुषेभ्यो वोत्पत्तिर्दृष्टा, न स्त्रीभ्य एव । अङ्गादीनामपि स्त्रौचथ्यादिभ्यः स्पर्शनाद्यनुग्रहादेवोत्पत्तिः ।।**

ಹಿಂದಿನ ಅಧಿಕರಣದ ನ್ಯಾಯದಿಂದಲೇ ಶಾಕ್ತಮತವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಆದರೆ ಅಧಿಕದೋಷವು ಶಾಕ್ತಮತಕ್ಕಿರುವುದರಿಂದ ಪ್ರತ್ಯೇಕವಾಗಿ ಈ ಅಧಿಕರಣವು ಹೊರಟಿದೆ. ಶಾಕ್ತರು ಹೀಗೆ ಹೇಳುತ್ತಾರೆ - ಶಕ್ತಿಯು ಸರ್ವಜ್ಞಳಾಗಿದ್ದಾಳೆ. ಸಕಲಕ್ಕೂ ಈಶ್ವರಳಾಗಿದ್ದಾಳೆ, ಸರ್ವಕರ್ತ್ರೀ ಎನಿಸಿದ್ದಾಳೆ ಮಹಾರುದ್ರನೇ ಮೊದಲಾದ ಸಕಲದೇವತೆಗಳು ಈ ಶಕ್ತಿಯ ಅಧೀನರಾಗಿದ್ದಾರೆ. ಹೀಗೆ ಶಾಕ್ತೇಯರು ಹೇಳುತ್ತಾರೆ. ಈ ಶಾಕ್ತೇಯರಲ್ಲಿ ಮೂರು ಪಂಗಡಗಳಿವೆ. ಮಹಾವಾಮ, ಮಧ್ಯವಾಮ, ಅಣುವಾಮ ಎಂದು. ಈ ಮೂರುಪಕ್ಷಗಳಲ್ಲಿ ಮೊದಲನೆಯ ಪಕ್ಷದವರು ಸ್ತ್ರೀಶಕ್ತಿಯೇ ಸರ್ವೋತ್ತಮ. ಇವಳಿಗೆ ಪುರುಷನ ಅಪೇಕ್ಷೆ ಸ್ವಲ್ಪವೂ ಕೂಡ ಇರುವುದಿಲ್ಲ ಎಂದು ಅಂಗೀಕರಿಸಿದ್ದಾರೆ. ಎರಡನೆಯ ಪಕ್ಷದವರು ಈ ಶಕ್ತಿಯ ಅಧೀನನಾಗಿ ಶಿವನು ಗಂಡನಾಗಿದ್ದಾನೆಂದು ಹೇಳುತ್ತಾರೆ. ಮೂರನೆಯ ಪಕ್ಷದವರು ಪತಿಯಾದ ರುದ್ರನೇ ಸರ್ವಜ್ಞಾದಿ ಗುಣವುಳ್ಳವನಾಗಿದ್ದಾನೆ. ಸದೃಶವಾದ ಪುರುಷನಾಗಿದ್ದಾನೆ ಎನ್ನುತ್ತಾರೆ. ಈ ಮೂರು ಪಕ್ಷಗಳಲ್ಲಿ ಮೊದಲನೆಯ ಪಕ್ಷವನ್ನು ನಿರಾಕರಿಸಲು 'ಉತ್ಪತ್ತ್ಯಸಂಭವಾತ್' ಎಂಬ ಸೂತ್ರವು ಹೊರಟಿದೆ.

ಕೇವಲ ಪುರುಷರುಗಳಿಂದ ಸಂತಾನೋತ್ಪತ್ತಿಯು ಕಂಡಿದೆ. ಅಥವಾ ಸ್ತ್ರೀ-ಪುರುಷರ ಸಮಾಗಮದಿಂದ ಸಂತಾನೋತ್ಪತ್ತಿಯು ಕಂಡಿದೆ. ಆದರೆ ಕೇವಲ ಸ್ತ್ರೀಯರಿಂದ ಸಂತಾನೋತ್ಪತ್ತಿಯಾದದ್ದಕ್ಕೆ ಉದಾಹರಣೆಯೇ ಇಲ್ಲ. ಅಂಗಾದಿಗಳೂ ಕೂಡ ಔಚಿಥ್ಯರ ಸ್ಪರ್ಶ ಮೊದಲಾದವುಗಳಿಂದಲೇ ಉತ್ಪನ್ನರಾಗಿದ್ದಾರೆ.

ವಿವರಣೆ - ಪಂಡಿತಾಚಾರ್ಯರು ಔಚಿಥ್ಯರ ಸ್ಪರ್ಶದಿಂದ ಅಂಗನು ಹುಟ್ಟಿದ್ದಾನೆಂದು ಹೇಳಿದ್ದಾರೆ. ಈ ಕಥೆ ಮಹಾಭಾರತದ ಆದಿಪರ್ವದಲ್ಲಿ ಬರುತ್ತದೆ. ಜಿಜ್ಞಾಸುಗಳ ಅನುಕೂಲಕ್ಕಾಗಿ ಆ ಕಥೆಯನ್ನು ಇಲ್ಲಿ ಯಥಾವತ್ತಾಗಿ ನೀಡಲಾಗಿದೆ -

ಮಹಾತಪಸ್ವಿಗಳೂ ಮತ್ತು ಮೇಧಾವಿಗಳೂ ಆದ ಉಚಥ್ಯರೆಂಬ ಋಷಿಗಳಿದ್ದರು. ಆ ಮಹಾತ್ಮರಿಗೆ 'ಮಮತಾ' ಎಂಬ ಪತ್ನಿಯಿದ್ದಳು. ದೇವತೆಗಳ ಪುರೋಹಿತರಾದ ಬೃಹಸ್ಪತ್ಯಾಚಾರ್ಯರು ಉಚಥ್ಯರ ತಮ್ಮಂದಿರು. ಅವರು ಮಮತೆಯನ್ನು ಕಾಮಿಸಿದರು. ದೇವತೆಗಳಿಗಿಂತ ಶ್ರೇಷ್ಠವಾದ ತನ್ನ ಮೈದುನನನ್ನು ಕುರಿತು ಮಮತೆಯು ನಿಮ್ಮ ಅಣ್ಣನ ಜೊತೆಯಲ್ಲಿ ರಮಿಸಿ, ನಾನು ಗರ್ಭಿಣಿಯಾಗಿದ್ದೇನೆ ಎಂದು ಹೇಳಿದಳು. ಎಲೈ ಮಹಾನುಭಾವರಾದ ಬೃಹಸ್ಪತಿಗಳೇ, ಉಚಥ್ಯರ ಮಗನಾಗಿ ನನ್ನ ಗರ್ಭದಲ್ಲಿರುವ ಈ ಶಿಶುವು ಗರ್ಭದಲ್ಲಿಯೇ ಷಡಂಗ ಸಹಿತವಾದ ಉತ್ತಮವಾದ ವೇದವನ್ನು ಅಧ್ಯಯನ ಮಾಡುತ್ತಿದೆ. ನೀವಾದರೂ ಅಮೋಘವಾದ ರೇತಸ್ಸುಳ್ಳವರು ಎಂಬುದು ನಿಶ್ಚಯ. ಪರಿಸ್ಥಿತಿಯು ಹೀಗಿರುವಾಗ ಯಾವುದು ಯುಕ್ತವೆಂದು ತಿಳಿದು, ಅದರಂತೆ ನಡೆದುಕೊಳ್ಳಿ.

ವೈಶಂಪಾಯನ - ಮಮತೆಯಿಂದ ಹೀಗೆ ಹೇಳಲ್ಪಟ್ಟ ಮಹಾತೇಜಸ್ವಿಗಳಾದ ಬೃಹಸ್ಪತಿಗಳು ಮಹಾತ್ಮರಾದರೂ ಸಹ ತಮ್ಮ ಮನಸ್ಸಿನ ಕಾಮವನ್ನು ನಿಯಂತ್ರಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಮಮತೆಗೆ ಇಷ್ಟವಿಲ್ಲದಿದ್ದರೂ ಕಾಮಿಯಾದ ಅವರು ಮಮತೆಯ ಸಮಾಗಮವನ್ನು ಮಾಡಿದರು. ಅವರು ರೇತಸ್ಸನ್ನು ಉತ್ಸರ್ಜನ ಮಾಡುವ ಸಮಯದಲ್ಲಿ ಗರ್ಭದಲ್ಲಿದ್ದ ಶಿಶುವು ಅವರನ್ನು ಕುರಿತು ಹೇಳಿತು - ಚಿಕ್ಕಪ್ಪ ಇಲ್ಲಿ ಇಬ್ಬರಿಗೆ ಸ್ಥಳವಿಲ್ಲ. ನಿಮ್ಮ ರೇತಸ್ಸು ಅಮೋಘವಾದುದು. ನಾನು ಮೊದಲೇ ಇಲ್ಲಿ ಬಂದಿದ್ದೇನೆ.

ಭೀಷ್ಮ - ಹೀಗೆ ಹೇಳಲ್ಪಟ್ಟ ಬೃಹಸ್ಪತಿಗಳು ಕೋಪಗೊಂಡು ಗರ್ಭದಲ್ಲಿದ್ದ ಉಚಥ್ಯರ ಪುತ್ರನಿಗೆ ಶಾಪವನ್ನು ಕೊಟ್ಟರು.

ಬೃಹಸ್ಪತಿ - ''ಎಲ್ಲ ಪ್ರಾಣಿಗಳಿಗೂ ಹಿತವಾದ ಇಂಥ ಸಂಭೋಗಕಾಲದಲ್ಲಿ ನೀನು ನನ್ನನ್ನು ನಿಷೇಧ ಮಾಡುತ್ತಿರುವುದರಿಂದ ನೀನು ಕುರುಡನಾಗುವಿ''.

ಅನಂತರ ಮಹಾಕೀರ್ತಿಯುಳ್ಳ ಬೃಹಸ್ಪತಿಗಳ ಶಾಪದಿಂದ ಬೃಹಸ್ಪತಿಗಳಂತೆಯೇ ಸಾಮರ್ಥ್ಯವನ್ನು ಹೊಂದಿದ್ದ 'ದೀರ್ಘತಮ' ಋಷಿಗಳು ಜನಿಸಿದರು. ಇವರೇ ಔಚಥ್ಯರು. ವೇದಜ್ಞರೂ ಮತ್ತು ಹುಟ್ಟುಕುರುಡರೂ ಆದ ಅವರು ರೂಪಸಂಪನ್ನಳಾದ ಯುವತಿಯಾದ 'ದ್ವಿಷಂತೀ' ಎಂಬ ಬ್ರಾಹ್ಮಣ ಕನ್ಯೆಯನ್ನು ತಮ್ಮ ವಿದ್ಯೆಯ ಬಲದಿಂದ ಪತ್ನಿಯಾಗಿ ಪಡೆದರು. ಮಹಾತ್ಮರೂ, ಮಹಾಕೀರ್ತಿವಂತರೂ ಆದ ಅವರು ಉಚಥ್ಯರ ಕುಲದ ಅಭಿವೃದ್ಧಿಗಾಗಿ ಗೌತಮ ಮೊದಲಾದ ಮಕ್ಕಳನ್ನು ಪಡೆದರು. ಮಕ್ಕಳನ್ನು ಪಡೆದರೂ ಪತ್ನಿಯು ಸಂತೋಷಪಡಲಿಲ್ಲ. ಆಗ ಔಚಥ್ಯರು ಪತ್ನಿಯಾದ ಪ್ರದ್ವಿಷಂತಿಯನ್ನು ಕುರಿತು, ನನ್ನನ್ನು ಏಕೆ ದ್ವೇಷಿಸುತ್ತೀಯೇ ಎಂದು ಕೇಳಿದರು.

ಪ್ರದ್ವಿಷಂತೀ - ಹೆಂಡತಿಯನ್ನು ಭರಣ ಮಾಡುವುದರಿಂದ (ಪೋಷಿಸುವುದರಿಂದ) ಪುರುಷನಿಗೆ 'ಭರ್ತಾ' ಎಂದೂ ಪಾಲನೆ ಮಾಡುವುದರಿಂದ 'ಪತಿ' ಯೆಂದೂ ಕರೆಯುತ್ತಾರೆ. ನಾನು ಮತ್ತು ನನ್ನ ಮಕ್ಕಳು ಯಾವಾಗಲೂ ನಿನ್ನ ಭರಣವನ್ನು ಮಾಡುತ್ತಾ, ಶ್ರಮದಿಂದ ಬಳಲಿದ್ದೇವೆ. ಮಹಾತಪಸ್ವಿಯೇ, ಇನ್ನು ಮುಂದೆ ನಿನ್ನನ್ನು ಭರಣ ಮಾಡುವುದಿಲ್ಲ.

ಭೀಷ್ಮ - ಅವಳ ಆ ಮಾತನ್ನು ಕೇಳಿ, ಕೋಪಗೊಂಡ ಋಷಿಗಳು ಮಕ್ಕಳ ಜೊತೆಯಲ್ಲಿದ್ದ ದ್ವಿಷಂತಿಯನ್ನು ಕುರಿತು ಹೇಳಿದರು. ನಿನಗೆ ಧನದ ಆಸೆಯಿದೆ. ಮಕ್ಕಳೇ ಇವಳನ್ನು ರಾಜನ ಮನೆಗೆ ಕರೆದುಕೊಂಡು ಹೋಗಿ ಎಂದು ಹೇಳಿದರು.

ಪತ್ನಿ - ಬ್ರಾಹ್ಮಣನೇ, ನೀನು ಕೊಡುವ ದುಃಖಪ್ರದವಾದ ಧನವನ್ನು ನಾನು ಬಯಸುವುದಿಲ್ಲ. ವಿಪ್ರೇಂದ್ರನೇ, ನಿನಗೆ ಇಷ್ಟ ಬಂದಂತೆ ಮಾಡು. ಮೊದಲಿನಂತೆ ನಾನು ನಿನ್ನನ್ನು ಪೋಷಿಸುವುದಿಲ್ಲ.

ಔಚಥ್ಯರು -

ಅದ್ಯಪ್ರಭೃತಿ ಮರ್ಯಾದಾ ಮಯಾ ಲೋಕೇ ಪ್ರತಿಷ್ಠಿತಾ ।
ಏಕ ಏವ ಪತಿಃ ಪತ್ನ್ಯಾ ಯಾವಜ್ಜೀವಂ ಪರಾಯಣಮ್ ॥

ಇಂದಿನಿಂದ ನಾನು ಲೋಕದಲ್ಲಿ ಧರ್ಮಮರ್ಯಾದೆಯನ್ನು ಪ್ರತಿಷ್ಠಾಪಿಸುತ್ತೇನೆ. ಬದುಕಿರುವವರೆಗೂ ಒಬ್ಬ ಪತ್ನಿಗೆ ಒಬ್ಬ ಪತಿಯೇ ಆಶ್ರಯನಾಗಿರುತ್ತಾನೆ.

ಮೃತೇ ಜೀವತಿ ವಾ ತಸ್ಮಿನ್ ನ ಪರಂ ಪ್ರಾಪ್ನುಯಾನ್ನರಮ್ ।
ಅಭಿಗಮ್ಯ ಪರಂ ನಾರೀ ಪತಿಷ್ಯತಿ ನ ಸಂಶಯಃ ॥

ಅವನು ಜೀವಿಸಿರುವಾಗ, ಅಥವಾ ಮೃತನಾದ ಮೇಲೆ ಪತ್ನಿಯು ಇನ್ನೊಬ್ಬನ ಸಹವಾಸವನ್ನು ಮಾಡಿದರೆ ಅವಳು ಪತಿತಳಾಗುವಳು ಎಂಬ ವಿಷಯದಲ್ಲಿ ಸಂಶಯವಿಲ್ಲ. ಪತಿಯಿಲ್ಲದ ನಾರಿಯರಿಗೆ ಇಂದಿನಿಂದ ಪಾತಕವುಂಟಾಗುತ್ತದೆ. ಅವರಿಗೆ ಒಂದು ಪಕ್ಷ ಧನವಿದ್ದರೆ ಅದೆಲ್ಲಾ ವ್ಯರ್ಥಭೋಗದಲ್ಲಿ ವ್ಯಯವನ್ನು ಹೊಂದಲಿ. ಅವರಿಗೆ ನಿತ್ಯವೂ ಅಪಕೀರ್ತಿಯೂ ಮತ್ತು ನಿಂದನೆಗಳೂ ಉಂಟಾಗಲಿ.

ಭೀಷ್ಮ - ಅವರ ಆ ಮಾತನ್ನು ಕೇಳಿ ಬಹಳ ಸಿಟ್ಟಾದ ಪತ್ನಿಯು ಮಕ್ಕಳನ್ನು ಕುರಿತು, ಮಕ್ಕಳೇ, ಇವರನ್ನು ಗಂಗೆಗೆ ಕರೆದುಕೊಂಡು ಹೋಗಿ ಬಿಟ್ಟುಬಿಡಿ ಎಂದು ಹೇಳಿದಳು. ಲೋಭಕ್ಕೂ, ಮೋಹಕ್ಕೂ ಒಳಗಾದ ಆ ಗೌತಮ ಮೊದಲಾದ ಪುತ್ರರು ಕಟ್ಟಿಗೆಗಳಿಂದ ಒಂದು ತೆಪ್ಪವನ್ನು ಮಾಡಿ, ಅವರನ್ನು ಅದರಲ್ಲಿ ಕೂಡಿಸಿ ಗಂಗೆಯಲ್ಲಿ ತೇಲಿಬಿಟ್ಟರು. ಇನ್ನು ಮುಂದೆ ಅಂಧನು ಮತ್ತು ವೃದ್ಧನಾದ ತಂದೆಯನ್ನು ಸಾಕುವ ಹೊಣೆ, ನಮಗಿರುವುದಿಲ್ಲ ಎಂದು ತಿಳಿದ ಅವರಿಗೆ ಈ ಕ್ರೂರಕರ್ಮವನ್ನು ಮಾಡುವ ಬುದ್ಧಿಯುಂಟಾಯಿತು. ಹೀಗೆ ಆಲೋಚಿಸಿ, ಕ್ರೂರಕರ್ಮವನ್ನು ಮಾಡಿ, ಅವರು ತಮ್ಮ ಮನೆಗಳಿಗೆ ಹಿಂದಿರುಗಿದರು. ಎಲೈ ರಾಜನೇ, ಔಚಥ್ಯ ಋಷಿಗಳಾದರೂ ಆ ಕಟ್ಟಿಗೆಯ ತೆಪ್ಪದಿಂದ ಗಂಗೆಯ ನೀರಿನಲ್ಲಿ ತೇಲುತ್ತಾ ಅನೇಕ ದೇಶಗಳನ್ನು ದಾಟಿ, ಮುಂದೆ ಹೋದರು. ಸರ್ವಧರ್ಮವಿಶಾರದನಾದ 'ಬಲಿ' ಎಂಬ ರಾಜನು ಗಂಗೆಯಲ್ಲಿ ಸ್ನಾನಕ್ಕಾಗಿ ಬಂದು ಪ್ರವಾಹದಿಂದ ರಭಸದಿಂದ ದಡದ ಸಮೀಪಕ್ಕೆ ಬಂದಿದ್ದ ಆ ತೆಪ್ಪವನ್ನು ನೋಡಿ, ಸತ್ಯಪರಾಕ್ರಮನೂ, ಧರ್ಮಾತ್ಮನೂ ಆದ ಅವನು ಔಚಥ್ಯನನ್ನು ಹಿಡಿದುಕೊಂಡನು.

ಎಲೈ ಮನುಜಶ್ರೇಷ್ಠನೇ, ಪುತ್ರಾರ್ಥಿಯಾದ ರಾಜರ್ಷಿಯಾದ ಅವನು ಅವರನ್ನು ಪೂಜಿಸಿ, ಅವರು ವಿಶ್ರಾಂತಿಯನ್ನು ಪಡೆದ ಮೇಲೆ, ಅವರನ್ನು ಕುರಿತು ಮಾತನಾಡಿದನು. ಎಲೈ ಮಾನದರೇ ಮತ್ತು ಮಹಾನುಭಾವರೇ, ನನ್ನ ಕುಲದ ಸಂತಾನದ ಸಲುವಾಗಿ ಈ ನನ್ನ ಪತ್ನಿಯಲ್ಲಿ ಧರ್ಮಾರ್ಥಕುಶಲರಾದ ಮಕ್ಕಳನ್ನು ಪಡೆಯಬೇಕು.

ಭೀಷ್ಮ - ಹೀಗೆ ಹೇಳಲ್ಪಟ್ಟ ತೇಜಸ್ವಿಗಳಾದ ಆ ಋಷಿಗಳು ಹಾಗೆಯೇ ಆಗಲಿ ಎಂದು ಹೇಳಿದರು. ಆಗ ರಾಜನು ನನ್ನ ಭಾರ್ಯೆಯಾದ ಸುದೇಷ್ಣೆಯನ್ನು ಅವರ ಬಳಿಗೆ ಕಳುಹಿಸಿದನು. ಋಷಿಗಳು ಅಂಧರು ಮತ್ತು ವೃದ್ಧರು ಎಂದು ಚಿಂತಿಸಿದ ಆ ದೇವಿಯು ಅವರ ಬಳಿಗೆ ಹೋಗಲಿಲ್ಲ. ಬದಲಾಗಿ ತನ್ನ ದಾಸಿಯ ಮಗಳನ್ನು ಆ ವೃದ್ಧರ ಬಳಿಗೆ ಕಳುಹಿಸಿಕೊಟ್ಟಳು. ಪ್ರಭಾವಶಾಲಿಗಳೂ, ಧರ್ಮಾತ್ಮರೂ ಆದ ಋಷಿಗಳು ಶೂದ್ರಯೋನಿಗೆ ಸೇರಿದ ಅವಳಲ್ಲಿ ಕಕ್ಷೀವಾನ್ ಮೊದಲಾದ ಹನ್ನೊಂದು ಮಕ್ಕಳನ್ನು ಪಡೆದರು. ಕಕ್ಷೀವಾನ್ ಮೊದಲಾದವರು ಔಚಥ್ಯರ ಬಳಿ ಸಾಂಗ ವೇದಾಧ್ಯಯನವನ್ನು ಮಾಡುತ್ತಿರುವುದನ್ನು ನೋಡಿ ರಾಜನು ಋಷಿಗಳನ್ನು ಕುರಿತು ಇವರು ನನ್ನ ಮಕ್ಕಳೆಂದು ಹೇಳಿದನು. ಮಹರ್ಷಿಗಳು ಅಲ್ಲ, ಇವರು ನನ್ನ ಮಕ್ಕಳು. ಕಕ್ಷೀವಾನ್ ಮೊದಲಾದವರು ಶೂದ್ರಯೋನಿಯಲ್ಲಿ ಹುಟ್ಟಿದ ನನ್ನ ಮಕ್ಕಳು ಎಂದು ಹೇಳಿದರು. ನಾನು ಅಂಧ ಮತ್ತು ವೃದ್ಧ ಎಂದು ಚಿಂತಿಸಿ, ನಿನ್ನ ರಾಣಿಯಾದ ಸುದೇಷ್ಣೆಯು ನನ್ನ ಬಳಿಗೆ ಬರಲಿಲ್ಲ. ನನ್ನನ್ನು ಅವಮಾನ ಮಾಡಲು ಶೂದ್ರಳಾದ ಅವಳ ದಾಸಿಯ ಮಗಳನ್ನು ತಾನೇ ನನ್ನ ಬಳಿಗೆ ಕಳುಹಿಸಿದಳು. ಆಗ ರಾಜನು ಋಷಿಶ್ರೇಷ್ಠರನ್ನು ಪುನಃ ಪ್ರಸನ್ನೀಕರಿಸಿಕೊಂಡು ತನ್ನ ಪತ್ನಿಯಾದ ಸುದೇಷ್ಣೆಯನ್ನು ಅವರ ಬಳಿಗೆ ಕಳುಹಿಸಿದನು.

ತಾಂ ಸ ದೀರ್ಘತಮಾಂಗೇಷು ಸ್ಪೃಷ್ಟ್ವಾ ದೇವೀಮಥಾಬ್ರವೀತ್ ।
ಭವಿಷ್ಯತಿ ಕುಮಾರಸ್ತೇ ತೇಜಸ್ವೀ ಸತ್ಯಾವಾಗಿತಿ ॥

ಔಚಥ್ಯ ಋಷಿಗಳು ಆ ರಾಣಿಯ ದೇಹವನ್ನು ಸ್ಪರ್ಶ ಮಾಡಿ, ನಿನಗೆ ತೇಜಸ್ವಿಯೂ, ಸತ್ಯವಚನನೂ ಆದ ಮಗನು ಜನಿಸುವನು ಎಂದು ಹೇಳಿದರು. ಆಗ ಸುದೇಷ್ಣೆಯಲ್ಲಿ 'ಅಂಗ' ಎಂಬ ರಾಜರ್ಷಿಯು ಜನಿಸಿದನು. ಮೇಲ್ನೋಟಕ್ಕೆ ನೇರವಾಗಿ ಸುದೇಷ್ಣೆಯಿಂದಲೇ ಅಂಗನು ಹುಟ್ಟಿದನು ಎಂದು ಕಾಣುತ್ತದೆ. ಈ ಮಹಾಭಾರತದ ಪ್ರಸಂಗದಿಂದ ಔಚಥ್ಯರ ದೇಹಸ್ಪರ್ಶದಿಂದಲೇ ಅಂಗರಾಜನು ಹುಟ್ಟಿದನು ಎಂದು ತಿಳಿಯಬೇಕು. ಆದ್ದರಿಂದ ಕೇವಲ ಸ್ತ್ರೀಯಿಂದ ಸಂತಾನೋತ್ಪತ್ತಿಯು ಸಾಧ್ಯವಿಲ್ಲ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

ಅಸಾಧಾರಣದೋಷ ಹೇಳುವುದಕ್ಕಾಗಿ ಶಕ್ತಿಮತದ ಉಪನ್ಯಾಸ

**तत्वप्रकाशिका – अधिकरणार्थं दर्शयति – शक्तीति ।। पूर्वन्यायेन निरस्तमपि शक्तिमत-मसाधारणदोषाविष्करेण पुनर्दूषयतीति भावः । अत्र विष्णोर्जगत्कारणत्वे शक्तिमतविरोधपरिहारादस्ति शास्त्रादिसङ्गतिः । विष्णोर्जगत्कारणत्वमुक्तम् । तत्र शाक्तेयमतविरोधेऽनुपपत्तिशङ्का स्यादतस्तन्निरसनीयमेव ।**

ಅಧಿಕರಣದ ಪ್ರಮೇಯವನ್ನು 'ಶಕ್ತಿ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ಹಿಂದಿನ ಅಧಿಕರಣದ ನ್ಯಾಯದಿಂದ ಈ ಮತವನ್ನು ನಿರಾಕರಣೆ ಮಾಡಿದ್ದರೂ ಕೂಡ ಶಕ್ತಿಮತವನ್ನು ಅಸಾಧಾರಣದೋಷದ ಆವಿಷ್ಕಾರದ ಮೂಲಕ ಪುನಃ ದೂಷಣೆ ಮಾಡುತ್ತಿದ್ದಾರೆ ಎಂದು ತಿಳಿಯಬೇಕು. ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವವಿಷಯಕ್ಕೆ ಶಕ್ತಿಮತದ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಲಾಯಿತು. ಈ ಪ್ರಮೇಯಕ್ಕೆ ಶಾಕ್ತೇಯಮತದ ವಿರೋಧವು ಪ್ರಾಪ್ತವಾದಾಗ ಇದು ಅನುಪಪನ್ನವಾಗುತ್ತದೆಂಬ ಆಶಂಕೆಯು ಬರುತ್ತದೆ. ಆದ್ದರಿಂದ ಈ ಮತವನ್ನು ನಿರಾಕರಣೆ ಮಾಡಲೇಬೇಕು.

ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ

## ಭಾವದೀಪ

**भावदीपः – ।। उत्पत्त्यसंभवात् ।। ४२ ।।** पूर्वमेवास्य मतस्य तुल्यन्यायतया निराकृतत्वोक्तेरपौनरुक्त्याय 'निराकृतौ विशेषस्य भावाच्छक्तिमतं पृथक्। दूष्यते' इत्यनुभाष्योक्तं भाष्यस्य भावमाह – **पूर्वेति ।।** दशमस्कन्धेऽपि 'पाषण्डवामशैवाद्यैर्वेदमार्गाः कलौ यथा' इति वाममतस्य पृथगुक्तेरिति भावः।

ಹಿಂದಿನ ಅಧಿಕರಣದಿಂದಲೇ ಸಮಾನನ್ಯಾಯದಿಂದ ಶಾಕ್ತಮತವೂ ಕೂಡ ನಿರಾಕೃತವಾಗುತ್ತದೆ. ಹೀಗಿರುವಾಗ ಪ್ರತ್ಯೇಕವಾಗಿ ಈ ಅಧಿಕರಣ ಏಕೆ? ಎಂಬ ಪ್ರಶ್ನೆಗೆ ಅನುವ್ಯಾಖ್ಯಾನದಲ್ಲಿ ಉತ್ತರಿಸಿದ್ದಾರೆ. ಪಾಶುಪತಾದಿ ಮತಗಳಿಗಿಂತಲೂ ಶಾಕ್ತಮತದಲ್ಲಿ ಒಂದು ವೈಶಿಷ್ಟ್ಯವಿದೆ. ಅದಕ್ಕಾಗಿ ಈ ಮತವನ್ನು ಪ್ರತ್ಯೇಕವಾಗಿ ನಿರಾಕರಣೆ ಮಾಡಲಾಗಿದೆ ಎಂದು. ಅನುವ್ಯಾಖ್ಯಾನದ ಈ ಮಾತಿಗೆ ಅನುಗುಣವಾಗಿ ಭಾಷ್ಯದ ಅಭಿಪ್ರಾಯವನ್ನು ತಿಳಿಸುವುದಕ್ಕಾಗಿ 'ಪೂರ್ವನ್ಯಾಯೇನ' ಎಂಬ ಟೀಕಾವಾಕ್ಯವು ಪ್ರವೃತ್ತವಾಗಿದೆ. ದಶಮಸ್ಕಂಧದಲ್ಲೂ ಕೂಡ 'ಪಾಷಂಡವಾಮಶೈವಾದ್ಯೈಃ ವೇದಮಾರ್ಗಾಃ ಕಲೌ ಯಥಾ' ಎಂಬುದಾಗಿ ವಾಮಮತವನ್ನು ಪ್ರತ್ಯೇಕವಾಗಿಯೇ ಉಲ್ಲೇಖ ಮಾಡಿದ್ದಾರೆ. ಅದಕ್ಕನುಗುಣವಾಗಿ ಪ್ರತ್ಯೇಕವಾಗಿ ಇಲ್ಲಿ ನಿರಾಕರಣೆ ಮಾಡಲು ಹೊರಟಿರುವುದು ಅರ್ಥಪೂರ್ಣವಾಗಿದೆ.

ವಿವರಣೆ - ಹಿಂದಿನ ಅಧಿಕರಣದಲ್ಲಿ ಶಕ್ತಿಮತವನ್ನು ನಿರಾಕರಣೆ ಮಾಡಿದ್ದಾಗಿದೆ. ಆದ್ದರಿಂದ ಗತಾರ್ಥತ್ವವು ಬರುತ್ತದಲ್ಲವೆ? ಎಂಬ ಆಶಂಕೆಯನ್ನು 'ಪುರ್ನನ್ಯಾಯೇನ' ಇತ್ಯಾದಿ ಟೀಕೆಯಿಂದ ಪರಿಹರಸುತ್ತಿದ್ದಾರೆ. ಆದ್ದರಿಂದಲೇ ದಶಮಸ್ಕಂಧದಲ್ಲಿ 'ಪಾಷಂಡವಾಮಶೈವಾದ್ಯೈಃ ವೇದಮಾರ್ಗಾಃ' ಎಂಬುದಾಗಿ ಶಾಕ್ತಮತವನ್ನು ಪ್ರತ್ಯೇಕವಾಗಿ ಪರಿಗಣಿಸಲಾಗಿದೆ (ವಾಕ್ಯಾರ್ಥಮುಕ್ತಾವಳಿ)

### ಕೇವಲ ಸ್ತ್ರೀಯಿಂದ ಉತ್ಪತ್ತಿಯಾಗಲು ಸಾಧ್ಯವೇ ಇಲ್ಲ

**तत्वप्रकाशिका – विष्णोर्जगत्कारणत्वं विषयः । युक्तमयुक्तं वेति सन्देहः । समयविवादः सन्देहबीजम् । न युक्तमिति पूर्वः पक्षः । शक्तिरेव खलु सार्वज्ञादिगुणशालिनी सकलजगज्जननी श्रुतिस्मृतीतिहासपुराणेषु पठ्यते। अतो न हरेर्जगत्कारणत्वलक्षणं सम्भवतीति प्राप्ते सिद्धान्तयत्सूत्रमुपन्यस्य व्याचष्टे – उत्पत्तीति ।। न शक्तेरेव जगत्कर्तृत्वं युक्तम् । पुरुषाननुगृहीतत्त्वात्। न हि पुरुषाननुगृहीतस्त्रीमात्रात् क्वचिदुत्पत्तिर्दृष्टेति भावः ।।**

ವಿಷ್ಣುವಿನ ಜಗತ್ಕಾರಣತ್ವವು ಅಧಿಕರಣದ ವಿಷಯ. ಇದು ವಿಷ್ಣುವಿಗೆ ಯುಕ್ತವೋ ಅಯುಕ್ತವೋ? ಎಂಬುದು ಸಂದೇಹ. ಸಮಯಗಳಲ್ಲಿರುವ ವಿವಾದವು ಸಂದೇಹಬೀಜ. ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು ಪೂರ್ವಪಕ್ಷ.

ಸಾರ್ವಜ್ಞ್ಯ ಮೊದಲಾದ ಗುಣಗಳುಳ್ಳವಳು ಶಕ್ತಿಯೇ ಆಗಿರುವಳು. ಮತ್ತು ಸಮಸ್ತಜಗತ್ತಿಗೂ ಇವಳೇ ಕಾರಣಳು. ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳೆಲ್ಲವೂ ಇವಳನ್ನೇ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ಜಗತ್ಕಾರಣತ್ವಲಕ್ಷಣವು ಶ್ರೀಹರಿಯಲ್ಲಿ ಅಸಂಭಾವಿತವಾಗುತ್ತದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪವಾದ ಸೂತ್ರವನ್ನು 'ಉತ್ಪತ್ತಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಜಗತ್ಕರ್ತೃತ್ವವು ಶಕ್ತಿಯಲ್ಲಿ ಯುಕ್ತವಾಗುವುದಿಲ್ಲ. ಏಕೆಂದರೆ ಪುರುಷನ ಅನುಗ್ರಹ ಇರುವುದಿಲ್ಲ. ಪುರುಷನ ಅನುಗ್ರಹ ಇಲ್ಲದ ಕೇವಲ ಸ್ತ್ರೀಯಿಂದ ಉತ್ಪತ್ತಿಯಾಗಿದ್ದು ಎಲ್ಲೂ ಕೂಡ ಕಂಡಿಲ್ಲ.

**भावदीपः** – महावाममतमाद्यसूत्रनिरस्यमनुवदति – **शक्तिरेवेति ।।श्रुतिस्मृतीति ।।** सर्वेषामपि तत्परत्वादिति भावः ।। अनुक्तोपालम्भभ्रान्तिनिरासाय महावाममतनिरासकत्वं स्फोरयन्नञनुवृत्त्या साध्यसाधने आह – **न शक्तेरेवेति ।।** पुरुषाननुगृहीतत्वेऽपि कुतो न कर्तृत्वमित्यतः सौत्रो हेतुरिति भावेन तदुपपादकं भाष्यमनुवदति – **न हीति ।।** ४२ ।।

ಮಹಾವಾಮಮತವು ಪ್ರಥಮಸೂತ್ರದಿಂದ ನಿರಾಕೃತವಾಗಿದೆ. ಅದರ ಅನುವಾದವನ್ನು 'ಶಕ್ತಿರೇವ' ಇತ್ಯಾದಿ ವಾಕ್ಯದಿಂದ ಮಾಡಿದ್ದಾರೆ. 'ಶ್ರುತಿ-ಸ್ಮೃತಿ ಇತಿಹಾಸ ಪುರಾಣೇಷು' ಇವೆಲ್ಲವೂ ಕೂಡ ಶಕ್ತಿಯನ್ನೇ ಪ್ರತಿಪಾದನೆ ಮಾಡುತ್ತವೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.

ಶಾಕ್ತರು ಹೇಳದೇ ಇರುವ ವಿಷಯವನ್ನು ಅನುವಾದ ಮಾಡಿ ದೋಷವನ್ನು ಹೇಳುತ್ತಿದ್ದೀರಿ, ಆದ್ದರಿಂದ 'ಅನುಕ್ತೋಪಾಲಂಭ' ಎಂಬ ದೋಷವು ಬರುತ್ತದಲ್ಲವೇ? ಎಂಬ ಭ್ರಾಂತಿಯನ್ನು ನಿರಾಕರಣೆ ಮಾಡುವುದಕ್ಕಾಗಿ ಮಹಾವಾಮಮತದ ನಿರಾಕರಣೆಯು ನಮ್ಮ ಉದ್ದೇಶವಾಗಿದೆ. ಆದ್ದರಿಂದ ಅನುಕ್ತೋಪಾಲಂಭ ದೋಷವು ಬರುವುದಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಾ 'ನಞ್' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳುವ ಮೂಲಕ ಸಾಧ್ಯ ಮತ್ತು ಹೇತುಗಳನ್ನು 'ನ ಶಕ್ತೇರೇವ' ಇತ್ಯಾದಿ ವಾಕ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ.

ಪುರುಷಾನುಗ್ರಹವಿಲ್ಲದಿದ್ದರೂ ಕರ್ತೃತ್ವವು ಏಕಿರಬಾರದು ? ಎಂಬ ಪ್ರಶ್ನೆಗೆ ಸೂತ್ರದಲ್ಲಿ 'ಉತ್ಪತ್ತಿಸಂಭವಾತ್' ಎಂಬ ಹೇತುವನ್ನು ಹೇಳಿದ್ದಾರೆ. ಅದನ್ನು ಉಪಪಾದನೆ ಮಾಡುವ ಭಾಷ್ಯವನ್ನು 'ನ ಹಿ' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ.

ವಿವರಣೆ - ಈ ಅಧಿಕರಣದಲ್ಲಿ ಅಸಾಧಾರಣದೋಷವನ್ನು ಶಕ್ತಿಮತಕ್ಕೆ ಹೇಳುತ್ತಿದ್ದಾರೆ. ಅದೇನೆಂದರೆ ಪುರುಷನ ಅನುಗ್ರಹ ಇಲ್ಲದೆ ಕೇವಲ ಸ್ತ್ರೀಯಿಂದ ಎಲ್ಲೂ ಕೂಡ ಉತ್ಪನ್ನವಾಗಿರುವುದು ಕಂಡಿಲ್ಲ. ಆದರೆ ಶಾಕ್ತರು ಪುರುಷನನ್ನು ಒಪ್ಪದೇ ಕೇವಲ ಶಕ್ತಿ ಎಂಬ ಸ್ತ್ರೀಯಿಂದ ಸಮಸ್ತ ಜಗತ್ತು ಉತ್ಪನ್ನವಾಗುತ್ತದೆಂದು ಒಪ್ಪುತ್ತಾರೆ. ಇದು ಸಾಧ್ಯವೇ ಇಲ್ಲ. ಅತ್ಯಂತ ಅಸಂಭಾವಿತವಾಗಿದೆ ಎಂಬುದು ಈ ಸೂತ್ರದ ಅಭಿಪ್ರಾಯ.

ಆದರೆ ಸ್ತ್ರೀಯರ ಸಹಕಾರ ಇಲ್ಲದೆ ಪುರುಷನಿಂದ ಉತ್ಪತ್ತಿಯಾಗಬಹುದು; ದ್ರೋಣಾದಿಗಳಲ್ಲಿ ಹಾಗೆ ಕಂಡಿದೆ. (ಗುರ್ವರ್ಥದೀಪಿಕಾ)

## ಭಾವದೀಪದ ವೈಶಿಷ್ಟ್ಯ

* ಭಾಗವತದ ದಶಮಸ್ಕಂಧದಲ್ಲಿ ವಾಮಮತವನ್ನು ಪ್ರತ್ಯೇಕವಾಗಿ ಉಲ್ಲೇಖ ಮಾಡಿದ್ದು, ಇಲ್ಲಿ ಶಾಕ್ತಮತದ ಪ್ರತ್ಯೇಕ ನಿರಾಕರಣೆಗೆ ಸಂವಾದಿಯಾಗಿದೆ ಎಂದು ತೋರಿಸಿದ್ದು ಅಪೂರ್ವವಾಗಿದೆ.

* ಮೊದಲನೆಯ ಸೂತ್ರದಲ್ಲಿ ಮಹಾವಾಮ ಮತವನ್ನು ಎರಡನೆಯ ಸೂತ್ರದಲ್ಲಿ ಮಧ್ಯವಾಮ ಮತವನ್ನು, ಮೂರನೆಯ ಸೂತ್ರದಲ್ಲಿ ಅಣುವಾಮ ಮತವನ್ನು ನಿರಾಕರಿಸಿದ್ದಾರೆಂಬ ಅಪೂರ್ವಸಂಗತಿಯನ್ನು ತಿಳಿಸಿದ್ದಾರೆ.

## ಬ್ರಹ್ಮಸೂತ್ರ

### 'ನ ಚ ಕರ್ತುಃ ಕರಣಮ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – न च कर्तुः करणम् ।।**

ಸ್ತ್ರೀಶಕ್ತಿಗೆ ಶಿವನು ಅನುಗ್ರಹ ಮಾಡುತ್ತಾನೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಅಂಥ ಶಿವನಿಗೆ ಜ್ಞಾನಸಾಧನಗಳಾದ ಇಂದ್ರಿಯಗಳೇ ಇರುವುದಿಲ್ಲ.

ಅರ್ಥ -- ಯಾವ ಕಾರಣದಿಂದ ಕರ್ತುಃ = ಶಕ್ತಿ ದೇವತೆಗೆ ಅನುಗ್ರಾಹಕನಾದ ಶಿವನಿಗೆ, ಕರಣಂ = ಜ್ಞಾನ ಸಾಮಗ್ರಿಗಳು ಇರುವುದಿಲ್ಲವೋ, ಆ ಕಾರಣದಿಂದ ನ = ಶಕ್ತ್ಯನುಗ್ರಾಹಕತ್ವವು ಶಿವನಲ್ಲಿ ಯುಕ್ತವಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

### ಸ್ತ್ರೀಶಕ್ತಿಗೆ ಸದಾಶಿವ ಸಹಾಯಕನಾಗಲಾರನೆ ?

**ब्रह्मसूत्रभाष्यम् – ।।। न च कर्तुः करणम् ।।२।।**

**यदि पुरुषोऽङ्गीक्रियते तस्यापि करणाभावादनुपपत्तिः ।।२।।**

ಅನುವಾದ - ಸ್ತ್ರೀ ಶಕ್ತಿಗೆ ಸಹಾಯಕನಾಗಿ ಒಬ್ಬ ಪುರುಷನನ್ನು ಒಪ್ಪಿದರೂ ಆ ಪುರುಷನಿಗೆ ಯಾವುದೇ ಇಂದ್ರಿಯಗಳು ಇಲ್ಲದ ಕಾರಣ ಸ್ತ್ರೀಶಕ್ತಿಯಿಂದ ಜಗತ್ತಿನ ಸೃಷ್ಟಿಯನ್ನು ಒಪ್ಪಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಸದಾಶಿವ ಎಂಬ ಅನುಗ್ರಾಹಕನಾದ ಪುರುಷನಿದ್ದಾನೆ ಎಂಬ ವಾದವನ್ನು ನಿರಾಕರಣೆ ಮಾಡುತ್ತಿದ್ದಾರೆ - ಯದಿ = ಒಂದುವೇಳೆ, ಪುರುಷಃ = ಸದಾಶಿವನೆಂಬ ಪುರುಷನು, ಅಂಗೀಕ್ರಿಯತೇ = ಅಂಗೀಕರಿಸಲ್ಪಟ್ಟರೂ, ತಸ್ಯಾಪಿ = ಅವನಿಗೆ, ಕರಣಾಭಾವಾತ್ = ಯಾವುದೇ ಇಂದ್ರಿಗಳಿಲ್ಲದ ಕಾರಣ, ಅನುಪಪತ್ತಿಃ = ಸ್ತ್ರೀಶಕ್ತಿಯಿಂದ ಜಗತ್ತಿನ ಸೃಷ್ಟಿಯು ನಡೆಯುವುದಿಲ್ಲ.

## ಸತ್ತರ್ಕದೀಪಾವಳಿ

**सत्तर्कदीपावळिः – पुरुषो ज्ञानशक्त्यादिकरणरहितो न ब्रह्माद्युत्पादनाय शक्त्यपेक्ष्यते । असमर्थत्वेनानुपयुक्तत्वात् ।**

ಪುರುಷನಾದವನು ಜ್ಞಾನ, ಶಕ್ತಿ, ಕರಣಗಳು ಇವುಗಳಿಂದ ರಹಿತನಾದರೆ, ಬ್ರಹ್ಮಾದಿಗಳನ್ನು ಸೃಷ್ಟಿ ಮಾಡಲು ಸಮರ್ಥನಾಗುವುದಿಲ್ಲ. ಮತ್ತು ಅಂಥ ಪುರುಷನು ಅಸಮರ್ಥ-ನಾಗಿರುವುದರಿಂದ ಅನುಪಯುಕ್ತನೂ ಆಗಿದ್ದಾನೆ.

## ತತ್ವಪ್ರದೀಪ

### ಮಧ್ಯವಾಮಮತ ನಿರಾಕರಣೆ

**तत्वप्रदीपः – द्वितीयं दूषयति - न च कर्तुः करणम् । यदि पुरुषः सृष्ट्यङ्गमङ्गीक्रियते, तथाऽपि ज्ञानैश्वर्यादितत्साधनाभावात्तस्यानुपपत्तिः । न च शक्तिकरणैर्निर्वोढुं शक्यते । तेषामस्वातन्त्र्यात् ।**

ಮಧ್ಯವಾಮಪಕ್ಷದವರನ್ನು ದೂಷಿಸಲು 'ನ ಚ ಕರ್ತುಃ ಕರಣಮ್' ಎಂಬ ಸೂತ್ರವು ಹೊರಟಿದೆ. ಪುರುಷನು ಸೃಷ್ಟಿಗೆ ಅಂಗನಾಗಿದ್ದಾನೆಂದು ಇವರು ಅಂಗೀಕರಿಸುತ್ತಾರೆ. ಆದರೂ ಕೂಡ ಆ ಪುರುಷನಿಗೆ ಜ್ಞಾನ, ಐಶ್ವರ್ಯ ಮೊದಲಾದ ಯಾವುದೇ ಸಾಧನಗಳು ಇರುವುದಿಲ್ಲ. ಆದ್ದರಿಂದ ಆ ಪುರುಷನಿಂದ ಜಗತ್‌ಸೃಷ್ಟಿಯು ಸಾಧ್ಯವಾಗುವುದಿಲ್ಲ. ಮತ್ತು ಆ ಪುರುಷನಿಗೆ ಕಣ್ಣು, ಕಿವಿ ಮೊದಲಾದ ಸಾಮಗ್ರಿಗಳು ಇರುವುದಿಲ್ಲ. ಶಕ್ತಿಯ ಕರಣಗಳಿಂದಲೂ ಜಗತ್ತಿನ ಸೃಷ್ಟಿಗಳನ್ನು ನಿರ್ವಹಿಸಲು ಸಾಧ್ಯವಿಲ್ಲ. ಆ ಎಲ್ಲ ಇಂದ್ರಿಯಗಳು ಅಸ್ವತಂತ್ರವಾಗಿವೆ.

## ತತ್ವಪ್ರಕಾಶಿಕಾ

### ನಿಮ್ಮ ಸದಾಶಿವ ನಿರಿಂದ್ರಿಯ

**तत्वप्रकाशिका – अस्त्येव शक्त्यनुग्राहकः पुरुषः सदाशिवोऽतस्तस्या जगदुत्पत्तिर्युक्तेति केषाञ्चिच्छाक्तेयानां मतं निराकुर्वत्सूत्रमुपन्यस्य व्याचष्टे।। न चेति ।। यदि पुरुषोऽङ्गीक्रियते शक्त्यनुग्राहकस्तथापि तस्योत्पत्त्युपयोगिज्ञानादिसाधनाभावेनोत्पत्त्यनुपपत्तिरेवेत्यर्थः ।।**

ಶಕ್ತಿಗೆ ಅನುಗ್ರಾಹಕನಾದ ಒಬ್ಬ ಪುರುಷನಿದ್ದಾನೆ. ಅವನೇ ಸದಾಶಿವನು. ಆದ್ದರಿಂದ ಶಕ್ತಿಯಿಂದ ಜಗತ್ತಿನ ಉತ್ಪತ್ತಿಯಾಗುತ್ತಿದೆ ಎಂಬುದಾಗಿ ಶಕ್ತಿಮತದಲ್ಲಿ ಕೆಲವರು ಮಾತ್ರ ಒಪ್ಪುತ್ತಾರೆ. ಅವರನ್ನು ನಿರಾಕರಣೆ ಮಾಡುವುದಕ್ಕಾಗಿ 'ನಚ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಒಂದುವೇಳೆ ಶಕ್ತಿಗೆ ಅನುಗ್ರಾಹಕನಾದ ಪುರುಷನನ್ನು ಅಂಗೀಕಾರ ಮಾಡುವುದಾದರೆ ಆಗಲೂ ಕೂಡ ಜಗತ್ತಿನ ಉತ್ಪತ್ತಿಗೆ ಉಪಯೋಗಿಯಾದ ಜ್ಞಾನಾದಿಸಾಧನಗಳು ಇರುವುದಿಲ್ಲ. ಆದ್ದರಿಂದ ಜಗತ್ತಿನ ಉತ್ಪತ್ತಿಯು ಶಕ್ತಿಯಿಂದ ಅನುಪಪನ್ನವೇ ಆಗಿದೆ.

## ಭಾವದೀಪ

**भावदीपः – ।। न च कर्तुः करणम् ।। ४३ ।।** केषाञ्चिदिति। मध्यमवामानामित्यर्थः। सौत्रश्चशब्दः कर्तुश्चेत्यन्वेतीति भावेन भाष्ये तस्यापीत्युक्तं तद्व्याचष्टे – तथापीति । (आस्तीकमातुरपि पुमनुग्रहोऽस्तीति भावः)। करणशब्दार्थो ज्ञानादिसाधनेति। करणत्वोपपादकमुत्पत्त्युपयोगीति।। ४३ ।।

ಸೂತ್ರದಲ್ಲಿರುವ 'ಚ'ಶಬ್ದಕ್ಕೆ 'ಕರ್ತುಃ' ಎಂಬ ಪದದ ಅನಂತರ ಅನ್ವಯವನ್ನು ತಿಳಿಯಬೇಕು. ಈ ಅಭಿಪ್ರಾಯದಿಂದ ಭಾಷ್ಯದಲ್ಲಿ 'ತಸ್ಯಾಪಿ' ಎಂಬ ಪದವನ್ನು ಪ್ರಯೋಗ ಮಾಡುವ ಮೂಲಕ 'ಕರ್ತುಃ ಚ' ಎಂಬುದರ ಅರ್ಥವನ್ನು ತಿಳಿಸಿದ್ದಾರೆ. ಅದನ್ನೇ ಟೀಕೆಯಲ್ಲಿ 'ತಥಾಪಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. 'ಕೇಷಾಂಚಿತ್' ಎಂದರೆ ಮಧ್ಯವಾಮ ಎನಿಸಿದ ಶಾಕ್ತೇಯರ ಮತವನ್ನು ಎಂದರ್ಥ.

ಆಸ್ತಿಕನ ತಾಯಿಯಾದ ಜರತ್ಕಾರುವಿಗೂ ಕೂಡ ಪುರುಷನ ಅನುಗ್ರಹ ಇದ್ದೇ ಇತ್ತು ಎಂದು ತಿಳಿಯಬೇಕು. ಸೂತ್ರದಲ್ಲಿರುವ ಕರಣಶಬ್ದದ ಅರ್ಥವನ್ನು ಜ್ಞಾನಾದಿಸಾಧನ ಎಂದು ಹೇಳಿದ್ದಾರೆ. ಸೂತ್ರದ ಕರಣ ಶಬ್ದದ ಅರ್ಥವನ್ನು 'ಜ್ಞಾನಾದಿಸಾಧನ' ಎಂದು ಹೇಳಿದ್ದಾರೆ.

ವಿವರಣೆ - ಶಾಕ್ತಮತದಲ್ಲಿ ಕೆಲವರ ಅಭಿಪ್ರಾಯ ಹೀಗಿದೆ - ಶಕ್ತಿಯೇ ಜಗತ್ತಿನ ಸೃಷ್ಟಿಗೆ ಸ್ವತಂತ್ರಕಾರಣ. ಶಿವನು ಗೌಣವಾಗಿ ಕಾರಣನಾಗುತ್ತಾನೆ. ಇದು ವಾಮಮತದ ಅಭಿಪ್ರಾಯ. ಆದರೆ ಶಕ್ತಿಗೆ ಅನುಗ್ರಾಹಕನಾದ ಶಿವನಿಗೆ ಇಂದ್ರಿಯಗಳನ್ನೇ ಒಪ್ಪುವುದಿಲ್ಲ. ಆದ್ದರಿಂದ ಇಂದ್ರಿಯಾದಿಗಳಿಲ್ಲದವನು ಉತ್ಪಾದಕನಾಗಲಾರ. ಅಜಾಗಲಸ್ತನದಂತೆ ಶಿವನನ್ನು ಅಂಗೀಕಾರ ಮಾಡಿರುವುದೇ ವ್ಯರ್ಥವಾಯಿತು.

## ಬ್ರಹ್ಮಸೂತ್ರ

'ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – विज्ञानादिभावे वा तदप्रतिषेधः ।।**

ರುದ್ರನಿಗೆ ಸರ್ವಜ್ಞತ್ವಾದಿ ಗುಣಗಳು ಇರುತ್ತವೆನ್ನುವುದಾದರೆ, ಈ ಮತವು ಶೈವರ ಮತದಲ್ಲಿ ಸೇರುತ್ತದೆ. ಆದ್ದರಿಂದ ಶೈವರ ಮತವನ್ನು ನಿರಾಕರಿಸಿ ಶಾಕ್ತದರ್ಶನವನ್ನು ಸಮರ್ಥಿಸಿದಂತೆ ಆಗುವುದಿಲ್ಲ.

ಅರ್ಥ -- ವಿಜ್ಞಾನಾದಿಭಾವೇ ವಾ = ರುದ್ರನಿಗೆ ಜ್ಞಾನ, ಇಚ್ಛಾ ಮೊದಲಾದ ಶಕ್ತಿಗಳನ್ನು ಒಪ್ಪಿದರೆ, ತದಪ್ರತಿಷೇಧಃ = ಶೈವರ ಮತವನ್ನು ನಿರಾಕರಿಸಿ, ಶಾಕ್ತಮತವನ್ನು ಸ್ಥಾಪಿಸಿದಂತೆ ಆಗುವುದಿಲ್ಲ. ಅಂದರೆ ಶೈವರ ಮತವನ್ನು ಅನುಮೋದನೆ ಮಾಡಿದಂತಾಯಿತು. ದೂಷಣೆ ಮಾಡಿದಂತಾಗಲಿಲ್ಲ.

## ಬ್ರಹ್ಮಸೂತ್ರಭಾಷ್ಯ

### ಈಶ್ವರವಾದದಲ್ಲೇ ನಿಮ್ಮ ಮತದ ಪ್ರವೇಶ ಹೇಗೆ ?

**ब्रह्मसूत्रभाष्यम् –।। विज्ञानादिभावे वा तदप्रतिषेधः ।।३।।**

**यदि विज्ञानादिकरणं तस्याङ्गीक्रियते तदा तत एव सृष्ट्याद्युपपत्तेरीश्वर-वादान्तर्भावः ।।३।।**

ಅನುವಾದ - ಒಂದು ವೇಳೆ ಸ್ತ್ರೀಶಕ್ತಿಗೆ ಸಹಾಯ ಮಾಡುವ ಪುರುಷನಿಗೆ ಶರೀರ ಇಂದ್ರಿಯ ಮೊದಲಾದವುಗಳೆಲ್ಲವು ಇರುತ್ತವೆ. ಮತ್ತು ಸರ್ವಜ್ಞನೂ ಆಗಿರುತ್ತಾನೆ. ಎಂದು ಹೇಳಬೇಕು. ಆವಾಗ ಆ ಪುರುಷನಿಂದಲೇ ಜಗತ್ತಿನ ಸೃಷ್ಟ್ಯಾದಿಗಳನ್ನು ಒಪ್ಪಲು ಬರುವಾಗ ಮಧ್ಯದಲ್ಲಿ ಸ್ತ್ರೀಶಕ್ತಿಯನ್ನು ಒಪ್ಪಿಯೂ ಉಪಯೋಗವಿಲ್ಲ. ಆವಾಗ ಶಾಕ್ತಮತವು ಈಶ್ವರವಾದದಲ್ಲೇ ಅಂತರ್ಭಾವವನ್ನು ಹೊಂದುತ್ತದೆ.

ಪ್ರತಿಪದಾರ್ಥ -- ಯದಿ = ಒಂದುವೇಳೆ, ವಿಜ್ಞಾನಾದಿಕರಣಂ = ಜ್ಞಾನ ಮೊದಲಾದವುಗಳಿಗೆ ಕಾರಣವಾದ ಇಂದ್ರಿಯಾದಿಗಳನ್ನು, ತಸ್ಯ = ಈಶ್ವರನಿಗೆ, ಅಂಗೀಕ್ರಿಯತೇ = ಅಂಗೀಕರಿಸಿದರೆ, ತದಾ = ಆವಾಗ, ತತ ಏವ = ಆ ವ್ಯಕ್ತಿಯಿಂದಲೇ ಸೃಷ್ಟ್ಯಾದ್ಯುಪಪತ್ತೇಃ = ಜಗತ್ತಿನ ಸೃಷ್ಟಿ ಮೊದಲಾದವು ಉಪಪನ್ನವಾಗುವುದರಿಂದ, ಈಶ್ವರವಾದಾಂತರ್ಭಾವಃ = ಶಾಕ್ತಮತವು ಈಶ್ವರವಾದ(ಮತ)ದಲ್ಲಿಯೇ ಅಂತರ್ಭಾವವನ್ನು ಹೊಂದುತ್ತದೆ.

### ಸತ್ತರ್ಕದೀಪಾವಳಿ

**सत्तर्कदीपावळिः – यदि सर्वविज्ञानसर्वशक्त्यादिमानीश्वरः शक्त्यपेक्षते इत्युच्यते । तर्हि तत एव जगत्सृष्ट्याद्युपपत्तेः पाशुपतपक्षान्तर्भूतत्वात् शक्तिपक्षो न न तत्प्रतिषेधक इत्यर्थः ।**

ಒಂದು ವೇಳೆ ಎಲ್ಲಾ ಪದಾರ್ಥಗಳನ್ನು ಆ ಪುರುಷನು ತಿಳಿದಿದ್ದಾನೆ. ಸಕಲ ಶಕ್ತಿಗಳೂ ಕೂಡ ಅವನಲ್ಲಿದೆ ಎಂದು ಹೇಳುವುದಾದರೆ, ಅಂಥ ಈಶ್ವರನಿಂದಲೇ ಜಗತ್ತು ಸೃಷ್ಟವಾಗುತ್ತದೆಂದು ಹೇಳಬಹುದು. ಇದು ಪಾಶುಪತಮತದಲ್ಲೇ ಅಂತರ್ಭಾವ ಹೊಂದುತ್ತದೆ. ಶಕ್ತಿಪಕ್ಷವೆಂದು ಕರೆಸಿಕೊಳ್ಳುವುದಿಲ್ಲ. ಆದ್ದರಿಂದ ಅದರ ಪ್ರತಿಷೇಧವೂ ಕೂಡ ಅಯುಕ್ತವಾಗುತ್ತದೆ.

### ತತ್ವಪ್ರದೀಪ

#### ಅಣುವಾಮಪಕ್ಷದ ನಿರಾಕರಣೆ

**तत्वप्रदीपः – तृतीयं निरस्यति - विज्ञानादिभावे वा तदप्रतिषेधः । यदि चेतनेभ्यो विशिष्टं ज्ञानैश्वर्यादिकं तस्याङ्गीक्रियते, तदा कर्त्रन्तरमनपेक्ष्यैव सृष्ट्याद्युपपत्तेरीश्वरवादान्तर्भाव एव प्राप्नोति युष्माकम् । स च निरासि वेदविरोधी ।**

ಅಣುವಾಮಪಕ್ಷದವರನ್ನು ನಿರಾಕರಿಸಲು 'ವಿಜ್ಞಾನಾದಿಭಾವೇ ವ ತದಪ್ರತಿಷೇಧಃ' ಎಂಬ ಸೂತ್ರವು ಹೊರಟಿದೆ. ಒಂದುವೇಳೆ ಉಳಿದೆಲ್ಲಾ ಚೇತನರಿಗಿಂತ ವಿಶಿಷ್ಟವಾದ ಜ್ಞಾನ, ಐಶ್ವರ್ಯ ಮೊದಲಾದ ಸಾಮರ್ಥ್ಯವನ್ನು ಪುರುಷನಿಗೆ ಅಂಗೀಕಾರ ಮಾಡಿದರೆ ಮತ್ತೊಬ್ಬ ಕರ್ತೃವಿನ ಅಪೇಕ್ಷೆಯಿರುವುದಿಲ್ಲ. ಅವನಿಂದಲೇ ಸೃಷ್ಟ್ಯಾದಿಗಳು ಉಪಪನ್ನವಾಗುತ್ತವೆ. ಈ ಪಕ್ಷವು ಈಶ್ವರವಾದದಲ್ಲೇ ಅಂತರ್ಭಾವವನ್ನು ಹೊಂದುತ್ತದೆ. ವೇದವಿರುದ್ಧವಾದ ಈ ಮತವನ್ನೂ ಕೂಡ ಈಗಾಗಲೇ ನಾವು ನಿರಾಕರಣೆ ಮಾಡಿದ್ದಾಗಿದೆ.

## ತತ್ವಪ್ರಕಾಶಿಕಾ

### ಸದಾಶಿವನು ಸರ್ವಜ್ಞನೇ ?

**तत्वप्रकाशिका – शक्त्यनुग्राहकस्य पुंसः सार्वज्ञादिसद्भावेन युक्ततरा जगदुत्पत्तिरिति केचित् । तन्मतनिरासाय सूत्रं पठित्वा व्याचष्टे – विज्ञानेति।।**

ಶಕ್ತಿಗೆ ಅನುಗ್ರಾಹಕನಾದ ಸದಾಶಿವನು ಸಾರ್ವಜ್ಞ್ಯಾದಿ ಗುಣಗಳುಳ್ಳವನೆಂದು ಅಂಗೀಕರಿಸುತ್ತೇವೆ. ಆದ್ದರಿಂದ ಜಗತ್ತಿನ ಉತ್ಪತ್ತಿಯು ಯುಕ್ತವಾಗುತ್ತದೆಂದು ಶಾಕ್ತಮತದಲ್ಲಿ ಕೆಲವರು ಹೇಳುತ್ತಾರೆ. ಇವರ ಮತವನ್ನು ನಿರಾಕರಣೆ ಮಾಡುವುದಕ್ಕಾಗಿ 'ವಿಜ್ಞಾನಾದಿ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಭಾವದೀಪ

**भावदीपः –।। विज्ञानादिभावे वा तदप्रतिषेधः ।।४४।। इति केचिदिति ।।** अणुवामशब्दितशाक्तेया इत्यर्थः।

'ಇತಿ ಕೇಚಿತ್' ಎಂದರೆ ಅಣುವಾಮಶಬ್ದದಿಂದ ಪ್ರತಿಪಾದ್ಯರಾದ ಶಾಕ್ತೇಯರನ್ನು 'ಕೇಚಿತ್' ಎಂಬುದರಿಂದ ಉಲ್ಲೇಖ ಮಾಡಿದ್ದಾರೆ.

### ಶೈವಮತದಲ್ಲಿಯೇ ಇದು ಸೇರಿತು

**तत्वप्रकाशिका – यदि शक्त्यनुग्राहकस्येश्वरस्य विज्ञानादि-करणत्वमङ्गीक्रियते तदा तेनैव जगदुत्पत्तिसम्भवाद् व्यर्थं शक्तेरपि पृथक्कर्तृत्वाङ्गीकरणं स्यात् । तथा चानेन शाक्तेयमतेन प्रकृतपाशुपतमतस्याप्रतिषेधः कृतः स्यात् । अनुमतमेव स्यात् । तच्च निरस्तमिति भावः ।।**

ಒಂದುವೇಳೆ ಶಕ್ತಿಗೆ ಅನುಗ್ರಾಹಕನಾದ ಈಶ್ವರನು ವಿಜ್ಞಾನಾದಿಗಳನ್ನು ಹೊಂದಿರುತ್ತಾನೆಂದು ಒಪ್ಪಿದರೆ, ಆಗ ಅವನಿಂದಲೇ ಜಗತ್ತಿನ ಉತ್ಪತ್ತಿಯು ಸಂಭಾವಿತವಾಗುತ್ತದೆ. ಮಧ್ಯದಲ್ಲಿ ಶಕ್ತಿಯನ್ನು ಪ್ರತ್ಯೇಕವಾಗಿ ಒಪ್ಪಿ ಆ ಶಕ್ತಿಗೆ ಕರ್ತೃತ್ವಾದಿಗಳನ್ನು ಒಪ್ಪುವುದು ವ್ಯರ್ಥವಾಗುತ್ತದೆ. ಈ ಶಾಕ್ತೇಯ ಮತದಿಂದ ಪಾಶುಪತಮತವನ್ನು ನಿಷೇಧ ಮಾಡದಂತೆ ಆಗುವುದಿಲ್ಲ. ಅಂಗೀಕರಿಸಿದಂತೆಯೇ ಆಯಿತು. ಈಗಾಗಲೇ ಪಾಶುಪತ ಮತವನ್ನು ನಿರಾಕರಣೆ ಮಾಡಿದ್ದೇವೆ.

**भावदीपः** – विज्ञानादिभावे वेत्येतद्व्याख्यारूपं भाष्यं व्याचष्टे – **यदीति** ।। मध्ये भाष्योक्तं सूत्रशेषं काङ्क्षितं पूरयन्ननुवदति –**तेनैवेति** ।। ईश्वरवादान्तर्भाव इति भाष्यं तदप्रतिषेध इति सूत्रांशस्य पर्यवसितव्याख्यानमिति भावेन सूत्रांशं व्याचष्टे –**तथा चेति** ।। अस्तु को दोष इत्यत आह – **तच्चेति** ।। ईश्वरमतमित्यर्थः ।। ४४ ।।

'ವಿಜ್ಞಾನಾದಿಭಾವೇ ವಾ' ಎಂಬ ಪದವನ್ನು ವ್ಯಾಖ್ಯಾನ ಮಾಡುವ ಭಾಷ್ಯದ ವ್ಯಾಖ್ಯಾನಕ್ಕಾಗಿ 'ಯದಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಸೂತ್ರದಲ್ಲಿ ಆಕಾಂಕ್ಷಿತಗೊಂಡಿದ್ದನ್ನು ಪೂರಣೆ ಮಾಡಿಕೊಳ್ಳಬೇಕು ಎಂಬುದನ್ನು ತೋರಿಸುವ ಮೂಲಕ ಭಾಷ್ಯದಲ್ಲಿ ಹೇಳಿದ್ದನ್ನು ಅನುವಾದ ಮಾಡಲು 'ತೇನೈವ' ಇತ್ಯಾದಿ ಗ್ರಂಥವು ಹೊರಟಿದೆ. ಈಶ್ವರವಾದದಲ್ಲೇ ಅಂತರ್ಭಾವವನ್ನು ಹೊಂದುತ್ತದೆಂದು ಭಾಷ್ಯದಲ್ಲಿ ಹೇಳಿದ್ದಾರೆ. ಈ ಭಾಷ್ಯವು 'ತದಪ್ರತಿಷೇಧಃ' ಎಂಬ ಸೂತ್ರಾಂಶದ ಪರ್ಯವಸಿತವಾದ ವ್ಯಾಖ್ಯಾನವಾಗಿದೆ. ಈ ಅಭಿಪ್ರಾಯದಿಂದ ಸೂತ್ರಾಂಶವನ್ನು ವ್ಯಾಖ್ಯಾನ ಮಾಡಲು 'ತಥಾ ಚ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಆಗಲಿ ಏನು ದೋಷ? ಎಂಬ ಪ್ರಶ್ನೆಗೆ 'ತಚ್ಚ' ಎಂಬುದರಿಂದ ಉತ್ತರಿಸಿದ್ದಾರೆ. 'ತಚ್ಚ' ಎಂಬ ಪದಕ್ಕೆ ಈಶ್ವರಮತವು ಎಂದರ್ಥ.

ವಿವರಣೆ - ಪಾಶುಪತಮತಕ್ಕೂ ಶಾಕ್ತೇಯಮತಕ್ಕೂ ವ್ಯತ್ಯಾಸವೇ ಇಲ್ಲದಂತಾಯಿತು ಎಂಬುದು ಸೂತ್ರದ ಅಭಿಪ್ರಾಯ.

ಆಕ್ಷೇಪ - ಶೈವರು ಶಿವನೊಬ್ಬನನ್ನೇ ಒಪ್ಪುತ್ತಾರೆ. ಶಾಕ್ತರು ಶಿವ ಹಾಗೂ ಶಕ್ತಿ ಎರಡನ್ನು ಒಪ್ಪುವುದರಿಂದ ಬಹಳ ವ್ಯತ್ಯಾಸವಿದೆಯಲ್ಲವೆ? ಆದ್ದರಿಂದ ಇದು ಈಶ್ವರವಾದದಲ್ಲಿ ಹೇಗೆ ಅಂತರ್ಭಾವ ಹೊಂದುತ್ತದೆ. ಈ ಅಭಿಪ್ರಾಯದಿಂದ 'ಯದಿ' ಇತ್ಯಾದಿ ಟೀಕಾವಾಕ್ಯವು

ಹೊರಟಿದೆ. ಮೇಲ್ನೋಟಕ್ಕೆ ವ್ಯತ್ಯಾಸವಿರಬಹುದು. ಆದರೆ ಶಕ್ತಿಯನ್ನು ಒಪ್ಪುವುದೇ ವ್ಯರ್ಥ ಎಂಬುದು ಅಭಿಪ್ರಾಯ. ಆದ್ದರಿಂದ ಶೈವಮತನಿರಾಕರಣೆಯಿಂದಲೇ ಇವರ ಮತವನ್ನೂ ನಿರಾಕರಣೆ ಮಾಡಿದಂತಾಯಿತು.

## ಬ್ರಹ್ಮಸೂತ್ರ

### 'ವಿಪ್ರತಿಷೇಧಾಚ್ಚ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – विप्रतिषेधाच्च ।।**

ಹೀಗೆ ಸಕಲಶ್ರುತಿ-ಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಶಾಕ್ತಮತವು ಅಯುಕ್ತವಾಗಿದೆ.

ಅರ್ಥ -- ವಿಪ್ರತಿಷೇಧಾಚ್ಚ = ಸಕಲಶ್ರುತಿ-ಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಶಾಕ್ತಮತವು ಅತ್ಯಂತ ಅಸಮಂಜಸವಾಗಿದೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಉತ್ಪತ್ತ್ಯಧಿಕರಣವು ಸಮಾಪ್ತವಾಯಿತು ॥
॥ ಎರಡನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಶಕ್ತಿಮತವೂ ಸಹ ಅಸಮಂಜಸ

**ब्रह्मसूत्रभाष्यम् – ।। विप्रतिषेधाच्च ।।४।।**

**सकलश्रुत्यादिविरुद्धत्वाच्चासमञ्जसम् ।।४।।**

**।। इति उत्पत्त्यधिकरणम् ।।१२।।**

**।। इति श्रीमदानन्दतीर्थभगवत्पादाचार्यविरचिते
ब्रह्मसूत्रभाष्ये द्वितीयस्याध्यास्य द्वितीयः पादः ।। २ ।।**

ಅನುವಾದ - ಸಕಲ ಶ್ರುತಿಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಶಾಕ್ತಮತವು ಅಸಮಂಜಸವಾಗಿದೆ.

ಪ್ರತಿಪದಾರ್ಥ -- ಸಕಲಶ್ರುತ್ಯಾದಿವಿರುದ್ಧತ್ವಾತ್ = 'ನ ಋತೇ ತ್ವತ್ ಕ್ರಿಯತೇ ಇವೇ ಮೊದಲಾದ ವೇದವಾಕ್ಯಗಳ ವಿರೋಧ ವಿರುವುದರಿಂದಲೂ, ಅಸಮಂಜಸಮ್ = ಶಾಕ್ತಮತವು ಅಸಾಧುವಾಗಿದೆ

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಉತ್ತತ್ವಧಿಕರಣವು ಸಮಾಪ್ತವಾಯಿತು ॥

ಇಲ್ಲಿಗೆ ಎರಡನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು.

## ಸತ್ತರ್ಕದೀಪಾವಳಿ

**सत्तर्कदीपावळिः – उपसंहरति । विप्रतिषेधादित्यादिना । सकलश्रुतिस्मृतिसदाचारविप्रतिषिद्धत्वाच्छाक्तेयमतमशोभनमित्यर्थः ॥**

**इति श्रीमदानन्दतीर्थभगवत्पादाचार्यकृतब्रह्मसूत्रभाष्यटीकायां सत्तर्कदीपावल्यां श्रीपद्मनाभतीर्थभट्टारकविरचितायां द्वितीयाध्यायस्य द्वितीयः पादः ॥**

ಸಮಯಪಾದದ ಉಪಸಂಹಾರವನ್ನು 'ವಿಪ್ರತಿಷೇಧಾತ್' ಇತ್ಯಾದಿ ಸೂತ್ರಭಾಷ್ಯದಿಂದ ಮಾಡುತ್ತಿದ್ದಾರೆ. ಸಕಲ ಶ್ರುತಿ, ಸ್ಮೃತಿ, ಸದಾಚಾರ ಇವುಗಳಿಗೆ ವಿರುದ್ಧವಾಗಿರುವುದರಿಂದ ಶಾಕ್ತಮತವು ಎಲ್ಲಿಯೂ ಕೂಡ ಶೋಭಿಸುವುದಿಲ್ಲ.

॥ ಇಲ್ಲಿಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ರಚಿತವಾದ ಬ್ರಹ್ಮಸೂತ್ರಭಾಷ್ಯವೆನಿಸಿದ ಟೀಕೆಯೆನಿಸಿದ ಸತ್ತರ್ಕದೀಪಾವಳಿಯಲ್ಲಿ ಶ್ರೀಪದ್ಮನಾಭತೀರ್ಥಭಟ್ಟಾರಕರಿಂದ ವಿರಚಿತವಾದ ಎರಡನೆಯ ಅಧ್ಯಾಯದ ಎರಡನೆಯ ಪಾದವು ಮುಗಿಯಿತು ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

## ತತ್ವಪ್ರದೀಪ

### ಶಾಕ್ತಮತ ಅತ್ಯಂತ ಹೇಯ

**तत्वप्रदीपः – विप्रतिषेधाच्च । सकलश्रुतिस्मृतिविरुद्धात्वाज्जुगुप्सितत्वाच्छिष्टजनैरसमञ्जसमिदं शाक्तेयदर्शनम् ।**

ಎಲ್ಲಾ ಶ್ರುತಿ-ಸ್ಮೃತಿಗಳಿಗೆ ವಿರುದ್ಧವಾಗಿರುವುದರಿಂದ ಶಿಷ್ಟಜನರಿಂದ ಹೇಯವಾಗಿರುವುದರಿಂದ ಈ ಶಾಕ್ತಮತವು ಅಸಮಂಜಸವಾಗಿದೆ.

### ಮಾಯಾವಾದಿಗಳ ಬಣ್ಣ ಬಯಲಾಯಿತು

**तत्वप्रदीपः – यत्तु पञ्चरात्रनिषेधकमेतदधिकरणमाशासते मायिनः शाक्तेयपक्षपातात् । तदपि न वैदिकपदवीपाथेयतां धत्ते । प्रागेव प्रतिपादनात्पञ्चरात्रप्रामाण्यस्य । अप्रामाण्ये प्रतिषेध्यत्वं स्यात् । ऊन्मूलितं चैतन्मूलसम्प्रदायाचार्येणोन्मीलयतासूत्रहृदयममुनैवान्यत्र च । अहो एतेषां तेषु प्रथीयसी प्रमाणविप्रकृष्टेषु सज्जनवर्जनीयसङ्गेषु निर्मत्सरा गूढमैत्री । लौकिकानामपि हि प्रसिद्धप्रतिषेध्यान् प्रतिषेधाधिकरणे न प्रतिषेधन्ति । अहो अपि भागवतेषु विशदवैदिकवर्त्मविवृतिविधृतपरिश्रमेषु वैशेषिको विद्वेषः । यदिमान्निर्णयपञ्चरात्रात्मकेषु सूत्रेषु श्रुतिस्मृतियुक्तिपरिगृऽहीतानिह बहिष्कर्तुमीहन्ते । भवत्वेतदेवातिशोभनमशुभानां, यत्सज्जनचिह्नदर्शका दुर्जनानन्तरावृण्वन्तः साधूनपध्वंसयितमिच्छन्ति ।**

ಮಾಯಾವಾದಿಗಳು ಹೀಗೆ ಹೇಳುತ್ತಾರೆ - ಈ ಉತ್ಪತ್ತ್ಯಧಿಕರಣವು ಪಂಚರಾತ್ರಪ್ರಾಮಾಣ್ಯವನ್ನು ನಿಷೇಧ ಮಾಡುವುದಕ್ಕಾಗಿ ಹೊರಟದೆ ಎಂದು ಶಾಕ್ತೇಯಮತದ ಮೇಲೆ ಅತಿಯಾದ

ಪಕ್ಷಪಾತವನ್ನು ಹೊಂದಿ ಹೀಗೆ ಹೇಳುತ್ತಾರೆ - ಆದರೆ ಇವರ ಈ ಅಭಿಪ್ರಾಯವು ವೈದಿಕಪದವಿಯನ್ನು ಹೊಂದಲು ಪಾಥೇಯ ಆಗುವುದಿಲ್ಲ. (ಪಾಥೇಯ = ಬುತ್ತಿ) ಏಕೆಂದರೆ ಸ್ವತಃ ಸೂತ್ರಕಾರರೇ ಸ್ಮೃತ್ಯಧಿಕರಣದಲ್ಲಿ ಪಂಚರಾತ್ರಕ್ಕೆ ಪ್ರಾಮಾಣ್ಯವನ್ನು ಒಪ್ಪಿದ್ದಾರೆ. ಪಂಚರಾತ್ರವು ಅಪ್ರಾಮಾಣ್ಯವಾಗಿದ್ದಲ್ಲಿ ಅದನ್ನು ಸೂತ್ರಕಾರರು ನಿಷೇಧ ಮಾಡುತ್ತಿದ್ದರು. ಇದು ಸಾಧ್ಯವಿಲ್ಲ. ಮೂಲಸಂಪ್ರದಾಯಪ್ರವರ್ತಕಾಚಾರ್ಯರಾದ ಸೂತ್ರ ಹೃದಯವನ್ನು ಅರಳಿಸುವ ಈ ನಮ್ಮ ಶ್ರೀಮಧ್ವಾಚಾರ್ಯರಿಂದಲೂ ಕೂಡ ಶಾಸ್ತ್ರಯೋನಿತ್ವಾಧಿಕರಣ ಹಾಗೂ ಸ್ಮೃತ್ಯಾದ್ಯಧಿಕರಣಗಳಲ್ಲಿ ಪಂಚರಾತ್ರದ ಅಪ್ರಾಮಾಣ್ಯವನ್ನು ನಿರಾಕರಣೆ ಮಾಡಿರುತ್ತಾರೆ.

ಏನಾಶ್ಚರ್ಯ ! ಪ್ರಮಾಣದಿಂದ ದೂರವಿರುವ, ಸಜ್ಜನರು ಇಷ್ಟಪಡದ ಸಂಗದವರಾದ ಶಾಕ್ತೇಯರ ವಿಷಯದಲ್ಲಿ ಈ ಅದ್ವೈತಿಗಳಿಗೆ ಸ್ವಲ್ಪವೂ ಮಾತ್ಸರ್ಯವಿಲ್ಲದ ಅತ್ಯಂತ ಬೃಹತ್ತಾದ ಗೂಢ ಮೈತ್ರಿಯು ಏನದ್ಭುತ ! ಯಾವ ಮತದವರು ಅತ್ಯಂತ ಹೇಯರಾಗಿದ್ದಾರೆಂದು ಲೌಕಿಕರಿಗೂ ಕೂಡ ತಿಳಿದಿದೆಯೋ, ಅಂಥವರನ್ನು ನಿರಾಕರಣೆ ಮಾಡುವುದಕ್ಕಾಗಿಯೇ ಇರುವಂಥ ಈ ಅಧಿಕರಣದಲ್ಲೂ ಅದ್ವೈತಿಗಳು ಆ ಶಾಕ್ತೇಯರನ್ನು ನಿರಾಕರಣೆ ಮಾಡುತ್ತಿಲ್ಲ. ಇನ್ನೂ ಆಶ್ಚರ್ಯವೆಂದರೆ ಪರಮಭಾಗವತರೆನಿಸಿಕೊಂಡ ವಿಶಾಲವಾದ ವೈದಿಕ ದಾರಿಯಲ್ಲಿ ಬಹಳಷ್ಟು ಶ್ರಮಪಟ್ಟು ಸಾಗುತ್ತಿರುವ ಸಜ್ಜನರ ವಿಷಯದಲ್ಲಿ ವಿಲಕ್ಷಣವಾದ ದ್ವೇಷವನ್ನೇ ಸಾಧಿಸುತ್ತಿದ್ದಾರೆ. ಆ ವಿಲಕ್ಷಣವಾದ ದ್ವೇಷ ಎಂಥದ್ದು ಎಂದರೆ ಭಾಗವತರನ್ನು ಪಂಚರಾತ್ರದ ಪ್ರಾಮಾಣ್ಯವನ್ನು ನಿರ್ಣಯ ಮಾಡುವ ಈ ಸೂತ್ರಗಳಲ್ಲಿ ಶ್ರುತಿ-ಸ್ಮೃತಿ- ಯುಕ್ತಿಗಳಿಂದ ಪರಿಗೃಹೀತರಾದವರನ್ನು ಬಹಿಷ್ಕರಿಸಲು ಇಚ್ಛಿಸುತ್ತಾನೆ. ಇರಲಿ ! ಇರಲಿ ! ಇದೇ ಅಶುಭರಿಗೆ ಅತ್ಯಂತ ಶೋಭಾಯಮಾನವಾದದ್ದು. ಎಲ್ಲಾ ಮಾಯಾವಾದಿಗಳು ಸಜ್ಜನರ ಚಿಹ್ನೆಯನ್ನಷ್ಟೇ ತೋರಿಸುತ್ತಾ, ಅಂತರಾಳದಲ್ಲಿ ದೌರ್ಜನ್ಯವನ್ನೇ ಆವರಿಸಿದ್ದಾರೆ. ಇವರು ಸಾಧುಜನರನ್ನು ನಾಶಮಾಡುವುದಕ್ಕಾಗಿಯೇ ನಿರಂತರ ಇಚ್ಛಿಸುತ್ತಾರೆ.

## ಪಂಚರಾತ್ರಪ್ರಾಮಾಣ್ಯ ಸಮರ್ಥನೆ

**तत्वप्रदीपः –**

**''पञ्चरात्रं च वेदाश्च मूलरामायणं तथा ।**
**पुराणं भागवतं चैव भारतं च न भिद्यते ।।**
**एतेष्वपि यथा विष्णोराधिक्यप्रतिपादनम् ।**
**तद्भक्तानां च क्रमशः स एवार्थो नचापरः'' ।। इति ब्रह्माण्डे ।**

**''जलौघैर्निरभिद्यन्त सेतवो वर्षतीश्वरे ।**
**पाषाण्डवामशैवाद्यैर्वेदमार्गाः कलौ यथा'' इति च भागवते ।**

**अतस्साधितविशेषणो नारायणस्सर्वकारणमिति विशदमशेषम् ।।**

**।। इति शक्त्यधिकरणम् ।।**

**।। इति तत्वप्रदीपिकायां द्वितीयाध्यायस्य द्वितीयः पादः ।**

ಪಂಚರಾತ್ರಂ ಚ ವೇದಾಶ್ಚ ಮೂಲರಾಮಾಯಣಂ ತಥಾ ।
ಪುರಾಣಂ ಭಾಗವತಂ ಚೈವ ಭಾರತಂ ಚ ನ ಬಿದ್ಯತೇ ॥

ಏತೇಷ್ವಪಿ ಯಥಾ ವಿಷ್ಣೋರಾಧಿಕ್ಯಪ್ರತಿಪಾದನಮ್ ।
ತದ್ಭಕ್ತಾನಾಂ ಚ ಕ್ರಮಶಃ ಸ ಏವಾರ್ಥೋ ನಚಾಪರಃ ॥ ಇತಿ ಬ್ರಹ್ಮಾಂಡೇ ।

ಪಂಚರಾತ್ರ, ನಾಕುವೇದ, ಮೂಲರಾಮಾಯಣ, ಪುರಾಣ, ಭಾಗವತ, ಮಹಾಭಾರತ ಇವುಗಳಲ್ಲಿ ಪರಸ್ಪರ ವಿರುದ್ಧವಿಷಯ ಪ್ರತಿಪಾದನೆಯು ಇರುವುದಿಲ್ಲ. ಈ ಗ್ರಂಥಗಳಲ್ಲಿ ಹೇಗೆ ವಿಷ್ಣುಸರ್ವೋತ್ತಮತ್ವವನ್ನೇ ಪ್ರತಿಪಾದನೆ ಮಾಡಲಾಗಿದೆಯೋ, ಅದರಂತೆ ಆ ವಿಷ್ಣುಭಕ್ತರ ಚರಿತ್ರೆಯು ತಾರತಮ್ಯಾನುಗುಣವಾಗಿ ವರ್ಣಿತವಾಗಿದೆ. ಆ ವಿಷ್ಣುವೇ ಈ ಎಲ್ಲಾ ಗ್ರಂಥಗಳಿಂದ

ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಮತ್ತೊಂದು ವಿಷಯವು ಸರ್ವಥಾ ಪ್ರತಿಪಾದ್ಯವಾಗಿಲ್ಲ. ಹೀಗೆ ಬ್ರಹ್ಮಾಂಡಪುರಾಣವು ಹೇಳಿದೆ.

ಜಲೌಘೈರ್ನಿರಭಿದ್ಯಂತ ಸೇತವೋ ವರ್ಷತೀಶ್ವರೇ ।
ಪಾಷಾಂಡವಾಮಶೈವಾದ್ಯೈರ್ವೇದಮಾರ್ಗಾಃ ಕಲೌ ಯಥಾ॥ ಇತಿ ಚ ಭಾಗವತೇ ।

ಮಳೆಗಾಲದಲ್ಲಿ ನೀರು ತುಂಬಿದ ಮೋಡಗಳು ಧಾರಾಕಾರವಾಗಿ ಮಳೆಯನ್ನು ಸುರಿಸಿದಾಗ ಸೇತುಗಳು ಹೇಗೆ ಮುರಿದುಬೀಳುತ್ತವೆ. ಹೇಗೆಂದರೆ ಪಾಷಂಡಮತ ಅಣುವಾಮ ಮೊದಲಾದ ಶಾಕ್ತೇಯಮತ ಹಾಗೂ ಶೈವಮತ ಮೊದಲಾದವುಗಳಿಂದ ಕಲಿಯುಗದಲ್ಲಿ ಹೇಗೆ ವೇದಮಾರ್ಗವು ಕುಸಿದು ಬೀಳುತ್ತದೆ. ಹೀಗೆ ಭಾಗವತವು ವರ್ಣಿಸಿದೆ. ಆದ್ದರಿಂದ ನಾರಾಣಯನೇ ಸಮಸ್ತಜಗತ್ತಿಗೆ ಕಾರಣನಾಗಿದ್ದಾನೆಂಬ ಪ್ರಮೇಯವನ್ನು ಸಾಧಿಸದಂತಾಯಿತು. ಉಳಿದೆಲ್ಲಾ ಪ್ರಮೇಯವು ಅತ್ಯಂತ ಸ್ಪಷ್ಟವಾಯಿತು.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ
ಉತ್ಪತ್ತ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

### ಮೂರು ಶಾಕ್ತೇಯ ಮತಗಳಿಗೆ ಸಾಧಾರಣ ದೋಷ

**तत्वप्रकाशिका – एवं शाक्तेयमतत्रयं पृथङ् पृथङ् निरस्य समुदितदूषणेनापि निराकुर्वत्सूत्रमुपन्यस्य व्याचष्टे ।। विप्रतिषेधाच्चेति ।। असमञ्जसं शक्तिमतमिति शेषः ।**

ಹೀಗೆ ಮೂರು ಶಾಕ್ತೇಯಮತಗಳನ್ನು ಪ್ರತ್ಯೇಕವಾಗಿ ನಿರಾಕರಣೆ ಮಾಡಿ ಎಲ್ಲರಿಗೂ ಸಾಧಾರಣವಾದ ದೋಷವನ್ನು ಹೇಳುವ ಮೂಲಕ ಅವರ ಮತವನ್ನು ನಿರಾಕರಣೆ ಮಾಡುವ

ಸೂತ್ರವನ್ನು 'ವಿಪ್ರತಿಷೇಧಾಚ್ಚ' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಶಕ್ತಿಮತವು ಅಸಮಂಜಸವಾಗಿದೆ ಎಂಬುದನ್ನು ಶೇಷಪೂರಣಮಾಡಿಕೊಳ್ಳಬೇಕು..

ಸಮಯಗಳ ವಿರೋಧ ಪರಿಹಾರವಾಯಿತು

**तत्वप्रकाशिका – अतोऽयुक्तत्वाच्छाक्तेयमतस्याविरोधकत्वेनोपपन्नमेव विष्णोर्जगत्कारणत्वलक्षणमिति सिद्धम् ।। ४५ ।।**

**इति श्रीमदानन्दतीर्थभगवत्पादाचार्यविरचितस्य श्रीमद्ब्रह्मसूत्रभाष्यस्य टीकायां श्रीमज्जयतीर्थ मुनिविरचितायां तत्त्वप्रकाशिकायां द्वितीयाध्यायस्य द्वितीयः पादः ।। श्रीरस्तु ।।**

**।। श्री कृष्णार्पणमस्तु ।।**

ಆದ್ದರಿಂದ ಶಾಕ್ತೇಯಮತವು ಅಯುಕ್ತವಾಯಿತು. ಈ ಮತದ ವಿರೋಧವು ಇಲ್ಲದ ಕಾರಣ ವಿಷ್ಣುವಿನ ಜಗತ್ಕಾರಣತ್ವಲಕ್ಷಣವು ಯುಕ್ತವೇ ಆಯಿತು

ಇಲ್ಲಿಗೆ ಶ್ರೀಮದಾನಂದತೀರ್ಥಭಗವದ್‌ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಟೀಕೆಯಲ್ಲಿ ಶ್ರೀಮದ್ ಜಯತೀರ್ಥಭಿಕ್ಷುಗಳಿಂದ ವಿರಚಿತವಾದ ತತ್ವಪ್ರಕಾಶಿಕೆಯಲ್ಲಿ ಎರಡನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

## ಭಾವದೀಪ

**भावदीपः – ।। विप्रतिषेधाच्च ।। ४५ ।। अत इति ।।** केवलशक्तितो जगज्जननायोगादिदोषादित्यर्थः। उपपन्नमेवेत्यादिफलोक्तिः॥ ४५ ॥

॥ इति श्रीमद्भाष्यटीकाभावदीपे श्रीराघवेन्द्रयतिकृते द्वितीयाध्यायस्य द्वितीयः पादः॥

॥ श्रीकृष्णार्पणमस्तु॥

'ಅತಃ' ಎಂಬ ಪದಕ್ಕೆ ಕೇವಲ ಶಕ್ತಿಯಿಂದ ಜಗತ್ತಿನ ಸೃಷ್ಟ್ಯಾದಿಗಳು ಸಾಧ್ಯವಿಲ್ಲವೆಂಬ ದೋಷವಿರುವುದರಿಂದ ಎಂದರ್ಥ. ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ ಆಗುತ್ತದೆ. ಹೀಗೆ ಸಮಗ್ರ ಪಾದದ ಫಲವನ್ನು 'ಅತಃ' ಇತ್ಯಾದಿ ವಾಕ್ಯದಿಂದ ತಿಳಿಸಿದ್ದಾರೆ.

॥ ಇಲ್ಲಿಗೆ ಶ್ರೀಮದ್ ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಉತ್ಪತ್ತ್ಯಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

### उत्पत्त्यधिकरणम्-१२

ಶಾಕ್ತಮತನಿರಾಕರಣೆಗೆ ಉತ್ಪತ್ತ್ಯಧಿಕರಣ

।। उत्पत्त्यसम्भवात् ।।२-२-४२।।

अत्र पूर्वन्यायेन निरस्तमपि शक्तिमतं विशेषदोषविवक्षया पुनर्निरस्यते। न शक्तिर्जगत्काणमित्यन्वेति । कुतः? उत्पत्त्यसम्भवात् । ततोऽपत्योत्पत्त्यसम्भवादित्यर्थः । पुरुषाननुगृहीतस्त्रीमात्रादपत्योत्पत्तेर-दर्शनादिति भावः ।।

ಈ ಅಧಿಕರಣದಲ್ಲಿ ಹಿಂದಿನ ಅಧಿಕರಣದ ನ್ಯಾಯದಿಂದ ಶಕ್ತಿಮತವು ನಿರಾಕೃತವೇ ಆಗಿದೆ. ಆದರೂ ಕೂಡ ವಿಶೇಷದೋಷವನ್ನು ಹೇಳುವ ದೃಷ್ಟಿಯಿಂದ ಪುನಃ ನಿರಾಕರಣೆ ಮಾಡುತ್ತಿದ್ದಾರೆ. ಶಕ್ತಿಯು ಜಗತ್ ಕಾರಣವಲ್ಲ ಎಂದು ಅನ್ವಯ ಮಾಡಿಕೊಳ್ಳಬೇಕು. ಏಕೆಂದರೆ 'ಉತ್ಪತ್ತ್ಯಸಂಭವಾತ್' = ಕೇವಲ ಶಕ್ತಿಯಿಂದ ಸಂತಾನದ ಉತ್ಪತ್ತಿಯು ಅಸಂಭಾವಿತವಾಗಿರುತ್ತದೆ. ಪುರುಷನ ಅನುಗ್ರಹವಿಲ್ಲದೇ ಕೇವಲ ಸ್ತ್ರೀಯಿಂದ ಸಂತಾನದ ಉತ್ಪತ್ತಿಯಾಗುವುದು ಎಲ್ಲೂ ಕೂಡ ಕಂಡಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

### ಮಧ್ಯವಾಮ ಮತ ನಿರಾಕರಣೆ

शिवानुगृहीता शक्तिः कारणमिति मध्यमवाममतं निराह -

।। न च कर्तुः करणम् ।।२-२-४३।।

कर्तुश्चानुग्राहकस्य शिवस्य ज्ञानादिसाधनं नास्तीत्यर्थः । शिवस्य कारणोत्पादने केवलशक्तेरशक्तेरिति भावः ।।

ಶಿವನಿಂದ ಅನುಗೃಹೀತಳಾದ ಶಕ್ತಿಯು ಜಗತ್ತಿಗೆ ಕಾರಣ ಆಗಬಹುದಲ್ಲವೇ? ಎಂಬ ಮಧ್ಯಮವಾಮ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ - 'ನ ಚ ಕರ್ತುಃ ಕರಣಮ್' ಎಂದು.

ಕರ್ತುಶ್ಚ = ಅನುಗ್ರಾಹಕನಾದ ಶಿವನಿಗೆ ಜ್ಞಾನ ಮೊದಲಾದ ಸಾಧನಗಳಿಲ್ಲ ಎಂಬುದು ಸೂತ್ರದ ಅರ್ಥ. ಶಿವನಿಗೆ ಜ್ಞಾನವೇ ಮೊದಲಾದ ಸಾಧನಗಳು ಹುಟ್ಟುವಂತೆ ಮಾಡುವ ಶಕ್ತಿ ಶಕ್ತಿದೇವತೆಗೆ ಇಲ್ಲವೆಂಬುದು ಸೂತ್ರದ ಅಭಿಪ್ರಾಯ.

### ಅಣುವಾಮ ಮತ ನಿರಾಕರಣೆ

ज्ञानदेहादिकारणवान् अनुग्राहकः शिव इत्यणुवाममतं निराह -

।। विज्ञानादिभावे वा तदप्रतिषेधः ।।२-२-४४।।

कर्तुरित्यस्ति । विज्ञानादिभावेऽङ्गीकृते सति तस्य प्रकृतशैवमतस्याप्रतिषेधः प्रतिषेधो न कृतः स्यात्, अनुमतिः स्यादित्यर्थः।

तादृशशिवेनैव सर्वकार्योत्पत्तौ व्यर्थं शक्तिकर्तृत्वाङ्गीकरणम् । शिवकर्तृत्वं च प्राङ् निरस्तमिति भावः ।।

ಜ್ಞಾನ, ದೇಹ ಮೊದಲಾದ ಕಾರಣಗಳುಳ್ಳ ಶಿವನು ಶಕ್ತಿಗೆ ಕೇವಲ ಅನುಗ್ರಾಹಕನಾಗಿದ್ದಾನೆ ಎಂದು ಹೇಳುವ ಅಣುವಾಮಮತವನ್ನು ನಿರಾಕರಿಸುತ್ತಿದ್ದಾರೆ - 'ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ' ಎಂದು.

'ಕರ್ತುಃ' ಎಂಬ ಪದವು ಅನುವೃತ್ತವಾಗುತ್ತದೆ. ವಿಜ್ಞಾನಾದಿಭಾವೇವ = ವಿಜ್ಞಾನ ಮೊದಲಾದವುಗಳು ಶಿವನಿಗೆ ಇವೆ ಎಂದು ಅಂಗೀಕಾರ ಮಾಡಿದರೆ, ತದಪ್ರತಿಷೇಧಃ = ಪ್ರಕೃತವಾದ ಶೈವಮತವನ್ನು ನಿರಾಕರಣೆ ಮಾಡಿದಂತೆ ಆಗುವುದಿಲ್ಲ. ವಿಪರೀತವಾಗಿ ಶೈವಮತವನ್ನು ಒಪ್ಪಿದಂತೆಯೇ ಆಗುತ್ತದೆ. ಅಂಥ ಶಿವನಿಂದಲೇ ಸಮಸ್ತ ಜಗತ್ತಿನ ಕಾರ್ಯಗಳು ಉತ್ಪತ್ತಿಯಾಗಲು ಸಾಧ್ಯವಿದೆ. ಪ್ರತ್ಯೇಕವಾಗಿ ಶಕ್ತಿಯು ಜಗತ್ತಿಗೆ ಕಾರಣ ಎಂದು ಒಪ್ಪುವುದು ವ್ಯರ್ಥ. ಶಿವನೇ ಜಗತ್ತಿಗೆ ಕಾರಣನಾಗಿದ್ದಾನೆ ಎಂಬ ವಾದವನ್ನು ಪತ್ಯುರಧಿಕರಣದಲ್ಲಿ ನಿರಾಕರಣೆ ಮಾಡಿದ್ದಾಗಿದೆ ಎಂಬುದು ಸೂತ್ರದ ಅರ್ಥ.

### ಶಾಕ್ತಮತವು ಸಕಲ ಶ್ರುತಿ ವಿರುದ್ಧ

**एवं शाक्तेयमतत्रयं पृथङ् निरस्य सामान्येनापि निराह -**

**।। विप्रतिषेधाच्च ।।२-२-४५।।**

**सकलश्रुत्यादिविरुद्धत्वाच्चासमञ्जसं शक्तिमतमिति योज्यम् ।।१२।।**

**इति श्रीमद्राघवेन्द्रयतिकृतायां तन्त्रदीपिकायां द्वितीयाध्यायस्य द्वितीयः पादः समाप्तः ।। श्रीकृष्णार्पणमस्तु।।**

ಹೀಗೆ ಮೂರು ಬಗೆಯ ಶಕ್ತಿಮತಗಳನ್ನು ಪ್ರತ್ಯೇಕವಾಗಿ ನಿರಾಕರಣೆ ಮಾಡಿದ್ದಾಯಿತು. ಈಗ ಸಾಮಾನ್ಯದೋಷವನ್ನು ಮೂರು ಮತಗಳಿಗೆ ಒಟ್ಟಿಗೆ ಹೇಳುತ್ತಿದ್ದಾರೆ - 'ವಿಪ್ರತಿಷೇಧಾಚ್ಚ'.

ವಿಪ್ರತಿಷೇಧಾಚ್ಚ = ಎಲ್ಲಾ ಶ್ರುತಿ-ಸ್ಮೃತಿಗಳಿಗೆ ವಿರುದ್ಧವಾಗಿರುವುದರಿಂದ ಶಕ್ತಿಮತವು ಅಯುಕ್ತವಾಗಿದೆ. 'ಶಕ್ತಿಮತಂ ಅಸಮಂಜಸಂ' ಎಂಬ ಪದಗಳನ್ನು ಯೋಜನೆ ಮಾಡಿಕೊಳ್ಳಬೇಕು.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಉತ್ಪತ್ತ್ಯಧಿಕರಣವು ಮುಗಿಯಿತು ॥

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥಯತಿಗಳಿಂದ ರಚಿವಾದ
ಎರಡನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು. ॥

# ವಿವರವಾದ ವಿಷಯಾನುಕ್ರಮಣಿಕೆ

## ಎರಡನೆಯ ಅಧ್ಯಾಯ ದ್ವಿತೀಯ ಪಾದ

### ರಚನಾನುಪಪತ್ತ್ಯಧಿಕರಣ

# ಅನ್ಯತ್ರಭಾವಾಧಿಕರಣ

## ಅಭ್ಯುಪಗಮಾಧಿಕರಣ

## ಪುರುಷಾಶ್ಮಾಧಿಕರಣ

## ಅನ್ಯಥಾಽನುಮಿತ್ಯಧಿಕರಣ

## ವೈಶೇಷಿಕಾಧಿಕರಣ

## ಸಮುದಾಯಾಧಿಕರಣ

## ಅಸದಧಿಕರಣ

## ಅನುಪಲಬ್ಧ್ಯಧಿಕರಣ

## ನೈಕಸ್ಮಿನ್ನಧಿಕರಣ

## ನೈಕಸ್ಮಿನ್ನಧಿಕರಣ

## ಪತ್ಯುರಧಿಕರಣ

## ಉತ್ಪತ್ತ್ಯಧಿಕರಣ

ಜಯತೀರ್ಥರ ಸುಧಾ ಭೂಸುರರ ಅಮೃತ..
ಸಜ್ಜನಲೋಕದಲ್ಲಿ ಬಹುಪ್ರಸಿದ್ಧ ಪರಿಮಳವೆಂದರೆ
ರಾಯರ ರಸನರಂಗದಲ್ಲಿ ನರ್ತಿಸುತಿಹ
ವಾಗ್ದೇವಿಯ ಮುಡಿಯ ಹೂಮಳೆ.

ಸುಧಾ-ಪರಿಮಳ ಬೆರೆತ ಕ್ಷಣವೇ ಬಹುಪಟ್ಟಾಯಿತು ಪ್ರಸಿದ್ಧಿ.
ಸುಸ್ಪಷ್ಟಾರ್ಥದಿಂದ ನಲಿಯಿತು ಪಂಡಿತಲೋಕ.

ಶ್ರೀವ್ಯಾಸರು ಬಿತ್ತಿದ ಬೀಜ ಬೆಳೆಯುತ್ತಾ ಬಂದು
ಇಂದು ಶ್ರೀರಾಘವೇಂದ್ರ ಗುರುಸಾರ್ವಭೌಮರ
ಅಮೃತಮಯಕೃತಿಗಳಿಂದ ಫಲಗಳುಂಟಾಗಿ
ಮಧ್ವಸಿದ್ಧಾಂತವೆಂಬ ಮಹಾವೃಕ್ಷವು
ಸೊಬಗಿನಿಂದ ಕಂಗೊಳಿಸುತ್ತಿದೆ.

ಸ್ಫೂರ್ತಿ :- ಗುರುಗುಣಸ್ತವನ

ಪ್ರಕಾಶನ
ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀ ರಾಘವೇಂದ್ರಸ್ವಾಮಿಗಳ ಮಠ
ಮಂತ್ರಾಲಯ - 518 345 (ಆಂಧ್ರ ಪ್ರದೇಶ)